# Shri Moola Ramana Nitya Nele

A critical study of "Moolaramastu Manmathe"

Edited by:
Dr. Krishna Kolharkulkarni, Vijayapura.
Shri R. Jagannatha Rao, Bengaluru.

ಮೊದಲ ಮುದ್ರಣ : ಜನವರಿ 2016

ಪ್ರಕಾಶನ : ಅಶ್ವತ್ಥಾಂಜನೇಯ ಪ್ರಕಾಶನ
ಎಂ.ಜಿ. ರಸ್ತೆ, ವಿಜಯಪುರ.

ಪ್ರತಿಗಳು : 1000
ಪುಟಗಳು : 261 + xxvi



ಬೆಲೆ : ರೂ. 50/-

ಮುದ್ರಣ : ರಶ್ಮಿ ಮುದ್ರಣ, ಬೆಳಗಾವಿ.

# ಶ್ರೀಮೂಲರಾಮನ ನಿತ್ಯನೆಲೆ

## (ಮೂಲರಾಮಸ್ತು ಮನ್ಮತೇ ಪುಸ್ತಕದ ವಿಮರ್ಶೆ)

ಮಹಾಮಹೋಪಾಧ್ಯಾಯ
ಶ್ರೀಯುತ ಪ್ರೊ . ಕೆ. ಟಿ. ಪಾಂಡುರಂಗೀ
ಇವರ ಮುನ್ನುಡಿಯೊಂದಿಗೆ

ಸಂಪಾದಕರು:
**ಡಾ.ಕೃಷ್ಣ ಕೊಲ್ಹಾರಕುಲಕರ್ಣಿ**
**ಶ್ರೀ . ಆರ್ ಜಗನ್ನಾಥರಾವ್**

ಪ್ರಕಾಶನ:
**ಅಶ್ವತ್ಥಾಂಜನೇಯ ಪ್ರಕಾಶನ**
ವಿಜಯಪುರ.

# ಪ್ರಕಾಶಕರ ನುಡಿ

ಶ್ರೀ ರಾಘವೇಂದ್ರಸಾಹಿತ್ಯ ಪರಿಷತ್, ನಂಜನಗೂಡು ಅವರು 'ಮೂಲರಾಮಸ್ತು ಮನ್ಮತೇ' ಎಂಬ ಒಂದು ಪುಸ್ತಕವನ್ನು 2009ರಲ್ಲಿ ಪ್ರಕಟಿಸಿದರು. ಅದು ಈ ಮೊದಲು ಉತ್ತರಾದಿಮಠದವರು ಫೆಬ್ರುವರಿ 2009ರಲ್ಲಿ ಪ್ರಕಟಿಸಿದ 'ಸಸೀತಾಮೂಲರಾಮಾರ್ಚಾ' ಎಂಬ ಪುಸ್ತಕದ ವಿಮರ್ಶೆ ಎಂದು ಮುಖಪುಟದಲ್ಲಿಯೇ ಹೇಳಿಕೊಂಡಿದ್ದಾರೆ.

ಕಳೆದ ಅರವತ್ತೈದು ವರುಷಗಳಲ್ಲಿ 1949 ರಿಂದ 2014 'ಗುರುಚರಿತೆ' 1949, 'ಶ್ರೀಜಿತಾಮಿತ್ರತೀರ್ಥರು' 1992, 'ಶ್ರೀ ರಾಘವೇಂದ್ರ ಮಠಗತಾರ್ಚಾಗತಿಕ್ರಮ' 1994, 'ಕಲಿಯುಗಕಲ್ಪತರು', 'ಗುರುಚರಿತೆ' ಇಂಗ್ಲೀಷ್ 1997, 'ವಿಜಯೀಂದ್ರವಿಜಯ' 2003, 'ಶ್ರೀ ಮೂಲರಾಮ' 2004, 'ಸತ್ಯಮೇವ ಜಯತೇ' ಕನ್ನಡ ಅನುವಾದ 2005, 'ಸ್ತೋತ್ರಮುಕ್ತಾವಲಿ' 2006, ಹೀಗೆ ಶ್ರೀ ರಾಘವೇಂದ್ರಸ್ವಾಮಿಮಠದವರು ಮತ್ತು ಅದೇ ಹೆಸರಿನ ಸಾಹಿತ್ಯ ಪ್ರಕಾಶನದವರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವುಗಳೆಲ್ಲದರಲ್ಲಿ ಶ್ರೀ ಮೂಲರಾಮದೇವರ ಪ್ರತಿಮೆಯು ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠದಲ್ಲಿ ಮಾತ್ರ ಇದೆ ಎಂದು ಹೇಳಿಕೊಂಡಿದ್ದಾರೆ. ಅಷ್ಟನ್ನೇ ಹೇಳಿದ್ದರೆ ಅಭ್ಯಂತರವಿರಲಿಲ್ಲ ಆದರೆ ಉತ್ತರಾದಿಮಠದಲ್ಲಿ ನಕಲಿ ರಾಮದೇವರ ಪ್ರತಿಮೆ ಇದೆ ಎನ್ನುತ್ತ ವಿನಾಕಾರಣ ಉತ್ತರಾದಿಮಠವನ್ನು ತಮ್ಮ ಪುಸ್ತಕಗಳಲ್ಲಿ ಆ ವಿಷಯಗಳನ್ನು ತಂದು ಆ ಪರಂಪರೆಯ ಮೇಲೆ ಇಲ್ಲ ಸಲ್ಲದ ಆರೋಪಗಳನ್ನು ಮಾಡುವುದು ಅವರಿಗೊಂದು ಚಟವಾಗಿ ಬಿಟ್ಟಿದೆ.

'ಸೀತಾ ಪ್ರತಿಮೆಯನ್ನು ಬಿಟ್ಟು ಮೂಲರಾಮನ ಪ್ರತಿಮೆಯನ್ನು ತೆಗೆದುಕೊಂಡು ಹೋದ ರಘುನಂದನರನ್ನು ಕೊಲ್ಲುತ್ತೇವೆ ಎಂದು ತಮ್ಮ ಗುರುಗಳಿಗೆ ಉತ್ತರಾದಿಮಠದ ಶಿಷ್ಯರು ಹೇಳಿದರು' (ವಿಜಯೀಂದ್ರವಿಜಯ ಸರ್ಗ 3 ಶ್ಲೋಕ 16ರಿಂದ 18), 'ಉತ್ತರಾದಿಮಠದಲ್ಲಿ ವಿದ್ಯಾನಿಧಿಗಳು ಕೃತ್ರಿಮವಾಗಿ ಬ್ರಾಹ್ಮಣರಿಂದ ಹುಟ್ಟಿದವರು. ಅವರೆಲ್ಲ ಕೃತ್ರಿಮ ರಾಮ, ಬ್ರಹ್ಮನಿರ್ಮಿತ ಸೀತಾ ವಿಗ್ರಹಗಳನ್ನು ವ್ಯಗ್ರರಾಗದೆ ಅರ್ಚಿಸಿದರು' (ಅದೇ. ಸರ್ಗ 3, ಶ್ಲೋಕ 29 ರಿಂದ 33)

ಇವುಗಳು ಕೆಲವು ಮಾದರಿಗಳು. ಹೀಗೆಯೇ ಉಳಿದೆಲ್ಲ ಪುಸ್ತಕಗಳಲ್ಲೂ ಕಾರಣವಿಲ್ಲದೇ ಉತ್ತರಾದಿಮಠವನ್ನು ಪ್ರಸ್ತಾಪಿಸಿ ಮನಸೋ ಇಚ್ಛೆ ತೆಗಳಿದ್ದಾರೆ. ಅಷ್ಟು ಪುಸ್ತಕಗಳು ಬಂದಮೇಲೆ 'ಸಸೀತಾಮೂಲರಾಮಾರ್ಚಾ' ಎಂಬ ಒಂದು ಪುಟ್ಟ ಪುಸ್ತಕವನ್ನು ಉತ್ತರಾದಿಮಠದವರು ಪ್ರಕಟಿಸಿದರು. ಅದರಲ್ಲಿ ಅವರು, ತಮ್ಮಲ್ಲಿದ್ದ ಪ್ರತಿಮೆಗಳ ಲಕ್ಷಣಗಳನ್ನು ಹೇಳಿ 'ಅವುಗಳು ಉತ್ತರಾದಿಮಠದಲ್ಲೇ ಅರ್ಚನೆಗೊಳ್ಳುತ್ತಿವೆ, ಪರಮಠದವರು ಅದನ್ನು ತೆಗೆದುಕೊಂಡು ಹೋದರು ಎನ್ನುವುದು ಸರಿಯಲ್ಲ' ಎಂದು ಮಾತ್ರ ಹೇಳಿದಾಕ್ಷಣ, ತಲೆಯ ಮೇಲೆ ಮುಗಿಲೇ ಹರಿದು ಬಿತ್ತು ಎಂಬ ಹಾಗೆ 'ಶ್ರೀರಘುನಂದನತೀರ್ಥರು ಬಾಡದ ಚಂದ್ರಭಟ್ಟನ ಮುಖಾಂತರ ಮೌಲ್ಯವನ್ನು ಕೊಟ್ಟು ಮೂಲರಾಮನ ಪ್ರತಿಮೆಯನ್ನು ತರಿಸಿ ಶತಕಗಳೇ ಕಳೆದಿವೆ' ಎಂದು ಹೇಳುತ್ತ, 160 ಪುಟಗಳ 'ಮೂಲರಾಮಸ್ತು ಮನ್ಮತೇ' ಪುಸ್ತಕವನ್ನು ಪ್ರಕಟಿಸಿದರು. ಮರುಪ್ರಕಾಶನವನ್ನೂ ಮಾಡಲಾಯಿತು. ತಮಿಳು ಭಾಷಾಂತರವನ್ನೂ ಮಾಡಲಾಯಿತು. ಮನೆಮನೆಗೆ ಹಂಚುವುದೂ ನಡೆಯುತ್ತಿದೆ. ಆ ಪುಸ್ತಕದ ಬೆನ್ನುಪುಟದಲ್ಲಿ ಅವರು ಹೀಗೆ ಹೇಳುತ್ತಾರೆ. 'ಚೆಂದವಾಗಿ, ಮನಮೋಹಕವಾಗಿ ಚುಂಬಕಶಕ್ತಿ ಇರುವ ನಮ್ಮ ಶ್ರೀ ಮೂಲರಾಮ ಎಲ್ಲಿ ? ಅದೆಲ್ಲಿ ? ನಮ್ಮ ರಾಮನ ನೆರಳಿಗೂ ಸಾಮ್ಯವಿಲ್ಲ' ಇದು ಅವರು ಬಳಸುವ ಭಾಷೆ ! ಪುಸ್ತಕದ ಒಳಗೂ ಇದೇ ಭಾಷೆ !

ಈ ಸಂದರ್ಭದಲ್ಲಿ ಶ್ರೀಯುತರುಗಳಾದ ಕಾನೂನು ಸಲಹೆಗಾರರಾದ ಆರ್ ಜಗನ್ನಾಥರಾಯರು, ಸಂಶೋಧಕರು ಮತ್ತು ಖ್ಯಾತ ಬರಹಗಾರರಾದ ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಪಂ. ಮಧ್ವಾಚಾರ್ಯ ಮೊಕಾಶಿ (ವಿಜಯಪುರ),

ಪಂ. ಜಯತೀರ್ಥಾಚಾರ್ಯ ಮಳಗಿ (ಧಾರವಾಡ), ಪಂ. ಜಯತೀರ್ಥಾಚಾರ್ಯ ಪಗಡಾಲ (ಹೈದರಾಬಾದ್), ಅಲ್ಲದೇ ಲೌಕಿಕ ಗಣ್ಯವ್ಯಕ್ತಿಗಳಾದ ಸರ್ವಶ್ರೀ ಸಿ.ಕೆ. ನಾರಾಯಣ ರಾವ್ (ನಿವೃತ್ತ ಹಿರಿಯ ವಿಜ್ಞಾನಿ, ಬಾಹ್ಯಾಕಾಶ ಇಂಜಿನಿಯರಿಂಗ್ ಸಂಸ್ಥೆ, ಬೆಂಗಳೂರು), ಹೆಚ್.ಎನ್. ನಾಗರಾಜ ರಾವ್ (ನಿವೃತ್ತ ಡಿವಿಜನಲ್ ಮ್ಯಾನೇಜರ್, ಎಲ್‌ಐಸಿ, ಮೈಸೂರು) ಮೊದಲಾದ ವಿದ್ವಾಂಸರು ಮತ್ತು ಸಂಶೋಧಕರು ಪರಸ್ಪರ ಚರ್ಚಿಸಿದ ಫಲ ಈ 'ಶ್ರೀ ಮೂಲರಾಮನ ನಿತ್ಯನೆಲೆ' ಪುಸ್ತಕ. ಚರ್ಚೆಯಲ್ಲಿ ಪಾಲ್ಗೊಂಡ ಎಲ್ಲ ವಿದ್ವಾಂಸರನ್ನು, ಲೌಕಿಕರನ್ನು ಇಲ್ಲಿ ಗೌರವದಿಂದ ನೆನೆಯುತ್ತೇವೆ.

ಈ ಪುಸ್ತಕಕ್ಕೆ ಸುದೀರ್ಘವಾದ ಮುನ್ನುಡಿಯನ್ನು ಬರೆದು ವಿಷಯದ ನಿಖರತೆಯನ್ನು ಹೆಚ್ಚಿಸಿದವರು ನಾಡಿನ ಖ್ಯಾತ ಚಿಂತಕರಾದ ಮಹಾಮಹೋಪಾಧ್ಯಾಯ ಪ್ರೊ. ಕೆ. ಟಿ ಪಾಂಡುರಂಗೀರವರು. ಅವರಿಗೆ ಶತಶಃ ಪ್ರಣಾಮಗಳು.

ಈ ಪುಸ್ತಕವನ್ನು ಶ್ರೀ ಅಶ್ವತ್ಥಾಂಜನೇಯ ಪ್ರಕಾಶನಕ್ಕಾಗಿ ಸಂಪಾದಿಸಿಕೊಟ್ಟ ಶ್ರೀ ಆರ್. ಜಗನ್ನಾಥರಾಯರು ಮತ್ತು ಡಾ. ಕೃಷ್ಣ ಕೊಲ್ಹಾರಕುಲಕರ್ಣಿ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಮಾಧ್ವ ಸಮಾಜದ ಸರ್ವಾಂಗೀಣ ಒಳಿತಿಗಾಗಿ, ಪರಸ್ಪರ ಸ್ನೇಹ ಸೌಹಾರ್ದದ ಸುದಿನಗಳು ಒದಗಿ ಬರಲೆಂಬ ಹಾರೈಕೆಯಿಂದ ಸಂಪಾದಿಸಿದ ಈ ಕೃತಿಯನ್ನು ನಮ್ಮ ಗುರುಗಳಿಂದಾರಂಭಿಸಿ ಶ್ರೀಪದ್ಮನಾಭತೀರ್ಥರ ವರೆಗೆ ಇರುವ ಸಮಸ್ತ ಗುರ್ವಂತರ್ಗತ ಶ್ರೀಮಧ್ವಾಂತರ್ಗತ ಶ್ರೀಹರಿಯಲ್ಲಿ ಸಮರ್ಪಿಸುತ್ತಿದ್ದೇವೆ.

ಇದಕ್ಕೆ ಮತ್ತೆ ಅಲ್ಲ ಸಲ್ಲದ, ಒಂದಕ್ಕೊಂದು ಸಂಬಂಧವಿಲ್ಲದ ಆಕರಗಳನ್ನು ಕೊಟ್ಟು ಒಂದು ಬೃಹತ್ ಪುಸ್ತಕವನ್ನು ಅವರು ಮುಂದಿನ ದಿನಗಳಲ್ಲಿ ಪ್ರಕಟಿಸುತ್ತಾರೆ ಎಂದು ನೂರಕ್ಕೆ ನೂರಾ ಒಂದು ಪ್ರತಿಶತ ನಮಗೆ ಖಾತ್ರಿ ಇದೆ. 'ಘೋಡಾ ಹೈ, ಮೈದಾನ್ ಹೈ, ಚಲನೇ ದೋ' ಅದಕ್ಕೆ ಯಾರು ಏನೂ ಮಾಡಲು ಸಾಧ್ಯವಿಲ್ಲ.

ಆದರೂ 'ಶ್ರೀ ಮೂಲರಾಮನ ನಿತ್ಯನೆಲೆ' ಪುಸ್ತಕ ಯಾರ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಸಂಪಾದಿಸಿದ ಪುಸ್ತಕ ಅಲ್ಲ. 'ಮೂಲರಾಮಸ್ತು ಮನ್ಮಠೇ' ಎಂಬ ಪುಸ್ತಕದಲ್ಲಿ ಬಂದ ಆರೋಪಗಳಿಗೆ ವಸ್ತುನಿಷ್ಠವಾಗಿ ಸತ್ಯವಾದಿಗಳಾಗಿ ಪ್ರತ್ಯುತ್ತರವನ್ನು ನೀಡುವ ನಮ್ಮ ಪ್ರಯತ್ನವಾಗಿದೆ ಎಂದು ಓದುಗರಿಗೆ ಹೇಳಬಯಸುತ್ತೇವೆ.

**'ನಾರುಂತುದಃ ಸ್ಯಾದಾರ್ತೋಽಪಿ ನ ಪರದ್ರೋಹಕರ್ಮಧೀಃ**
**ಯಯಾಸ್ಯೋದ್ವಿಜತೇ ವಾಚಾ ನಾಲೋಕ್ಯಾಂ ತಾಮುದೀರಯೇತ್'** ಮನುಸ್ಮೃತಿ, 2-161

'ನೋವಿಂದ ಕೂಡಿದ್ದರೂ ಇತರರಿಗೆ ನೋವನ್ನುಂಟು ಮಾಡುವ ಮಾತನ್ನಾಡಬಾರದು. ಇತರರಿಗೆ ದ್ರೋಹ ವಾಗುವ ಕೆಲಸ ಮತ್ತು ಬುದ್ಧಿ ಇರಬಾರದು. ಇತರರಿಗೆ ಬೇಸರವಾಗುವ ಲೋಕರೂಡಿಯಲ್ಲಿಲ್ಲದ ಅಥವಾ ಉಚಿತವಲ್ಲದ ಮಾತನ್ನೂ ಆಡಬಾರದು' ಎಂದು ಮನುಸ್ಮೃತಿ ಹೇಳಿದೆ. ಅದು ನಮಗೆ ದಾರಿ ದೀಪವಾಗಬೇಕು.

**ಆನಂದ ಜೋಶಿ**
**ಶ್ರೀಅಶ್ವತ್ಥಾಂಜನೇಯ ಪ್ರಕಾಶನ**
ವಿಜಯಪುರ (ಬಿಜಾಪುರ)
ಜನವರಿ 2016

# ಮುನ್ನುಡಿ

ಐತರೇಯೋಪನಿಷತ್ತಿನಲ್ಲಿ ಪರಮಾತ್ಮನ ತ್ಯಾಗವನ್ನು ಮಾಡುವ ಅಂದರೆ ನಾಸ್ತಿಕ್ಯಬುದ್ಧಿಯ ವಿಷಯವನ್ನು ಹೀಗೆ ಹೇಳಲಾಗಿದೆ.

**ಮುಖ್ಯತ್ಯಾಗೋ ಹರೇರೇಷ ಯನ್ನಾಸ್ತೀತಿ ವದೇದಮುಮ್ ।**
**ತತ್ಸಮಂ ವಾಧಿಕಂ ವಾಪಿ ಬ್ರೂಯಾದ್ಯೈಕ್ಯಮಥಾಪಿ ವಾ ॥**

**ಐಶ್ವರ್ಯಾದಿಗುಣಾನಾಂ ವಾ ಹ್ರಾಸಂ ನಾಸ್ತಿತ್ವಮೇವ ವಾ ।**
**ತತ್ಪ್ರಸಾದಂ ವಿನಾ ಮೋಕ್ಷಂ ಬ್ರೂಯಾದ್ವಾ ಕಸ್ಯಚಿತ್ ಕ್ವಚಿತ್ ॥**

ಪರಮಾತ್ಮನು ಇಲ್ಲವೇ ಇಲ್ಲ ಎಂದು ಹೇಳುವುದು, ಅವನಿಗಿಂತ ಅಧಿಕನಾದವನು, ಅವನಿಗೆ ಸಮನಾದವನು ಇನ್ನೊಬ್ಬನಿರುವನು ಎಂದು ಹೇಳುವುದು, ಜೀವ ಬ್ರಹ್ಮರ ಐಕ್ಯವನ್ನು ಹೇಳುವುದು, ಭಗವಂತನಲ್ಲಿ ಐಶ್ವರ್ಯಾದಿ ಗುಣಗಳು ಇಲ್ಲ ಅಥವಾ ಕಡಿಮೆಯಾಗಿದೆ ಎಂದು ಹೇಳುವುದು, ಪರಮಾತ್ಮನ ಪ್ರಸಾದವಿಲ್ಲದೆ ಮೋಕ್ಷವಾಗುವುದು ಎಂದು ಹೇಳುವುದು ಇವೆಲ್ಲ ಪರಮಾತ್ಮನ ತ್ಯಾಗಗಳೇ ಆಗಿವೆ. (ಮೂಲರಾಮನ ವಿಷಯದಲ್ಲಿ ಅವನು ಮೂಲಮಠದಲ್ಲಿ ಇಲ್ಲವೇ ಇಲ್ಲವೆಂದು ಹೇಳುವುದು, ಅವನಿಗಿಂತ ಹೆಚ್ಚಿನ ಸನ್ನಿಧಾನವಿರುವ ಇನ್ನೊಂದು ಪ್ರತಿಮೆಯಿದೆಯೆಂದು ಹೇಳುವುದು ಇತ್ಯಾದಿಯಾಗಿ ಈ ಐತರೇಯ ಶ್ರುತಿಯಲ್ಲಿ ಹೇಳಿದ ಅಪಚಾರಗಳು ಆಗದಂತೆ ನೋಡಿಕೊಳ್ಳುವುದು ಅಗತ್ಯವಿದೆ. ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಮುನ್ನುಡಿಯನ್ನು ಬರೆಯಲಾಗಿದೆ).

1949ರಲ್ಲಿ ಹೆಚ್.ಕೆ. ವೇದವ್ಯಾಸಾಚಾರ್ಯರು 'ಗುರುಚರಿತೆ' ಎಂಬ ಹೆಸರಿನ ಶ್ರೀರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳ ಚರಿತ್ರೆಯ ಗ್ರಂಥವನ್ನು ಪ್ರಕಟಿಸಿದಾಗಿನಿಂದ ಮೂಲರಾಮದೇವರ ಪ್ರತಿಮೆಯು ಉತ್ತರಾದಿಮಠದಲ್ಲಿರುವುದೋ ಅಥವಾ ರಾಘವೇಂದ್ರಸ್ವಾಮಿಗಳ ಮಠದಲ್ಲಿರುವುದೋ ಎಂಬ ವಿವಾದವು ಪುನಃ ಆರಂಭವಾಯಿತು. ಈ ಪ್ರತಿಮೆಯು ಶ್ರೀಮಧ್ವಾಚಾರ್ಯರ ಕಾಲದಿಂದ ಪರಂಪರಾಗತವಾಗಿ ಶ್ರೀರಾಮಚಂದ್ರತೀರ್ಥರವರೆಗೆ ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿತ್ತು ಎಂಬ ವಿಷಯದಲ್ಲಿ ವಿವಾದವಿಲ್ಲ. ಆದರೆ ಶ್ರೀರಾಮಚಂದ್ರತೀರ್ಥರು, ಶ್ರೀವಿಬುಧೇಂದ್ರತೀರ್ಥರು ಮತ್ತು ಶ್ರೀವಿದ್ಯಾನಿಧಿತೀರ್ಥರು ಎಂಬ ಇಬ್ಬರು ಯತಿಗಳಿಗೆ ಆಶ್ರಮವನ್ನು ಕೊಟ್ಟಿದ್ದರಿಂದ ಈ ಪ್ರತಿಮೆಯು ಶ್ರೀವಿದ್ಯಾನಿಧಿಗಳ ಪರಂಪರೆಯಲ್ಲಿಯೇ ಉಳಿದಿದೆಯೋ ಅಥವಾ ಶ್ರೀವಿಬುಧೇಂದ್ರರ ಪರಂಪರೆಗೆ ಹೋಗಿದೆಯೋ ಎಂಬ ವಿವಾದವು ಉಂಟಾಗಿದೆ.

ಶ್ರೀವಿಬುಧೇಂದ್ರ ಪರಂಪರೆಗೆ ಸೇರಿದ ಶ್ರೀವಿಬುಧೇಂದ್ರರು ಮತ್ತು ಶ್ರೀಜಿತಾಮಿತ್ರರು ಎಂಬ ಇಬ್ಬರು ಯತಿಗಳ ಕಾಲದಲ್ಲಿ ಮೂಲರಾಮದೇವರ ಪ್ರತಿಮೆಯು ಶ್ರೀವಿಬುಧೇಂದ್ರರ ಮಠಕ್ಕೆ ಹೋಗಿರಲಿಲ್ಲ ಎಂಬ ವಿಷಯದಲ್ಲೂ ವಿವಾದವಿಲ್ಲ. ಮುಂದೆ ಈ ಪರಂಪರೆಯ ಮೂರನೆಯ ಯತಿಗಳಾದ ಶ್ರೀರಘುನಂದನರ ಕಾಲದಲ್ಲಿ 'ಈ ಪ್ರತಿಮೆಯನ್ನು ಈ ಮಠಕ್ಕೆ ಉತ್ತರಾದಿಮಠದಿಂದ ಕಳುವು ಮಾಡಿ ತರಿಸಲಾಯಿತು. ಹೀಗೆ ತರಿಸಿದಾಗ ಮೂಲರಾಮದೇವರ ಪ್ರತಿಮೆಯೊಂದೇ ಬಂದಿತು. ಸೀತಾದೇವಿಯ ಪ್ರತಿಮೆಯು ಉತ್ತರಾದಿಮಠದಲ್ಲಿಯೇ ಉಳಿಯಿತು' ಎಂದು ಹೇಳಲಾಗುತ್ತದೆ. ಇದರ ಸಮರ್ಥನೆಗಾಗಿ ಈ ಕೆಳಗಿನ ಮತ್ತು ಇನ್ನಿತರ ಪ್ರಮಾಣಗಳನ್ನು ಕೊಡಲಾಗುತ್ತದೆ.

1. ಶ್ರೀವಾದೀಂದ್ರತೀರ್ಥರು ಬರೆದ ಶ್ರೀರಾಘವೇಂದ್ರಮಠದ ಅರ್ಚಾಗತಿಕ್ರಮ.
2. ಮಧ್ವಕವಿ ಎಂಬವನು ಬರೆದ 'ವಿಜಯೀಂದ್ರವಿಜಯ' ಎಂಬ ಏಳು ಸರ್ಗದ ಕಾವ್ಯ.
3. ಮೂಲರಾಮದೇವರ ಪ್ರತಿಮೆಯ ಲಕ್ಷಣ.

4. **ಪರಮತದಿಂದ ಮೂಲರಾಮಪ್ರತಿಮೆಯನ್ನು ಚಂದ್ರಭಟ್ಟ ಎಂಬ ವ್ಯಕ್ತಿಯ ಮೂಲಕ ತರಿಸಿಕೊಳ್ಳಲಾಯಿತು ಎನ್ನುವುದಕ್ಕೆ ಆಧಾರವೆಂದೆನೆಸಿರುವ ಒಂದು ತಾಮ್ರಪತ್ರ .**
5. **ಮೂಲರಾಮರನ್ನು ಉಲ್ಲೇಖಿಸುವ ದೇವರ ನಾಮಗಳು.**

ಈ ವಿಮರ್ಶೆಯ ಕೃತಿಯಲ್ಲಿ ಮೇಲ್ಕಂಡ ಪ್ರಮಾಣಗಳ ಹಾಗೂ ಇನ್ನಿತರ ಆಧಾರಗಳ ಪರಿಶೀಲನೆಯನ್ನು ಮಾಡಿ ಇವುಗಳಿಂದ ಮೂಲರಾಮದೇವರ ಪ್ರತಿಮೆಯು 'ಪರಮತದಿಂದ ಶ್ರೀರಘುನಂದನತೀರ್ಥರು ತರಿಸಿಕೊಂಡರು' ಎನ್ನುವುದು ಸಿದ್ಧವಾಗುವುದಿಲ್ಲ ಎಂದು ದೃಢಪಡಿಸಲಾಗಿದೆ. ಮೂಲರಾಮ ಹಾಗೂ ಮೂಲಸೀತಾಪ್ರತಿಮೆಗಳು ಪರಂಪರಾಗತವಾಗಿ ಶ್ರೀಉತ್ತರಾದಿಮಠದಲ್ಲಿಯೇ ಪೂಜೆಗೊಳ್ಳುತ್ತಿರುವವು ಎಂದು ಸ್ಪಷ್ಟವಾಗಿ ತೋರಿಸಿದ್ದಾರೆ.

ಈ ಕೃತಿಯಲ್ಲಿ ಈ ಪ್ರಮಾಣಗಳನ್ನು, ಇನ್ನಿತರ ಆಧಾರಗಳನ್ನು ವಿವರವಾಗಿ ಚರ್ಚಿಸಿ ನಿರಾಕರಿಸಿಲಾಗಿದೆ. ಆದ್ದರಿಂದ ನಮ್ಮ ಈ ಮುನ್ನುಡಿಯಲ್ಲಿ ಈ ನಿರಾಕರಣೆಯನ್ನು ಮತ್ತೆ ವಿವರವಾಗಿ ಮಾಡುವ ಅಗತ್ಯವಿಲ್ಲ. ಆದ್ದರಿಂದ ಸಂಕ್ಷಿಪ್ತವಾಗಿ ಈ ನಿರಾಕರಣೆಯನ್ನು ನಿರೂಪಿಸಿಲಾಗುವುದು.

## 1 . ಅರ್ಚಾಗತಿಕ್ರಮ

ಇದನ್ನು ಬರೆದರೆಂದು ಹೇಳುವ ಶ್ರೀವಾದೀಂದ್ರರು ಶ್ರೇಷ್ಠ ಜ್ಞಾನಿಗಳೂ, ಕವಿಗಳೂ ಆಗಿದ್ದರು. ಅವರ ಕವಿಪ್ರತಿಭೆಯು 'ಗುರುಗುಣಸ್ತವನ' ಎಂಬ ಅವರು ಬರೆದ ಶ್ರೀರಾಘವೇಂದ್ರಸ್ವಾಮಿಗಳ ಸ್ತೋತ್ರದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಅವರು ಬರೆದ ಅರ್ಚಾಗತಿಕ್ರಮದಲ್ಲಿ ಹಲವು ಲೋಪದೋಷಗಳು ಕಂಡುಬರುತ್ತವೆ.

36 ಶ್ಲೋಕಗಳ ಈ ಚಿಕ್ಕ ಗ್ರಂಥದಲ್ಲಿ ಬ್ರಹ್ಮಕರಾರ್ಚಿತವಾದ ಮೂಲರಾಮದೇವರ ಪ್ರತಿಮೆಯು ಶ್ರೀಮಧ್ವಾಚಾರ್ಯರಿಂದ ಶ್ರೀರಾಮಚಂದ್ರತೀರ್ಥರ ವರೆಗೆ ಪೂಜಿತವಾದದ್ದನ್ನು ಹೇಳಿ ಶ್ರೀವಿಬುಧೇಂದ್ರತೀರ್ಥರು, ಶ್ರೀವಿದ್ಯಾನಿಧಿತೀರ್ಥರಿಂದ ಪ್ರತಿಬಂಧಿತರಾಗಿದ್ದರಿಂದ ಆ ಪ್ರತಿಮೆಗಳ ಪೂಜೆಯನ್ನು ಮಾಡಲು ಇಚ್ಛಿಸಲಿಲ್ಲ ಎಂದು ಹೇಳಿ, 30ನೆಯ ಶ್ಲೋಕದಲ್ಲಿ ಶ್ರೀರಘುನಂದನತೀರ್ಥರು ಶ್ರೀರಾಮನ ಪ್ರತಿಮೆಯನ್ನು ಮೌಲ್ಯವನ್ನು ಕೊಟ್ಟು ಪಡೆದರೆಂದು ಹೇಳಿ, 31ನೆಯ ಶ್ಲೋಕದಲ್ಲಿ ಶ್ರೀರಾಮನ ಮತ್ತು ಶ್ರೀಸೀತೆಯ ಪ್ರತಿಮೆಗಳ ಸಾಮ್ಯವನ್ನು ಹೇಳಿದ್ದಾರೆ.

ಮುಂದೆ 32 ನೇ ಶ್ಲೋಕದಲ್ಲಿ ಶ್ರೀವಿಬುಧೇಂದ್ರತೀರ್ಥರು 8 ಬಾಹುಗಳಿರುವ ಶ್ರೀಲಕ್ಷ್ಮೀನರಸಿಂಹ ಪ್ರತಿಮೆಯನ್ನು ಪಡೆದರೆಂಬುದನ್ನೂ, ಮುಂದೆ 33 ನೇ ಶ್ಲೋಕದಲ್ಲಿ ಶ್ರೀಸುಧೀಂದ್ರತೀರ್ಥರು ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಪಡೆದರೆಂದೂ ಹೇಳಲಾಗಿದೆ. ಇಲ್ಲಿ 29 ನೆಯ ಶ್ಲೋಕದಲ್ಲಿ ಶ್ರೀವಿಬುಧೇಂದ್ರತೀರ್ಥರ ವಿಷಯವನ್ನು ತಿಳಿಸಿದ ಮೇಲೆ ಮುಂದೆ ಶ್ರೀರಘುನಂದನರು ಶ್ರೀಮೂಲರಾಮದೇವರ ಪ್ರತಿಮೆಯನ್ನು ಪಡೆದದ್ದನ್ನೂ ಮತ್ತು ಮೂಲರಾಮ ಮತ್ತು ಸೀತೆಯರ ಸಾಮ್ಯವನ್ನು ಹೇಳಿದ್ದೂ ಅರ್ಚಾಗತಿಕ್ರಮದ ವಿಷಯವಾಗಲಾರದು. ಈ ಎರಡೂ ಶ್ಲೋಕಗಳಾದ ಮೇಲೆ ಮತ್ತೊಮ್ಮೆ ಶ್ರೀವಿಬುಧೇಂದ್ರತೀರ್ಥರ ವಿಷಯವನ್ನು ಹೇಳಿದ್ದರಿಂದ (30-31) ಎರಡೂ ಶ್ಲೋಕಗಳು ಪ್ರಕ್ಷಿಪ್ತವಾಗಿರಬೇಕು. 33 ನೆಯ ಶ್ಲೋಕದಲ್ಲಿ ಶ್ರೀಸುಧೀಂದ್ರರಿಗೆ ಲಕ್ಷ್ಮೀನಾರಾಯಣನ ಪ್ರತಿಮೆಯು ದೊರಕಿತು ಎಂದು ಹೇಳಲಾಗಿದೆ. ಆದರೆ ಶ್ರೀವಿಬುಧೇಂದ್ರರು ಮತ್ತು ಶ್ರೀಸುಧೀಂದ್ರರು ಇವರ ಮಧ್ಯದಲ್ಲಿ ಆಗಿ ಹೋದ ಶ್ರೀಜಿತಾಮಿತ್ರರು, ಶ್ರೀರಘುನಂದನರು, ಶ್ರೀಸುರೇಂದ್ರರು, ಶ್ರೀವಿಜಯೀಂದ್ರರ ವಿಷಯದಲ್ಲಿ ಏನನ್ನೂ ಹೇಳಿಲ್ಲ. ಅರ್ಚಾಗತಿಯಲ್ಲಿ ಹೇಳುವ ಪರಂಪರೆಯಲ್ಲಿ ಈ ನಾಲ್ಕು ಯತಿಗಳ ಹೆಸರುಗಳನ್ನು ಏಕೆ ಕೈಬಿಡಲಾಯಿತು? ಎನ್ನುವುದು ಅರ್ಥವಾಗುವುದಿಲ್ಲ!

ಹಿಂದೆ 8ನೆಯ ಶ್ಲೋಕದಲ್ಲಿ ಶ್ರೀಸುರೇಂದ್ರರು ಶ್ರೀವಿಜಯೀಂದ್ರತೀರ್ಥರನ್ನು ತಮ್ಮ ನಂತರದ ಪೀಠಾಧಿಪತಿಗಳನ್ನಾಗಿ ಸ್ವೀಕರಿಸಿದರು ಎಂದು ಹೇಳಿದೆ. ಆದರೆ ಮುಂದೆ 9ನೇ ಶ್ಲೋಕದಲ್ಲಿ ಶ್ರೀಸುರೇಂದ್ರರು

ಸಂಪ್ರದಾಯದ ವಿಚ್ಛೇದವಾಗಬಾರದೆಂದು ಶ್ರೀಸುಧೀಂದ್ರರಿಗೆ ಸಂನ್ಯಾಸವನ್ನು ಕೊಟ್ಟರು. ಅವರನ್ನು ವಿಜಯೀಂದ್ರರಿಗೆ ಒಪ್ಪಿಸಿದರು ಎಂದು ಹೇಳಲಾಗಿದೆ. ಇದರಿಂದ ಶ್ರೀವಿಜಯೀಂದ್ರರನ್ನು ಶ್ರೀಸುರೇಂದ್ರರು ಶ್ರೀವ್ಯಾಸರಾಜರಿಂದ ಪಡೆದುಕೊಂಡದ್ದು ತಮ್ಮ ಮಠದ ಸಂಪ್ರದಾಯವಿಚ್ಛೇದಕ್ಕೆ ಕಾರಣವಾಗುವುದು ಎಂದು ಭಯವಿರುವುದು ಕಂಡು ಬರುತ್ತದೆ. ಶ್ರೇಷ್ಠ ಜ್ಞಾನಿಗಳೂ, 104 ಗ್ರಂಥಗಳನ್ನು ಬರೆದವರೂ ಆದ ಶ್ರೀವಿಜಯೀಂದ್ರರು ಆ ಮಠದ ಸಂಪ್ರದಾಯಕ್ಕೆ ಸೇರಿದವರಲ್ಲ ಎಂದು ಹೇಳುವುದು ಅವರಿಗೆ ಮರ್ಯಾದೆಯನ್ನು ತರುವಂಥದ್ದಲ್ಲ. ಮಠಕ್ಕೂ ಮರ್ಯಾದೆಯನ್ನು ತರುವಂಥದ್ದಲ್ಲ.

ಶ್ರೀವಿಬುಧೇಂದ್ರರಿಗೆ ಮತ್ತು ಶ್ರೀಜಿತಾಮಿತ್ರರಿಗೆ ಶ್ರೀಮೂಲರಾಮದೇವರ ಪೂಜೆ ಮಾಡುವ ಅವಕಾಶವು ದೊರಕಿರಲಿಲ್ಲ. ಕಾರಣ, ಈ ಯತಿದ್ವಯರು ಮೂಲರಾಮನ ಅರ್ಚನೆ ಮಾಡಿದ ಉಲ್ಲೇಖವನ್ನು ಈ ಕೃತಿಯಲ್ಲಿ ಮಾಡಿಲ್ಲ ಎನ್ನುವುದು ಸಂಗತ. ಆದರೆ, ಶ್ರೀಮೂಲರಾಮನ ಪ್ರತಿಮೆಯನ್ನು ಶ್ರೀರಘುನಂದನತೀರ್ಥರ ಕಾಲದಲ್ಲಿ ಪರಮಠದಿಂದ ಕದ್ದು ತಂದದ್ದೇ ನಿಜವಾಗಿದ್ದರೆ ಮುಂದೆ ಆಗಿಹೋದ ಶ್ರೀಸುಧೀಂದ್ರತೀರ್ಥರು, ಶ್ರೀರಾಘವೇಂದ್ರತೀರ್ಥರು, ಶ್ರೀಸುಮತೀಂದ್ರತೀರ್ಥರು ಇವರೆಲ್ಲ ಶ್ರೀಮೂಲರಾಮದೇವರ ಪ್ರತಿಮೆಯ ಪೂಜೆ ಮಾಡಿದ್ದನ್ನು ಅರ್ಚಾಗತಿಯಲ್ಲಿ ನಿರೂಪಿಸಬೇಕಾಗಿತ್ತು.

ಈ ಮೇಲಿನ ನ್ಯೂನತೆಗಳನ್ನು ಪರಿಶೀಲಿಸಿದರೆ ಅರ್ಚಾಗತಿಕ್ರಮವು ಶ್ರೀವಾದೀಂದ್ರರಿಂದ ರಚಿತವಾಗಿರಲಿಕ್ಕಿಲ್ಲವೆಂದು ತೋರುತ್ತದೆ ಮತ್ತು ಈ ಗ್ರಂಥವು ಶ್ರೀಮೂಲರಾಮಪ್ರತಿಮೆಯು ಶ್ರೀರಾಯರ ಮಠದಲ್ಲಿ ಇರುವುದು ಎಂಬುದಕ್ಕೆ ಪ್ರಮಾಣವಾಗಲಾರದು.

ಶ್ರೀರಾಘವೇಂದ್ರಮಠದ ಪರಂಪರೆಯನ್ನು ಶ್ರೀವಿಬುಧೇಂದ್ರತೀರ್ಥರಿಂದ ಆರಂಭಿಸಲಾಗುತ್ತದೆ. ಇದಕ್ಕೆ ಈ ಕೆಳಗಿನ ಅವತರಣಿಕೆಗಳನ್ನು ಪ್ರಮಾಣಗಳೆಂದು ಕೊಡಬಹುದು.

**ಅ)** ಶ್ರೀಧೀರೇಂದ್ರತೀರ್ಥರ 'ಗುರುಗುಣಸ್ತವನವ್ಯಾಖ್ಯಾನ'ದಲ್ಲಿ (ಎಸ್.ಆರ್. ಎಸ್. ಮಠ 1968 ಮತ್ತು 1988 ಎಡಿಟೆಡ್ ಬೈ ಶ್ರೀ ಆ.ರಾ. ಪಂಚಮುಖಿ ಮತ್ತು ಪವಮಾನಾಚಾರ್ಯ) ಪುಟ 15ರಲ್ಲಿ ಶ್ರೀವಾದೀಂದ್ರ-ತೀರ್ಥರು, 'ಶ್ರೀಮತ್ಪೂರ್ಣಪ್ರಬೋಧ' ಎಂಬ ಪದ್ಯದಿಂದ ''ಶ್ರೀಮಠದ ಮೂಲಪುರುಷರಾದ ಶ್ರೀವಿಬುಧೇಂದ್ರತೀರ್ಥರನ್ನು ಸ್ತುತಿಸುತ್ತಾರೆ'' ಎಂಬ ಅವತರಣಿಕೆಯನ್ನು ಕಾಣಬಹುದು.

**ಆ)** 'ಗುರುಸಾರ್ವಭೌಮ' ಸಂಸ್ಕೃತ ಮಾಸಪತ್ರಿಕೆ ಜನವರಿ 2009 ರಲ್ಲಿ ಪುಟ 40 ರಲ್ಲಿ ರಾಘವೇಂದ್ರ-ವಿಜಯಕಾವ್ಯದ 20 ನೇ ಶ್ಲೋಕಕ್ಕೆ ಚಿಕ್ಕ ಶೀರ್ಷಿಕೆ ಕೊಡಲಾಗಿದೆ. ಅದರಲ್ಲಿ ''ಶ್ರೀವಿಬುಧೇಂದ್ರಪರಂಪರಾ'' ಎಂದು ಬರೆಯಲಾಗಿದೆ.

**ಇ)** ಶ್ರೀ ಹೆಚ್.ಕೆ. ವೇದವ್ಯಾಸಾಚಾರ್ಯರು ತಮ್ಮ 'ಗುರುಚರಿತೆ' ಎಂಬ ಪುಸ್ತಕದಲ್ಲೂ (1949) ಶ್ರೀವಿಬುಧೇಂದ್ರರ ಚರಿತ್ರೆಯನ್ನು ನಿರೂಪಿಸುವ ಮೊದಲು ''ಸಂಸ್ಥಾನದ ಪರಂಪರಾ'' ಎಂಬ ಶೀರ್ಷಿಕೆ ಕೊಟ್ಟಿರುವುದನ್ನು ಗಮನಿಸಬಹುದು.

**ಈ)** 'ಮೂಲರಾಮಸ್ತು ಮನ್ಮತೇ' ಪುಸ್ತಕದ ಪುಟ 149 ರಲ್ಲಿ ಸರ್ಕಾರಿ ಗೆಜೆಟಿಯರ್ ರನ್ನು ಮುದ್ರಿಸಲಾಗಿದೆ. ಅದರಲ್ಲಿ **Sri Vibhudhendra's branch** was subsequently called as Raghavendra swami matha after the great philosopher saint Sri Raghavendra swami ..... ಎಂಬುದಾಗಿ ಬರೆಯಲಾಗಿದೆ.

ಈ ಅವತರಣಿಕೆಗಳಿಂದ ಶ್ರೀರಾಘವೇಂದ್ರಸ್ವಾಮಿಗಳ ಮಠವು ಶ್ರೀವಿಬುಧೇಂದ್ರತೀರ್ಥರಿಂದ ಆರಂಭವಾದ ಮಠವು. ಮೂಲಮಠವಲ್ಲ ಎಂದು ತಿಳಿದು ಬರುತ್ತದೆ.

## 2. 'ವಿಜಯೀಂದ್ರವಿಜಯ' ಕಾವ್ಯ

ಡಾ || ಬಿ.ಎನ್.ಕೆ. ಶರ್ಮಾ ರವರು ಬರೆದ 'ದ್ವೈತವಾಙ್ಮಯದ ಇತಿಹಾಸ' ಎಂಬ ಗ್ರಂಥದ ಎರಡನೆಯ ಆವೃತ್ತಿಯು ಕ್ರಿ. ಶ. 1981ರ ವರ್ಷದಲ್ಲಿ ಪ್ರಕಾಶಿತವಾಯಿತು. ಅದರಲ್ಲಿ 397 ನೆಯ ಪುಟದಲ್ಲಿ ಅವರು 'ಮಧ್ವಕವಿಯು ಬರೆದ ವಿಜಯೀಂದ್ರವಿಜಯ ಎಂಬ ಕಾವ್ಯದ ಹಸ್ತಪ್ರತಿಯು ನನಗೆ ಯಾವ ಹಸ್ತಲಿಖಿತ ಗ್ರಂಥಾಲಯದಲ್ಲಿಯೂ ದೊರೆಯಲಿಲ್ಲ' ಎಂದು ಬರೆದಿರುವರು. ಆದರೆ 1994 ರಲ್ಲಿ ಈ ಕಾವ್ಯವನ್ನು ತಾವೇ ಪ್ರಕಟಿಸಿರುವರು. ಈ ಪ್ರಕಟಣೆಯಲ್ಲಿ ಈ ಕಾವ್ಯದ ಹಸ್ತಪ್ರತಿಯನ್ನು ಒಬ್ಬ ಸ್ನೇಹಿತರು ತಮಗೆ ಕೊಟ್ಟರು ಎಂದು ಬರೆದಿರುವರು. ಆದರೆ ಆ ಸ್ನೇಹಿತನ ಹೆಸರನ್ನು ಹೇಳಿಲ್ಲ.

ಕಾವ್ಯದ ಕರ್ತನಾದ ಮಧ್ವಕವಿಯು ತಾನು ಶ್ರೀವಾದಿರಾಜತೀರ್ಥರ ಶಿಷ್ಯನೆಂದೂ, ಆರಣಿ ರಾಜನ ರಾಜಪುರೋಹಿತನೆಂದೂ 7 ನೇ ಸರ್ಗದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಇವನು ಶ್ರೀಉತ್ತರಾದಿಮಠದ ಶ್ರೀವಿದ್ಯಾಧೀಶತೀರ್ಥರ ಉಲ್ಲೇಖವನ್ನು ಮಾಡಿದ್ದರಿಂದ ಇವನ ಕಾಲ 1631 ಕ್ಕಿಂತ ಮೊದಲು ಇರಲಾರದು ಎಂದು ಡಾ.ಬಿ.ಎನ್.ಕೆ.ಶರ್ಮಾ ಅವರು ಹೇಳುತ್ತಾರೆ.

**ಶ್ರೀವಾದಿರಾಜತೀರ್ಥರಿಗೆ ಮಧ್ವಕವಿ ಎಂಬ ಶಿಷ್ಯನು ಇದ್ದದ್ದಕ್ಕೆ ಯಾವ ಆಧಾರವೂ ಇಲ್ಲ. ಆರಣಿ ಜಾಗೀರದಾರರು ಶ್ರೀಉತ್ತರಾದಿಮಠದ ಪ್ರಧಾನ ಶಿಷ್ಯರು. ಮಧ್ವಕವಿಯು ಅವರ ಪುರೋಹಿತನಾಗಿದ್ದರೆ ಇಂತಹ ಕಾವ್ಯವನ್ನು ಬರೆದಿರುವುದು ಶಕ್ಯವಿಲ್ಲ. ಶ್ರೀವಿದ್ಯಾಧೀಶರ ಉಲ್ಲೇಖವನ್ನು ಮಾಡಿದ್ದರಿಂದ ಅವರ ನಂತರದ ಕಾಲದಲ್ಲಿಯೇ ಎಂದರೆ 17ನೇ ಶತಮಾನದ ಉತ್ತರಾರ್ಧದಲ್ಲಿ ಈ ಕಾವ್ಯವನ್ನು ಬರೆದಿರುವನೆಂದು ನಿರ್ಧರಿಸಬಹುದು.** ಇದರಲ್ಲಿಯ ವಿಷಯ ನಿರೂಪಣೆಯನ್ನು ಮತ್ತು ಈ ಕವಿಗೆ ಇರುವ ರಾಗದ್ವೇಷಗಳನ್ನು ನೋಡಿದರೆ ಇತ್ತೀಚಿನ ಕಾವ್ಯದಂತೆ ತೋರುವುದು.

ಈ ಕಾವ್ಯದಲ್ಲಿ ಏಳು ಸರ್ಗಗಳಿವೆ. ಈ ಕಾವ್ಯದ ಉದ್ದೇಶವು ಶ್ರೀವಿಜಯೀಂದ್ರತೀರ್ಥರ ಚರಿತ್ರೆಯನ್ನು, ಗ್ರಂಥರಚನೆಯನ್ನೂ, ಇನ್ನಿತರ ಮಹಿಮೆಗಳನ್ನೂ ತಿಳಿಸುವುದಲ್ಲ. ಏಕೆಂದರೆ ವಿಜಯೀಂದ್ರರ ವಿಷಯವನ್ನು ಕೇವಲ ಕೊನೆಯ ಎರಡು ಸರ್ಗಗಳಲ್ಲಿ ಬರೆದಿರುವನು. ಅದರಲ್ಲಿಯೂ ಅವರು 64 ಕಲೆಗಳಲ್ಲಿ ನಿಪುಣರಾಗಿದ್ದರು ಎಂಬುದನ್ನು ತೋರಿಸಲು ಅವರು ಚಂದ್ರಕಲಾ ಎಂಬ ವೇಶ್ಯೆಯನ್ನು, ಒಂದು ಹೂವನ್ನು ಅವಳ ಮೇಲೆ ಎಸೆಯುವುದರಿಂದ ಗೆದ್ದರು ಎಂದು ಕವಿಯು ಹೇಳಿದ್ದಾನೆ. ಅವರು ಜಿತೇಂದ್ರಿಯರಾಗಿದ್ದಾರೆ ಎನ್ನುವುದನ್ನು ಪರೀಕ್ಷಿಸಲು ಅವರಿಗೆ ತೈಲಾಭ್ಯಂಗ ಮಾಡಲು ಕೆಲವು ವೇಶ್ಯೆಯರನ್ನು ಕಳುಹಿಸಿಕೊಟ್ಟರು. ಆಗ ವಿಜಯೀಂದ್ರರು ಕಣ್ಣು ಮುಚ್ಚಿಕೊಂಡು ಪರಮಾತ್ಮನ ಧ್ಯಾನವನ್ನು ಮಾಡಿದರು. ಈ ರೀತಿಯಾಗಿ ತಮ್ಮನ್ನು ಸೋಲಿಸಲು ಬಂದವರನ್ನೆಲ್ಲ ಪರಾಜಯಗೊಳಿಸಿದರು. ಈ ವಿಷಯವು ಆರನೆಯ ಸರ್ಗದಲ್ಲಿ ವರ್ಣಿತವಾಗಿರುವುದು. ಇದು ಈ ಕವಿಯ ಕೀಳು ಅಭಿರುಚಿಯನ್ನು ತೋರಿಸುವುದು.

ಶ್ರೀವಿಜಯೀಂದ್ರರು ಮಹಾಜ್ಞಾನಿಗಳು, ಗ್ರಂಥಕರ್ತರು, ಸುಧಾ, ನ್ಯಾಯಾಮೃತಾದಿ ಗ್ರಂಥಗಳಿಗೆ ಟಿಪ್ಪಣಿ ಬರೆದವರು, ಜಿತೇಂದ್ರಿಯರು ಇಂತಹ ಶ್ರೇಷ್ಠ ವ್ಯಕ್ತಿಗಳ ವಿಷಯದಲ್ಲಿ ಮಧ್ವಕವಿಯು ಕೇವಲ ವೇಶ್ಯೆಯರ ವಿಷಯವನ್ನಷ್ಟೇ ಬರೆದದ್ದು ಅಪ್ರಾಸಂಗಿಕ ಹಾಗೂ ಅನುಚಿತ. ಅವರು ರಚಿಸಿರುವ ಗ್ರಂಥಗಳ ಹೆಸರನ್ನಾಗಲೀ, ಅವುಗಳ ಸಂಖ್ಯೆಯನ್ನಾಗಲೀ ಉಲ್ಲೇಖಿಸಿಲ್ಲ.

ಹಾಗೆಯೇ ಮೂಲರಾಮದೇವರ ಪ್ರತಿಮೆಯು ಶ್ರೀರಘುನಂದನರ ವಶವಾಯಿತು ಎಂದು ತಿಳಿದಾಗ ಶ್ರೀವಿದ್ಯಾನಿಧಿಗಳ ಶಿಷ್ಯರು ಶ್ರೀರಘುನಂದನರನ್ನು ಹೊಡೆಯುತ್ತೇವೆ ಕೊಲ್ಲುತ್ತೇವೆ ಮತ್ತು ಕೃತ್ಯಾಯೋಗದಿಂದ ವಶಪಡಿಸಿಕೊಳ್ಳುತ್ತೇವೆ-

**ನ ಸಹಾಮೋ ವಯಂ ಸರ್ವೇ ರಘುನಂದನವಶ್ಯಗಮ್ ।**
**ರಾಮಂ ಶ್ರುತ್ವಾ ಹನಿಷ್ಯಾಮೋ ರಘುನಂದನಹಂಸಕಮ್ ॥ 3-18 ॥**

**ಹಂತುಂ ಕೇಚಿದ್ಗತಾಸ್ತತ್ರ ಹರ್ತುಂ ಕೇಚಿದ್ಗತಾಸ್ತತಃ ।**
**ಅಪರೇ ಮಂತ್ರಕುಶಲಾ ಕೃತ್ಯಾಯೋಗಪರಾಯಣಾಃ ॥ 3-20 ॥**

ಈ ರೀತಿಯಾಗಿ ದಾಂಧಲೆಯನ್ನು ಮಾಡಿದ್ದನ್ನು ವರ್ಣಿಸುವುದು ಈ ಕವಿಯ ಕೀಳು ಅಭಿರುಚಿಯನ್ನು ತೋರಿಸುತ್ತದೆ. ಇದು ಕವಿಯ ಆಕ್ರೋಶವನ್ನು ಮಾತ್ರ ತೋರಿಸುತ್ತದೆ.

ಹೀಗೆ ಈ ಕಾವ್ಯದಲ್ಲಿ ಬರೆದ ವಿಷಯಗಳೆಲ್ಲ ಕವಿಯ ಉನ್ಮತ್ತಪ್ರಲಾಪಗಳಾದ್ದರಿಂದ ಈ ಕಾವ್ಯವು ಐತಿಹಾಸಿಕ ದಾಖಲೆಯಾಗಲಾರದು.

ಈ ಕಾವ್ಯದ ಮೊದಲನೆಯ ಸರ್ಗದಲ್ಲಿ ಶ್ರೀಮಧ್ವಾಚಾರ್ಯರಿಂದ ಆರಂಭಿಸಿ ಶ್ರೀರಾಮಚಂದ್ರತೀರ್ಥರ ವರೆಗಿನ ಯತಿಗಳ ಪರಂಪರೆಯನ್ನು ಹೇಳಿ ಶ್ರೀವಿಬುಧೇಂದ್ರತೀರ್ಥರು ಅವರ ಶಿಷ್ಯರೆಂದು ಹೇಳಲಾಗಿದೆ. ಈ ಶಿಷ್ಯರಿಗೆ ಶ್ರೀರಾಮಚಂದ್ರತೀರ್ಥರು ಬ್ರಹ್ಮಕರಾರ್ಚಿತ ರಾಮದೇವರ ಮತ್ತು ಸೀತಾದೇವಿಯ ಪ್ರತಿಮೆಗಳನ್ನು ಕೊಡದೆ ಬೆಳ್ಳಿಯ ರಾಮನ ಪ್ರತಿಮೆಯೊಂದನ್ನು ಕೊಟ್ಟರು ಎಂದು ಹೇಳಿದ್ದಾರೆ-

**ಯೇ ಬ್ರಹ್ಮನಿರ್ಮಿತೇ ದಿವ್ಯೇ ಶುದ್ಧತಾಮ್ರಮಯೇ ಶುಭೇ ।**
**ಅರ್ಚೇ ತೇ ರಾಮಚಂದ್ರಸ್ಯ ಸೀತಾಯಾಶ್ಚ ಸುಲಕ್ಷಣೇ ॥**

**ಕೃತ್ವಾ ಸ್ವವಶಗೇ ರಾಮಚಂದ್ರೋ ರಾಜತವಿಗ್ರಹಮ್ ।**
**ಪ್ರದದೇ ವಿಬುಧೇಂದ್ರಾಯ ಸ ತಾಂ ಸಂಪೂಜಯನ್ಗುರುಃ ॥**

ಈ ಬೆಳ್ಳಿಯ ರಾಮನ ಪ್ರತಿಮೆಯು ದಿಗ್ವಿಜಯರಾಮನ ಪ್ರತಿಮೆಯೆಂದು ಹೇಳಲಾಗುತ್ತಿದೆ. ಆದರೆ ಅಣುಸಂಸ್ಥಾನಕ್ಕೆ ದಿಗ್ವಿಜಯರಾಮನ ಪ್ರತಿಮೆಯನ್ನು ಕೊಡುವ ಸಂಪ್ರದಾಯವಿಲ್ಲ. ಶ್ರೀವಿಬುಧೇಂದ್ರತೀರ್ಥರು ಸಂಚಾರಕ್ರಮ ದಿಂದ ಕಾಶಿಗೆ ಹೋಗಿ ಅಲ್ಲಿ ವಾಸಮಾಡಿದರು. ಬಹಳ ದಿನಗಳ ವರೆಗೆ ಅವರು ತಿರುಗಿ ಬರದಿರುವುದನ್ನು ನೋಡಿ ಶ್ರೀರಾಮಚಂದ್ರತೀರ್ಥರು ಅವರಿಗೆ ಬರಬೇಕೆಂದು ಪತ್ರವನ್ನು ಕಳಿಸಿದರು ಮತ್ತು ಯರಗೋಳದ ಪ್ರಮುಖನ ಮನೆಯಲ್ಲಿ ಮೂಲರಾಮ-ಸೀತಾದೇವಿಯರ ಪ್ರತಿಮೆಗಳನ್ನಿಟ್ಟು, ಇವನ್ನು ಶ್ರೀವಿಬುಧೇಂದ್ರತೀರ್ಥರು ಬಂದ ಮೇಲೆ ಅವರಿಗೆ ಕೊಡಬೇಕೆಂದು ಆ ಪುರಪ್ರಮುಖನಿಗೆ ಹೇಳಿ ತಾವು ಬೃಂದಾವನಸ್ಥರಾದರು. ಅವರು ಬೃಂದಾವನಸ್ಥರಾದ ಮೇಲೆ ಅವರ ಶಿಷ್ಯರಲ್ಲಿ ಕೆಲವರು ಒಬ್ಬ ತುಳು ಬ್ರಾಹ್ಮಣನಿಗೆ ಸನ್ಯಾಸವನ್ನು ಕೊಟ್ಟು ಆ ಪ್ರತಿಮೆಗಳನ್ನು ಅವನಿಗೆ ಕೊಟ್ಟರು. ಈ ಯತಿಯೇ ಮುಂದೆ ವಿದ್ಯಾನಿಧಿಯೆಂದು ಪ್ರಸಿದ್ಧನಾದನು. ಇವನು ದೇಶ ಸಂಚಾರ ಮಾಡಿ ಜನರಿಗೆ ಮುದ್ರಾಧಾರಣೆಯನ್ನು ಕೊಟ್ಟು ಅನೇಕರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಶ್ರೀವಿಬುಧೇಂದ್ರತೀರ್ಥರು ತಮ್ಮ ಗುರುಗಳು ಬೃಂದಾವನಸ್ಥರಾದರೆಂದು ತಿಳಿದು ತಮ್ಮದೇ ಒಂದು ಗುರುಪರಂಪರೆಯ ವಂಶವನ್ನು ಆರಂಭಿಸಿದರು. ಈ ವಂಶದಲ್ಲಿ ಶ್ರೀವಿಜಯೀಂದ್ರತೀರ್ಥರೇ ಮೊದಲಾದ ಯತಿಶ್ರೇಷ್ಠರು ಆದರು. ಶ್ರೀವಿದ್ಯಾನಿಧಿಗಳೂ ಕೂಡ ತಮ್ಮ ಪರಂಪರೆಯ ವಂಶವೊಂದನ್ನು ಮಾಡಿಕೊಂಡರು. ಈ ವಂಶದಲ್ಲಿ ಶ್ರೀವಿದ್ಯಾಧೀಶರೇ ಮೊದಲಾದ ಯತಿಶ್ರೇಷ್ಠರು ಆದರು. ಹೀಗೆ ಪರಸ್ಪರ ವಿರೋಧವಿರುವ ಎರಡು ಗುರುಪರಂಪರೆಗಳಾದವು.

ಎರಡನೆಯ ಸರ್ಗದಲ್ಲಿ ಈ ವಿಷಯವನ್ನೇ ಇನ್ನಷ್ಟು ವಿಸ್ತಾರವಾಗಿ ಹೇಳಿರುವುದಾಗಿದೆ. ಗುರುಗಳು ವೃಂದಾವನಸ್ಥರಾದ ವಿಷಯವನ್ನು ತಿಳಿದ ಮೇಲೆ ಶ್ರೀವಿಬುಧೇಂದ್ರತೀರ್ಥರು ಯರಗೋಳಕ್ಕೆ ಬಂದು ಯರಗೋಳದ

ಪ್ರಮುಖನನ್ನು ಕೇಳಿದಾಗ ಅವನು ನಿಮ್ಮ ಹೆಸರಿನ ಯತಿಯೊಬ್ಬನು ಬಂದು ಶ್ರೀರಾಮನ ಮತ್ತು ಸೀತೆಯರ ಪ್ರತಿಮೆಗಳನ್ನು ತೆಗೆದುಕೊಂಡು ಹೋಗಿರುವವನು ಎಂದು ಹೇಳಿದನು. ಇದನ್ನು ತಿಳಿದು ಇವೆಲ್ಲದಕ್ಕೂ ದೈವವೇ ಕಾರಣವೆಂದು ಭಾವಿಸಿ ಶ್ರೀವಿಬುಧೇಂದ್ರರು ಮತ್ತೆ ಸಂಚಾರಕ್ಕೆ ಹೊರಟರು.

ಕವಿಯ ಈ ನಿರೂಪಣೆಯು ಸಮಂಜಸವಲ್ಲ. ಯಾಕೆಂದರೆ ಯರಗೋಳಪುರದ ಪ್ರಮುಖನು ಶ್ರೀರಾಮಚಂದ್ರ-ತೀರ್ಥರ ಆತ್ಮೀಯ, ವಿಶ್ವಾಸಾರ್ಹ ಶಿಷ್ಯರಲ್ಲೊಬ್ಬನಾಗಿರಲೇ ಬೇಕು. ಅಂತಯೇ ಅವನಲ್ಲಿ ಸಂಸ್ಥಾನದ ಮಹಾ-ಪ್ರತಿಮೆಗಳನ್ನು ಇಟ್ಟಿರುತ್ತಾರೆ. ಅಂತಹ ಪ್ರಮುಖವ್ಯಕ್ತಿ ಶ್ರೀರಾಮಚಂದ್ರತೀರ್ಥರ ಶಿಷ್ಯರಾದ ಶ್ರೀವಿಬುಧೇಂದ್ರರನ್ನು ನೋಡದೇ ಇರಲು ಹೇಗೆ ಸಾಧ್ಯ? ಆದ್ದರಿಂದ ಅವರ (ಶ್ರೀವಿಬುಧೇಂದ್ರರ) ಹೆಸರು ಹೇಳಿಕೊಂಡು ಬಂದ ಇನ್ನೊಬ್ಬ ಯತಿ (ಶ್ರೀವಿದ್ಯಾನಿಧಿ)ಗಳಿಗೆ ಮೂಲರಾಮ ಮತ್ತು ಸೀತೆಯರ ಪ್ರತಿಮೆಯನ್ನು ಕೊಟ್ಟದ್ದು ಸಂಗತವಾಗುವದಿಲ್ಲ. ಅಲ್ಲದೇ ಶ್ರೀರಾಮಚಂದ್ರತೀರ್ಥರ ಶಿಷ್ಯಪರಿವಾರದವರೇ ಒಬ್ಬ ತುಳು ಬ್ರಾಹ್ಮಣನಿಗೆ ಸನ್ಯಾಸವನ್ನು ಕೊಟ್ಟು ಅವನಿಗೆ ಪುರಪ್ರಮುಖರಿಂದ ಶ್ರೀರಾಮ ಮತ್ತು ಸೀತೆಯರ ಪ್ರತಿಮೆಗಳನ್ನು ಕೊಡಿಸಿದರೆಂಬುದೂ ಸಂಗತವಾಗುವುದಿಲ್ಲ. ಇದೆಲ್ಲ ಕವಿಯ ನಿರಂಕುಶವಾದ ಕಲ್ಪನೆಯಾಗಿದೆ.

ಮೂರನೆಯ ಸರ್ಗದಲ್ಲಿ ಶ್ರೀವಿಬುಧೇಂದ್ರರು, ಶ್ರೀವಿದ್ಯಾನಿಧಿಗಳೂ ತಮ್ಮ ಸಂಚಾರವನ್ನು ಮುಂದುವರಿಸಿದ ನಿರೂಪಣೆಯಿದೆ. ಹೀಗೆ ಸಂಚಾರ ಮಾಡುತ್ತಿದ್ದಾಗ ಕೆಲವರು ಶ್ರೀವಿಬುಧೇಂದ್ರರ ಶಿಷ್ಯರಾದರು. ಮತ್ತೆ ಕೆಲವರು ಶ್ರೀವಿದ್ಯಾನಿಧಿಗಳ ಶಿಷ್ಯರಾದರು ಎಂದು ಹೇಳಲಾಗಿದೆ. ಹೀಗೆ ಸಂಚಾರ ಮಾಡುವಾಗ ಶ್ರೀವಿಬುಧೇಂದ್ರರು ತಮ್ಮ ಶಿಷ್ಯನಿಗೆ ವಿಷ್ಣುವಿನ ಮತ್ತು ನಾರಾಯಣನ ಪ್ರತಿಮೆಗಳನ್ನು ಕೊಟ್ಟಿರುವ ಉಲ್ಲೇಖವಿದೆ. ಇನ್ನೊಬ್ಬ ಶಿಷ್ಯನು ನೈವೇದ್ಯವನ್ನು ಕೊಡುವಾಗ ದೇವರು ಎಲ್ಲವನ್ನೂ ಭಕ್ಷಿಸಿದ್ದನ್ನು ನೋಡಿ ಅವನು ಸನ್ಯಾಸಯೋಗ್ಯನೆಂದು ತಿಳಿದು ಅವನಿಗೇ ಸನ್ಯಾಸವನ್ನು ಕೊಟ್ಟು 'ಜಿತಾಮಿತ್ರ' ಎಂಬ ಹೆಸರಿಟ್ಟರು. ಮುಂದೆ ಕೆಲವು ದಿನಗಳಾದ ಮೇಲೆ ಶ್ರೀವಿಬುಧೇಂದ್ರರು ತಾಮ್ರಪರ್ಣೀ ತೀರದಲ್ಲಿರುವ ತಿರುನಲ್ವೇಲಿಯಲ್ಲಿ ಬೃಂದಾವನಸ್ಥರಾದರು. ಶ್ರೀಜಿತಾಮಿತ್ರರು ಕೃಷ್ಣಾನದಿಯಲ್ಲಿ ಏಳು ರಾತ್ರಿ ಕುಳಿತರು ಮತ್ತು ಸಮಾಧಿಯನ್ನು ಹೊಂದಿದರು. ಅವರು ಶ್ರೀರಘುನಂದನತೀರ್ಥರಿಗೆ ಆಶ್ರಮವನ್ನು ಕೊಟ್ಟರು. ಶ್ರೀರಘುನಂದನತೀರ್ಥರು ಮೂಲರಾಮದೇವರ ಪ್ರತಿಮೆಯನ್ನು ಪಡೆದುಕೊಂಡರೆಂದು ಹೇಳಲಾಗುತ್ತದೆ. ಈ ವಿಷಯದಲ್ಲಿ ಈ ಕೆಳಗಿನಂತೆ ಶ್ಲೋಕವನ್ನು ಹೇಳಲಾಗುತ್ತದೆ-

**ಪರೈರಪಹೃತಾ ಮೂಲರಾಮಾರ್ಚಾ ಗುರ್ವನುಗ್ರಹಾತ್ ।**
**ಯೇನಾನೀತಾ ನಮಸ್ತಸ್ಮೈ ರಘುನಂದನಭಿಕ್ಷವೇ ॥**

ಈ ಶ್ಲೋಕವು ಬಹಳಷ್ಟು ಪ್ರಚಾರವನ್ನು ಪಡೆದಿರಬೇಕು. ಇದನ್ನು ಕೇಳಿ ಪರಮಠದ ಶಿಷ್ಯರೂ ಇದನ್ನು ತಿರುಗಿ ಪಡೆಯಲು ಪ್ರಯತ್ನ ಮಾಡಬೇಕೆಂದರು. ಅಲ್ಲದೆ ಈ ಪ್ರತಿಮೆಯು ಸಿಗುವುದು ದುರ್ಲಭವಾದ್ದರಿಂದ ಇಂಥದೇ ಕೃತ್ರಿಮ ಪ್ರತಿಮೆಯೊಂದನ್ನು ಪೂಜಿಸಲು ತಮ್ಮ ಗುರುಗಳಾದ ಶ್ರೀವಿದ್ಯಾನಿಧಿಗಳಿಗೆ ಹೇಳಿದರು.

**ನಿರಾಶಾಃ ಪ್ರತಿಮಾಹೀನಾಃ ಮಠೀಯಾ ಬಹುಬ್ರಾಹ್ಮಣಾಃ ।**
**ಊಚುಃ ಸ್ವಗುರುಮುದ್ದಿಶ್ಯ ದತ್ವಾ ಕೃತ್ರಿಮರಾಘವಮ್ ॥ 3-23 ॥**

**ವಿಧಿನಾ ನಿರ್ಮಿತಾ ರಾಮಪ್ರತಿಮಾ ಯಾ ಬಹುಶ್ರುತಾ ।**
**ರಘುನಂದನಸ್ಯ ವಶಗಾ ಬಭೂವಾಸ್ಮತ್ಸುದುರ್ಲಭಾ ॥ 3-24 ॥**

**ಇಮಾಂ ಕೃತ್ರಿಮರಾಮಾರ್ಚಾಂ ಪೂಜಯಸ್ವ ವಿಧಾನತಃ ।**
**ಶಿಷ್ಯಾಂಸ್ತೋಷಯ ದೇಶೀಯಾನನಯಾ ಸೀತಯಾ ಸಹ ॥ 3-25 ॥**

ಶಿಷ್ಯರ ಈ ಸೂಚನೆಯಂತೆ ಶ್ರೀವಿದ್ಯಾನಿಧಿಗಳು ಈ ಕೃತ್ರಿಮ ರಾಮದೇವರ ಪ್ರತಿಮೆಯನ್ನು ಪೂಜೆ ಮಾಡುತ್ತ ದೇಶ ಸಂಚಾರ ಮಾಡಿದರು ಎಂದು ಈ ಕವಿಯು ಬರೆಯುತ್ತಾನೆ.

ಆದರೆ ಮೂಲರಾಮ ಪ್ರತಿಮೆಯು ಶ್ರೀರಘುನಂದನರಿಗೆ ದೊರೆತೇ ಇಲ್ಲವೆಂದು ನಾವು ಮುಂದೆ ಪ್ರತಿಪಾದಿಸುವೆವು. **ಆದ್ದರಿಂದ ಇದೆಲ್ಲ ಕಟ್ಟುಕತೆಯಾಗಿದೆ.** ಶ್ರೀರಘುನಂದನರ ಶಿಷ್ಯರೇ ಕೃತ್ರಿಮ ಪ್ರತಿಮೆಯನ್ನು ಮಾಡಿಸಿದ್ದಿರಬಹುದು. ಅದರ ಕೃತ್ರಿಮತೆಯನ್ನು ಜನರಿಗೆ ತಿಳಿಯದಂತೆ ಮಾಡಲು ಈ ಕೆಳಗಿನ ಶ್ಲೋಕವನ್ನು ಬಳಕೆಯಲ್ಲಿ ತಂದಿರಬೇಕು.

**ಪರೈರಪಹೃತಾ ಮೂಲರಾಮಾರ್ಚಾ ಗುರ್ವನುಗ್ರಹಾತ್ ।**
**ಯೇನಾನೀತಾ ನಮಸ್ತಸ್ಮೈ ರಘುನಂದನಭಿಕ್ಷವೇ ॥**

ರಘುನಂದನತೀರ್ಥರ ವಿಷಯವು ಬಂದಲ್ಲೆಲ್ಲ ಈ ಶ್ಲೋಕವನ್ನು ಉದಾಹರಿಸಲಾಗುತ್ತದೆ. ಆದ್ದರಿಂದ ಇದು ಪ್ರಚಾರದ ಶ್ಲೋಕವೇ ಆಗಿರಬೇಕು.

ಈ ಸಂದರ್ಭದಲ್ಲಿ ಶ್ರೀವಿದ್ಯಾನಿಧಿತೀರ್ಥರ ಪರಂಪರೆಗೆ ಸೇರಿದ ಯತಿಗಳು ತಮಗೆ ಶ್ರೀಮೂಲರಾಮನ ಪೂಜೆಯ ಅವಕಾಶ ತಪ್ಪಿ ಹೋಯಿತು ಎಂದು ಗೋಳಾಡಿ, ಶ್ರೀಮೂಲರಾಮನ ಪೂಜೆಯ ಅವಕಾಶವನ್ನು ತಮಗೆ ಒದಗಿಸಿ ಕೊಡಬೇಕೆಂದು ಶ್ರೀವಿದ್ಯಾನಿಧಿಗಳಲ್ಲಿದ್ದ ಮೂಲಸೀತೆಯನ್ನು ಪ್ರಾರ್ಥಿಸಿದರು. ಅದಕ್ಕೆ ಸೀತಾದೇವಿಯು ಸ್ವಪ್ನದಲ್ಲಿ ಬಂದು ನನ್ನ ಪೂಜೆಯ ಪ್ರಭಾವದಿಂದ ನೀವು ಮುಂದೆ ಶ್ರೀವಿಬುಧೇಂದ್ರರ ಪರಂಪರೆಯಲ್ಲಿಯೇ ಜನಿಸಿ ಶ್ರೀಮೂಲರಾಮನ ಪೂಜೆಯ ಅವಕಾಶವನ್ನು ಪಡೆಯುವಿರಿ ಎಂದು ಹೇಳಿದಳು' ಎಂದು ಕವಿಯು ಹೇಳುತ್ತಾನೆ. ಶ್ರೀವಿದ್ಯಾನಿಧಿಗಳು ಮೂಲರಾಮನನ್ನು ಕಳೆದುಕೊಂಡರು ಎಂಬುದನ್ನು ಹೇಗಾದರೂ ಮಾಡಿ ಸಮರ್ಥಿಸಲು ಈ ಅತಿಮಾನುಷ ಘಟನೆಯನ್ನು ಕವಿಯು ಇಲ್ಲಿ ಕಲ್ಪಿಸಿ ವರ್ಣಿಸಿದ್ದಾನೆ. ಮುಂದೆ ಶ್ರೀವಿಬುಧೇಂದ್ರರು ಶ್ರೀವಿಜಯೀಂದ್ರರಾಗಿಯೂ ಮತ್ತು ಶ್ರೀಜಿತಾಮಿತ್ರರು ಶ್ರೀಸುಧೀಂದ್ರರಾಗಿಯೂ ಅವತರಿಸಿದ್ದನ್ನು ಹೇಳಿದ್ದಾನೆ. ಸ್ವತಃ ಶ್ರೀವ್ಯಾಸರಾಜರು ಶ್ರೀರಾಘವೇಂದ್ರರಾಗಿ ಅವತರಿಸಿದ್ದನ್ನೂ ಹೇಳಿದ್ದಾನೆ. ಆದರೆ ಶ್ರೀವಿದ್ಯಾನಿಧಿಯ ಪರಂಪರೆಗೆ ಸೇರಿದ ಬೇರೆ ಯಾವ ಯತಿಗಳೂ ಮೂಲರಾಮನ ಪೂಜೆಯನ್ನು ಮಾಡಲು ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಅವತರಿಸಿದ್ದನ್ನು ಹೇಳಿಲ್ಲ. ಆದ್ದರಿಂದ ಶ್ರೀವಿದ್ಯಾನಿಧಿಗಳ ಪರಂಪರೆಗೆ ಸೇರಿದ ಯತಿಗಳು ಸೀತೆಯನ್ನು ಪ್ರಾರ್ಥಿಸಿದ್ದು ಅದಕ್ಕೆ ಅವಳು 'ನೀವು ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಜನಿಸಿ ಶ್ರೀರಾಮನ ಪೂಜೆ ಮಾಡುವ ಅವಕಾಶವನ್ನು ಪಡೆಯುವಿರಿ' ಎಂದು ಹೇಳಿದ್ದು ನಿರರ್ಥಕವಾದ ಮಾತುಗಳಾಗಿವೆ.

ನಾಲ್ಕನೆಯ ಸರ್ಗದಲ್ಲಿ ಶ್ರೀರಘುನಂದನರಿಂದ ಶ್ರೀಸುರೇಂದ್ರರು ಆಶ್ರಮವನ್ನು ಪಡೆದದ್ದನ್ನು ಅವರು ಸಂಚಾರ ಕ್ರಮದಿಂದ ಆನೆಗೊಂದಿಗೆ ಹೋದದ್ದನ್ನೂ ಹೇಳಲಾಗಿದೆ. ಆ ಸಂದರ್ಭದಲ್ಲಿ ಶ್ರೀವ್ಯಾಸತೀರ್ಥರು ಶ್ರೀವಾದಿರಾಜರೇ ಮೊದಲಾದ ಯತಿಗಳೊಡನೆ ಅಲ್ಲಿಗೆ ಬರುವರು. ಅವರಿಬ್ಬರೂ ಪರಸ್ಪರ ಹಸ್ತಲಾಘವವನ್ನು ಮಾಡಿ ಕಾಲೋಚಿತವಾದ ಮಾತುಗಳನ್ನಾಡುತ್ತ ಭೂಮಿಯ ಮೇಲೆಯೇ ಕುಳಿತುಕೊಂಡರು. ಆಗ ಅಲ್ಲಿಗೆ ಆ ನಗರದ ರಾಜನು ಬಂದು ಇವರಿಬ್ಬರನ್ನೂ ಆ ನಗರದಲ್ಲಿಯೇ ತನ್ನ ಮನೆಗೆ ಕರೆದುಕೊಂಡು ಹೋಗುವನು. ರಾಜನು ''ಈ ಶ್ರೀಸುರೇಂದ್ರರು ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಬಂದಿರುವರೋ, ಶ್ರೀವಿದ್ಯಾನಿಧಿಗಳ ಪರಂಪರೆಯಲ್ಲಿ ಬಂದಿರುವರೋ'' ಎಂದು ಕೇಳಿದನು. ಅದಕ್ಕೆ ಶ್ರೀವ್ಯಾಸರಾಜರು ಇವರು ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಬಂದಿರುವರು. ಮತ್ತು ನನ್ನನ್ನು ಭೇಟಿಯಾಗಲು ಬಂದಿರುವರು ಎಂದು ಹೇಳಿದರು. ಇಬ್ಬರೂ ಯತಿಗಳೂ ತಮ್ಮ ತಮ್ಮ ದೇವರ ಪೂಜೆಗಳನ್ನು ಮಾಡಿದರು. ಪೂಜೆಯಾದ ಮೇಲೆ ರಾಜನು ಶ್ರೀವ್ಯಾಸರಾಜರನ್ನು ''ಈ ಮೂಲರಾಮದೇವರ ಪ್ರತಿಮೆಯ ಲಕ್ಷಣವೇನು? ಮತ್ತು ಇದು ಹೇಗೆ ದೊರಕಿತು'' ಎಂದು ಕೇಳುವನು. ಶ್ರೀವ್ಯಾಸರಾಜರು; ''ಶ್ರೀನರಹರಿತೀರ್ಥರು ಈ ಶ್ರೀಮೂಲರಾಮನ ಪ್ರತಿಮೆಯನ್ನು ತಂದರು. ಶ್ರೀಮಧ್ವಾಚಾರ್ಯರಿಂದ ರಾಮಚಂದ್ರತೀರ್ಥರವರೆಗೆ

ಯತಿಶ್ರೇಷ್ಠರು ಇದರ ಪೂಜೆಯನ್ನು ಮಾಡುತ್ತಾ ಬಂದರು'' ಎಂದು ಹೇಳಿ, ಶ್ರೀವಿಬುಧೇಂದ್ರರ ಕಾಲದಲ್ಲಿ ಶ್ರೀಮೂಲರಾಮನ ವಿಷಯದಲ್ಲಿ ನಡೆದ ಘಟನೆಗಳನ್ನು ಮೂರನೆಯ ಸರ್ಗದಲ್ಲಿ ಹೇಳಿದಂತೆ ಮತ್ತೆ ಇಲ್ಲಿಯೂ ಶ್ರೀವ್ಯಾಸರಾಜರ ಮುಖದಿಂದ ಹೇಳಿಸುವನು. ನಂತರ ಶ್ರೀರಘುನಂದನರು ತಮ್ಮ ಶಿಷ್ಯನ ಮುಖಾಂತರ ಶ್ರೀರಾಮನ ಪ್ರತಿಮೆಯನ್ನು ತರಿಸಿದ್ದನ್ನು ಶ್ರೀಸೀತೆಯ ಪ್ರತಿಮೆಯು ಶ್ರೀವಿದ್ಯಾನಿಧಿಗಳ ಹತ್ತಿರವೇ ಇರುವುದನ್ನೂ ಹೇಳುವನು. ವಿದ್ಯಾನಿಧಿಗಳಿಗೆ ಅವರ ಶಿಷ್ಯರು ಒಂದು ಕೃತ್ರಿಮವಾದ ಪ್ರತಿಮೆಯನ್ನು ಮಾಡಿಸಿಕೊಟ್ಟರು ಎಂದು ವ್ಯಾಸರಾಜರು ರಾಜನಿಗೆ ಹೇಳುವರು.

ಐದನೆಯ ಸರ್ಗದಲ್ಲಿ ಶ್ರೀವ್ಯಾಸರಾಜರ ಮತ್ತು ಶ್ರೀಸುರೇಂದ್ರರ ಸಮಾಗಮವನ್ನು ವರ್ಣಿಸಲಾಗಿದೆ. ಶ್ರೀವ್ಯಾಸರಾಜರು ತಮ್ಮ ಶಿಷ್ಯರಾದ ಶ್ರೀವಿಷ್ಣುತೀರ್ಥರ ಜನ್ಮವೃತ್ತಾಂತವನ್ನು ಶ್ರೀಸುರೇಂದ್ರರಿಗೆ ತಿಳಿಸಿ ಶ್ರೀಸುರೇಂದ್ರರ ಪ್ರಾರ್ಥನೆಯಂತೆ ಅವರನ್ನು ಶ್ರೀಸುರೇಂದ್ರರಿಗೆ ಕೊಡಲು ಒಪ್ಪಿದರು. ಅವರಿಗೆ ಶ್ರೀವಿಜಯೀಂದ್ರತೀರ್ಥ ಎಂದು ನಾಮಕರಣ ಮಾಡಿದರು ಮತ್ತು ಈ ಶ್ರೀವಿಜಯೀಂದ್ರತೀರ್ಥರು ಶ್ರೀಸುರೇಂದ್ರತೀರ್ಥರಿಗೆ ನಿಷ್ಠೆಯಿಂದ ನಡೆದುಕೊಳ್ಳಬೇಕೆಂದು ಉಪದೇಶಿಸಿದರು.

ಆರನೆಯ ಸರ್ಗದಲ್ಲಿ ಶ್ರೀವಿಜಯೀಂದ್ರತೀರ್ಥರು ಅಪ್ಪಯ್ಯದೀಕ್ಷಿತರನ್ನು ಪರಾಜಯಗೊಳಿಸಿದರೆಂದೂ, ಗ್ರಂಥ ಗಳನ್ನು ರಚಿಸಿದರೆಂದೂ ಹೇಳಲಾಗಿದೆ. 64 ಕಲೆಗಳಲ್ಲಿ ನಿಪುಣರಾದ ಶ್ರೀವಿಜಯೀಂದ್ರರು ಆಯಾ ಕಲೆಗಳಲ್ಲಿ ನಿಪುಣ ರಾದವರನ್ನು ಸೋಲಿಸಿದರೆಂದು ಹೇಳಲಾಗಿದೆ. ಇಲ್ಲಿಯೇ ವೇಶ್ಯೆಯನ್ನು ಶ್ರೀವಿಜಯೀಂದ್ರತೀರ್ಥರ ಬಳಿಗೆ ಕಳುಹಿಸಿ ಅವರ ಶ್ರೀಜಿತೇಂದ್ರಿಯತ್ವವನ್ನು ಪರೀಕ್ಷಿಸಿದ ವಿಷಯವನ್ನು ಹೇಳಲಾಗಿದೆ. ಈ ವಿಷಯ ತುಂಬಾ ಅಶ್ಲೀಲವಾಗಿದ್ದು ಇದರ ವರ್ಣನೆಯು ಕವಿಯ ಕೀಳು ಅಭಿರುಚಿಯನ್ನು ತೋರಿಸುತ್ತದೆ ಎಂದು ಈ ಹಿಂದೆಯೇ ನಾವು ಹೇಳಿದ್ದೇವೆ.

ಏಳನೆಯ ಸರ್ಗದಲ್ಲಿ ಶ್ರೀವಿಜಯೀಂದ್ರರು ಉಡುಪಿಗೆ ಹೋದದ್ದರ ವರ್ಣನೆಯಿದೆ. ಉಡುಪಿಯಲ್ಲಿ ತಮ್ಮ ಮಠದಲ್ಲಿಯೇ ಕುಳಿತು ಪೂಜೆ ಮಾಡುವಾಗ ಶ್ರೀಕೃಷ್ಣನ ದರ್ಶನವಾಗಬೇಕೆಂದು ಒಂದು ಕಿಟಕಿಯನ್ನು ಮಾಡಲಾಯಿತು ಎಂದು ಹೇಳಲಾಗಿದೆ. ಆದರೆ ಇದು ಕನಕದಾಸರು ಶ್ರೀಕೃಷ್ಣನ ದರ್ಶನವನ್ನು ಮಾಡಲು ಇದ್ದ ಕಿಟಕಿಯಾಗಿದ್ದು ಇದನ್ನು ಶ್ರೀವಿಜಯೀಂದ್ರತೀರ್ಥರಿಗಿಂತ ಮೊದಲೇ ಮಾಡಲಾಗಿದೆ.

6ನೆಯ ಮತ್ತು 7ನೆಯ ಸರ್ಗಗಳಲ್ಲಿ ಶ್ರೀವಿಜಯೀಂದ್ರರ ವಿಷಯವು ಸ್ವಲ್ಪ ಮಟ್ಟಿಗೆ ಬಂದಿದ್ದರೂ ಆ ಮಹನೀಯರ ಜೀವನದ ಮಹತ್ತ್ವದ ಘಟನೆಗಳೆಲ್ಲ ಇಲ್ಲಿ ನಿರೂಪಿತವಾಗಿಲ್ಲ. ಆದ್ದರಿಂದ ಈ ಕಾವ್ಯಕ್ಕೆ 'ವಿಜಯೀಂದ್ರವಿಜಯ' ಎಂಬ ಹೆಸರನ್ನು ಇಟ್ಟಿದ್ದು ಸರಿಯಲ್ಲ. ಕವಿಯ ಉದ್ದೇಶವು ಶ್ರೀವಿಬುಧೇಂದ್ರರ ಪರಂಪರೆಯ ಮೊದಲು ಮೂರು ಯತಿಗಳ ವಿಷಯವನ್ನು ಹೇಳುವುದು, ಮೂಲರಾಮರ ಪ್ರತಿಮೆಯನ್ನು ಕದ್ದು ತರಲಾಗಿದೆ ಎಂದು ಅಪಪ್ರಚಾರ ಮಾಡುವುದೇ ಮುಖ್ಯ ಉದ್ದೇಶವಾಗಿದೆ. ಶ್ರೀವಿದ್ಯಾನಿಧಿಗಳ ವಿಷಯದಲ್ಲಿ ಇಲ್ಲದ ಸಲ್ಲದ ತುಚ್ಛ ಮಾತುಗಳನ್ನು ಆಡಲಾಗಿದೆ. ಕೃತ್ರಿಮ ರಾಮಪ್ರತಿಮೆಯನ್ನು ಮಾಡಿಸಿದ ಆರೋಪವನ್ನು ಅವರ ಮೇಲೆ ಮಾಡಲಾಗಿದೆ.

ಈ ಘಟನೆಗಳ ಹಿನ್ನೆಲೆಯನ್ನು ನೋಡಿದಾಗ ಶ್ರೀರಘುನಂದನರ ಕಾಲದಲ್ಲಿ ಮತ್ತೊಂದು ರಾಮನ ಪ್ರತಿಮೆಯನ್ನು ಮಾಡಿಸಿಕೊಂಡು ಅದನ್ನು ಮುಚ್ಚಿಟ್ಟುಕೊಳ್ಳಲು ಮೂಲರಾಮಪ್ರತಿಮೆಯನ್ನು ಕಳುವು ಮಾಡಿ ತರಿಸಿಕೊಂಡ ಕಥೆಯನ್ನು ಹುಟ್ಟು ಹಾಕಲಾಗಿದೆ ಎಂದು ತೋರುತ್ತದೆ.

ಈ ಶ್ರೀವಿಜಯೀಂದ್ರವಿಜಯದ ವಿಷಯದಲ್ಲಿ ಡಾ. ಬಿ. ಎನ್.ಕೆ.ರವರ ಅಭಿಪ್ರಾಯ ಗಮನಾರ್ಹವಾಗಿದೆ-

1. ಶ್ರೀ ರಾಜಾ.ಎಸ್.ಗುರುರಾಜಾಚಾರ್ಯರು ಮತ್ತು ಶ್ರೀ ಹೆಚ್.ಕೆ ವೇದವ್ಯಾಸಾಚಾರ್ಯರಿಗೆ ಈ ಕಾವ್ಯವು ಉಪಲಬ್ಧವಿದ್ದರೂ ಅದನ್ನು ನನಗೆ ಒದಗಿಸಲಿಲ್ಲ. ತಾವೂ ಪ್ರಕಟಿಸಲಿಲ್ಲ. ಈ ಕಾವ್ಯದಲ್ಲಿಯ ಕೆಲವು ವಿಷಯಗಳು ಅವರ ಅಭಿಪ್ರಾಯಕ್ಕೆ ವಿರುದ್ಧವಾದದ್ದೇ ಇದಕ್ಕೆ ಕಾರಣ.

2. 1993ರಲ್ಲಿ ಪ್ರಭಾ ಪ್ರೆಸ್ಸಿನ ನನ್ನ ಒಬ್ಬ ಸ್ನೇಹಿತರು ಈ ಕಾವ್ಯದ ಜೆರಾಕ್ಸ್ ಪ್ರತಿಯನ್ನು ನನಗೆ ಒದಗಿಸಿದರು. (My further ten research papers – by Dr. B.N.K.Sharma 2002)

## 3. ಪ್ರತಿಮಾಲಕ್ಷಣ

ವಾಸಿಷ್ಠರಾಮಾಯಣದಲ್ಲಿ ಮೂಲರಾಮಪ್ರತಿಮೆಯ ಲಕ್ಷಣವು ಕೆಳಗಿನಂತಿದೆ-

**ಪೂರ್ವಂ ವಿವಸ್ವತೇ ದತ್ತಾ ಬ್ರಹ್ಮಣಾ ಪರಮೇಷ್ಠಿನಾ ।**
**ಸ್ವಯಂವ್ಯಕ್ತಾ ಮಹಾಭಾಗ ಪ್ರತಿಮಾಽನೇನ ಪೂಜಿತಾ ॥**

**ಸರ್ವಲಕ್ಷಣಸಂಪನ್ನಾ ಪಾದೇ ಬಿ(ದ್ವಿ)ರದಸಂಯುತಾ ।**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ॥**

----

**ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್ ।**

ಪೂರ್ವದಲ್ಲಿ ವಿವಸ್ವತನಿಗೆ ಬ್ರಹ್ಮದೇವರು ಕೊಟ್ಟ ಸ್ವಯಂವ್ಯಕ್ತವಾದ ಪ್ರತಿಮೆಯು ಸರ್ವಲಕ್ಷಣದಿಂದ ಕೂಡಿದೆ. ಪಾದವು ಸುಂದರ ಕಡಗದಿಂದ, ವೀರಕಂಕಣ ಹಾಗೂ ಗೆಜ್ಜೆಯಿಂದ ಯುಕ್ತವಾಗಿದೆ. ನನ್ನದೇ ಪ್ರತಿರೂಪವಾಗಿದೆ. ಶುದ್ಧ ತಾಮ್ರಮಯವಾಗಿದೆ. ಬ್ರಹ್ಮದೇವರಿಂದ ಬಹುಕಾಲ ಪೂಜಿತವಾಗಿದೆ.

ಈ ಲಕ್ಷಣದ ರಾಮಪ್ರತಿಮೆಯು ಶ್ರೀಉತ್ತರಾದಿಮಠದಲ್ಲಿ ಪರಂಪರಾಗತವಾಗಿ ಪೂಜಿಸಲ್ಪಡುತ್ತಿದೆ. ಆದರೆ ಅರ್ಚಾಗತಿಕ್ರಮದಲ್ಲಿ ರಾಮನ ಪ್ರತಿಮೆಯ ಲಕ್ಷಣವು (12 ನೇ ಶ್ಲೋಕದಲ್ಲಿ) ಹೀಗಿದೆ-

**ಅರ್ಚಾ ತು ರಾಮಚಂದ್ರಸ್ಯ ನಿರ್ಮಿತಾ ವಿಶ್ವಕರ್ಮಣಾ ।**
**ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ॥**

ವಿಶ್ವಕರ್ಮನಿಂದ ನಿರ್ಮಿತವಾದ ಸೀತಾಸಹಿತ ರಾಮಪ್ರತಿಮೆಯು ದುಂಡು ಪೀಠ, ಉದ್ದ ಕಿವಿ, ಮೂರು ಕಡೆ ವಕ್ರ (ಸೊಟ್ಟ) ಲಕ್ಷಣಗಳಿಂದ ಕೂಡಿದೆ.

ವಾಸಿಷ್ಠರಾಮಾಯಣದಲ್ಲಿ ರಾಮನ ಪ್ರತಿಮೆ ಸ್ವಯಂವ್ಯಕ್ತ ಎಂಬುದಾಗಿ ಉಲ್ಲೇಖಿತವಾಗಿದೆ. ಆದರೆ ಅರ್ಚಾಗತಿಕ್ರಮದಲ್ಲಿ ವಿಶ್ವಕರ್ಮ ನಿರ್ಮಿತ ಎಂದಿದೆ. ಈ ವ್ಯತ್ಯಾಸವನ್ನು ಗಮನಿಸಬೇಕು. ಅಲ್ಲದೇ ಅರ್ಚಾಗತಿಕ್ರಮದಲ್ಲಿ ಹೇಳಿರುವ ಲಕ್ಷಣಗಳಿಗೆ ಆಕರವನ್ನು ಹೇಳಿಲ್ಲ. ಅರ್ಚಾಗತಿಕ್ರಮದಲ್ಲಿಯ 12ನೆಯ ಶ್ಲೋಕದಲ್ಲಿ ಎರಡನೇ ಪಾದವನ್ನು ವಾಸಿಷ್ಠರಾಮಾಯಣದ ''ಸರ್ವಲಕ್ಷಣಸಂಪನ್ನಾ ಪಾದೇ ದ್ವಿರದಸಂಯುತಾ'' ಎಂಬ ಶ್ಲೋಕದ ಎರಡನೇ ಪಾದವನ್ನಾಗಿ ಸೇರಿಸಲಾಗಿದೆ. ಹೀಗೆ ಸೇರಿಸಿದ ಈ ಶ್ಲೋಕಕ್ಕೂ ಆಕರವನ್ನು ಹೇಳಿಲ್ಲ.

ಗುರುವಂಶಕಥಾಕಲ್ಪತರು ಗ್ರಂಥದಲ್ಲಿ ಮೂಲಸೀತಾರಾಮರ ಪ್ರತಿಮೆಗಳ ಲಕ್ಷಣಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ-

**ತಾಮ್ರಾಧಿಕ್ಯಾತ್ಮನ್ಮಯೀಂ ತಾಂ ವಸಿಷ್ಠಮುನಿರಬ್ರವೀತ್ ।**
**ವಿಚಿತ್ರಸತ್ಕರೀಟಾದಿಸಹಜಾಭರಣೈರ್ಯುತಾ ।**
**ವಾಮಜಂಘಾಲಸದ್ವೀರಕಂಕಣಾಮಿತಲಕ್ಷಣಾ ॥ 34 ॥**
**ಭಾತಿ ಯಸ್ಯಾಃ ಸವ್ಯಪಾದೇ ಬ್ರಹ್ಮನಿರ್ಮಿತನೂಪುರಃ ।**
**ತಥೈವ ಸೀತಾಪ್ರತಿಮಾ ವರ್ತತೇ ಪಿತ್ತಲಾತ್ಮಿಕಾ ।**

**ಪಶ್ಚಾದ್ಭಾಗಸ್ಥಕಬರಾ ವೃತ್ತತಾಮ್ರಸುಪೀಠಗಾ ॥ 37 ॥**
**ಮಾರ್ಕಂಡೇಯಪುರಾಣೇ ತೂತ್ತರಕಾಂಡೇ ತಥೈವ ಚ ।**
**ಅಧ್ಯಾಯೇ ಷಣ್ಣವತಿಕೇ ಗ್ರಂಥೇ ಪುಷ್ಕರಸಂಜ್ಞಕೇ ॥ 41 ॥**
**ರಾಮಾಯಣೇ ತು ವಾಸಿಷ್ಠೇ ... ... .. .**

ತಾಮ್ರಮಯವಾದ ವಿಚಿತ್ರ ಕಿರೀಟ ಸಹಜಾಭರಣಗಳು, ಎಡಗಾಲಲ್ಲಿ ವೀರಕಂಕಣ, ಪಾದದಲ್ಲಿ ಗೆಜ್ಜೆ ಮುಂತಾದ ಲಕ್ಷಣಗಳಿಂದ ಕೂಡಿರುವುದು. (ಇದು ಮೂಲರಾಮ ಪ್ರತಿಮೆಯ ಲಕ್ಷಣ) ಮೂಲಸೀತಾದೇವಿಯ ಪ್ರತಿಮೆಯು ಹಿತ್ತಾಳೆಯ ಬಣ್ಣ, ದುಂಡಾದ ತಾಮ್ರಪೀಠ, ಸುಂದರ ಜಡೆಯ ಆಭರಣ, ಕಬರಾದಿಗಳಿಂದ ಕೂಡಿದೆ.

ಈ ಎಲ್ಲ ಲಕ್ಷಣಗಳ ವಿಷಯದಲ್ಲಿ ಮಾರ್ಕಂಡೇಯಪುರಾಣದ ಉತ್ತರಕಾಂಡದ 96ನೇ ಅಧ್ಯಾಯದ, 'ಪುಷ್ಕರ' ಎಂಬ ಪ್ರಾಚೀನ ಗ್ರಂಥದ ಹಾಗೂ ವಾಸಿಷ್ಠರಾಮಾಯಣಗಳ ಆಕರಗಳನ್ನು ತಿಳಿಸಲಾಗಿರುವುದನ್ನು ಗಮನಿಸಬಹುದು.

ವಾಸಿಷ್ಠರಾಮಾಯಣದ ಶ್ಲೋಕದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿರುವ ಶ್ರೀರಾಮನ ಪ್ರತಿಮೆಯು ತಾಮ್ರಮಯ ಎನ್ನುವುದನ್ನು ಅರ್ಚಾಗತಿಕ್ರಮದಲ್ಲಿ ಹೇಳಿಲ್ಲ ಎಂಬುದನ್ನು ಗಮನಿಸಬೇಕು. ಅರ್ಚಾಗತಿಕ್ರಮದ 31ನೇ ಶ್ಲೋಕದಲ್ಲಿ

**ಕರ್ಣತೋ ವರ್ಣತಶ್ಚೈವ ಪೀಠತಃ ಪರಿಮಾಣತಃ ।**
**ಸೀತಾರಾಮಾರ್ಚಯೋಃ ಸಾಮ್ಯಮತೋಽನ್ಯಸ್ವಮಠಸ್ಥಯೋಃ ॥**

ಕರ್ಣಗಳು, ಪ್ರತಿಮೆಯ ಬಣ್ಣ, ಪೀಠ ಮತ್ತು ಅಳತೆಗಳಿಂದ ಪರಮಠದಲ್ಲಿರುವ ಶ್ರೀಸೀತಾಪ್ರತಿಮೆ ಮತ್ತು ನಮ್ಮ ಮಠದಲ್ಲಿರುವ ರಾಮಪ್ರತಿಮೆಗಳಲ್ಲಿ ಸಾಮ್ಯವಿದೆ.

ಅರ್ಚಾಗತಿಕ್ರಮದಲ್ಲಿರುವ ಈ ಶ್ಲೋಕವು ಸೀತಾಪ್ರತಿಮೆಯು ಪರಮಠದಲ್ಲಿಯೂ, ಶ್ರೀರಾಮನ ಪ್ರತಿಮೆಯು ಸ್ವಮಠ ಅಂದರೆ ಶ್ರೀರಾಯರ ಮಠದಲ್ಲಿಯೂ ಇರುವುದು ಎಂಬುದನ್ನು ಗೃಹೀತವಾಗಿಟ್ಟುಕೊಂಡು ತಿಳಿಸುತ್ತದೆ. ಆದರೆ ವಸ್ತುಸ್ಥಿತಿಯು ಹೀಗಿಲ್ಲ ಸೀತಾರಾಮರ ಎರಡೂ ಪ್ರತಿಮೆಗಳು ಉತ್ತರಾದಿಮಠದಲ್ಲಿಯೇ ಇದ್ದು ಪರಂಪರೆಯಿಂದ ಪೂಜಿಸಲ್ಪಡುತ್ತಿವೆ. ಈ ಪ್ರತಿಮೆಗಳು ಬೇರೆ ಕಡೆಗಿವೆ ಎಂದು ಹೇಳಲು ಯಾವ ಆಧಾರವೂ ಇಲ್ಲ. ಶ್ರೀರಾಮನ ಪ್ರತಿಮೆಯ ಕಳವು ಆದದ್ದರ ನಿರಾಕರಣೆಯನ್ನು ಮುಂದೆ ಮಾಡಲಾಗುವುದು.

## 4. ಮೂಲರಾಮದೇವರ ಕಳುವಿನ ಕಟ್ಟುಕಥೆ

ಉತ್ತರಾದಿಮಠದಲ್ಲಿದ್ದ ಶ್ರೀಮೂಲರಾಮದೇವರ ಪ್ರತಿಮೆಯನ್ನು ಶ್ರೀರಘುನಂದನರ ಶಿಷ್ಯನಾದ ಬಾಡದ ಚಂದ್ರಭಟ್ಟನು ಕಳವು ಮಾಡಿ ಶ್ರೀರಘುನಂದನರಿಗೆ ತಂದುಕೊಟ್ಟನು ಎಂದು ಹೇಳಲಾಗುತ್ತದೆ. ಉತ್ತರಾದಿಮಠದ ಶ್ರೀಗಳವರು ಬಂಕಾಪುರದಲ್ಲಿದ್ದಾಗ ಈ ಚಂದ್ರಭಟ್ಟನು ಅಲ್ಲಿಗೆ ಹೋಗಿ ಶ್ರೀಗಳವರ ಎಡಬಲಸೇವೆಯನ್ನು ಮಾಡುವುದಕ್ಕಾಗಿ ಸೇರಿಕೊಂಡನು. ಸುಮಾರು ಎಂಟು ತಿಂಗಳ ಕಾಲ ಸೇವೆಯನ್ನು ಮಾಡಿ ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿಯಂದು ಉದಯಕಾಲದಲ್ಲಿ ರಾಮನ ಪ್ರತಿಮೆಯನ್ನು ಕಳುವು ಮಾಡಿ ಮಠದಿಂದ ಓಡಿಹೋದನು. ಕಾರ್ತಿಕ ಬಹುಳ ಅಷ್ಟಮೀ ದಿನ ಪೆನಗುಂಡೆಯಲ್ಲಿದ್ದ ಶ್ರೀರಘುನಂದನತೀರ್ಥರಿಗೆ ತಂದುಕೊಟ್ಟನು. ಮುಂದೆ ಸುಮಾರು 11 ವರ್ಷಗಳಾದ ಮೇಲೆ ಶ್ರೀಸುರೇಂದ್ರತೀರ್ಥರು, ರಕ್ತಾಕ್ಷಿನಾಮ ಸಂ. ಮಾಘ ಬಹುಳ ಅಮಾವಾಸ್ಯೆಯ ದಿನದಂದು ಆ ಬಾಡದ ಚಂದ್ರಭಟ್ಟನಿಗೆ ರಾಯಸ ಬರೆಯುವ ಮತ್ತು ಇನ್ನಿತರ ಮಠದ ಆಡಳಿತ ಕಾರ್ಯವನ್ನು ನಿರ್ವಹಿಸುವ ಪಾರುಪತ್ಯದ ಕೆಲಸವನ್ನು ಪ್ರಯಾಗಕ್ಷೇತ್ರದಲ್ಲಿ ಮಾಘ ಬಹುಳ ಅಮಾವಾಸ್ಯೆ ಸೂರ್ಯೋಪರಾಗ ಪರ್ವಕಾಲ ವಿಶೇಷದಲ್ಲಿ ಗಂಗಾ ಯಮುನಾ ಸಂಗಮದಲ್ಲಿ ವೇಣೀಮಾಧವನ ಸನ್ನಿಧಾನದಲ್ಲಿ ಕೊಟ್ಟರು ಎಂದು ಹೇಳಲಾಗುವುದು. ಮೇಲಿನ ವಿಷಯಗಳಿಗೆ ಆಧಾರವೆಂದು ತಾಮ್ರಪತ್ರದ ನಕಲನ್ನು ಮುದ್ರಿಸಿದ್ದಾರೆ.

ಆದರೆ ಈ ಕೆಳಗಿನ ಕಾರಣಗಳಿಂದಾಗಿ ಅವರು ನೀಡಿದ ತಾಮ್ರಪತ್ರವನ್ನು ಆಧಾರ ಎಂದು ಪರಿಗಣಿಸಲಾಗುವುದಿಲ್ಲ. ಆದ್ದರಿಂದ ಅದರಲ್ಲಿ ಬಂದ ವಿಷಯಗಳೂ ನಂಬಲರ್ಹವಾಗಿಲ್ಲ.

1. ಬಾಡದ ಚಂದ್ರಭಟ್ಟನಂತಹ ಅಪರಿಚಿತ ವ್ಯಕ್ತಿಯನ್ನು ಉತ್ತರಾದಿಮಠದಲ್ಲಿ ಎಡಬಲ ಸೇವೆಗೆ ಇಟ್ಟುಕೊಂಡರು ಎನ್ನುವುದು ನಂಬಲರ್ಹವಲ್ಲ. ಪ್ರಚಲಿತ ಲೋಕರೂಢಿಗೆ ವಿರುದ್ಧವಾಗಿದೆ
2. ದ್ವಾದಶಿ ಪ್ರಾತಃ ಕಾಲದಲ್ಲಿ ಸ್ವಾಮಿಗಳು ಹಾಗೂ ಇನ್ನಿತರ ಮಠದ ಸಿಬ್ಬಂದಿಗಳು ಇರುವಾಗ ಪ್ರತಿಮೆಯ ಕಳುವನ್ನು ಮಾಡುವುದು ಸಾಧ್ಯವಿಲ್ಲ.
3. ಮಂಟಪದಿಂದಾಗಲೀ, ಭುಜಂಗಿಸಿ ಇರಿಸುವ ಪೆಟ್ಟಿಗೆಯಿಂದಾಗಲೀ ಮೂಲಸೀತೆಯ ಪ್ರತಿಮೆಯನ್ನು ಅಲ್ಲಿಯೇ ಬಿಟ್ಟು ಮೂಲರಾಮನ ಪ್ರತಿಮೆಯೊಂದನ್ನು ಮಾತ್ರ ಕದಿಯಲು ಕಾರಣವಿಲ್ಲ.
4. ಮೂಲರಾಮನನ್ನು ಕದ್ದು ತಂದಂತಹ ಕಷ್ಟದ ಸೇವೆಯನ್ನು ಮಾಡಿದ ಚಂದ್ರಭಟ್ಟನಿಗೆ ಅದರ ಪ್ರತಿಫಲವನ್ನು 11 ವರ್ಷಗಳಾದ ಮೇಲೆ ರಕ್ತಾಕ್ಷಿನಾಮ ಸಂ. ಬಹುಳ ಅಮಾವಾಸ್ಯೆಯಂದು ಶ್ರೀರಘುನಂದತೀರ್ಥರ ನಂತರ ಪೀಠಕ್ಕೆ ಬಂದ ಶ್ರೀ ಸುರೇಂದ್ರತೀರ್ಥರು ಕೊಟ್ಟರು ಎನ್ನುವುದು ಸಮಂಜಸವಾಗುವುದಿಲ್ಲ.
6. ಚಂದ್ರಭಟ್ಟನಿಗೆ ಪ್ರತಿಫಲವನ್ನು ಕೊಟ್ಟದ್ದು ರಕ್ತಾಕ್ಷಿನಾಮ ಸಂ. ಮಾಘ ಬಹುಳ ಅಮಾವಾಸ್ಯೆ ಸೂರ್ಯೋಪರಾಗ ಪರ್ವಕಾಲದಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಕೊಡಲಾಗಿದೆ ಎಂದು ಹೇಳಲಾಗಿದೆ ಆದರೆ ಆ ದಿನದಲ್ಲಿ ಸೂರ್ಯಗ್ರಹಣವೇ ಆಗಿಲ್ಲ.

ಈ ಮೇಲಿನ ಕಾರಣಗಳಿಂದಾಗಿ ಮೂಲರಾಮದೇವರ ಪ್ರತಿಮೆಯನ್ನು ಕಳವು ಮಾಡಿ ಶ್ರೀರಘುನಂದರಿಗೆ ಬಾಡದ ಚಂದ್ರಭಟ್ಟನು ತಂದು ಕೊಟ್ಟನೆಂಬುದೇ ಕಟ್ಟು ಕಥೆಯಾಗಿದೆ.

## 5. ಉತ್ತರಾದಿಮಠದಲ್ಲಿಯ ಮೂಲಸೀತಾರಾಮರ ಮೂರ್ತಿಗಳನ್ನು ವರ್ಣಿಸುವ ಪ್ರಸಿದ್ಧ ಹರಿದಾಸರ ಕೃತಿಗಳು

### 1. ಶ್ರೀ ಶ್ರೀಪಾದರಾಜರ ಕೃತಿ:

ತೂಗೀರೋ ರಾಮನ । ತೂಗೀರೊ ವ್ಯಾಸನ
ತೂಗಿರೋ ವಿಠಲನ್ನ ।। ಪ ।।

ಕಾಲಲಿ ಕಿರಿಗೆಜ್ಜೆ । ಮ್ಯೇಲೆ ಪೊನ್ನಂದಿಗೆ
ಲೋಲಾಕ್ಷಿಸೀತೆಯನಾಳಿದವನ
ಮೂಲರಾಮ ಪಂಚವೇದವ್ಯಾಸನಾಗಿ
ಕಲಿಯುಗದಲಿ ಮಧ್ವಮುನಿಗೊಲಿದವನಾ ।। 1 ।।

ದಶರಥನಂದನ । ದಶಮುಖನ ತರಿದವನ
ಪಶುಪತಿರುದ್ರಗೆ ಪ್ರಿಯನಾದವನ
ವಸುಧಿಯೊಳಗೆ ಸುಖತೀರ್ಥರಿಷ್ಟವ ನಿತ್ತ
ಬಿಸಜಾಕ್ಷ ಶ್ರೀದಿಗ್ವಿಜಯರಾಮನ ।। 2 ।।

ಕುಕ್ಷಿಯೊಳೀರೇಳು ಜಗವನ್ನೆಲ್ಲವ ತಾಳಿ
ರಕ್ಷಿಪ ಪೀಳಿಗೆ ರಾಮನ
ಅಕ್ಷೋಭ್ಯಮುನಿಪಗೆ ಅಧಿಕಫಲವನಿತ್ತ
ಪಕ್ಷಿವಾಹನ ಪ್ರಸನ್ನವಿಠಲನ ।। 3 ।।

ನಾಗಲೋಕದಲ್ಲಿ ನಾಗಶಯನನಾದ
ನೀಗಾ ಜೋ ಜೋ ಯೆಂದು ತೂಗೀರೆ
ರಘುನಾಥಮುನಿಪಗೆ ರಾಷ್ಟ್ರದೊಳಗ್ಯೆಲ್ಲ
ಯೋಗಿಯಂತೆ ಚರಿಸುತಲಿಂಹ್ಯನ ।। 4 ।।

ಪೊಂಗೊಳಲು ಕಂಬು ಪಿಡಿದು ನಲಿವುತಲಿಹ್ಯ
ಅಂಗಜನಯ್ಯನನ ತೂಗೀರೋ
ಮಂಗಳ ಶ್ರೀಲಕ್ಷ್ಮೀರಮಣನೆನಿಸಿಕೊಂಬ
ರಂಗವಿಠಲನೆಂದು ತೂಗೀರೋ ।। 5 ।।

### 2. ಶ್ರೀ ಪುರಂದರದಾಸರ ಕೃತಿ:

ಮಧ್ವರಾಯರ ದೇವತಾರ್ಚನೆಯ
ಪ್ರಸಿದ್ಧ ರಘುನಾಥರು ಪೂಜಿಸುವ ಸೊಬಗು ।। ಪ ।।

ಮೂಲರಘುಪತಿ ಒಂದು ಮುದ್ದುಜಾನಕಿ ಒಂದು
ಲೀಲೆ ದಿಗ್ವಿಜಯರಾಮಮೂರ್ತಿ ಒಂದು
ಸಾಲಿಗ್ರಾಮ ಹಯಗ್ರೀವ ಮೊದಲಾದವು ನಾಲ್ಕು
ಚೆಲುವ ಸುದರ್ಶನಗಳು ಮೂರು
ಚಕ್ರಾಂಕಿತಗಳೈದು ॥ 1 ॥

ಅಭಿಷೇಕ ಶಂಖ ಒಂದು ಅಕ್ಷಯಪಾತ್ರೆಯು ಒಂದು
ಶುಭನಿಧಿಯ ಬಲಮುಡಿ ಶಂಖ ಒಂದು
ಉಭಯ ಪಶ್ಚಿಮ ಧೇನು ಎರಡು ಉತ್ತಮ
ವಾದ ಮುದ್ರೆಯು ಒಂದು ಬಾಣವೆರಡು ॥ 2 ॥

ವರವ್ಯಾಸಮುಷ್ಟಿ ನಾಲ್ಕು
ಕ್ಷೀರದಲಿ ಲೋಲಾಡುವ ಕೂರ್ಮ ಒಂದು
ಸ್ಮರಿಸಿ ಇಪ್ಪತ್ತೆಂಟು ಮೂರ್ತಿಗಳನು
ಪುರಂದರ ವಿಠಲನ್ನ ಪೂರ್ಣಭಕ್ತರೆಂಬ
ಈ ರಘುನಾಥತೀರ್ಥರು ಎಷ್ಟು ಪುಣ್ಯವಂತರು ॥ 3 ॥

### 3. ಶ್ರೀ ಪ್ರಸನ್ನವೆಂಕಟದಾಸರ ಕೃತಿ:

ರಾಮ ರಘುಕುಲ ಸಾರ್ವಭೌಮ ಪೂರಣ ಕಾಮ
ಜೀಮೂತರಾಮ ಶ್ರೀಮೂಲರಾಮ ।
ಕೋಮಲ ಶರೀರ ಸೀತಾಮುಖಾಂಬುಜ ಭ್ರಮರ
...........................
ನೀ ಮನ್ನಿಸು ಪ್ರಸನ್ನವೆಂಕಟಾಧೀಶ ರಘುರಾಮ॥1॥

...........................
ಅಂದು ನರಹರಿಯತಿಗೆ ಅಂದದಲ್ಲೊಲಿದಿಲ್ಲಿ
ಬಂದು ನೀ ನಿಂತೆ ನಿಜರಮಣಿಯೊಡನೆ
ಎಂದೆಂದು ಸತ್ಯಾಭಿನವತೀರ್ಥಗುರುಹೃದಯ
ಮಂದಿರನೆ ಪ್ರಸನ್ನವೆಂಕಟವರದರಾಮ ॥

### 4. ಶ್ರೀ ಹೊನ್ನಾಳಿ ವೆಂಕಟದಾಸರ ಕೃತಿ:

ಸತ್ಯಬೋಧರಾಯಾ ಪಾಲಿಸೋ ಭೃತ್ಯಜನರ ಪ್ರಿಯಾ ।
ನಿತ್ಯದಲಿ ತುತಿಪೆ ಮನದೊಳು ಚಿತ್ತಜಪಿತನ
ಉತ್ತಮ ಮತಿ ಕೊಡು ॥ ಪ ॥

ಸತ್ಯಪ್ರಿಯರೆಂಬ ಯತಿಗಳ ಉತ್ತಮಕರದಿಂದ ।
ಮತ್ತೆ ನೀ ಜನಿಸಿ ಈ ಕ್ಷಿತಿಯ ಜನರಿಗೆ
ಮುತ್ತಿನಂತೆ ಮುದಜ್ಞಾನವ ತೋರುವೆ ॥ 2 ॥

................
ಮೂಲರಾಮ ಸೀತಾ ಪೀಳಿಗೆ ರಾಮ ವೇದವ್ಯಾಸ ।
ಸಾಲಿಗ್ರಾಮ ದಿಗ್ವಿಜಯ ರಾಮನನು ಕಾಲ
ಕಾಲ ಅನುಕೂಲ ಪೂಜಿಸುವೆ ॥ 5 ॥

............
ಸಾರುವ ನಾನಿನ್ನ ನೀ ಇನ್ನು ದೂರು ನೋಡಿದೆ ಎನ್ನ
ಸಾರೆ ಗರಿದು ಶ್ರೀವೆಂಕಟವಿಠಲನ ಚರಣಗಳ
ತೋರಿ ರಕ್ಷಿಸುತಾ ॥ 9 ॥

ಶ್ರೀ ಶ್ರೀಪಾದರಾಜರ ಕೃತಿಯಲ್ಲಿ ಮೂಲರಾಮನ ಕಾಲಿನಲ್ಲಿ ಕಿರುಗೆಜ್ಜೆ ಮತ್ತು ಪೊನ್ನೊಂದಿಗೆ ಇರುವುದನ್ನು ಸ್ಪಷ್ಟವಾಗಿ ಹೇಳಿದ್ದಾರೆ. ದಿಗ್ವಿಜಯರಾಮ ಹಾಗೂ ವ್ಯಾಸ-ಮುಷ್ಟಿಗಳು 5 ಇರುವುದನ್ನು ಉಲ್ಲೇಖಿಸಿದ್ದಾರೆ.

ಶ್ರೀಪುರಂದರದಾಸರ ಕೃತಿಯಲ್ಲಿ ಮೂಲರಾಮ ಮತ್ತು ಮೂಲ ಸೀತೆಯ ಪ್ರತಿಮೆಗಳಲ್ಲದೆ ದಿಗ್ವಿಜಯ-ರಾಮ, ಶಂಖ ಮತ್ತು ಅಕ್ಷಯ ಪಾತ್ರೆ ಮುಂತಾದವು-ಗಳನ್ನು ಉಲ್ಲೇಖಿಸಿದ್ದಾರೆ.

ಈ ಎರಡೂ ಕೃತಿಗಳಲ್ಲಿ ಶ್ರೀರಘುನಾಥರು ಪೂಜಿಸಿ-ದ್ದನ್ನು ವರ್ಣಿಸಿದ್ದಾರೆ. ಈ ಎರಡೂ ಕೃತಿಗಳಿಂದ ಶ್ರೀಪಾದ-ರಾಜರು, ಶ್ರೀರಘುನಾಥತೀರ್ಥರು ಹಾಗೂ ಶ್ರೀಪುರಂದರ-ದಾಸರು ಸಮಕಾಲೀನರು ಎಂಬುದಾಗಿ ತಿಳಿದುಬರುತ್ತದೆ.

ಶ್ರೀ ಪ್ರಸನ್ನವೆಂಕಟದಾಸರು ಮತ್ತು ಶ್ರೀ ಹೊನ್ನಾಳಿ ವೆಂಕಟವಿಠ್ಠಲರು ಶ್ರೀ ಮೂಲಸೀತಾರಾಮರ ವರ್ಣನೆಯನ್ನು ಮಾಡಿದ್ದಾರೆ. ಈ ವರ್ಣನೆಯು ಉತ್ತರಾದಿಮಠಾಧೀಶರಾದ ಶ್ರೀಸತ್ಯಾಭಿನವರ ಹಾಗೂ ಶ್ರೀ ಸತ್ಯಬೋಧರ ಕಾಲದಲ್ಲಿ ಮಾಡಿದ್ದು ಎಂಬುದನ್ನು ಗಮನಿಸಬಹುದು.

## 5. ಹರಿದಾಸರ ಕೃತಿಗಳಲ್ಲಿ ಉತ್ತರಾದಿಮಠದ ಪರಂಪರೆ

### 1. ಶ್ರೀ ಮಹಿಪತಿದಾಸರ ಕೃತಿ:

ನೆನೆದು ನಮಿಸುವೆ ನಾನು ವಾರಂವಾರ ॥ ಪ ॥

ನೆನೆದು ನಮಿಸುವೆ ನಾನನುದಿನ ಹರಿಪದ
ವನಜ ಮಧುಪರಾದ ಅನುಭವ ಶರಣರ ॥ಅ.ಪ॥

ಆದಿಮೂರುತಿತ್ರಯ ಮಧ್ವಮುನಿರೇಯ
ಬೋಧಕ ಪದ್ಮನಾಭ ನರಹರಿ ಧ್ಯಾನ
ಮಾಧವಾಕ್ಷೋಭ್ಯರ ಮಹಾಜಯತೀರ್ಥರಾ-
ರಾಧಕ ವಿದ್ಯಾಧಿರಾಜ ಕವಿನಿಧಿ
ಸಾದರ ವಾಗೀಂದ್ರ ಶಾಂತ ರಾಮಚಂದ್ರ
ಸಾಧು ವಿದ್ಯಾನಿಧಿಯರ ರಘುನಾಥ
ಮೇದಿನಿ ರಘುವರ್ಯರ ರಘೋತ್ತಮ
ವೇದವ್ಯಾಸಾರ್ಯರ ವಾರಂವಾರ ॥ 1 ॥

ಇತ್ತ ವಿದ್ಯಾಧೀಶ ಈ ವೇದನಿಧಿ ಘೋಷ
ಸತ್ಯವ್ರತರ ನಾಮ ಸತ್ಯನಿಧಿಯ ನೇಮ
ಸತ್ಯನಾಥಾಖ್ಯಾತ ಸತ್ಯಾಭಿನವತೀರ್ಥ
ಮತ್ತಿಳೆಯೊಳಗಿರ್ಪ ಮನಕೆ ಸೂಚಿಸಿ ಬಪ್ಪ
ಕೃತ್ಯಂ ಸುಜ್ಞಾನ ಕೃಷ್ಣದ್ವೈಪಾಯನ
ಇತ್ಯಧಿಕ ಸರ್ವರ ಜನದಲಿ
ಅತ್ಯಧಿಕ ಮೀರ್ವರಾ ಪುರುಷಾರ್ಥ
ಉತ್ತಮ ಪದಲಿರುವರಾ ವಾರಂ ವಾರ ॥ 2 ॥

ಶರಣೆಂದು ಆದ್ಯರ ಸಕಲ ಪ್ರಸಿದ್ಧರ
ಸಿರಿಪಾದ ಪ್ರಿಯರ ಶುಭ ವ್ಯಾಸರಾಯರ
ವರ ಹಯಗ್ರೀವ ಜಗವರಿತ ವಾದಿರಾಜ
ಪುರಂದರದಾಸ ಪುತ್ರರಾ ವರ ಮಧ್ವರಾ
ನೆರೆ ತಾಳ ಪಾಕರ ನುತ ಮತಿ ಕನಕರ
ಹರಿಭಕ್ತಿ ಉಲ್ಲಾಸರ ಬಂಡೆರಂಗ
ನರಿತಿಹ ನಿಜದಾಸರ ಮಹಿಪತಿ
ಗುರುಶರಣರ ತೋಷರ ವಾರಂ ವಾರ ॥ 3 ॥

**2. ಶ್ರೀವಿಜಯದಾಸರ ಕೃತಿ:**

ಗುರುವಂಶಕೆ ನಮೋ ಎಂಬೆ ನಮ್ಮ
ಮರುತಮತಾಬ್ಧಿಗೆ ನಮೋ ಎಂಬೆ ॥ ಪ ॥

ಶ್ರೀ ಮದಾನಂದತೀರ್ಥ ಪದ್ಮನಾಭರಿಗೆ ।
ರಾಮದೇವರ ಕಂದ ನರಹರಿಗೆ ॥
ಕಾಮಿತ ಫಲವೀವ ಮಾಧವಾಕ್ಷೋಭ್ಯರಿಗೆ ।
ಆ ಮಹಾಮಹಿಮ ಜಯತೀರ್ಥರಾಯರಿಗೆ ॥ 1 ॥

ವಿದ್ಯಾಧಿರಾಜರಿಗೆ ವಿಜಯ ಕವೀಂದ್ರ ಸು-
ಸದ್ಗುಣ ವಾಗೀಶ ರಾಮಚಂದ್ರರಿಗೆ ॥
ವಿದ್ಯಾನಿಧಿ ರಘುನಾಥ ರಘುವರ್ಯತೀರ್ಥರಿಗೆ ।
ಅದ್ವೈತಮತಖಂಡ ರಘೂತ್ತಮರಾಯರಿಗೆ ॥ 2 ॥

ವೇದವ್ಯಾಸ ವಿದ್ಯಾಧೀಶ ವೇದನಿಧಿ ಮುನಿಗೆ ।
ಸಾಧುಜನ ಪ್ರಿಯ ಸತ್ಯವ್ರತರಿಗೆ ।
ಮೇದಿನಿಯಲಿ ಮೆರೆದ ಸತ್ಯನಿಧಿತೀರ್ಥರಿಗೆ ।
ವಾದಿಗಜಕೆ ಸಿಂಹ ಸತ್ಯನಾಥರಿಗೆ ॥ 3 ॥

ಯತಿಶ್ರೇಷ್ಠ ಸತ್ಯಾಭಿನವತೀರ್ಥರಿಗೆ
ಸತತ ಸಜ್ಜನಪಾಲ ಸತ್ಯಪೂರ್ಣರಿಗೆ ।
ಅತಿಶಯವಾನಂದ ಸತ್ಯವಿಜಯರಿಗೆ
ಮತ ಉದ್ಧಾರಕ ಶ್ರೀ ಸತ್ಯಪ್ರಿಯರಿಗೆ ॥ 4 ॥

ಇಂತು ಗುರುಗಳ ಸಂತರೆ ಕೊಂಡಾಡಿ
ಇಂತು ಸುತಾಪವನುರುಹಿ ಬಿಟ್ಟು ।
ಸಂತೋಷಿ ನಾನಾದೆ ವಿಜಯವಿಠ್ಠಲನ್ನ
ಚಿಂತಿಯ ಮಾಡುವೆ ದಾಸರ ದಯದಿಂದ ॥ 5 ॥

**3. ಗಲಗಲಿ ಅಮ್ಮನವರ ಕೃತಿ:**

ಇವರಲ್ಲೆ ನೀತಿ ರಾಮದೇವರ ಪ್ರೀತಿ
ವಿದ್ಯಾಧಿಕರ ಮೂರ್ತಿ ಸತ್ಯಸಂಧರ ಕೀರ್ತಿ ಜಗದಲ್ಲಿ
ಉದ್ಧರರ ॥ ಪ ॥

ಮಧ್ವರಾಯರಾ ಪದ್ಮನಾಭ ನರಹರಿತೀರ್ಥ
ಶುದ್ಧಮಾಧವ ಅಕ್ಷೋಭ್ಯರ ರನ್ನದ
ಶುದ್ಧಮಾಧವ ಅಕ್ಷೋಭ್ಯರ ಚರಣವ
ವಿಧ್ಯುಕ್ತದಿಂದಲಿ ಬಲಗೊಂಬೆ ರನ್ನದ ॥ 1 ॥

ಪ್ರಸಿದ್ಧ ಜಯತೀರ್ಥ ವಿದ್ಯಾಧಿರಾಜ ಕವೀಂದ್ರ
ವಾಗೀಶ ರಾಮಚಂದ್ರ ರನ್ನದ
ವಾಗೀಶ ರಾಮಚಂದ್ರ ವಿದ್ಯಾನಿಧಿಗಳ ಪಾದ ಪದ್ಮವ
ಮೊದಲೆ ಬಲಗೊಂಬೆ ರನ್ನದ ॥ 2 ॥

ರಘುನಾಥ ರಘುವರ್ಯ ರಘೋತ್ತಮತೀರ್ಥರ
ವೇದವ್ಯಾಸ ವಿದ್ಯಾಧೀಶರ ರನ್ನದ
ವೇದವ್ಯಾಸ ವಿದ್ಯಾಧೀಶರ ಚರಣವ
ಜಗದ ಗುರುಗಳನು ಬಲಗೊಂಬೆ ॥ 3 ॥

ಉತ್ತಮ ವೇದನಿಧಿ ಸತ್ಯವ್ರತತೀರ್ಥರ
ಸತ್ಯನಿಧಿ ಸತ್ಯನಾಥರ ರನ್ನದ

ಸತ್ಯನಾಥರ ಚರಣವ
ಭಕ್ತಿಯಿಂದ ಮೊದಲ ಬಲಗೊಂಬೆ ॥ 4 ॥

ಸತ್ಯಾಭಿನವತೀರ್ಥ ಸತ್ಯಪೂರ್ಣತೀರ್ಥರ
ಸತ್ಯವಿಜಯ ಸತ್ಯಪ್ರಿಯರ ರನ್ನದ
ಸತ್ಯಪ್ರಿಯರ ಚರಣವ
ಅತ್ಯಂತವಾಗಿ ಬಲಗೊಂಬೆ ॥ 5 ॥

ಸತ್ಯಬೋಧ ಸತ್ಯಸಂಧ ಸತ್ಯವರ
ಚಿತ್ತಶುದ್ಧಿಯಲಿ ಬಲಗೊಂಬೆ
ಚಿತ್ತಶುದ್ಧಿಯಲಿ ಸಭೆಯೊಳು
ಸತ್ಯವಾಕ್ಯಗಳ ನುಡಿಸಲು ರನ್ನದ ॥ 6 ॥

ಸತ್ಯವರ್ಯರೆಂಬ ಉತ್ತಮ ಗುರುಗಳ
ಹಸ್ತಕಮಲದಲೆ ನಮಿಸುವೆ ರನ್ನದ
ಹಸ್ತಕಮಲದಲೆ ನಮಿಸುವೆ ಜಗದೊಳು
ಮೆರೆವ ಸತ್ಯಧರ್ಮರನು ಬಲಗೊಂಬೆ ॥ 7 ॥

ಮಧ್ವರಾಯರ ಪಾದ ಪೊಂದಿದ್ದ ಗುರುಗಳು
ವಿಧ್ಯುಕ್ತದಿಂದ ಬಲಗೊಂಬೆ ರನ್ನದ
ವಿಧ್ಯುಕ್ತದಿಂದ ಬಲಗೊಂಬೆ ಅತ್ತಿಗೆಯರ
ಗೆದ್ದು ದುಂದುಭಿಯ ಹೊಯಿಸೇವ ರನ್ನದ ॥ 8 ॥

ಯತಿ ಮುನಿರಾಯರು ಅತಿ ಭಕ್ತರಾಗಿದ್ದ
ಅತಿ ಪ್ರಿಯರಾದ ಗುರುಗಳು
ಅತಿ ಪ್ರಿಯರಾದ ರಾಮೇಶನ
ಅತಿ ಭಕ್ತರ ಮೊದಲ ಬಲಗೊಂಬೆ ರನ್ನದ ॥ 9 ॥

**4. ಶ್ರೀ ಜಗನ್ನಾಥದಾಸರ ಕೃತಿ:**

ಆನಮಿಪೆ ಗುರುಸಂತತಿಗೆ ಸತತಗೆ
ಜ್ಞಾನಭಕ್ತ್ಯಾದಿಗಳ ಕರುಣಿಸಲಿ ಎನಗೆಂದು ॥ ಪ ॥

ಹಂಸನಾಮಕ ಹರಿ ಬ್ರಹ್ಮಗುರುವರ ಸರೋ-
ಜಾಸನ ಪುತ್ರರೆನಿಸಿಕೊಂಬಾ
ಆ ಸನಕ ಸನಂದನ ಕುಮಾರಕರ ಶಿಷ್ಯ ದೂ-
ರ್ವಾಸಮುನಿ ಜ್ಞಾನನಿಧಿತೀರ್ಥ ಪದಾಬ್ಜಗಳಿಗೆ ॥ 1 ॥

ಗರುಡವಾಹನತೀರ್ಥ ಕೈವಲ್ಯಜ್ಞಾನೇಶ
ಪರತೀರ್ಥ ಸತ್ಯಪ್ರಜ್ಞ ಪ್ರಾಜ್ಞರಾ
ವರಕುಮಾರಕ ತಪೋರಾಜ ಸಂಯಮಿ ವಿಮಲ
ಕರಕಮಲ ಸಂಜಾತ ಅಚ್ಯುತಪ್ರೇಕ್ಷರಿಗೆ ॥ 2 ॥

ಶ್ರೀ ಮಧ್ವವರ ಪದ್ಮನಾಭ ನರಹರಿಮುನಿಪ
ಶ್ರೀ ಮಾಧವಾಕ್ಷೋಭ್ಯಯತಿ ಜಯಾರ್ಯ
ಧೀಮಂತ ವಿದ್ಯಾಧಿರಾಜ ಸುಕವೀಂದ್ರ ನಿ-
ಸ್ಸೀಮ ವಾಗೀಶಯತಿ ರಾಮಚಂದ್ರಾರ್ಯರಿಗೆ ॥3॥

ವಿದ್ಯಾನಿಧಿ ರಘುನಾಥ ರಘುವರ್ಯೋತ್ತಮ ಕರ-
ಪದ್ಮ ಸಂಜಾತ ವೇದವ್ಯಾಸರಾ
ವಿದ್ಯಾಪತಿ ಅಧೀಶನಿಧಿ ಸತ್ಯವ್ರತ ನಿಧಿಯಾ
ಶುದ್ಧಾತ್ಮ ಸತ್ಯನಾಥರ ಪಾದಕಮಲಗಳಿಗೆ ॥ 4 ॥

ಸತ್ಯಾಭಿನವ ಪೂರ್ಣ ಸತ್ಯವಿಜಯ ಪ್ರಿಯಾ
ಸತ್ಯಬೋಧರ ಸತ್ಯಸಂಧವರರಾ
ನಿತ್ಯದಲಿ ನೆನೆದು ಕೃತಕೃತ್ಯನಾಗುವೆ ಬಿಂಬ
ಮೂರ್ತಿ ಜಗನ್ನಾಥವಿಠಲನ ತೋರಿಸಲೆಂದು ॥ 5 ॥

ಶ್ರೀಮಹಿಪತಿದಾಸರ, ಶ್ರೀವಿಜಯದಾಸರ, ಗಲಗಲಿ ಅಮ್ಮನವರ ಕೃತಿಗಳಲ್ಲಿ ಶ್ರೀಉತ್ತರಾದಿಮಠದ ಪೀಠಾಧಿಪತಿಗಳ ಪರಂಪರೆಯನ್ನು ವರ್ಣಿಸಲಾಗಿದೆ. ಈ ಮೂವರ ಕೃತಿಗಳ ವಿಷಯವು ಒಂದೇ ಆಗಿದ್ದರೂ, ಅದರ ನಿರೂಪಣೆಯು ವೈಶಿಷ್ಟ್ಯವುಳ್ಳದ್ದಾಗಿವೆ.

ಶ್ರೀಜಗನ್ನಾಥದಾಸರ ಕೃತಿಯಲ್ಲಿ ಶ್ರೀಉತ್ತರಾದಿ-ಮಠದ ಗುರುಪರಂಪರೆಯೂ ಸ್ಪಷ್ಟವಾಗಿ ಬಂದಿದೆ. ಈ ಕೃತಿಯಲ್ಲಿ ಹಂಸನಾಮಕ ಪರಮಾತ್ಮನಿಂದ ಆರಂಭಿಸಿ ಶ್ರೀರಾಮಚಂದ್ರತೀರ್ಥರವರೆಗೆ ಬಂದು ಮುಂದೆ ಶ್ರೀವಿದ್ಯಾನಿಧಿ, ಶ್ರೀರಘುನಾಥ, ಶ್ರೀರಘುವರ್ಯ, ಶ್ರೀರಘೂತ್ತಮರಿಂದ ಮುಂದುವರೆದು ಶ್ರೀಸತ್ಯಸಂಧ ಮತ್ತು ಶ್ರೀ ಸತ್ಯವರರವರೆಗಿನ ಯತಿಗಳ ನಾಮಸ್ಮರಣೆ-ಯನ್ನು ಮಾಡಲು ಹೇಳಲಾಗಿದೆ. ಇದರಿಂದ ಉತ್ತರಾದಿ-ಮಠದ ಅವಿಚ್ಛಿನ್ನ ಪರಂಪರೆಯು ಸ್ಪಷ್ಟವಾಗಿ ತಿಳಿದು ಬರುವುದು.

''ಮೂಲರಾಮಸ್ತು ಮನ್ಮತೇ'' ಎಂಬ ಪುಸ್ತಕದ ವಿಮರ್ಶೆಯನ್ನು ಈ ಕೃತಿಯಲ್ಲಿ ವಿವರವಾಗಿ ಮಾಡಲಾಗಿದೆ. ಆದರೂ ಒಂದೆರಡು ವಿಷಯಗಳನ್ನು ಹೇಳುವುದು ಅಗತ್ಯವಾಗಿದೆ.

1. ವಿದ್ಯಾಧೀಶವಿಜಯದಲ್ಲಿ ವಾದೀಂದ್ರನೆಂಬ ವಾದಿಯನ್ನು ಜಯಿಸಿದ ಉಲ್ಲೇಖವಿದೆ. ಈ ವಾದೀಂದ್ರನೆಂಬ ವ್ಯಕ್ತಿ ಶ್ರೀರಾಘವೇಂದ್ರ ಸ್ವಾಮಿಗಳ ಮಠದ ಪರಂಪರೆಯಲ್ಲಿದ್ದ ಶ್ರೀವಾದೀಂದ್ರರಲ್ಲ. ಅವನು ರಂಗೋಜೀ ಭಟ್ಟನ ಶಿಷ್ಯನಾದ ವಾದೀಂದ್ರನೆಂಬ ಒಬ್ಬ ಅದ್ವೈತ ಯತಿಯು. ಆದ್ದರಿಂದ ಈ ವಿಷಯದಲ್ಲಿ ಮೂ.ಮಠೇ ಎಂಬ ಪುಸ್ತಕದ ಲೇಖಕರು ಮಾಡಿದ ಆಕ್ಷೇಪ ಸರಿಯಿಲ್ಲ.
2. ಮೂಲರಾಮನ ಪ್ರತಿಮೆಯ ಕಾಲವನ್ನು ನಿರ್ಣಯಿಸಲು ಕಾರ್ಬನ್ ಡೇಟಿಂಗ್ ಮಾಡಬೇಕೆಂದು ಮೂ.ಮಠೇ ಪುಸ್ತಕದಲ್ಲಿ ಹೇಳಲಾಗಿದೆ. ಇದು ಮೂಲರಾಮಪ್ರತಿಮೆಯನ್ನು ಅಪವಿತ್ರಗೊಳಿಸಲು ಈ ಲೇಖಕರು ಹಿಂಜರಿಯುವುದಿಲ್ಲ ಎಂದು ತಿಳಿಸುತ್ತದೆ.

## 6. ಉತ್ತರಾದಿಮಠ ಎಂಬ ಹೆಸರು

'ಉತ್ತರ' ಎನ್ನುವ ಭಗವಂತನ ನಾಮವು ವಿಷ್ಣುಸಹಸ್ರನಾಮದಲ್ಲಿ ಬಂದಿದೆ. ಇದಕ್ಕೆ ಹಂಸನಾಮಕ ಪರಮಾತ್ಮನೆಂದು ಅರ್ಥಮಾಡಿ ಹಂಸನಾಮಕ ಪರಮಾತ್ಮನಿಂದ ಆರಂಭವಾದ ಮಠ ಎಂದು 'ಉತ್ತರಾದಿಮಠ' ಶಬ್ದದ ನಿರ್ವಚನವನ್ನು ಹೇಳಲಾಗುತ್ತದೆ. ಈ ಅಭಿಪ್ರಾಯವನ್ನು ಶ್ರೀಮಾಹುಲೀ ಗೋಪಾಲಾಚಾರ್ಯರು ಮತ್ತು ಶ್ರೀ ಎಂ.ಎಸ್. ಕಟ್ಟಿಯವರು ಎತ್ತಿ ಹಿಡಿದಿದ್ದಾರೆ. ಆದರೆ ಶ್ರೀ ಬಿ. ಎನ್.ಕೆ. ಶರ್ಮಾರವರು ಇದು ಪ್ರಾದೇಶಿಕವಾದ ಹೆಸರು ಎಂದು ವಾದಿಸಿ, ಉತ್ತರಾದಿಮಠದ ಅನೇಕ ಪೀಠಾಧಿಪತಿಗಳು ಉತ್ತರಕರ್ನಾಟಕದಿಂದ ಬಂದವರಾದ್ದರಿಂದ ಈ ಮಠಕ್ಕೆ ಉತ್ತರಾದಿಮಠ ಎಂಬ ಹೆಸರು ಬಂದಿದೆ ಮತ್ತು ಈ ಹೆಸರು ರಘುನಾಥತೀರ್ಥರ ಕಾಲದಿಂದ ಬಂದಿರಬೇಕು ಎಂದು ಊಹೆ ಮಾಡಿ ಇದನ್ನು ಸಮರ್ಥಿಸಲು ಕೆಲವು ಉಲ್ಲೇಖಗಳನ್ನು ಕೊಡುತ್ತಾರೆ. ಆದರೆ, ಅವರು ಕೊಟ್ಟ ಉಲ್ಲೇಖಗಳಲ್ಲಿಯೇ ಅಕ್ಷೋಭ್ಯತೀರ್ಥರು ಮತ್ತು ಮಾಧವತೀರ್ಥರು ಉತ್ತರ ಕರ್ನಾಟಕದಿಂದ ಬಂದವರು ಎಂಬ ಉಲ್ಲೇಖವಿದೆ. ಮತ್ತು ಶ್ರೀಪದ್ಮನಾಭತೀರ್ಥರು ಗೋದಾವರೀ ತೀರದಿಂದ ಬಂದವರು ಎಂದು ಮಧ್ವವಿಜಯದಲ್ಲಿ ಹೇಳಿದೆ. ಆದ್ದರಿಂದ 'ಉತ್ತರ' ಎನ್ನುವ ಶಬ್ದವು ಪ್ರಾದೇಶಿಕವೆಂದು ಹೇಳಿದರೂ ಅದು ಶ್ರೀಪದ್ಮನಾಭತೀರ್ಥರ ಕಾಲದಿಂದಲೇ ಉತ್ತರಾದಿಮಠದ ಹೆಸರಾಗಿ ಬಂದಿದೆ. ಆದ್ದರಿಂದ ಶ್ರೀ ವಿದ್ಯಾನಿಧಿಗಳ ಶಿಷ್ಯರಾದ ಶ್ರೀ ರಘುನಾಥತೀರ್ಥರ ಕಾಲದಿಂದ ಉತ್ತರಾದಿಮಠ ಎಂಬ ಹೆಸರು ಬಂದಿದೆ ಎನ್ನುವುದು ಅಸಂಗತವಾಗುತ್ತದೆ.

ಅಲ್ಲದೆ, ಸಾವಿರಾರು ವರ್ಷಗಳಿಂದ ನಡೆದು ಕೊಂಡು ಬಂದ ಈ ಮಠದ ಹೆಸರನ್ನು ಆಧ್ಯಾತ್ಮಿಕವಾದ ಅರ್ಥದಲ್ಲಿ ಅಂದರೆ ಹಂಸನಾಮಕ ಪರಮಾತ್ಮನಿಂದ ಬಂದ ಮಠ ಎಂಬ ಅರ್ಥದಲ್ಲಿ ತೆಗೆದುಕೊಳ್ಳುವುದು ಹೆಚ್ಚು ಶ್ರೇಯಸ್ಕರ.

ಡಾ.ಬಿ.ಎನ್.ಕೆ. ಶರ್ಮಾರವರು, ''ವ್ಯಾಸರಾಜಮಠಕ್ಕೆ ಸೋಮನಾಥ ಕವಿಯ ವ್ಯಾಸಯೋಗಿಚರಿತೆಯಲ್ಲಿ 'ವಿಶ್ವಪಾವನಮಠ' ಎಂದು ನಾಮಕರಣ ಮಾಡಲಾಗಿದೆ, ಇದರಲ್ಲಿ ವಿಶ್ವ ಶಬ್ದವು ವಿಷ್ಣುಸಹಸ್ರನಾಮ ದಲ್ಲಿಯ ಪರಮಾತ್ಮನ ಮೊದಲನೆಯ ಹೆಸರಾಗಿದೆ. ಪವನ ಶಬ್ದವು ವಾಯು ಅಂದರೆ ಮಧ್ವಾಚಾರ್ಯರನ್ನು ಉಲ್ಲೇಖಿಸುತ್ತದೆ'' ಎಂದು ತಮ್ಮ ವ್ಯಾಸರಾಜಮಠವು ವಿಶ್ವನಾಮಕ ಪರಮಾತ್ಮನಿಂದಲೇ ಆರಂಭವಾಯಿತು ಎಂದು ಬರೆದಿದ್ದಾರೆ. ಉತ್ತರಾದಿಮಠವು ಉತ್ತರ ಎಂದರೆ ಹಂಸನಾಮಕ ಪರಮಾತ್ಮನಿಂದ ಆರಂಭವಾಯಿತು ಎಂಬ ಪರಂಪರೆಗೆ ಬಲವಾಗಿ ಆಕ್ಷೇಪವನ್ನು ಮಾಡಿದ ಡಾ. ಬಿ.ಎನ್.ಕೆ. ಶರ್ಮಾರವರು ತಮ್ಮ ಮಠವು ವಿಶ್ವನಾಮಕ ಪರಮಾತ್ಮನಿಂದಲೇ ಆರಂಭವಾಯಿತು ಎಂದು ಹೇಳಿದ್ದು, ಆಶ್ಚರ್ಯಕರ.

The"Vyasayogicharite" of poet Somanatha gives it's name as"Vishwapavana Matha" . probably signifying it's origin from Visva the first name of the lord amoung his thousand and Pavana Yayu viz., Madhwacarya. (ಸ್ವಾರ್ಥೇ ಅಣ್ ಪ್ರತ್ಯಯಃ)

- Page 5, Vijayeendravijaya Kavya of Madhvakavi,
Edited and Publlished by Dr. B.N.K.Sharma, 1994

ಈವರೆಗಿನ ವಿವರಣೆಯಿಂದ ಕೆಳಗಿನ ಅಂಶಗಳು ಸ್ಪಷ್ಟವಾಗುವುವು.

1. ಅರ್ಚಾಗತಿಕ್ರಮದಲ್ಲಿ ಕೆಲವು ಶ್ಲೋಕಗಳು ಪ್ರಕ್ಷಿಪ್ತವಾಗಿವೆ. ಆದ್ದರಿಂದ ಈ ಗ್ರಂಥವು ಪ್ರಾಮಾಣಿಕವಲ್ಲ.
2. ವಿಜಯೀಂದ್ರವಿಜಯವು ಅಸಂಗತವಾದ ಕಾವ್ಯವು. ಇದು ಐತಿಹಾಸಿಕ ದಾಖಲೆ ಆಗಲಾರದು.
3. ವಾಸಿಷ್ಠರಾಮಾಯಣ, ಮಾರ್ಕಂಡೇಯಪುರಾಣ, ಪುಷ್ಕರ ಎಂಬ ಗ್ರಂಥಗಳಲ್ಲಿ ಬಂದ ಪ್ರತಿಮಾಲಕ್ಷಣಗಳು ಉತ್ತರಾದಿಮಠದಲ್ಲಿರುವ ಶ್ರೀ ಮೂಲರಾಮ ಮತ್ತು ಸೀತಾದೇವಿಯ ಪ್ರತಿಮೆಯಲ್ಲಿರುವುದು ಪ್ರತ್ಯಕ್ಷಸಿದ್ಧವಾಗಿದೆ.
4. ಮೂಲರಾಮದೇವರ ಪ್ರತಿಮೆ ಕಳುವಾದದ್ದು, ಕಟ್ಟು ಕಥೆ ಆಗಿದೆ. ಈ ಕಳುವಿನ ಘಟನೆಯೇ ನಡೆದಿಲ್ಲ.
5. ಹರಿದಾಸರ ಕೀರ್ತನೆಗಳಲ್ಲಿ ಉತ್ತರಾದಿಮಠದಲ್ಲಿರುವ ಎಲ್ಲ ಪ್ರತಿಮೆಗಳ ವರ್ಣನೆ ಇದೆ. ಶ್ರೀಮಠದ ಪೀಠಾಧಿಪತಿಗಳ ನಿರೂಪಣೆ ಇದೆ.
6. ಉತ್ತರಾದಿಮಠದ ಹೆಸರು ಆಧ್ಯಾತ್ಮಿಕವಾಗಿಯೂ ಪ್ರಾದೇಶಿಕವಾಗಿಯೂ ಹೊಂದುತ್ತದೆ. ಪ್ರಾದೇಶಿಕವಾದ ಅರ್ಥವು ಇರುವ ಮಾತ್ರದಿಂದ ಆಧ್ಯಾತ್ಮಿಕ ಅರ್ಥವನ್ನು ಅಲ್ಲಗೆಳೆಯುವ ಅವಶ್ಯಕತೆ ಇಲ್ಲ.

Mahamahopadhyaya
**Prof.K.T.Pandurangi**
Former Prof. of Sanskrit., Bangalore University.

राष्ट्रपतिप्रशस्तिपुरस्कृतः महामहोपाध्यायः
प्रो. कृ.त. पाण्डुरङ्गि
बेङ्गलूरु विश्वविद्यानिलयस्य निवृत्तसंस्कृतप्राध्यापकः
पूर्णप्रज्ञविद्यापीठस्य उपकुलपतिः
द्वैतवेदान्ताध्ययन संशोधन प्रतिष्ठानस्य अध्यक्षः, गौरव निर्देशकः

निवासनिलयः
No. 132/4, III Block
जयनगर, बेङ्गलूरु-५६० ०११.
दूरवाणी : 26648215

---

ಈ ವರೆಗಿನ ವಿವರಣೆಯಿಂದ ಕೆಳಗಿನ ಅಂಶಗಳು ಸ್ಪಷ್ಟವಾಗುವುವು.

1. ಅರ್ಚಾಗತಿಕ್ರಮದಲ್ಲಿ ಕೆಲವು ಶ್ಲೋಕಗಳು ಪ್ರಕ್ಷಿಪ್ತವಾಗಿವೆ. ಆದ್ದರಿಂದ ಈ ಗ್ರಂಥವು ಪ್ರಾಮಾಣಿಕವಲ್ಲ.

2. ವಿಜಯೀಂದ್ರವಿಜಯವು ಅಸಂಗತವಾದ ಕಾವ್ಯವು. ಇದು ಐತಿಹಾಸಿಕ ದಾಖಲೆ ಆಗಲಾರದು.

3. ವಾಸಿಷ್ಠರಾಮಾಯಣ, ಮಾರ್ಕಂಡೇಯ ಪುರಾಣ, ಪುಷ್ಕರ ಎಂಬ ಗ್ರಂಥಗಳಲ್ಲಿ ಬಂದ ಪ್ರತಿಮಾಲಕ್ಷಣಗಳು ಉತ್ತರಾದಿಮಠದಲ್ಲಿರುವ ಶ್ರೀ ಮೂಲರಾಮ ಮತ್ತು ಸೀತಾದೇವಿಯ ಪ್ರತಿಮೆಯಲ್ಲಿವೆ.

4. ಮೂಲರಾಮದೇವರ ಪ್ರತಿಮೆ ಕಳುವಾದದ್ದು, ಕಟ್ಟು ಕಥೆ ಆಗಿದೆ ಈ ಕಳುವಿನ ಘಟನೆಯೇ ನಡೆದಿಲ್ಲ.

5. ಹರಿದಾಸರ ಕೀರ್ತನೆಗಳಲ್ಲಿ ಉತ್ತರಾದಿಮಠದಲ್ಲಿರುವ ಎಲ್ಲ ಪ್ರತಿಮೆಗಳ ವರ್ಣನೆ ಇದೆ. ಶ್ರೀಮಠದ ಪೀಠಾಧಿಪತಿಗಳ ನಿರೂಪಣೆ ಇದೆ.

6. ಉತ್ತರಾದಿಮಠದ ಹೆಸರು ಆಧ್ಯಾತ್ಮಿಕವಾಗಿಯೂ ಪ್ರಾದೇಶಿಕವಾಗಿಯೂ ಹೊಂದುತ್ತದೆ. ಪ್ರಾದೇಶಿಕವಾದ ಅರ್ಥವು ಇರುವ ಮಾತ್ರದಿಂದ ಆಧ್ಯಾತ್ಮಿಕ ಅರ್ಥವನ್ನು ಅಲ್ಲಗೆಳೆಯುವ ಅವಶ್ಯಕತೆ ಇಲ್ಲ.

[illegible]
ಪ್ರೊ.ಕೆ.ಟಿ.ಪಾಂಡುರಂಗಿ

# ಪ್ರಸ್ತಾವನೆ

**ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ**
**ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।**
**ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ**
**ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ॥**

**ಯತ್ಪದಂ ವೇದಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಮ್ ।**
**ನ ಕ್ಷಮಂತೇ ವಿಮತಯಸ್ತಮುಪಾಸೇ ಶ್ರಿಯಃಪತಿಮ್ ॥**

ಕಳೆದ 65 ವರ್ಷಗಳಲ್ಲಿ (1949 ರಿಂದ 2014ರ ವರೆಗೆ) ಶ್ರೀರಾಯರ ಮಠದ ಅಧಿಕೃತಲೇಖಕರು ಇದುವರೆಗೆ ಗುರುಚರಿತೆ (1949), ಶ್ರೀಜಿತಾಮಿತ್ರತೀರ್ಥರು (1992), ಶ್ರೀರಾಘವೇಂದ್ರಮಠಗತಾರ್ಚಾಗತಿಕ್ರಮ (1994), ಗುರುಚರಿತೆ ಆಂಗ್ಲ ತರ್ಜುಮೆ (1997), ಶ್ರೀವಿಜಯೀಂದ್ರವಿಜಯ (2003), ಶ್ರೀಮೂಲರಾಮ (2004), ಸತ್ಯಮೇವ ಜಯತೇ (ಕನ್ನಡಾನುವಾದ-2005), ಸ್ತೋತ್ರಮುಕ್ತಾವಲೀ (2006), ಕಲಿಯುಗಕಲ್ಪತರು (10ನೇಮುದ್ರಣ 2007), ಮೂಲರಾಮಸ್ತು ಮನ್ಮತೇ (2009) ಎಂಬ ಹತ್ತು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ಈ ಹತ್ತೂ ಪುಸ್ತಕಗಳಲ್ಲಿ ಶ್ರೀಮದುತ್ತರಾದಿಮಠದ ಪರಂಪರೆಯನ್ನು, ಪೀಠಾಧಿಪತಿಗಳನ್ನು ಹಾಗೂ ಶ್ರೀಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀಮೂಲಸೀತಾ, ಶ್ರೀಮೂಲರಾಮ, ಶ್ರೀದಿಗ್ವಿಜಯರಾಮಾದಿ ಪ್ರತಿಮೆಗಳನ್ನು ಮನಬಂದಂತೆ ನೀಚಶಬ್ದಗಳಿಂದ ಯಾವುದೋ ಒಂದು ಪ್ರಸ್ತುತ-ಅಪ್ರಸ್ತುತ ನಿಮಿತ್ತದಿಂದ ನಿಂದಿಸಿದ್ದನ್ನು ಕಾಣಬಹುದಾಗಿದೆ. ಮೇಲೆ ತಿಳಿಸಿರುವ ಪುಸ್ತಕಗಳಲ್ಲಿ ಅನೇಕ ಪುಸ್ತಕಗಳು ಮರುಮುದ್ರಣವಾಗಿವೆ. ಕೆಲವು ಪುಸ್ತಕಗಳ ಭಾಷಾಂತರವೂ ಮಾಡಲ್ಪಟ್ಟಿದೆ. (ಮೂಲರಾಮಸ್ತು ಮನ್ಮತೇ ತಮಿಳುಭಾಷೆಗೆ ಭಾಷಾಂತರಿಸಲ್ಪಟ್ಟಿದೆ.)

ಪ್ರಾಯಃ ಈ ಎಲ್ಲ ಹತ್ತು ಪುಸ್ತಕಗಳಲ್ಲಿ ಪರಸ್ಪರ ವಿರುದ್ಧ ಹೇಳಿಕೆಗಳು, ಸುಳ್ಳು ಆರೋಪಣೆಗಳು, ವ್ಯಾಹತಿಗಳು, ಕೃತ್ರಿಮ ಆಧಾರಗಳು ತುಂಬಿ ತುಳುಕುತ್ತಿರುವುದನ್ನು ಗಮನಿಸಿಯೂ ಆರೋಪ-ಪ್ರತ್ಯಾರೋಪಗಳಿಂದ ಸಮಾಜದಲ್ಲಿ ಕ್ಷೋಭೆ ಉಂಟಾದೀತೆಂದು, ಯಾಕೆ ಹುಯಿಲೆಬ್ಬಿಸಿ ದೊಡ್ಡದನ್ನಾಗಿಸಬೇಕೆಂದು ಸಮಾಜದ ಹಿತದೃಷ್ಟಿಯಿಂದ ಅವುಗಳನ್ನು ಉಪೇಕ್ಷೆ ಮಾಡಿ ಶ್ರೀಉತ್ತರಾದಿಮಠವು ಅಧಿಕೃತವಾಗಿ ಅವುಗಳಿಗೆ ಪ್ರತಿಯಾಗಿ ಯಾವ ಪುಸ್ತಕಗಳನ್ನೂ ಪ್ರಕಟಿಸಲಿಲ್ಲ ಎಂದು ಕಾಣುತ್ತದೆ.

ಆದರೂ ಶ್ರೀಉತ್ತರಾದಿಮಠದ ಕೆಲ ದೀಕ್ಷಾಬದ್ಧಶಿಷ್ಯರುಗಳು (ಪಂಡಿತರು) ಇವುಗಳಲ್ಲಿ ಒಂದೆರಡು ಪುಸ್ತಕಗಳಿಗೆ ಉತ್ತರರೂಪವಾಗಿ (ಖಂಡನ-ವಿಮರ್ಶಾ ರೂಪದಲ್ಲಿ) ಪುಸ್ತಕಗಳನ್ನು ಪ್ರಕಟಿಸಿದ್ದೂ ಉಂಟು.

ಆದರೆ ಇತ್ತೀಚಿನ ಕೆಲವರ್ಷಗಳಿಂದ ಶ್ರೀರಾಯರ ಮಠದವರು ಅನೇಕ ಆಧುನಿಕ ಪ್ರಚಾರಮಾಧ್ಯಮಗಳಲ್ಲಿ ಉತ್ತರಾದಿಮಠದ ಪರಂಪರೆ ಹಾಗೂ ಶ್ರೀಮೂಲರಾಮದೇವರ ಪ್ರತಿಮೆಯ ಬಗ್ಗೆ ಅಪಪ್ರಚಾರವನ್ನು ವಿಶೇಷವಾಗಿ ಮಾಡುವುದನ್ನು ಪ್ರಾರಂಭಿಸಿದರು. ಇಪ್ಪತ್ತು ವರ್ಷಗಳ ಹಿಂದೆ ಮುದ್ರಣವಾಗಿದ್ದ, ಉತ್ತರಾದಿಮಠದ ನಿಂದೆಯನ್ನು ಮಾಡಲಿಕ್ಕಾಗಿಯೇ ಬರೆಯಲ್ಪಟ್ಟ ಸತ್ಯಮೇವ ಜಯತೇ ಎಂಬ ಆಂಗ್ಲಭಾಷೆಯ ಕೃತಿಯನ್ನು ಕನ್ನಡದಲ್ಲಿ ಅನುವಾದ ಮಾಡಿಸಿ ಮನೆಮನೆಗೆ ಉಚಿತವಾಗಿ ಹಂಚಲು ಪ್ರಾರಂಭಿಸಿದರು. ಇವುಗಳನ್ನೆಲ್ಲಾ ಗಮನಿಸಿ ತಮ್ಮ ಮಠದ ಶಿಷ್ಯರಿಗೆ ವಾಸ್ತವಾಂಶಗಳನ್ನು ತಿಳಿಸುವ ಉದ್ದೇಶ್ಯದ ಮೇರೆಗೆ ''**ಸಸೀತಾಮೂಲರಾಮಾರ್ಚಾ**'' ಎಂಬ ಗ್ರಂಥವನ್ನು ಶ್ರೀಉತ್ತರಾದಿಮಠವು ಪಕಾಶನ ಮಾಡಿತು.

ಶ್ರೀಉತ್ತರಾದಿಮಠದಿಂದ ಪ್ರಕಟಣೆಗೊಂಡ ಸಸೀತಾಮೂಲರಾಮಾರ್ಚಾ ಎಂಬ ಗ್ರಂಥದಲ್ಲಿ ಒದಗಿಸಿದ ಪ್ರಾಮಾಣಿಕ, ಪ್ರಾಚೀನ ಸಾಕ್ಷ್ಯಾಧಾರಗಳನ್ನು ಸಹಿಸಲಾರದೆ ಶ್ರೀರಾಘವೇಂದ್ರಸಾಹಿತ್ಯಪರಿಷತ್ತಿನಿಂದ, (ಶ್ರೀರಾಯರಮಠದ ಶ್ರೀಗಳವರ ಆಪ್ತಕಾರ್ಯದರ್ಶಿಗಳಾಗಿದ್ದ ದಿ. ಶ್ರೀ ರಾಜಾ ಎಸ್.ರಾಜಗೋಪಾಲಾಚಾರ್ಯರೇ ಶ್ರೀರಾಘವೇಂದ್ರಸಾಹಿತ್ಯಪರಿಷತ್ತಿನ ಅಧ್ಯಕ್ಷರು) ಶ್ರೀರಾಯರ ಮಠದಿಂದ ಅಧಿಕೃತವಾಗಿ, ಶ್ರೀರಾಯರ ಮಠದ ದಿವಾನರ ಮುನ್ನುಡಿಯಿಂದ ಕೂಡಿದ ''**ಮೂಲರಾಮಸ್ತು ಮನ್ಮತೇ**'' ಎಂಬ ಪುಸ್ತಕ ಮುದ್ರಣಗೊಂಡು ಹೊರಬಂತು.

ಇದರಲ್ಲಿ ಪ್ರಸ್ತಾವನೆಯಿಂದ ಹಿಡಿದು ಪರಿಶಿಷ್ಟಗಳವರೆಗೆ ತಾವೇ ಅತ್ಯಂತ ಪ್ರಾಮಾಣಿಕರು ಹಾಗೂ ತಾವು ಕೊಟ್ಟ ಎಲ್ಲ ಆಧಾರಗಳು ನಿರ್ದುಷ್ಟವೆಂದು, ಉತ್ತರಾದಿಮಠದವರು ಏನೇ ಆಧಾರಗಳನ್ನು ಮುಂದಿಟ್ಟರೂ ಅವು ಅಪ್ರಾಮಾಣಿಕ, ಕೃತ್ರಿಮ, ಸೃಷ್ಟಿಸಲ್ಪಟ್ಟದ್ದು, ನಂಬಲರ್ಹವಲ್ಲ, ಗುರುದ್ರೋಹಿಗಳಿಂದ ಸೇರಿಸಲ್ಪಟ್ಟದ್ದು, ಎಲ್ಲಿಂದಲೋ ಬಂದ ಕಾಗದಗಳು ಇತ್ಯಾದಿ ಇತ್ಯಾದಿ ರೀತಿಯಿಂದ ನಿರಾಧಾರವಾಗಿ ಆರೋಪಿಸುತ್ತಾ ಅತ್ಯಂತ ಕೆಳಮಟ್ಟದ ಶೈಲಿಯಲ್ಲಿ ಮನಬಂದಂತೆ ಟೀಕಿಸಿರುವುದು ಶೋಚನೀಯ.

ದಿ. ಡಾ. ಬಿ.ಎನ್.ಕೆ. ಶರ್ಮಾರವರ ವಾಕ್ಯಗಳನ್ನೇ ಅಂತಿಮ ನಿರ್ಣಯಗಳೆಂದು ಉದಾಹರಿಸುತ್ತಾ ವಾಚಕರನ್ನು ಮರಳು ಮಾಡುವ ಪ್ರಯತ್ನವನ್ನು ಮಾಡಿದ್ದಾರೆ. ಓದುವುದಕ್ಕೂ ಸಲ್ಲದ ಶೈಲಿಯಲ್ಲಿ ರಚಿತವಾದ 'ಮೂಲರಾಮಸ್ತು ಮನ್ಮತೇ' ಎಂಬ ಪುಸ್ತಕ ವಿಮರ್ಶೆಗೂ ಅನರ್ಹ. ಆದರೆ ಇಂತಹ ಪುಸ್ತಕಗಳಿಗೆ ಉತ್ತರಿಸದೇ ಹೋದರೆ ಮೌನವೇ ಸಮ್ಮತಿಯೆಂದು, ದೊಡ್ಡ ನ್ಯೂನತೆಯೆಂದು ಅಪಪ್ರಚಾರ ಮಾಡುತ್ತಾ ಮತ್ತೆ ಮತ್ತೆ ಇಂತಹ ಪುಸ್ತಕಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಪುನಃ ಪುನಃ ಪ್ರಕಟಿಸುತ್ತಾ, ವಿಷಬೀಜ ಬಿತ್ತುತ್ತಾ, ಸಮಾಜವನ್ನು ಒಡೆಯುತ್ತಾ ಹೋಗುತ್ತಿರುವುದು ಗಮನಕ್ಕೆ ಬಂದಿತು. (ಮೂ.ಮತೇ ಪುಸ್ತಕದ ದ್ವಿತೀಯ ಮುದ್ರಣ, ತಮಿಳುಭಾಷಾಂತರಗಳೇ ಇದಕ್ಕೆ ಸಾಕ್ಷಿ).

'ಮೂಲರಾಮಸ್ತು ಮನ್ಮತೇ' (2009) ಪುಸ್ತಕ ಪ್ರಕಟಣೆಯಾದ ಕೆಲವು ದಿನಗಳ ನಂತರ ಬೆಂಗಳೂರಿನಲ್ಲಿ ಜರುಗಿದ ಒಂದು ವಿಶೇಷ ಉತ್ಸವದಲ್ಲಿ ಅನೇಕ ವಿದ್ವಾಂಸರುಗಳು ಮತ್ತು ಲೌಕಿಕ ಗಣ್ಯವ್ಯಕ್ತಿಗಳು ಭಾಗವಹಿಸಿದ್ದರು. ಆ ಸಮೂಹದಲ್ಲಿದ್ದ ಪ್ರಮುಖ ವಿದ್ವಾಂಸರುಗಳಾದ ಪಂ. ಮಧ್ವಾಚಾರ್ಯ ಮೊಕಾಶಿ (ವಿಜಯಪುರ), ಪಂ. ಜಯತೀರ್ಥಾಚಾರ್ಯ ಮಳಗಿ (ಧಾರವಾಡ), ಪಂ. ಜಯತೀರ್ಥಾಚಾರ್ಯ ಪಗಡಾಲ (ಹೈದರಾಬಾದ್) ಮೊದಲಾದವರು ಅಲ್ಲದೇ ಲೌಕಿಕ ಗಣ್ಯವ್ಯಕ್ತಿಗಳಾದ ಸರ್ವಶ್ರೀ ಸಿ.ಕೆ. ನಾರಾಯಣ ರಾವ್ (ನಿವೃತ್ತ ಹಿರಿಯ ವಿಜ್ಞಾನಿ, ಬಾಹ್ಯಾಕಾಶ ಇಂಜಿನಿಯರಿಂಗ್ ಸಂಸ್ಥೆ, ಬೆಂಗಳೂರು), ಹೆಚ್.ಎನ್. ನಾಗರಾಜ ರಾವ್ (ನಿವೃತ್ತ ಡಿವಿಜನಲ್ ಮ್ಯಾನೇಜರ್, ಎಲ್ಐಸಿ, ಮೈಸೂರು) ಮೊದಲಾದವರು ''ಮೂಲರಾಮಸ್ತು ಮನ್ಮತೇ'' ಪುಸ್ತಕದಲ್ಲಿ ಪ್ರಕಟಿತ ವಿಷಯಗಳ ಬಗೆಗೆ ಚರ್ಚೆ ಮಾಡಿದರು. ಅತ್ಯಂತ ಕೆಳ ಮಟ್ಟದ ಶೈಲಿ ಮುಂತಾದವುಗಳನ್ನು ಚರ್ಚಿಸಿ ಸಮಾಜದ ವಾತಾವರಣವನ್ನು ಕೆಡಿಸುವ ಈ ಪ್ರಯತ್ನವನ್ನು ಗಮನಿಸಿ ಖೇದಪಟ್ಟರು.

ಆದ್ದರಿಂದ, ಸತ್ಯ ಸಂಗತಿಗಳನ್ನು ಒಂದು ಪುಸ್ತಕದ ಮೂಲಕ ಸಮಾಜದ ಮುಂದೆ ತೆರೆದಿಡಬೇಕೆಂಬ ಉದ್ದೇಶದಿಂದ ಮೇಲ್ಕಂಡ ಚರ್ಚೆಯಲ್ಲಿ ಭಾಗವಹಿಸಿದವರೆಲ್ಲರೂ ಒಂದು ವಿಮರ್ಶಾತ್ಮಕ ಗ್ರಂಥವನ್ನು ರಚಿಸಬೇಕೆಂದು ತೀರ್ಮಾನಿಸಿದರು.

ಪುಸ್ತಕದ ರಚನೆಯ ಪೂರ್ವಭಾವಿಯಾಗಿ ಹಲವಾರು ದಾಖಲೆಗಳು, ಪೂರ್ವ ಕಾಲದ ದೇವಸ್ಥಾನಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿ ಪೂಜೆಗೊಳ್ಳುತ್ತಿರುವ ಪ್ರತಿಮೆಗಳ ಅಧ್ಯಯನಾದಿಗಳನ್ನು ಮಾಡುವುದೆಂದು, ನಂತರದಲ್ಲಿ ಅವುಗಳ ಮಾಹಿತಿಗಳನ್ನು ಸಂಪಾದಕರಿಗೆ ವಿತರಿಸಿ, ಪರಸ್ಪರ ವಿಚಾರ-ವಿನಿಮಯ ಮಾಡಬೇಕೆಂದು ತೀರ್ಮಾನಿಸಲಾಯಿತು. ಅದರ ಫಲ ಈ ಪುಸ್ತಕ.

ಮೂಲರಾಮಸ್ತು ಮನ್ಮಠೇ ಲೇಖಕರು ತಮ್ಮ ಲೇಖನಿಗೆ ಕಡಿವಾಣವಿಲ್ಲದೆಯೇ ಮುಂದೆ ಮುಂದೆ ಸಾಗಿರುವುದರ ಜೊತೆಗೆ ವಿಮರ್ಶಕರಿಗೆ ಉಪಯೋಗವಾಗುವಂತಹ ನಿರ್ದಿಷ್ಟ ಮಾಹಿತಿಗಳನ್ನು ನೀಡಿರುವುದು ವಿಶೇಷ ಸಂಗತಿಯಾಗಿದೆ. ಪೂರ್ವದಲ್ಲಿ ಪ್ರಕಟಿತ ಅವರ ಪುಸ್ತಕಗಳಲ್ಲಿ ಮೂಲರಾಮವಿಗ್ರಹದ ಬಗ್ಗೆ ಇಲ್ಲದ ಕೆಲವು ಹೆಚ್ಚಿನ ಹೊಸ ಮಾಹಿತಿಗಳನ್ನು ಮೂ.ಮಠೇ. ಲೇಖಕರು ನೀಡಿದ್ದಾರೆ.

ಉದಾ.– ಮೂಲರಾಮ ಪ್ರತಿಮೆಯನ್ನು ಅಪಹರಿಸಿಕೊಂಡು ಬಂದ ದಿನಾಂಕ : ಆನಂದ ಸಂ।। ಕಾರ್ತೀಕ ಶುಕ್ಲ ಪಕ್ಷ ದ್ವಾದಶಿ ದಿನ ಕ್ರಿ.ಶ. 1493 ಮತ್ತು ಆಗ ಉತ್ತರಾದಿಮಠದಲ್ಲಿ ಶ್ರೀರಘುನಾಥತೀರ್ಥರು ಪೀಠಸ್ಥರಾಗಿದ್ದರು ಎಂಬ ವಿಷಯಗಳನ್ನು ಮೂ.ಮಠೇ. ಪುಸ್ತಕದಲ್ಲಿ ಒದಗಿಸಿರುವುದು ವಿವಾದದ ಚಿಂತನ-ಮಂಥನಕ್ಕೆ ಅನುಕೂಲವಾಗಿದೆ.

ಜೊತೆಗೆ ಆ ಪುಸ್ತಕದಲ್ಲಿ ಮೂಲರಾಮನ ಪ್ರತಿಮೆಯ ಅಪಹರಣದ ಘಟನೆ ನಾಲ್ಕು ಪ್ರಬಲ ಆಕರಗಳಲ್ಲಿ ಪ್ರತಿಪಾದಿತವಾದ ಘಟನೆ ಎಂದೂ ನಿಶ್ಚಯಿಸಿ, ಅನುಬಂಧದಲ್ಲಿ ಅವುಗಳ ಪ್ರತಿಗಳನ್ನು ಬಹಿರಂಗ ಪಡಿಸಿದ್ದಾರೆ.

ಪ್ರಸ್ತುತ ವಿಮರ್ಶೆಯ ಪುಸ್ತಕದ ಪ್ರಾರಂಭದಲ್ಲಿ ಆ ಪ್ರಬಲ ಆಕರಗಳ ಬಗೆಗೆ ಸುದೀರ್ಘವಾಗಿ ಚರ್ಚಿಸಿ, ಅವುಗಳನ್ನು ಪ್ರಮಾಣವರ್ಗದಲ್ಲಿ ಸೇರಿಸುವುದಕ್ಕೆ ಅನರ್ಹವಾಗಿವೆ ಎಂದೂ ದೃಢಪಡಿಸಿದ್ದೇವೆ.

ಅವರು ತಿಳಿಸಿರುವ ಆಕರಗಳು ಯಾವುವೆಂದರೆ : 1) ತಾಮ್ರ ಹಾಳೆಯಲ್ಲಿರುವ ಒಂದು ಬರಹ (ತಾಮ್ರಶಾಸನವೆನ್ನಲಾಗಿದೆ), 2) ರಘುನಂದನರ ಚರಮಶ್ಲೋಕವುಳ್ಳ ಪ್ರಾಚೀನತಮ ದಾಖಲೆ, 3) ಮಧ್ವಕವಿ ಎಂಬ ವ್ಯಕ್ತಿಯಿಂದ ರಚಿತವಾದ ವಿಜಯೀಂದ್ರವಿಜಯ ಎಂಬ ಒಂದು ಕಾವ್ಯ, 4) ಅರ್ಚಾಗತಿಕ್ರಮವೆಂಬ ಒಂದು ಕೃತಿ (ಶ್ರೀವಾದೀಂದ್ರತೀರ್ಥರಿಂದ ವಿರಚಿತವೆಂದು ಹೇಳಲ್ಪಟ್ಟಿದೆ).

ಈ ಎಲ್ಲ ಆಧಾರಗಳನ್ನೂ ಪ್ರತ್ಯೇಕವಾಗಿ ವಿಮರ್ಶೆ ಮಾಡಲಾಗಿದೆ. ಅಲ್ಲದೇ ಆ ಪುಸ್ತಕದಲ್ಲಿ ಪ್ರಕಟವಾಗಿರುವ ಉಳಿದ ಆಧಾರಗಳನ್ನೂ ವಿಮರ್ಶೆ ಮಾಡಲಾಗಿದೆ.

## ಚಿಂತನ-ಮಂಥನದ ಪ್ರಕ್ರಿಯೆಯಲ್ಲಿರುವ ಪ್ರಧಾನ ವಿಷಯ :

ಶ್ರೀರಘುನಂದನರು ಕ್ರಿ. ಶ. 1493ರಲ್ಲಿ (ಆನಂದ ಸಂ।।) ಮೂಲರಾಮ ಪ್ರತಿಮೆಯನ್ನು ಉತ್ತರಾದಿಮಠದಿಂದ ತರಿಸಿಕೊಂಡರು. ಇದರ ಬಗೆಗೆ ಒಂದೆರಡು ವಾಕ್ಯಗಳಲ್ಲಿ ಸ್ಥೂಲವಾಗಿ ತಿಳಿಸುತ್ತಿದ್ದೇವೆ.

1) ಈ ಘಟನೆಗಿಂತ ಪೂರ್ವದಲ್ಲಿ ಮೂಲಸೀತಾರಾಮಪ್ರತಿಮೆಗಳು ಉತ್ತರಾದಿಮಠದಲ್ಲಿತ್ತು ಎಂದು ಶ್ರೀರಾಯರ ಮಠದಿಂದಲೇ ಅಂಗೀಕೃತವಾಗಿದೆ. ಪ್ರತಿಮೆಯನ್ನು ಸಂಪಾದಿಸಿದ ಘಟನೆ ನಡೆಯಿತು ಎನ್ನುವುದಕ್ಕೆ ಆಧಾರವೆಂದು ಪ್ರಕಟಿಸಿರುವ ಆಕರಗಳು (ಸಾಕ್ಷ್ಯಾಧಾರಗಳು) ಪ್ರಾಮಾಣಿಕವಾಗಿದೆಯಾ? ಎಂದು ವಿಮರ್ಶಿಸ ಬೇಕಾಗಿರುವ ಔಚಿತ್ಯವಿದೆ. ಪ್ರತ್ಯೇಕ ಶೀರ್ಷಿಕೆಯುಳ್ಳ ಬರಹಗಳಲ್ಲಿ ಈ ವಿಷಯಗಳ ಸತ್ಯಾಸತ್ಯತೆಯನ್ನು ಚರ್ಚಿಸಲಾಗಿದೆ.

   ಮೂ.ಮಠೇ ಲೇಖಕರು ತಿಳಿಸಿರುವ ನಾಲ್ಕು ಪ್ರಬಲ ಸಾಕ್ಷ್ಯಾಧಾರಗಳೂ ಅಪ್ರಾಮಾಣಿಕವಾಗಿವೆ ಎಂದು ಅನೇಕ ದೃಷ್ಟಿಕೋನಗಳಿಂದ ಈ ಪುಸ್ತಕದಲ್ಲಿ ವಿಮರ್ಶಿಸಿ ನಿರ್ಣಯ ಮಾಡಲಾಗಿದೆ.

   ಮೂ.ಮಠೇ ಲೇಖಕರ ಹೇಳಿಕೆಗೇ ಪ್ರತಿಕೂಲವಾಗಿರುವ ದಾಖಲೆಗಳು ಮೂ.ಮಠೇ. ಪುಸ್ತಕದಲ್ಲೇ ದೊರಕಿರುವುದು ವಿಶೇಷ.

2) ಮೂಲರಾಮಪ್ರತಿಮೆಯನ್ನು ಅಪಹರಿಸಿರುವ ಘಟನೆಯು ಸರ್ವಥಾ ಸಂಭವಿಸಿರುವುದಿಲ್ಲ ಎಂದು ಸಾಮಾನ್ಯ ತಿಳುವಳಿಕೆಯುಳ್ಳ ವ್ಯಕ್ತಿಯೂ ಅರ್ಥಮಾಡಿಕೊಳ್ಳುವಂತೆ ನಿರ್ಧರಿಸಲಾಗಿದೆ. ಶ್ರೀರಾಯರ ಮಠದವರು

ಪ್ರತಿಪಾದಿಸುತ್ತಿರುವಂತೆ ಕ್ರಿ.ಶ. 1493 ರಲ್ಲಿ ಆನಂದನಾಮ ಸಂವತ್ಸರದಲ್ಲಿ, ಶ್ರೀರಘುನಂದನರ ಅವಧಿಯಲ್ಲಿ ಪ್ರತಿಮೆಯ ಕಳುವಿನ ಘಟನೆ ನಡೆದಿದೆ. ಆದರೆ ಆ ನಿರ್ದಿಷ್ಟ ಕಾಲದಲ್ಲಿ ಶ್ರೀರಘುನಂದನತೀರ್ಥರು ಪೀಠಸ್ಥರಾಗಿರಲೇ ಇಲ್ಲ ಎಂದು ಶ್ರೀರಾಯರ ಮಠದ ಅಧಿಕೃತ ಆಧಾರಗಳಿಂದಲೇ ತೋರಿಸಿಕೊಡಲಾಗಿದೆ.

ಈ ರೀತಿ ಮೂ.ಮತೇ. ಪುಸ್ತಕದಲ್ಲಿ ಒದಗಿಸಿರುವ ಸಾಕ್ಷ್ಯಾಧಾರಗಳ ಅಡಿಯಲ್ಲಿಯೇ ಮೂಲರಾಮಪ್ರತಿಮೆ ಸಂಪಾದನೆಯ ಘಟನೆಯು ಅಸತ್ಯವಾಗಿದೆ ಎಂದು ನಿಶ್ಚಯಿಸಿದ ಬಳಿಕ ಸಹಜ ಪ್ರಕ್ರಿಯೆಯಿಂದ ಉಂಟಾಗುವ ನಿಶ್ಚಯಾಂಶ : **ಮೂಲಪ್ರತಿಮೆಗಳು ಪೂರ್ವದಲ್ಲಿ ಯಾರ ವಶದಲ್ಲಿದ್ದವೋ ಅವರ (ಉತ್ತರಾದಿಮಠ ಪೀಠಾಧಿಪತಿಗಳ) ವಶದಲ್ಲಿಯೇ ಇದ್ದು ಆ ಪ್ರತಿಮೆಗಳು ಅಲ್ಲಿ ಅರ್ಚನೆಗೊಳ್ಳುತ್ತಿವೆ ಎಂಬ ವಾಸ್ತವಾಂಶವು ತನ್ನಷ್ಟಕ್ಕೆ ತಾನೇ ಸಾಬೀತಾಗುತ್ತದೆ.**

ಇಂತಹ ಸನ್ನಿವೇಶದಲ್ಲಿ ಉತ್ತರಾದಿಮಠದವರು ತಮ್ಮಲ್ಲಿ ಮೂಲ ಪ್ರತಿಮೆಗಳು ಸುಸ್ಥಿರವಾಗಿರುವುದಕ್ಕೆ ಯಾವ ಪುರಾವೆಯನ್ನು ಒದಗಿಸುವ ಅವಶ್ಯಕತೆ ಇಲ್ಲ. (ಓರ್ವ ವ್ಯಕ್ತಿಯಲ್ಲಿದ್ದ ಒಂದು ಪದಾರ್ಥವು ಕಳೆದುಹೋಗಿಲ್ಲವೆಂದರೆ, ಆ ಪದಾರ್ಥ ಸದರಿ ವ್ಯಕ್ತಿಯ ವಶದಲ್ಲಿಯೇ ಇರುತ್ತದೆ ಎನ್ನುವುದು ಸರ್ವವಿದಿತ). ಈ ವಿಷಯವನ್ನು ಪುಷ್ಟೀಕರಿಸುವಂತೆ ಉತ್ತರಾದಿಮಠದಿಂದ ಪ್ರಕಟಿತ 'ಸಸೀತಾಮೂಲರಾಮಾರ್ಚಾ' ಪುಸ್ತಕದಲ್ಲಿ ಅನೇಕ ಆಧಾರಗಳನ್ನೂ ಸಹ ನೀಡಿದ್ದಾರೆ.

ಈ ವಿಮರ್ಶಾತ್ಮಕ ಕೃತಿಯಲ್ಲಿ, 'ಮೂಲರಾಮಸ್ತು ಮನ್ಮತೇ' ಪುಸ್ತಕದಲ್ಲಿ ಮಾಡಿರುವ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳಲಾಗಿದೆ. ಮೂ.ಮತೇ ಪುಸ್ತಕದ ಪ್ರತಿ ಅಕ್ಷರದ ಖಂಡನೆಯನ್ನು ಮಾಡುವ ಉದ್ದೇಶ ನಮ್ಮ ಈ ಕೃತಿಗೆ ಇಲ್ಲ. ಪ್ರಧಾನವಾದ ಆಕ್ಷೇಪಗಳನ್ನು ಮಾತ್ರ ವಿಮರ್ಶೆ ಮಾಡಿದ್ದೇವೆ.

ಈ ಪುಸ್ತಕವನ್ನು ತೆರೆದ ಹೃದಯದಿಂದ ವಾಚಕರು ಓದಬೇಕೆಂದು ವಿನಂತಿ. ಸಕಲ ಸಜ್ಜನರಿಗೆ, ಸಾಧಕರಿಗೆ ಇದರಿಂದ ಸಂತೋಷವಾಗುವುದೆಂದು ಭಾವಿಸಿ ಈ ಕಾರ್ಯವನ್ನು ಗುರುವೃಂದದವರ ಹೃದಯದಲ್ಲಿರುವ ಪರಮಾತ್ಮನ ಪೂಜೆಯೆಂದು ಶ್ರೀಮುಖ್ಯಪ್ರಾಣರ ದ್ವಾರಾ ಶ್ರೀಹರಿಯಲ್ಲಿ ಸಮರ್ಪಿಸುತ್ತಿದ್ದೇವೆ.

ನಮ್ಮ ನಾಡಿನ ಪ್ರಖ್ಯಾತ ವಿದ್ವಾಂಸರಾದ, ಅನೇಕ ಪ್ರಶಸ್ತಿಗಳನ್ನು ಹೊಂದಿರುವ, ಉತ್ತಮ ಮಟ್ಟದ ವಿಮರ್ಶಕರಾದ, ದ್ವೈತ ವೇದಾಂತ ರಿಸರ್ಚ್ ಫೌಂಡೇಶನ್ ಸಂಸ್ಥಾಪಕರಾಗಿ, ಅದನ್ನು ನಿರ್ವಹಣೆ ಮಾಡುತ್ತಿರುವ ಮತ್ತು ಪೂರ್ಣಪ್ರಜ್ಞ ವಿದ್ಯಾಪೀಠ ಸಂಸ್ಥೆಯಲ್ಲಿ ಇಂದಿಗೂ ಮಾರ್ಗದರ್ಶಕರೆಂದೆನಿಸಿರುವ ಹಿರಿಯ ವಿದ್ವಾಂಸರಾದ ಮಹಾಮಹೋಪಾಧ್ಯಾಯ ಪ್ರೊ|| ಕೆ.ಟಿ.ಪಾಂಡುರಂಗಿಯವರು ಈ ಪುಸ್ತಕದಲ್ಲಿರುವ ಪ್ರಾಮಾಣಿಕ ವಿಷಯಗಳನ್ನು ಮನಗಂಡು ಒಂದು ಮುನ್ನುಡಿಯನ್ನು ನೀಡಿದ್ದಾರೆ. ಅವರಿಗೆ ಈ ಮೂಲಕ ಕೃತಜ್ಞತೆಯನ್ನು ಅರ್ಪಿಸುತ್ತಿದ್ದೇವೆ. ಈ ಪ್ರಕಟಣೆ ಕಾರ್ಯದಲ್ಲಿ ಪರೋಕ್ಷ ಹಾಗೂ ಅಪರೋಕ್ಷವಾಗಿ ಭಾಗವಹಿಸಿರುವ ಎಲ್ಲರಿಗೂ ಕೃತಜ್ಞತೆಗಳು.

'ಮೂಲರಾಮಸ್ತು ಮನ್ಮತೇ' ಪುಸ್ತಕದಲ್ಲಿ ಕೆಲವು ವಿಷಯಗಳು ಪಠ್ಯದಲ್ಲಿ ಮತ್ತೆಮತ್ತೆ ಆಕ್ಷೇಪ-ಸಂದೇಹ ರೂಪಗಳಲ್ಲಿ ಬಂದಿರುವುದರಿಂದ ಅವುಗಳನ್ನು ಚರ್ಚಿಸುವಾಗ ಇಲ್ಲಿಯೂ ಹಲವು ವಿಷಯಗಳ ಪುನರುಕ್ತಿ ಅನಿವಾರ್ಯವಾಗಿದೆ.

**ಡಾ|| ಕೃಷ್ಣ ಕೊಲ್ಹಾರಕುಲಕರ್ಣಿ**
**ಆರ್. ಜಗನ್ನಾಥ ರಾವ್**

# ಪರಿವಿಡಿ

ಪ್ರಕಾಶಕರ ನುಡಿ ........ iii

ಮುನ್ನುಡಿ ........ v

ಪ್ರಸ್ತಾವನೆ ........ xxiv

1. ತಾಮ್ರಪತ್ರದ ಒಕ್ಕಣಿಕೆ ........ 1

2. ತಾಮ್ರಪತ್ರದ ಕೃತ್ರಿಮತೆ ........ 5

3. ''ಪ್ರಾಚೀನತಮ'' ದಾಖಲೆಯ ವಿಮರ್ಶೆ ........ 24

4. ''ವಿಜಯೀಂದ್ರವಿಜಯ'' ಕೃತಿಯ ವಿಮರ್ಶೆ ........ 32

5. ''ಅರ್ಚಾಗತಿಕ್ರಮ'' ಕೃತಿಯ ವಿಮರ್ಶೆ ........ 48

6. ಶ್ರೀರಾಘವೇಂದ್ರವಿಜಯ ........ 51

7. ಪ್ರತಿಮಾಲಕ್ಷಣಗಳ ತುಲನೆ ........ 61

8. ದಿಗ್ವಿಜಯರಾಮಪ್ರತಿಮೆ ಶಾಸನ? ........ 65

9. ವಾಸಿಷ್ಠೋತ್ತರರಾಮಾಯಣ ಹಸ್ತಪ್ರತಿಯ ವಿಮರ್ಶೆ ........ 69

10. ಅಪಹರಣದ ಹಗರಣ ........ 80

11. ಹುಯಿಲೆಬ್ಬಿಸುವವರ್‍ಯಾರು? ........ 88

12. ಬಣ್ಣ ಚಿತ್ರಗಳ ಬಯಲಾಟ ........ 91

12. ವ್ಯಾಹತಿಯ ವ್ಯೂಹ ........ 121

14. ಕಾಲನಿರ್ಣಯದ ಚಕ್ರವ್ಯೂಹ ........ 133

15. ರಾಯಸಗಳ ಅಸಮರ್ಥ ರಾಯಭಾರ ........ 138

16. ಸರ್ಕಾರೀ ಗೆಜೆಟ್‌ನ ವಿಮರ್ಶೆ ........ 156

17. ಎಪಿಗ್ರಾಫಿಕಾ ಇಂಡಿಕಾದ ಮಿಸ್‌ಇಂಡಿಕೇಶನ್ಸ್ ........ 159

18. ''ಮಧ್ವರಾಯರ ದೇವತಾರ್ಚನೆಯ...'' ........ 161

19. ಶ್ರೀದಾಮೋದರದಾಸರ ಹಸ್ತಲಿಖಿತ ಮೂಲಪ್ರತಿಯ ವಿಮರ್ಶೆ ........ 165

20. ''ಹರಿದಾಸಸಾಹಿತ್ಯವನ್ನು ಹದಗೆಡಿಸಿದವರು'' ಯಾರು? ........ 167

21. ''ಸತ್ಯಮೇವ ಜಯತೇ'' ........ 173

22. ''ಮೂಲರಾಮಸ್ತು ಮನ್ಮತೇ'' ಸಂದೇಹಗಳಿಗೆ ಸಮಾಧಾನ ........ 180

23. ವಿನಮ್ರ ಪ್ರಾರ್ಥನೆ........ 233

ಅನುಬಂಧ 1: ಶ್ರೀವಿದ್ಯಾನಿಧಿತೀರ್ಥರು........ 234

ಅನುಬಂಧ 2: ವಿಜಯೀಂದ್ರವಿಜಯ ಕಾವ್ಯವನ್ನು ನಂಬದಿರಲು ಕೆಲವು ಕಾರಣಗಳು ........ 245

ಅನುಬಂಧ 3: ಕಾರ್ಬನ್ ಡೇಟಿಂಗ್ ........ 249

ಅನುಬಂಧ 4: ಗುರುಪುರಂದರವಿಟ್ಠಲರ ಕೃತಿ–'ವೇದಾಂತವೇದ್ಯನ...' ........ 251

ಅನುಬಂಧ 5: ಹೆಚ್ಚಿನ ಆಧಾರಗಳು ........ 255

ಈ ಪುಸ್ತಕದಲ್ಲಿ ಉಪಯೋಗಿಸಿರುವ ಸಾಂಕೇತಿಕ ಅಕ್ಷರಗಳ ವಿವರಣೆ

| ಕ್ರ.ಸಂ. | ಸಾಂಕೇತಿಕ ಅಕ್ಷರ | ಪುಸ್ತಕದ ಹೆಸರು |
|---|---|---|
| 1 | ಗು.ಚ. | ಗುರುಚರಿತೆ – 1949 |
| 2 | ವಿ.ವಿ. | ವಿಜಯೀಂದ್ರವಿಜಯ, ಕನ್ನಡಾನುವಾದ, 2003 |
| 3 | ಮೂ.ಮತೇ | ಮೂಲರಾಮಸ್ತು ಮನ್ಮತೇ, 2009 ಹಾಗು 2010 |
| 4 | ಸ.ಸೀ. | ಸಸೀತಾಮೂಲರಾಮಾರ್ಚಾ, 2008 |

ಕ್ರಮ ಸಂಖ್ಯೆ 1, 2 ಮತ್ತು 3ರಲ್ಲಿ ತೋರಿಸಿರುವ ಪುಸ್ತಕಗಳು ಶ್ರೀರಾಯರ ಮಠದಿಂದ ಪ್ರಕಟಿತವಾಗಿದೆ.
ಕ್ರಮ ಸಂಖ್ಯೆ 4ರಲ್ಲಿ ತೋರಿಸಿರುವ ಪುಸ್ತಕವು ಉತ್ತರಾದಿಮಠದಿಂದ ಪ್ರಕಟಿತವಾಗಿದೆ.

''ಮೂಲರಾಮಸ್ತು ಮನ್ಮತೇ'' ಪುಸ್ತಕದಲ್ಲಿ ಮೂಲರಾಮನ ಪ್ರತಿಮೆಯ ಅಪಹರಣದ ವಿಷಯದಲ್ಲಿ ಪ್ರಬಲ ಆಧಾರ ಎಂದು ಮುದ್ರಿಸಿರುವ

# ತಾಮ್ರಪತ್ರದ ಒಕ್ಕಣಿಕೆ

ಶ್ರೀರಘುನಂದನತೀರ್ಥರ ಆಜ್ಞೆಯನ್ನು ಅನುಸರಿಸಿ, ಚಂದ್ರಭಟ್ಟನೆಂಬ ಶಿಷ್ಯನು ಉತ್ತರಾದಿಮಠದಿಂದ ಮೂಲರಾಮಪ್ರತಿಮೆಯನ್ನು ಒಯ್ದು (ಅಪಹರಿಸಿ) ಶ್ರೀರಘುನಂದನತೀರ್ಥರಿಗೆ ತಂದೊಪ್ಪಿಸಿದನು. ಅವರ ಶಿಷ್ಯರಾಗಿದ್ದ ಶ್ರೀಸುರೇಂದ್ರತೀರ್ಥರು ಚಂದ್ರಭಟ್ಟನಿಗೆ ಅವನ ಈ ಸೇವೆಯನ್ನು ಪ್ರಶಂಸಿಸಿ ಈ ತಾಮ್ರಪತ್ರವನ್ನು ಕ್ರಿ.ಶ. 1504-1505ರಲ್ಲಿ ನೀಡಿದರು ಎಂದು ರಾಯರ ಮಠದವರು ಪ್ರತಿಪಾದಿಸುತ್ತಾರೆ. ಈ ತಾಮ್ರಪತ್ರದಲ್ಲಿ ಈ ಘಟನೆಯು ನಡೆದ ಕಾಲಮಾನಗಳನ್ನೂ ತಿಳಿಸಿದ್ದಾರೆ. ಆ ಪತ್ರದ ನಕಲನ್ನು ಮೂ.ಮಠೇ. ಪುಸ್ತಕದಲ್ಲಿ ಮುದ್ರಿಸಲಾಗಿದೆ. ಶ್ರೀರಾಯರ ಮಠದವರು ಅದನ್ನು ಶಾಸನವೆಂದು ತಿಳಿಸಿ, ಪ್ರಬಲ ಸಾಕ್ಷ್ಯಾಧಾರವೆಂದಿದ್ದಾರೆ (ಪು.16). ಇದು ದೇವನಾಗರೀ ಲಿಪಿಯಲ್ಲಿದೆ. ಅದನ್ನು ಕನ್ನಡ ಲಿಪಿಯಲ್ಲಿ ಈ ಕೆಳಗೆ ನಮೂದಿಸಿ, ನಂತರ ಅದರ ವಿಮರ್ಶೆಯನ್ನು ಮಾಡಲಾಗಿದೆ. ಮೂ. ಮಠೇ ಪುಸ್ತಕದಲ್ಲಿ ಛಾಪಿಸಿರುವ ಈ ನಕಲಿನಲ್ಲಿ ಕೆಲವೆಡೆ ತ್ರುಟಿತವಾದಂತೆ ಕಾಣುತ್ತದೆ. ಅದನ್ನು ''....'' ಎಂಬುದಾಗಿ ಸೂಚಿಸಿದ್ದೇವೆ.

## ಶ್ರೀರಾಮಚಂದ್ರ

ಸ್ವಸ್ತಿಶ್ರೀಮನ್ನೃಪ ವಿಕ್ರಮಾರ್ಕ ಶಕ ವರ್ಷ 1561 ಶ್ರೀಮಜ್ಜಯಾಭ್ಯುದಯ ಶಾಲಿವಾಹನಶಕ ವರ್ಷ 1426ನೆಯ ರಕ್ತಾಕ್ಷಿನಾಮ ಸಂವತ್ಸರದ ಮಾಘ ಬಹುಳ ಅಮಾವಾಸ್ಯೆಯಲ್ಲಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರಾದ ಪದವಾಕ್ಯಪ್ರಮಾಣ ಪಾರಾವಾರಪಾರಂಗತ ಸರ್ವತಂತ್ರಸ್ವತಂತ್ರರಾದ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯರಾದ ಶ್ರೀ ರಾಮಚಂದ್ರದೇವರ ದಿವ್ಯಪಾದಪದ್ಮಾರಾಧಕರಾದ ಶ್ರೀಮಜ್ಜಿತಾಮಿತ್ರತೀರ್ಥ ಶ್ರೀಪಾದವಡೆಯರ ಕರಕಮಲಸಂಜಾತರಾದ ಶ್ರೀಮದ್ರಘುನಂದನತೀರ್ಥಶ್ರೀಪಾದ ವಡೆಯರ ವರಕುಮಾರರಾದ ಶ್ರೀಮತ್ಸುರೇಂದ್ರತೀರ್ಥ ಶ್ರೀಪಾದವಡೆಯರು ನಮಗೆ ಪರಮಪ್ರಿಯಶಿಷ್ಯನಾದ ಬಾಡದ ಚಂದ್ರಭಟ್ಟನು ಆನಂದನಾಮಸಂವತ್ಸರದ ಕಾರ್ತೀಕ ಶುದ್ಧ ದ್ವಾದಶೀ ರೇವತೀ ನಕ್ಷತ್ರ ಉದಯಕಾಲದಲ್ಲಿ ಬಂಕಾಪುರಸ್ಥಳದಲ್ಲಿ ಆ ಮಠದೊಳಗಿಂದ ರಘುಪತಿದೇವರ ತ್ಯಗೆದುಕೊಂಡು ಕಾರ್ತಿಕ ಬಹುಳ ಅಷ್ಟಮೀ ಉತ್ತರಾನಕ್ಷತ್ರದಲ್ಲಿ ಅಭಿಜಿತ್ ಮುಹೂರ್ತದಲ್ಲಿ ಪೆನಗೊಂಡಿ ಸ್ಥಳದಲ್ಲಿ ನಮ್ಮ ರಘುನಂದನಸ್ವಾಮಿಗಳು ಮಹಾಸಾಮ್ರಾಜ್ಯ ವಿಭವಾತಿಶಯದಲ್ಲಿ ಮಹಾವೃದ್ಧರಾಗಿರಲಿಕ್ಕೆ ಆ ಬಾಡದ ಚಂದ್ರಭಟ್ಟನು ನಮ್ಮ ಮಠಕ್ಕೆ ರಘುಪತಿದೇವರ ತಂದು ಕೊಟ್ಟು ಸಂಸ್ಥಾನಸೇವೆ ಮಾಡಿದನು. ತರುವಾಯ ನಮ್ಮ ಸ್ವಾಮಿಗಳ ಪಾದಕ್ಕೆ ವಿಜ್ಞಾಪನೆ ಮಾಡಿಕೊಂಡ ಪ್ರಕಾರ ದೇವರ ತಂದಿದ್ದರಿಂದ ಆ ಮಠದಲ್ಲಿ ದೇವರ ಮಂಡಿಸೋ ಉದ್ಯೋಗ ಸಂಬಳ ಕಟ್ಟಳಿಗಳು ವಿವಾಹೋಪನಯನಾದಿ ಶುಭಶೋಭನಗಳಿಗೆ ಹಿಡಿದ ದ್ರವ್ಯ ಉಚಿತ ಪಾಕ ಕುಟುಂಬ ಸಕಲನಿರ್ವಾಹ ಅವರಿಂದ ಮಾಡಿಶಿಕೊಂಬೋಣ ನಿಂತು ಹೋಯಿತು. ನನಗೆ ಗತಿ ಯೇನು. ಆ ವಡೆಯರ ಮುಖ(ದ್ವೇಷವಲ್ಲದೇ?)ಕ್ಕೆ ಸಲ್ಲದೇ ಹೋದಿನು. ದೇಶದ ವಳಗೆ ಯೆಲ್ಲಾದರೂ ಸಂವಾಸವ ಮಾಡಿದಿನೇ..... ಇದಕ್ಕೆ ಮುಕ್ತಿ ಯೇನು ಯಂತ ಭಯಗ್ರಸ್ತನಾಗಿ ಕೇಳಿದನು. ಅವನಿಗೆ ಸ್ವಾಮಿಗಳು ಅಭಯ ಕೊಟ್ಟರು ನಮ್ಮ ಮಠದಲ್ಲಿ ನಿಮಗೆ ಆ ವಡೆಯರ ಭಯ ಬ್ಯಾಡ. ಈ ಸಂಸ್ಥಾನವೇ ನಿಮ್ಮದದೆ ಎಂದು ಮಠದಲ್ಲಿ

ಇಟ್ಟುಕೊಂಡು ನಮಗೆ ಮಹಾಸಂಸ್ಥಾನ ರಘುಪತಿವೇದವ್ಯಾಸ ಸಹ ಸಮಗ್ರ ದೇವತಾರ್ಚನೆಯ ಕೊಟ್ಟು ಆ ಬಾಡದ ಚಂದ್ರಭಟ್ಟನಿಗೆ ಆ ಮಠಕ್ಕಿಂತಲೂ ಸಹಸ್ರಮಡಿಯಾಗಿ ಸಂತೋಷ ಬಡಿಶಿ ರಘುಪತಿದೇವರ ಪ್ರೀತ್ಯರ್ಥವಾಗಿ ನಮ್ಮ ಸಂಸ್ಥಾಕ್ಕೆ ಸುಕೃತಪ್ರಾಪ್ತ್ಯರ್ಥವಾಗಿ ಮಠದಲ್ಲಿ ಆಧಿಕೋದ್ಯೋಗವನ್ನು ಕೊಟ್ಟು ಪಾಲನೆ ಮಾಡಿಕೊಂಡು ಬಾ ಯೆಂದು ನಮ್ಮ ಕೈಯಲ್ಲಿ ವಪ್ಪಿಶಿ ಕೊಟ್ಟು ನಮ್ಮನ ಉತ್ತರದೇಶ ಸಂಚಾರಕ್ಕೆ ಕಳಿಹಿಶಿ ತಾವು ಮೌನವ್ರತ ಸಂಕಲ್ಪಿಶಿಕೊಂಡು ದಕ್ಷಿಣಯಾತ್ರೆಗೆ ತೆರಳಿ ಹೋದರು. ತರುವಾಯ ನಾವು ದೇಶ ಸಂಚಾರ ಮಾಡಿದ ಮ್ಯಾಲೆ ಭೂಪ್ರದಕ್ಷಿಣೆ ಸಂಕಲ್ಪಿಶಿಕೊಂಡು ಭೂಪ್ರದಕ್ಷಿಣೆ ಮಾಡೋ ಪ್ರಕಾರದಿಂದ ಪ್ರಯಾಗಕ್ಷೇತ್ರಕ್ಕೆ ಹೋಗಿ ಕ್ಷೇತ್ರಮಾಹಾತ್ಮ್ಯಪೂರ್ವಕಾವಾಗಿ ಮಕರ ಮಾಸದಲ್ಲಿ ಮಾಘಸ್ನಾನ ಮಾಡಿದೆವು. ಪೂರ್ವದಲ್ಲಿ ಮಠಮಹಾಜನ ಭೀಮಾಚಾರ್ಯರು... ಶ್ರೀವಿಬುಧೇಂದ್ರತೀರ್ಥರ ಕಾಲದಲ್ಲಿ ಮಠದ ಪಾರುಪತ್ಯಯ ಅಶೇಷವು ಮಾಡಿಕೊಳುತ ಬಂದನು. ಆಮ್ಯಾಲೆ ಜಿತಾಮಿತ್ರತೀರ್ಥರ ಕಾಲದಲ್ಲಿ ಭೀಮಾಚಾರ್ಯನ ಮಗ ರಾಮಾಚಾರ್ಯನು ಕ್ಯಲವುಕಾಲ ಮಠದ ಪಾರುಪತ್ಯ ಮಾಡುತ ದೇಹಧರ್ಮದಿಂದ ಗತವಾಗಿ ಹೋದನು. ಆ ಉದ್ಯೋಗ.... ನಮ್ಮ ಮಠದಲ್ಲಿ...ತ್ತು. ನಮ್ಮ ಸ್ವಾಮಿಗಳು ಆ ಬಾಡದ ಚಂದ್ರಭಟ್ಟನಿಗೆ ಮಠದಲ್ಲಿ ಆಧಿ ಕೋದ್ಯೋಗ ಕೊಡ ಹೇಳಿ ಆಜ್ಞೆ.... ಪಾಲಿಸಿದ್ದಾದ ಕಾರಣ ನಾವು ಅತ್ರಿಗೋತ್ರದ ಆಶ್ವಲಾಯನಸೂತ್ರದ ಬಾಡದ ನಾರಾಯಣಭಟ್ಟರ ಪೌತ್ರರಾದ ವಿಷ್ಣುಭಟ್ಟರ ಪುತ್ರನಾದ ಆ ಬಾಡದ ಚಂದ್ರಭಟ್ಟನಿಗೆ ಈ ಪ್ರಯಾಗಕ್ಷೇತ್ರದಲ್ಲಿ ಮಾಘ ಬಹುಳ ಅಮಾವಾಸ್ಯ ಸೂರ್ಯೋಪರಾಗ ಪರ್ವಕಾಲ ವಿಶೇಷದಲ್ಲಿ ಗಂಗಾಯಮುನಾ ಸಂಗಮದಲ್ಲಿ ವೇಣೀಮಾಧವದೇವರ ಸನ್ನಿಧಿಯಲ್ಲಿ ರಘುಪತಿವೇದವ್ಯಾಸದೇವರ ಪ್ರೀತ್ಯರ್ಥವಾಗಿ ನಮ್ಮ ಸಂಸ್ಥಾನಕ್ಕೆ ಅಧಿಕ ಸುಕೃತ ಪ್ರಾಪ್ತ್ಯರ್ಥವಾಗಿ ನಮ್ಮ ಮಠದಲ್ಲಿ ರಾಯಸ ಬರೆವ ಉದ್ಯೋಗ ಮಠಕ್ಕೆ ಪ್ರಾಪ್ತವಾದ ದ್ರವ್ಯ.... ಮಠದಲ್ಲಿ ಸಂಬಳ ಪಡಿ ಪುತ್ರಪೌತ್ರ ಪರಂಪರಯಾ ವಿವಾಹೋಪನಯನಾದಿ ಶುಭಶೋಭನ....ದ್ರವ್ಯ ಮಠದಲ್ಲಿ ತಾಂಬೂಲಾದಿ ಬಹುಮಾನ ಅಶೇಷ ಪಾರುಪತ್ಯ.....ಕೃಷ್ಣಾರ್ಪಣವಾಗಿ ಕೊಟ್ಟು ಇದ್ದೇವೆ.

**ಸ್ವದತ್ತಾದ್ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ।**
**ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥**

**ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ ।**
**ದಾನಾತ್ ಸ್ವರ್ಗಮವಾಪ್ನೋತಿ ಪಾಲನಾತ್ ಅಚ್ಯುತಂ ಪದಂ ॥**

ಇತ್ಯಾದಿ ಪ್ರಮಾಣಾರ್ಥಾನುಸಾರವಾಗಿ ನಮ್ಮ ಸಂಸ್ಥಾನಕ್ಕೆ ಬಂದವರು ನೆಡೆಸಿಕೊಂಡು ಬಂದರೆ ಅವರಿಗೆ ಅನಂತ ಸುಕೃತಫಲ ಉಂಟು. ದಾರು ಇದಕ್ಕೆ ಅನ್ಯಥಾ ಮಾಡುತ್ತಾ ಇದ್ದಾರೋ ತ್ರಿಸ್ಥಲದಲ್ಲಿ ತಂಮ ಮಾತಾಪಿತೃಗಳ...... ಗುರುಗಳ ದ್ರೋಹ ಮಾಡಿದವನು ಎಂದು ಅನುತ್ತರಪೂರ್ವಕವಾಗಿ ತ್ರಿಕರಣಶುದ್ಧವಾಗಿ ನಮ್ಮ ಸರ್ವಜ್ಞಾಚಾರ್ಯರ.....ಪರಂಪರಾಪ್ರಾಪ್ತವಾದ ಈ ಸಂಸ್ಥಾನಕ್ಕೆ ಪುಷ್ಯ(ಣ್ಯ)ವಾಗಿ ಆ ಬಾಡದ ಚಂದ್ರಭಟ್ಟನಿಗೆ ಬರೆದು ಕೊಟ್ಟ ದಾನಶಾಸನಉ. ನಮ್ಮಸಂಸ್ಥಾನ ಪರಂಪರಯಾ ನಿಮ್ಮ ಪುತ್ರಪೌತ್ರ ಪರಂಪರಯಾ ಸುಖದಿಂದ ಅನುಭವಿಸಿಕೊಂಡು ಬಾಹೋದು. ಇದಕ್ಕೆ ರಘುಪತಿ ವೇದವ್ಯಾಸರೇ ಸಾಕ್ಷಿ. ಇತಿನಾರಾಯಣ ಸ್ಮರಣೆ. । ಛ ॥ ಛ ॥ ಶ್ರೀ ಶ್ರೀ ಶ್ರೀ ಶ್ರೀ ॥ । ಛ ॥

**ಮೂ.ಮಠೇ ಪುಸ್ತಕದ ಪುಟ 155 ರಲ್ಲಿ ಮುದ್ರಿಸಿದ ತಾಮ್ರಪತ್ರದ ನಕಲಿನ ಸ್ಕ್ಯಾನ್ ಪ್ರತಿಯನ್ನು ಮುಂದಿನ ಪುಟಗಳಲ್ಲಿ ವಾಚಕರ ಅಧ್ಯಯನದ ಅನುಕೂಲಕ್ಕಾಗಿ ನೀಡಲಾಗಿದೆ.**

# ತಾಮ್ರಪತ್ರದ ಕೃತ್ರಿಮತೆ

ದೀರ್ಘವಾದ ಈ ತಾಮ್ರಪತ್ರದಲ್ಲಿ ದೀರ್ಘವಾದ ವಾಕ್ಯವಿದೆ. ಕಾರಣ, ಯಾರು? ಯಾರಿಗೆ? ಎಲ್ಲಿ? ಯಾವಾಗ? ಇದನ್ನು ನೀಡಿದರು ಎಂಬುದನ್ನು ಸರಿಯಾಗಿ ಅನ್ವಯ ಮಾಡಿ ತಿಳಿದುಕೊಳ್ಳಬೇಕು.

**ಶ್ರೀಮದ್ರಘುನಂದನತೀರ್ಥಶ್ರೀಪಾದವಡೆಯರ ವರಕುಮಾರರಾದ ಶ್ರೀಮತ್ಸುರೇಂದ್ರತೀರ್ಥ ಶ್ರೀಪಾದವಡೆಯರು ....**

**ಸ್ವಸ್ತಿಶ್ರೀಮನ್ನೃಪ ವಿಕ್ರಮಾರ್ಕ ಶಕ ವರ್ಷ 1561 ಶ್ರೀಮಜ್ಜಯಾಭ್ಯುದಯ ಶಾಲಿವಾಹನಶಕ ವರ್ಷ 1426ನೆಯ ರಕ್ತಾಕ್ಷಿನಾಮ ಸಂವತ್ಸರದ ಮಾಘ ಬಹುಳ ಅಮಾವಾಸ್ಯೆಯಲ್ಲಿ ....**

**ಮಾಘ ಬಹುಳ ಅಮಾವಾಸ್ಯ ಸೂರ್ಯೋಪರಾಗ ಪರ್ವಕಾಲ ವಿಶೇಷದಲ್ಲಿ ...**

**ಪ್ರಯಾಗಕ್ಷೇತ್ರದಲ್ಲಿ ....**

**ಆ ಬಾಡದ ಚಂದ್ರಭಟ್ಟನಿಗೆ ಬರೆದು ಕೊಟ್ಟ ದಾನಶಾಸನವಾಗಿದೆ.**

ಇದರ ಮಧ್ಯದಲ್ಲಿ ಯಾವುದಕ್ಕಾಗಿ ಕೊಟ್ಟರು ಇತ್ಯಾದಿ ಘಟನೆಗಳ ವಿವರವಿದೆ. ಮೂ.ಮತೇ ಲೇಖಕರ ವಾಕ್ಯದಲ್ಲಿಯೇ ಇದನ್ನು ತಿಳಿಯುವುದಾದರೆ-

''**ಈ.** ಶ್ರೀ ರಘುನಂದನತೀರ್ಥರ ಆಜ್ಞೆಯಂತೆ ಮುಂದೆ ರಕ್ತಾಕ್ಷಿನಾಮಸಂವತ್ಸರ(ಕ್ರಿ.ಶ. 1504/1505) ಮಾಘಮಾಸ ಕೃಷ್ಣ ಪಕ್ಷ ಅಮಾವಾಸ್ಯೆಯಂದು ಸೂರ್ಯಗ್ರಹಣದ ಮಹಾಪರ್ವಕಾಲದಲ್ಲಿ ಪ್ರಯಾಗಕ್ಷೇತ್ರದ ತ್ರಿವೇಣೀಸಂಗಮದಲ್ಲಿ ಶ್ರೀಸುರೇಂದ್ರತೀರ್ಥರು ಆತ್ರೇಯಸ ಗೋತ್ರದ ಬಾಡದ ರಾಮಚಂದ್ರಭಟ್ಟರಿಗೆ, ಶ್ರೀಮಠದಲ್ಲಿ ರಾಯಸ ಬರೆಯುವ ಉದ್ಯೋಗ ಹಾಗೂ ಇತರ ಸೌಲಭ್ಯಗಳನ್ನು ಅನುಗ್ರಹಿಸಿ ಈ ತಾಮ್ರಪತ್ರ ವನ್ನು ಹೊರಡಿಸಿರುತ್ತಾರೆ.'' (ಮೂ.ಮತೇ ಪುಟ 16)

ಶ್ರೀಮೂಲರಾಮನ ಪ್ರತಿಮೆಯ ಅಪಹರಣದ ಕಥೆಗೆ ಮೂ.ಮತೇ ಪುಸ್ತಕದ ಪುಟ 155, 156ರಲ್ಲಿ ಆಧಾರವಾಗಿ ಛಾಪಿಸಿರುವ ಈ ತಾಮ್ರಪತ್ರವನ್ನು ಸಂಶೋಧನೆಯ ದೃಷ್ಟಿಯಿಂದ ಅಧ್ಯಯನ ನಡೆಸಿದಾಗ ಕಂಡುಬಂದ ಅಂಶಗಳು ಹೀಗಿವೆ-

**I.** ತಾಮ್ರಪತ್ರದಲ್ಲಿ ನಮೂದಿಸಲಾದ ವಿಕ್ರಮಶಕ 1561, ಶಾಲಿವಾಹನ ಶಕ. 1426 ರಕ್ತಾಕ್ಷಿನಾಮ ಸಂವತ್ಸರದ ಮಾಘ ಬಹುಳ ಅಮಾವಾಸ್ಯೆಯಂದು ಭಾರತದೇಶದಲ್ಲಿ ಗ್ರಹಣವೇ ಸಂಭವಿಸಿಲ್ಲ!! ತಾಮ್ರಪತ್ರದಲ್ಲಿರುವ ವಿಕ್ರಮಶಕ 1561, ಶಾಲಿವಾಹನ ಶಕ. 1426ಕ್ಕೆ ಸರಿ ಹೊಂದುವ ಕ್ರಿಸ್ತ ಶಕೆಗಳು–

ಅ. ಶ್ರೀ ಸ್ವಾಮಿ ಕಣ್ಣು ಪಿಳ್ಳೈ ಅವರ Indian Chronology ಪ್ರಕಾರ ಕ್ರಿ.ಶ. 1504/1505

ಆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಜಂತ್ರೀಪ್ರಕಾರ ಕ್ರಿ.ಶ. 1504/1505 ರಕ್ತಾಕ್ಷಿಸಂವತ್ಸರ (ಈ ಪುಸ್ತಕದ ನಕಲನ್ನು ಅನುಬಂಧದಲ್ಲಿ ನೀಡಿದ್ದೇವೆ.)

ಇ. ರಾಬರ್ಟ್ ಸ್ವೆಲ್ ಅವರ The Siddhantas and The Indian Calendar ಪ್ರಕಾರ ಕ್ರಿ.ಶ. 1503/1504 (ರುಧಿರೋದ್ಗಾರಿ ಸಂವತ್ಸರ)

ಈ. ರಾಬರ್ಟ್ ಸ್ವೆಲ್ ಹಾಗೂ ಶಂಕರ ಬಾಲಕೃಷ್ಣದೀಕ್ಷಿತ ಅವರ The Indian Calendar ಪ್ರಕಾರ ಕ್ರಿ.ಶ. 1503/1504 (ರುಧಿರೋದ್ಗಾರಿ ಸಂವತ್ಸರ)

ತಾಮ್ರಪತ್ರದಲ್ಲಿ ಸ್ಪಷ್ಟವಾಗಿ ರಕ್ತಾಕ್ಷಿನಾಮ ಸಂವತ್ಸರ ಎಂದು ನಮೂದಿಸಿದ್ದರಿಂದ ಮೇಲಿನ ಎಲ್ಲ ಪಟ್ಟಿಗಳ ಪ್ರಕಾರವೂ ರಕ್ತಾಕ್ಷಿನಾಮ ಸಂವತ್ಸರವು ಕ್ರಿ.ಶ. 1504/1505 ಕ್ಕೆ ಸರಿಹೊಂದುತ್ತದೆ. ಕಾರಣ ಆ ಇಸ್ವಿಯನ್ನೇ ಇಲ್ಲಿ ಅಧ್ಯಯನಕ್ಕಾಗಿ ಉಪಯೋಗಿಸುತ್ತಿದ್ದೇವೆ.

ಅಧಿಕೃತವಾದ, ಸರ್ವಾಂಗೀಕೃತವಾದ, ಗ್ರಹಣದ ಮಾಹಿತಿಯನ್ನು ಒದಗಿಸುವ ಅನೇಕ ಅಂತರ್ಜಾಲ ವಿಭಾಗಗಳಿಂದ ಹಾಗೂ ಸಂಸ್ಥೆಗಳಿಂದ ಪಡೆದ ಮಾಹಿತಿಯ ಪ್ರಕಾರ ಈ ತಾಮ್ರಪತ್ರದಲ್ಲಿ ದಾಖಲಿಸಿರುವಂತೆ ಶಾಲಿವಾಹನ ಶಕ. 1426 (ಕ್ರಿ.ಶ. 1504/1505) ರಕ್ತಾಕ್ಷಿನಾಮಸಂವತ್ಸರ ಮಾಘ ಬಹುಳ ಅಮಾವಾಸ್ಯೆಯಂದು ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಯೇ ಇಲ್ಲ.

**ಸೂಚನೆ:** ಮೇಲೆ ತಿಳಿಸಿದ ಕ್ರಮ 'ಇ, ಈ' ಕೃತಿಗಳ ಪ್ರಕಾರ ಕ್ರಿ.ಶ 1503/1504 ಎಂದು ಪರಿಗಣಿಸಿದರೂ ಬಾಧಕವಿಲ್ಲ. ಆ ವರ್ಷದಲ್ಲಿಯೂ ಭಾರತದಲ್ಲಿ ಸೂರ್ಯಗ್ರಹಣವಾಗಿಲ್ಲ.

ಈ ಗ್ರಹಣದ ಮಾಹಿತಿಯನ್ನು ಕೆಳಕಂಡ ಅನೇಕ ವೆಬ್‌ಸೈಟ್, ಸಾಫ್ಟ್‌ವೇರ್ ಹಾಗೂ ಸಂಸ್ಥೆಗಳಿಂದ ಪಡೆಯಲಾಗಿದೆ.

**ಜಗತ್ಪ್ರಸಿದ್ಧವಾದ**

A. NASA Eclipse website, USA

B. HM Nautical Almanac Office (HMNAO), – UK, Hydrographic Office

C. Occult v 4.0.9, Occultation Prediction Software – by David Herald

D. ಜವಹಾರಲಾಲ್ ನೆಹರು ತಾರಾಲಯ, ಬೆಂಗಳೂರು.

E. ಭಾರತೀಯ ವಿದ್ಯಾಭವನದ Gandhi Center Of Science And Human Values ಜವಹಾರಲಾಲ್ ನೆಹರು ತಾರಾಲಯ ಸಂಸ್ಥೆಯ ವಿಜ್ಞಾನಿಯಾದ ಡಾ|| ಶೈಲಜಾ ಇವರನ್ನು ಸಂಪರ್ಕಿಸಿ ಈ ವಿಷಯದ ಬಗ್ಗೆ ಅವರ ಅಭಿಪ್ರಾಯವನ್ನು ಕೇಳಿದಾಗ ಅವರೂ ಸಹ Occult v 4.0.9, ತಂತ್ರಾಂಶವು ವಿಶ್ವಾಸಾರ್ಹವಾದದ್ದು. ಅದರ ಪ್ರಕಾರ ಶಾ.ಶಕ. 1426 (ಕ್ರಿ.ಶ.1504/1505) ರಕ್ತಾಕ್ಷಿನಾಮಸಂವತ್ಸರ ಮಾಘ ಬಹುಳ ಅಮಾವಾಸ್ಯೆಯಂದು ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲ ಎಂದು ಅನುಮೋದಿಸಿದರು. ಅಷ್ಟೇ ಅಲ್ಲದೇ ಗ್ರಹಣಗಳ ವಿಚಾರದಲ್ಲಿ ನಿಖರವಾಗಿ ನಿರ್ಣಯವನ್ನು ಹೇಳಬಲ್ಲ ಡಾ|| ಬಾಲಚಂದ್ರರಾವ್ ಇವರನ್ನು ಸಂಪರ್ಕಿಸಿಲು ತಿಳಿಸಿದರು.

F. ಗ್ರಹಣಗಳ ವಿಚಾರದಲ್ಲಿ ಪಾಶ್ಚಿಮಾತ್ಯ ಹಾಗೂ ಭಾರತೀಯ ಪದ್ಧತಿಯಿಂದ ವಿಶೇಷವಾಗಿ ಅಧ್ಯಯನ ನಡೆಸಿ ಗ್ರಹಣಗಳ ಬಗ್ಗೆ ಅನೇಕ ಸಂಶೋಧಿತ ಪುಸ್ತಕಗಳನ್ನು ಹೊರತಂದ ಪ್ರತಿಷ್ಠಿತ ಭಾರತೀಯ ವಿದ್ಯಾಭವನದ Gandhi Center of Science and Human Values ಇದರ ನಿರ್ದೇಶಕರಾದ ಡಾ|| ಬಾಲಚಂದ್ರರಾವ್ ಅವರ ನಿರ್ಣಯದಂತೆ ಶಾ.ಶಕ. 1426 (ಕ್ರಿ.ಶ. 1504/1505) ರಕ್ತಾಕ್ಷಿನಾಮ ಸಂವತ್ಸರ ಮಾಘ ಬಹುಳ ಅಮಾವಾಸ್ಯೆಯಂದು ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲ.

G. ಪ್ರಸಿದ್ಧಪಂಚಾಂಗಕರ್ತೃಗಳನ್ನು ವಿಚಾರಿಸಿದಾಗಲೂ ಶಾಲಿವಾಹನ ಶಕ. 1426 (ಕ್ರಿ.ಶ. 1504/1505) ರಕ್ತಾಕ್ಷಿನಾಮಸಂವತ್ಸರ ಮಾಘ ಬಹುಳ ಅಮಾವಾಸ್ಯೆಯಂದು ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಯೇ ಇಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಹಿಂದೆ ಪ್ರತಿಪಾದಿಸಿರುವ ವಿಷಯುಗಳಿಗೆ ಪೂರಕವಾಗಿರುವ ಮಾಹಿತಿ ಆಧಾರಗಳನ್ನು ಇಲ್ಲಿ ನೀಡಲಾಗಿದೆ.






NATIONAL AERONAUTICS AND SPACE ADMINISTRATION
EXPLORE. DISCOVER. UNDERSTAND.

**Solar Eclipse Explorer**

**ASIA & ASIA MINOR**

## Section 3: Eclipse Predictions

# Solar Eclipses visible from Allahabad

Latitude: 25° 26' 08" N
Longitude: 81° 50' 46" E
Altitude: 94.8m
Time Zone: 05:30 E

| Calendar Date | Eclipse Type | Partial Eclipse Begins | Sun Alt | A or T Eclipse Begins | Maximum Eclipse | Sun Alt | Sun Azi | A or T Eclipse Ends | Partial Eclipse Ends | Sun Alt | Eclipse Mag. | Eclipse Obs. | A or T Eclipse Duration |
|---|---|---|---|---|---|---|---|---|---|---|---|---|---|
| 1501-Oct-12 | P | 12:43:35 | 51 | - | 13:18:03 | 48 | 214 | - | 13:51:51 | 43 | 0.063 | 0.018 | - |
| 1502-Oct-01 | P | 12:51:54 | 55 | - | 14:29:36 | 40 | 236 | - | 15:57:06 | 22 | 0.567 | 0.455 | - |
| 1507-Jan-13 | P | 12:28:27 | 45 | - | 14:03:15 | 38 | 213 | - | 15:25:35 | 25 | 0.606 | 0.503 | - |
| 1514-Aug-20 | P | 07:26:22 | 23 | - | 08:31:46 | 37 | 098 | - | 09:45:13 | 54 | 0.676 | 0.605 | - |
| 1517-Jun-19 | P | 08:51:27 | 46 | - | 10:28:36 | 68 | 090 | - | 12:20:58 | 86 | 0.708 | 0.623 | - |
| 1521-Apr-07 | P | 10:45:32 | 66 | - | 12:06:11 | 75 | 184 | - | 13:28:44 | 65 | 0.998 | 0.999 | - |
| 1527-May-30 | P | 05:12(r) | 0(r) | - | 05:56:56 | 09 | 069 | - | 06:46:22 | 19 | 0.321 | 0.205 | - |
| 1528-May-18 | P | 13:27:15 | 69 | - | 14:57:27 | 49 | 274 | - | 16:14:58 | 32 | 0.734 | 0.666 | - |
| 1528-Nov-12 | P | 06:27(r) | 0(r) | - | 07:03:46 | 07 | 116 | - | 08:19:08 | 22 | 0.741 | 0.659 | - |
| 1529-Nov-01 | P | 08:34:30 | 27 | - | 09:31:28 | 36 | 139 | - | 10:34:08 | 44 | 0.173 | 0.082 | - |
| 1540-Apr-07 | P | 09:05:49 | 46 | - | 09:42:13 | 54 | 108 | - | 10:20:18 | 62 | 0.124 | 0.052 | - |

A time followed by "(r)" means the event is already in progress at sunrise, while a time followed by "(s)" means the event is still in progress at sunset. In such cases, the times and circumstances given are for sunrise or sunset, respectively.

ಜಗತ್ಪ್ರಸಿದ್ಧವಾದ ನಾಸಾ (NASA) ಗ್ರಹಣಮಾಹಿತಿಯ ತಂತ್ರಾಂಶದ ಮೇಲಿನ ಪಟ್ಟಿಯ ಪ್ರಕಾರ ಭಾರತದ ಪ್ರಯಾಗದಲ್ಲಿ ಕ್ರಿ.ಶ. 1502ರಲ್ಲಿ ಸೂರ್ಯಗ್ರಹಣ ಸಂಭವಿಸಿದ ನಂತರ 1507 ರವರೆಗೆ ಮಧ್ಯದ ಯಾವ ವರ್ಷಗಳಲ್ಲೂ ಸೂರ್ಯಗ್ರಹಣ ಸಂಭವಿಸಿಲ್ಲ ಎನ್ನುವುದನ್ನು ಕಾಣಬಹುದು.







## Solar Eclipses visible from Bombay, INDIA

Latitude: 18° 58' 00" N  Longitude: 72° 50' 00" E  Altitude: 8.2m  Time Zone: 05:30 E

| Calendar Date | Eclipse Type | Partial Eclipse Begins | Sun Alt | A or T Eclipse Begins | Maximum Eclipse | Sun Alt | Sun Azi | A or T Eclipse Ends | Partial Eclipse Ends | Sun Alt | Eclipse Mag. | Eclipse Obs. | A or T Eclipse Duration |
|---|---|---|---|---|---|---|---|---|---|---|---|---|---|
| 1502-Oct-01 | P | 12:36:51 | 64 | - | 14:25:35 | 51 | 232 | - | 16:05:08 | 30 | 0.788 | 0.71 | - |
| 1507-Jan-13 | P | 11:54:49 | 49 | - | 13:38:32 | 50 | 197 | - | 15:09:59 | 39 | 0.577 | 0.47 | - |
| 1513-Mar-07 | P | 18:20:41 | 06 | - | 18:46(s) | 0(s) | 269 | - | 18:46(s) | 0(s) | 0.294(s) | 0.182(s) | - |
| 1514-Aug-20 | P | 07:25:30 | 14 | - | 08:19:38 | 27 | 089 | - | 09:20:05 | 41 | 0.456 | 0.348 | - |

## Solar Eclipses visible from Madras, INDIA

Latitude: 13° 05' 00" N  Longitude: 80° 17' 00" E  Altitude: 15.5m  Time Zone: 05:30 E

| Calendar Date | Eclipse Type | Partial Eclipse Begins | Sun Alt | A or T Eclipse Begins | Maximum Eclipse | Sun Alt | Sun Azi | A or T Eclipse Ends | Partial Eclipse Ends | Sun Alt | Eclipse Mag. | Eclipse Obs. | A or T Eclipse Duration |
|---|---|---|---|---|---|---|---|---|---|---|---|---|---|
| 1502-Oct-01 | P | 13:09:11 | 63 | - | 14:55:25 | 41 | 249 | - | 16:27:13 | 20 | 0.785 | 0.707 | - |
| 1507-Jan-13 | P | 11:58:16 | 57 | - | 13:47:34 | 51 | 213 | - | 15:20:53 | 35 | 0.842 | 0.784 | - |
| 1507-Jul-10 | P | 06:17:21 | 05 | - | 06:55:03 | 14 | 071 | - | 07:35:40 | 23 | 0.186 | 0.093 | - |
| 1514-Aug-20 | P | 07:42:26 | 25 | - | 08:30:20 | 36 | 088 | - | 09:23:01 | 49 | 0.258 | 0.154 | - |

## Solar Eclipses visible from Calcutta, INDIA

Latitude: 22° 32' 00" N  Longitude: 88° 22' 00" E  Altitude: 6.4m  Time Zone: 05:30 E

| Calendar Date | Eclipse Type | Partial Eclipse Begins | Sun Alt | A or T Eclipse Begins | Maximum Eclipse | Sun Alt | Sun Azi | A or T Eclipse Ends | Partial Eclipse Ends | Sun Alt | Eclipse Mag. | Eclipse Obs. | A or T Eclipse Duration |
|---|---|---|---|---|---|---|---|---|---|---|---|---|---|
| 1501-Oct-12 | P | 12:49:40 | 50 | - | 13:33:38 | 43 | 228 | - | 14:15:54 | 36 | 0.108 | 0.042 | - |
| 1502-Oct-01 | P | 13:16:15 | 50 | - | 14:49:23 | 32 | 246 | - | 16:10:16 | 14 | 0.545 | 0.43 | - |
| 1507-Jan-13 | P | 12:34:56 | 46 | - | 14:11:21 | 35 | 222 | - | 15:33:52 | 21 | 0.786 | 0.714 | - |
| 1514-Aug-20 | P | 07:34:40 | 31 | - | 08:42:45 | 46 | 100 | - | 09:58:46 | 63 | 0.597 | 0.51 | - |

## Solar Eclipses visible from New Delhi, INDIA

Latitude: 28° 36' 00" N
Longitude: 77° 12' 00" E
Altitude: 211.8m
Time Zone: 05:30 E

| Calendar Date | Eclipse Type | Partial Eclipse Begins | Sun Alt | A or T Eclipse Begins | Maximum Eclipse | Sun Alt | Sun Azi | A or T Eclipse Ends | Partial Eclipse Ends | Sun Alt | Eclipse Mag. | Eclipse Obs. | A or T Eclipse Duration |
|---|---|---|---|---|---|---|---|---|---|---|---|---|---|
| 1501-Oct-12 | P | 12:37:33 | 50 | - | 13:04:07 | 48 | 202 | - | 13:30:29 | 46 | 0.037 | 0.008 | - |
| 1502-Oct-01 | P | 12:33:31 | 54 | - | 14:12:18 | 44 | 225 | - | 15:43:45 | 27 | 0.584 | 0.474 | - |
| 1507-Jan-13 | P | 12:28:11 | 42 | - | 13:56:49 | 38 | 205 | - | 15:15:25 | 28 | 0.462 | 0.344 | - |
| 1513-Mar-07 | P | 18:10:22 | 04 | - | 18:28(s) | 0(s) | 268 | - | 18:28(s) | 0(s) | 0.274(s) | 0.164(s) | - |
| 1514-Aug-20 | P | 07:22:22 | 18 | - | 08:26:31 | 32 | 097 | - | 09:38:27 | 47 | 0.777 | 0.73 | - |

ಜಗತ್ಪ್ರಸಿದ್ಧವಾದ ನಾಸಾ (NASA) ಗ್ರಹಣಮಾಹಿತಿಯ ತಂತ್ರಾಂಶದ ಮೇಲಿನ ಪಟ್ಟಿಯ ಪ್ರಕಾರ ಭಾರತದ ಯಾವ ಪ್ರದೇಶಗಳಲ್ಲಿಯೂ ಕ್ರಿ.ಶ. 1502ರಲ್ಲಿ ಸೂರ್ಯಗ್ರಹಣ ಸಂಭವಿಸಿದ ನಂತರ 1507 ರವರೆಗೆ ಮಧ್ಯದ ಯಾವ ವರ್ಷಗಳಲ್ಲೂ ಸೂರ್ಯಗ್ರಹಣ ಸಂಭವಿಸಿಲ್ಲ ಎನ್ನುವುದನ್ನು ಗಮನಿಸಬಹುದು.

**HM Nautical Almanac Office** **Websurf**

A revamped version of Websurf is now available. Try new Websurf 2.0 for a better user experience!

**Welcome to Eclipses Online** 

Eclipses Online is HMNAO's canon of eclipses which contains a wealth of information on solar and lunar eclipses past, present and future.

http://astro.ukho.gov.uk/eclipse/

Each diagram has up to three types of shading. In those areas where no shading is present, the eclipse is not visible.

**I. - Partial Eclipse of the Sun** **1505 February 04**



ΔT = +267ˢ.7

 Globe centred on E 135°.1 and S 61°.8

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 4 11.1 | E 0 23.1 | S 65 10.5 |
| Beginning of northern limit of penumbra | 4 37.6 | E 5 29.3 | S 53 58.5 |
| Greatest eclipse (magnitude = 0.8257) | 6 24.6 | W156 23.3 | S 61 47.2 |
| End of northern limit of penumbra | 8 12.0 | E 152 01.7 | S 5 16.9 |
| Eclipse ends; last contact with Earth | 8 38.5 | E 148 26.4 | S 17 39.5 |

ವಿಕ್ರಮ ಶಕೆ 1561, ಶಾಲಿವಾಹನ ಶಕೆ 1426 ರಕ್ತಾಕ್ಷಿ ನಾಮ ಸಂವತ್ಸರ ಮಾಘ ಬಹುಳ ಅಮಾವಾಸ್ಯೆ ಇದಕ್ಕೆ ಸರಿ ಹೊಂದುವ ಕ್ರಿ.ಶ. 1505 ಫೆಬ್ರವರಿ 4 ಈ ದಿನದಂದು ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲದಿರುವುದನ್ನು ಈ ನಕ್ಷೆಯಲ್ಲಿ ಕಾಣಬಹುದಾಗಿದೆ. ನಕ್ಷೆಯಲ್ಲಿ ಕಪ್ಪು ನೆರಳುಳ್ಳ ಭೂಭಾಗದಲ್ಲಿ ಮಾತ್ರ ಗ್ರಹಣ ಸಂಭವಿಸಿರುತ್ತದೆ. ಅದರಲ್ಲಿ ಭಾರತ ಇಲ್ಲದಿರುವುದು ಗಮನಾರ್ಹ. ಈ ಮಾಹಿತಿಯನ್ನು HM Nautical Almanac Office (HMNAO), – UK Hydrographic Office ಇದರ ಅಧಿಕೃತ ವೆಬ್‌ಸೈಟ್‌ನಿಂದ ಪಡೆಯಲಾಗಿದೆ.

## II. - Total Eclipse of the Sun — 1503 March 27-28



©HM Nautical Almanac Office — ΔT = +270ˢ.5 — Globe centred on W 161°.0 and N 16°.7

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 19 48.6 | E 155 28.6 | S 17 27.6 |
| Beginning of southern limit of penumbra | 20 41.3 | E 146 01.9 | S 42 20.2 |
| Beginning of southern limit of umbra | 20 44.8 | E 140 49.0 | S 12 12.9 |
| Beginning of centre line; central eclipse begins | 20 45.2 | E 140 37.6 | S 11 29.2 |
| Beginning of northern limit of umbra | 20 45.6 | E 140 26.0 | S 10 45.4 |
| Beginning of northern limit of penumbra | 21 26.9 | E 125 42.3 | N 27 11.9 |
| Central eclipse at local apparent noon | 22 39.9 | W 159 20.1 | N 25 40.2 |
| End of northern limit of penumbra | 23 20.1 | W 32 30.6 | N 81 27.7 |
| End of northern limit of umbra | 0 01.8 | W 83 18.6 | N 45 49.7 |
| End of centre line; central eclipse ends | 0 02.2 | W 83 35.3 | N 45 05.8 |
| End of southern limit of umbra | 0 02.7 | W 83 51.5 | N 44 22.1 |
| End of southern limit of penumbra | 0 06.5 | W 89 22.7 | N 14 17.0 |
| Eclipse ends; last contact with Earth | 0 58.9 | W 98 56.3 | N 39 09.9 |

## III. - Total Eclipse of the Sun — 1505 July 30



©HM Nautical Almanac Office — ΔT = +266ˢ.9 — Globe centred on W 99°.4 and N 58°.3

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 18 43.0 | E 144 06.8 | N 57 02.5 |
| Beginning of southern limit of penumbra | 19 07.8 | E 147 38.4 | N 44 50.3 |
| Beginning of southern limit of umbra | 20 07.9 | E 57 56.0 | N 73 59.0 |
| Beginning of centre line; central eclipse begins | 20 11.9 | E 48 34.0 | N 73 46.3 |
| Beginning of northern limit of umbra | 20 16.4 | E 38 27.9 | N 73 09.3 |
| End of northern limit of umbra | 21 18.9 | W 30 46.9 | N 46 47.4 |
| End of centre line; central eclipse ends | 21 23.4 | W 33 23.3 | N 44 22.6 |
| End of southern limit of umbra | 21 27.4 | W 35 35.7 | N 42 12.9 |
| End of southern limit of penumbra | 22 27.3 | W 65 23.5 | N 0 58.1 |
| Eclipse ends; last contact with Earth | 22 52.1 | W 67 43.9 | N 14 07.9 |

ಕ್ರಿ.ಶ. 1505 ಫೆಬ್ರವರಿ 4, ಇದರ ಹಿಂದು-ಮುಂದಿನ ವರ್ಷಗಳಾದ ಕ್ರಿ.ಶ. 1503 ಹಾಗು ಕ್ರಿ.ಶ. 1505 ಈ ವರ್ಷಗಳಲ್ಲಿಯೂ ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲದಿರುವುದನ್ನು ಕಾಣಬಹುದಾಗಿದೆ.

**II. - Partial Eclipse of the Sun** **1504 M**



©HM Nautical Almanac Office — Globe centred on W 61°0 — Δ

| Circumstances | Time (UT) h m | Longitude ° ′ | Latit ° |
|---|---|---|---|
| Eclipse begins; first contact with Earth | 11 22.7 | W 79 39.6 | N13 |
| Beginning of southern limit of penumbra | 11 51.2 | W 86 18.1 | N 0 |
| Greatest eclipse (magnitude = 0.9353) | 13 25.6 | W113 48.5 | N61 |
| End of southern limit of penumbra | 14 59.7 | E 50 05.8 | N58 |
| Eclipse ends; last contact with Earth | 15 28.1 | E 45 49.2 | N71 |

**IV. - Annular Eclipse of the Sun** **1504 September 08**



©HM Nautical Almanac Office — ΔT = +268ˢ3 — Globe centred on W 82°6 and S 46°3

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 12 53.3 | W104 30.4 | S 8 44.3 |
| Beginning of northern limit of penumbra | 13 27.9 | W113 39.8 | N 5 34.2 |
| Beginning of northern limit of umbra | 14 32.5 | W127 49.7 | S 42 20.5 |
| Beginning of centre line; central eclipse begins | 14 33.6 | W128 03.5 | S 42 55.8 |
| Beginning of southern limit of umbra | 14 34.7 | W128 17.7 | S 43 32.3 |
| End of southern limit of umbra | 15 40.1 | W137 14.4 | S 78 05.0 |
| End of centre line; central eclipse ends | 15 41.3 | W136 59.8 | S 78 42.5 |
| End of northern limit of umbra | 15 42.4 | W136 42.2 | S 79 18.7 |
| End of northern limit of penumbra | 16 47.3 | E 14 06.4 | S 52 45.8 |
| Eclipse ends; last contact with Earth | 17 21.9 | E 3 29.0 | S 66 56.6 |

ಕ್ರಿ.ಶ. 1505, ಫೆಬ್ರವರಿ 4 ಇದರ ಹಿಂದಿನ ವರ್ಷವಾದ ಕ್ರಿ.ಶ. 1504ರಲ್ಲಿಯೂ ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲದಿರುವುದನ್ನು ಕಾಣಬಹುದಾಗಿದೆ.

**I. - Annular Eclipse of the Sun** **1506 Januar**



©HM Nautical Almanac Office — Globe centred on E 102°1 and — ΔT = +

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 2 52.5 | E 38 09.4 | S 35 24.7 |
| Beginning of northern limit of penumbra | 3 45.9 | E 33 28.3 | S 12 12.7 |
| Beginning of northern limit of umbra | 4 02.8 | E 17 10.2 | S 42 03.7 |
| Beginning of centre line; central eclipse begins | 4 04.6 | E 15 48.5 | S 43 37.3 |
| Beginning of southern limit of umbra | 4 06.5 | E 14 21.7 | S 45 11.7 |
| Beginning of southern limit of penumbra | 5 29.1 | W108 36.8 | S 70 47.2 |
| Central eclipse at local apparent noon | 5 34.0 | E 100 11.1 | S 42 31.6 |
| End of southern limit of penumbra | 6 18.7 | W158 55.2 | S 51 14.6 |
| End of southern limit of umbra | 7 40.9 | E 159 14.3 | S 2 34.5 |
| End of centre line; central eclipse ends | 7 42.8 | E 158 16.1 | S 0 55.0 |
| End of northern limit of umbra | 7 44.6 | E 157 19.7 | N 0 43.0 |
| End of northern limit of penumbra | 8 01.2 | E 143 00.8 | N30 53.7 |
| Eclipse ends; last contact with Earth | 8 54.9 | E 137 40.7 | N 7 34.7 |

**III. - Total Eclipse of the Sun** **1506 July 20**



©HM Nautical Almanac Office — Globe centred on W 20°5 and N 27°0 — ΔT = +265ˢ4

| Circumstances | Time (UT) h m | Longitude ° ′ | Latitude ° ′ |
|---|---|---|---|
| Eclipse begins; first contact with Earth | 11 03.9 | W 84 22.1 | N26 26.5 |
| Beginning of southern limit of penumbra | 11 55.3 | W 87 57.4 | N 1 25.3 |
| Beginning of southern limit of umbra | 12 00.2 | W 99 55.9 | N29 49.5 |
| Beginning of centre line; central eclipse begins | 12 00.6 | W100 19.9 | N30 27.4 |
| Beginning of northern limit of umbra | 12 01.0 | W100 44.3 | N31 05.3 |
| Beginning of northern limit of penumbra | 12 38.0 | W137 13.4 | N61 38.2 |
| Central eclipse at local apparent noon | 13 34.5 | W 22 15.1 | N31 57.7 |
| End of northern limit of penumbra | 14 47.3 | E 59 18.5 | N26 32.7 |
| End of northern limit of umbra | 15 24.0 | E 38 00.9 | S 6 50.4 |
| End of centre line; central eclipse ends | 15 24.5 | E 37 40.5 | S 7 30.0 |
| End of southern limit of umbra | 15 24.9 | E 37 20.4 | S 8 09.5 |
| End of southern limit of penumbra | 15 29.4 | E 24 30.5 | S 36 21.9 |
| Eclipse ends; last contact with Earth | 16 21.1 | E 22 06.2 | S 11 34.8 |

ಕ್ರಿ.ಶ. 1505, ಫೆಬ್ರವರಿ 4 ಇದರ ಮುಂದಿನ ವರ್ಷವಾದ ಕ್ರಿ.ಶ. 1506ರಲ್ಲಿಯೂ ಭಾರತದೇಶದಲ್ಲಿ ಸೂರ್ಯಗ್ರಹಣವು ಸಂಭವಿಸಿಲ್ಲದಿರುವುದನ್ನು ಕಾಣಬಹುದಾಗಿದೆ.

**Bharatiya Vidya Bhavan's**
**GANDHI CENTRE OF SCIENCE AND HUMAN VALUES**
**# 43/1, Race Course Road, Bangalore-560 001, INDIA.**

**Dr. S.Balachandra Rao,** *M.Sc., Ph.D.*
**Hon. Director,**
**Hon. Professor, NIAS.,**
**Formerly Principal, Professor of Mathematics,**
**National College.** *Basavanagudi, B'lore-04.*

**Res: # 2388, 'JNANA DEEP', 13th Main,**
**' A ' Block, Subramanyanagar Main Road,**
**Rajajinagar II Stage, BANGALORE**
**PIN-560 010. INDIA. - 22287373(Fax)**
**Ph.(080)23577542(Res)/22266525(O).**

ದಿ: 09-12-2010

ಗೆ:

**ಶ್ರೀ ವಿಶ್ವಮಧ್ವಮಹಾಪರಿಷತ್ (ರಿಜಿಸ್ಟರ್ಡ್) ಉತ್ತರಾದಿಮಠ,**
# 11, ಶಂಕರಪುರಂ, ಬಸವನಗುಡಿ, ಬೆಂಗಳೂರು-560004

ನಮಸ್ಕಾರ, ತಾವು ವಿಕ್ರಮ ಶಕ 1561 ಅಂದರೆ ಶಾಲಿವಾಹನ ಶಕ ವರ್ಷ 1426 ಮಾಘ ಮಾಸದ ಅಮಾವಾಸ್ಯೆಯಂದು ಸೂರ್ಯಗ್ರಹಣ ಘಟಿಸಿರುವ ಸಾಧ್ಯತೆಯ ಬಗ್ಗೆ ಮಾಹಿತಿಯನ್ನು ಕೇಳಿದ್ದೀರಿ.

ಲಭ್ಯವಿರುವ ಹಾಗೂ ವಿಶ್ವಾಸಾರ್ಹ ತಂತ್ರಾಂಶ(software) OCCULT-4 ಹಾಗೂ ನಮ್ಮ ಭಾರತೀಯ ಸಿದ್ಧಾಂತರೀತ್ಯಾ ನಾನು ಪರಿಶೀಲಿಸಲಾಗಿ ಆ ದಿನ (1505 ಫೆಬ್ರವರಿ 04) ಸೂರ್ಯಗ್ರಹಣವು ಭಾರತದಲ್ಲಿ ಎಲ್ಲೂ ದೃಶ್ಯವಾಗಿಲ್ಲ. ಅರ್ಥಾತ್ ಭಾರತದ ಯಾವ ಭಾಗದಲ್ಲೂ – ವಿಶೇಷವಾಗಿ ಪ್ರಯಾಗ ಕ್ಷೇತ್ರದಲ್ಲಿ – ಸೂರ್ಯ ಗ್ರಹಣವು ಸಂಭವಿಸಿಲ್ಲ.

ವಂದನೆಗಳೊಂದಿಗೆ,

ಭವದೀಯೋ

ಬಾಲಚಂದ್ರ ರಾವ್

**ಎಸ್. ಬಾಲಚಂದ್ರರಾವ್**

ಬೆಂಗಳೂರಿನ ಭಾರತೀಯ ವಿದ್ಯಾಭವನದ ಅಂಗಸಂಸ್ಥೆಯಾದ Gandhi Centre of Science and Human Values ಇದರ ನಿರ್ದೇಶಕರಾದ ಡಾ|| ಎಸ್. ಬಾಲಚಂದ್ರರಾವ್ ಇವರ ಪತ್ರ.

ಕೃಪೆ: ವಿಶ್ವಮಧ್ವಮಹಾಪರಿಷತ್, ಬೆಂಗಳೂರು.

Jagannatha Hora - Untitled

File Edit Modes View Preferences Websites MoreMenus Help

Chakras | Basics | Strengths | Dasas | Transits | Tajaka | Tithi Pravesha | Mundane | Miscellany



















| Body | Longitude | Nakshat |
|---|---|---|
| Lagna | 28 Kumbh 12' 11.49" | PBha |
| Surya - PiK | 9 Kumbh 43' 59.78" | Sata |
| Chandra - GK | 8 Kumbh 00' 46.26" | Sata |
| Mangala - AK | 28 Makar 13' 04.10" | Dhan |
| Budha - MK | 10 Kumbh 02' 40.75" | Sata |
| Guru (R) - AmK | 25 Kark 10' 22.16" | Asre |
| Sukra - DK | 5 Meen 28' 50.76" | UBha |
| Sani (R) - BK | 11 Kark 23' 00.14" | Push |
| Rahu - PK | 21 Kumbh 28' 35.63" | PBha |
| Ketu | 21 Simh 28' 35.63" | PPha |
| Maandi | 6 Mith 55' 22.63" | Ardr |
| Gulika | 26 Vrish 43' 12.05" | Mrig |
| Bhava Lagna | 23 Kumbh 22' 37.65" | PBha |
| Hora Lagna | 7 Meen 03' 33.41" | UBha |

**Natal Chart:**

| | |
|---|---|
| **Date:** | February 4, 1505 |
| **Time:** | 8:00:42 am |
| **Time Zone:** | 5:30:00 (East of GMT) |
| **Place:** | 77 E 13' 00", 28 N 40' 00"<br>Delhi, India |
| **Lunar Yr-Mo:** | Raktaaksha - Magha |
| **Tithi:** | Amavasya (Ra) [Chitra]<br>(14.34% left) |
| **Vedic Weekday:** | Tuesday (Ma) |
| **Nakshatra:** | Satabhishak (Ra)<br>(89.90% left) |

Key Info | Houses | Amsa rulers | KP

ಪಂಚಾಂಗದ ಮಾಹಿತಿಯನ್ನು ಒದಗಿಸುವ ಜಗನ್ನಾಥ ಹೋರಾ ಎಂಬ ತಂತ್ರಾಂಶದ ಸಹಾಯದಿಂದ ಪಡೆದ ಮಾಹಿತಿಯ ಪ್ರಕಾರ ಕ್ರಿ.ಶ. 1505ರ ಫೆಬ್ರವರಿ ತಿಂಗಳ ದಿನಾಂಕ 4ಕ್ಕೆ ರಕ್ತಾಕ್ಷಿ ಸಂವತ್ಸರದ ಮಾಘ ಅಮಾವಾಸ್ಯೆ ಸರಿಹೊಂದುತ್ತದೆ. ಕಾರಣ, ಕ್ರಿ.ಶ. 1505 ಫೆಬ್ರವರಿ 4, ಈ ದಿನಾಂಕವನ್ನು ಆಧರಿಸಿ ಆ ದಿನ ಗ್ರಹಣವಾಗಿಲ್ಲ ಎಂದು ನಾವು ವಿಮರ್ಶೆ ಮಾಡಿದ್ದು ಸೂಕ್ತವಾಗಿದೆ.



(**ವಿ.ಸೂ.: ವಾಚಕರು** ಇದನ್ನು ಪರೀಕ್ಷಿಸುವುದಾದಲ್ಲಿ ಕ್ರಿ.ಶ. 1505ರ ಮಾಹಿತಿಯನ್ನು ಪಡೆಯುವಾಗ ಕ್ರಿ.ಶ. 1582ಕ್ಕಿಂತಲೂ ಪೂರ್ವದಲ್ಲಿ ಚಾಲತಿಯಲ್ಲಿದ್ದ ಜೂಲಿಯನ್ ಪದ್ಧತಿಯನ್ನು ಅನುಸರಿಸಲು ವಿನಂತಿ.

# THE SIDDHANTAS AND THE INDIAN CALENDAR

BEING A CONTINUATION OF THE AUTHOR'S

**"INDIAN CHRONOGRAPHY"**

WITH AN ARTICLE BY THE LATE DR. J.F. FLEET
ON THE MEAN PLACE OF
THE PLANET SATURN

**ROBERT SEWELL**



**ASIAN EDUCATIONAL SERVICES**
**NEW DELHI ★ MADRAS ★ 1989**

ನಮ್ಮ ಈ ಪುಸ್ತಕದಲ್ಲಿ ಕಾಲಗಳ ನಿರ್ಣಯಕ್ಕಾಗಿ ಕೆಲವೆಡೆ ಶ್ರೀ ಸ್ವಾಮಿ ಕಣ್ಣು ಪಿಳ್ಳೈರವರ Indian Chronology ಹಾಗೂ ರಾಬರ್ಟ್ ಸ್ವೆಲ್ ಅವರ The Siddhantas and the Indian Calendar ಮತ್ತು ರಾಬರ್ಟ್ ಸ್ವೆಲ್ ಹಾಗೂ ಶಂಕರ ಬಾಲಕೃಷ್ಣ ದೀಕ್ಷಿತ ಅವರ The Indian Calendar ಇವುಗಳ ಸಹಾಯವನ್ನೂ ಪಡೆಯಲಾಗಿದೆ. ಮೂಲರಾಮನ ಅಪಹರಣಕ್ಕೆ ಸಂಬಂಧಪಟ್ಟ, ಚಂದ್ರಭಟ್ಟನಿಗೆ ನೀಡಲಾದ ತಾಮ್ರಪತ್ರದಲ್ಲಿ ಉಲ್ಲೇಖ ಮಾಡಲಾದ, ಶಾ.ಶಕೆ. 1426 ಇದಕ್ಕೆ ಸಂಬಂಧಪಟ್ಟ ಪಟ್ಟಿಗಳನ್ನು ನೀಡಿದ್ದೇವೆ.

TABLE

| CONCURRENT YEAR. | | | | | | | | Interpolated and suppressed (ksh.) lunar months. |
|---|---|---|---|---|---|---|---|---|
| Kali. | Śaka. | Chaitrādi Vikrama. | Mēshādi (solar) year in Bengal | Kollam. | A.D. | Jovian Samvatsara. Southern system. | Jovian Samvatsara. Northern system. | |
| 1 | 2 | 3 | 3a | 4 | 5 | 6 | 7 | 8 |
| 4601 | 1422 | 1557 | 906 | 674-75 | 1499-1500 | 53 Siddhārthin . | 60 Kshaya . | ... |
| 4602 | 1423 | 1558 | 907 | 675-76 | *1500-01 | 54 Raudra . | 1 Prabhava† . | 4 Āshāḍha . |
| 4603 | 1424 | 1559 | 908 | 676-77 | 1501-02 | 55 Durmati . | 3 *Śukla* . | ... |
| 4604 | 1425 | 1560 | 909 | 677-78 | 1502-03 | 56 Dundubhi . | 4 *Pramōda* . | ... |
| 4605 | 1426 | 1561 | 910 | 678-79 | 1503-04 | 57 Rudhirōdgārin | 5 *Prajāpati* . | 2 Vaiśākha . |
| 4606 | 1427 | 1562 | 911 | 679-80 | *1504-05 | 58 Raktāksha . | 6 *Āṅgiras* . | ... |
| 4607 | 1428 | 1563 | 912 | 680-81 | 1505-06 | 59 Krōdhana . | 7 *Śrīmukha* . | 6 Bhādrapada |
| 4608 | 1429 | 1564 | 913 | 681-82 | 1506-07 | 60 Kshaya . | 8 *Bhāva* . | ... |
| 4609 | 1430 | 1565 | 914 | 682-83 | 1507-08 | 1 Prabhava . | 9 *Yuvan* . | ... |
| 4610 | 1431 | 1566 | 915 | 683-84 | *1508-09 | 2 Vibhava . | 10 *Dhātri* . | 5 Śrāvaṇa . |
| 4611 | 1432 | 1567 | 916 | 684-85 | 1509-10 | 3 Śukla . | 11 *Īśvara* . | ... |
| 4612 | 1433 | 1568 | 917 | 685-86 | 1510-11 | 4 Pramōda . | 12 *Bahudhānya* . | ... |
| 4613 | 1434 | 1569 | 918 | 686-87 | 1511-12 | 5 Prajāpati . | 13 *Pramāthin* . | 3 Jyēshṭha . |
| 4614 | 1435 | 1570 | 919 | 687-88 | *1512-13 | 6 Āṅgiras . | 14 *Vikrama* . | ... |
| 4615 | 1436 | 1571 | 920 | 688-89 | 1513-14 | 7 Śrīmukha . | 15 *Vrisha* | 7 Āśvina<br>10 *Pausha (ksh)* |
| 4616 | 1437 | 1572 | 921 | 689-90 | 1514-15 | 8 Bhāva . | 16 *Chitrabhānu* . | 1 Chaitra . |
| 4617 | 1438 | 1573 | 922 | 690-91 | 1515-16 | 9 Yuvan . . | 17 Subhānu . | ... |
| 4618 | 1439 | 1574 | 923 | 691-92 | *1516-17 | 10 Dhātri . | 18 Tāraṇa . | 5 Śrāvaṇa . |
| 4619 | 1440 | 1575 | 924 | 692-93 | 1517-18 | 11 Īśvara . | 19 Pārthiva . | ... |
| 4620 | 1441 | 1576 | 925 | 693-94 | 1518-19 | 12 Bahudhānya . | 20 Vyaya . | ... |
| 4621 | 1442 | 1577 | 926 | 694-95 | 1519-20 | 13 Pramāthin | 21 Sarvajit . | 4 Āshāḍha . |
| 4622 | 1443 | 1578 | 927 | 695-96 | *1520-21 | 14 Vikrama | 22 Sarvadhārin . | ... |
| 4623 | 1444 | 1579 | 928 | 696-97 | 1521-22 | 15 Vrisha . | 23 Virōdhin | |
| 4624 | 1445 | 1580 | 929 | 697-98 | 1522-23 | 16 Chitrabhānu . | 24 Vikrita . | 2 Vaiśākha . |
| 4625 | 1446 | 1581 | 930 | 698-99 | 1523-24 | 17 Subhānu . | 25 Khara | ... |

† Vibhava was suppressed in the north.

# INDIAN CHRONOLOGY

(SOLAR, LUNAR AND PLANETARY)

A PRACTICAL GUIDE

TO THE

INTERPRETATION AND VARIFICATION

OF

TITHIS, NAKSHATRAS, HOROSCOPES

AND

OTHER INDIAN TIME-RECORDS

B.C. 1 TO A.D. 2000

L. D. SWAMIKANNU PILLAI

[illegible]ICES

**TABLE X.—**

| Kaliyuga. | Vikrama Era. | Saka Era. | Commencement of Solar Year. Month and day A.D. | Fraction of day. | First New-Moon in Solar Year. | Anomaly of first New-Moon. | A. D. | Week-day of 1st January. | Vaisakha | | | | Jyeshta | | | | Ashada | | | | Sravana | | | | Bhadrapada | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | ☉'s Anom col. 6 | | | | + 29·53050 | | | | + 59·06117 | | | | + 88·59176 | | | | + 118·12235 | | | |
| | | | | | | | | | ☾'s Anom col. 7 | | | | + 1·976 | | | | + 3·952 | | | | + 5·928 | | | | + 7·904 | | | |
| | | | | | | | | | Week-day | Month | Day | Fraction | Week-day | Month | Day | Fraction | Week-day | Month | Day | Fraction | Week-day | Month | Day | Fraction | Week-day | Month | Day | Fraction |
| 4568 | 1524 | 1389 | 27M | ·5789 | 7·9206 | 0·948 | **1467** | 6 | 7 | Ap | 4 | ·50 | 2 | My | 4 | ·03 | 3 | Je | 2 | ·56 | 5 | Jl | 2 | ·09 | 6 | Jl | 31☽ | ·63 |
| | | | | | | | | | | | | | | | | | | | | | | | | | 1 | Au | 30 | ·16 |
| 4569 | 1525 | 1390 | 26M | ·8376 | 26·5595 | 26·636 | **1468** | 6 | 6 | Ap | 22 | ·40 | 7 | My | 21 | ·93 | 2 | Je | 20 | ·46 | 3 | Jl | 19☽ | ·99 | 5 | Au | 18 | ·52 |
| 4570 | 1526 | 1391 | 27M | ·0964 | 15·6678 | 22·793 | **1469** | 1 | 3 | Ap | 11 | ·77 | 5 | My | 11 | ·30 | 6 | Je | 9 | ·83 | 1 | Jl | 9●☽ | ·36 | 2 | Au | 7 | ·89 |
| 4571 | 1527 | 1392 | 27M | ·3551 | 4·7761 | 18·951 | **1470** | 2 | 1 | Ap | 1 | ·14 | 2 | Ap | 30 | ·67 | 4 | My | 30 | ·20 | 7 | Jl | 28 | ·26 | 1 | Au | 26 | ·79 |
| | | | | | | | | | | | | | | | | | 5 | Je | 28● | ·73 | | | | | | | | |
| 4572 | 1528 | 1393 | 27M | ·6139 | 23·4150 | 17·084 | **1471** | 3 | 7 | Ap | 20 | ·03 | 1 | My | 19☽ | ·56 | 3 | Je | 18 | ·09 | 4 | Jl | 17 | ·62 | 6 | Au | 16 | ·16 |
| 4573 | 1529 | 1394 | 26M | ·8726 | 12·5233 | 13·241 | **1472** | 4 | 4 | Ap | 8 | ·40 | 5 | My | 7☽ | ·93 | 7 | Je | 6 | ·46 | 1 | Jl | 5 | ·99 | 3 | Au | 4 | ·52 |
| 4574 | 1530 | 1395 | 27M | ·1314 | 1·6316 | 9·398 | **1473** | 6 | 1 | Mr | 28 | ·77 | 3 | Ap | 27●☽ | ·30 | 6 | Je | 25 | ·36 | 7 | Jl | 24 | ·89 | 2 | Au | 23 | ·42 |
| | | | | | | | | | | | | | 4 | My | 26 | ·83 | | | | | | | | | | | | |
| 4575 | 1531 | 1396 | 27M | ·3901 | 20·2705 | 7·582 | **1474** | 7 | 7 | Ap | 16● | ·67 | 2 | My | 16 | ·20 | 3 | Je | 14 | ·73 | 5 | Jl | 14 | ·26 | 6 | Au | 12 | ·79 |
| 4576 | 1532 | 1397 | 27M | ·6489 | 9·3788 | 3·689 | **1475** | 1 | 5 | Ap | 6 | ·03 | 6 | My | 5 | ·56 | 1 | Je | 4 | ·09 | 2 | Jl | 3 | ·62 | 4 | Au | 2 | ·15 |
| 4577 | 1533 | 1398 | 26M | ·9077 | 28·0176 | 1·822 | **1476** | 2 | 3 | Ap | 23 | ·93 | 5 | My | 23 | ·46 | 6 | Je | 21 | ·99 | 1 | Jl | 21 | ·52 | 3 | Au | 20☽ | ·05 |
| 4578 | 1534 | 1399 | 27M | ·1664 | 17·1259 | 25·534 | **1477** | 4 | 1 | Ap | 13 | ·30 | 2 | My | 12 | ·83 | 4 | Je | 11 | ·36 | 5 | Jl | 10 | ·89 | 7 | Au | 9 | ·42 |
| 4579 | 1535 | 1400 | 27M | ·4252 | 6·2342 | 21·691 | **1478** | 5 | 5 | Ap | 2 | ·66 | 7 | My | 2 | ·19 | 1 | My | 31 | ·72 | 3 | Je | 30☽ | ·25 | 6 | Au | 28 | ·31 |
| | | | | | | | | | | | | | | | | | | | | | 4 | Jl | 29● | ·78 | | | | |
| 4580 | 1536 | 1401 | 27M | ·6839 | 24·8731 | 19·825 | **1479** | 6 | 4 | Ap | 21 | ·56 | 6 | My | 21 | ·09 | 7 | Je | 19☽ | ·62 | 2 | Jl | 19 | ·15 | 3 | Au | 17 | ·68 |
| 4581 | 1537 | 1402 | 26M | ·9427 | 13·9814 | 15·982 | **1480** | 7 | 1 | Ap | 9 | ·93 | 3 | My | 9 | ·46 | 4 | Je | 7●☽ | ·99 | 6 | Jl | 7 | ·52 | 1 | Au | 6 | ·05 |
| 4582 | 1538 | 1403 | 27M | ·2014 | 3·0897 | 12·139 | **1481** | 2 | 6 | Mr | 30 | ·30 | 7 | Ap | 28 | ·83 | 2 | My | 28 | ·36 | 5 | Jl | 26 | ·42 | 6 | Au | 24 | ·95 |
| | | | | | | | | | | | | | | | | | 3 | Je | 26 | ·89 | | | | | | | | |
| 4583 | 1539 | 1404 | 27M | ·4602 | 21·7286 | 10·272 | **1482** | 3 | 5 | Ap | 18☽ | ·19 | 6 | My | 17 | ·72 | 1 | Je | 16 | ·25 | 2 | Jl | 15 | ·78 | 4 | Au | 14 | ·31 |
| 4584 | 1540 | 1405 | 27M | ·7190 | 10·8369 | 6·430 | **1483** | 4 | 2 | Ap | 7☽ | ·56 | 4 | My | 7 | ·09 | 5 | Je | 5 | ·62 | 7 | Jl | 5 | ·15 | 1 | Au | 3 | ·68 |
| 4585 | 1541 | 1406 | 26M | ·9777 | 29·4758 | 4·563 | **1484** | 5 | 1 | Ap | 25 | ·46 | 2 | My | 24 | ·99 | 4 | Je | 23 | ·52 | 6 | Jl | 23 | ·05 | 7 | Au | 21 | ·58 |
| 4586 | 1542 | 1407 | 27M | ·2365 | 18·5841 | 0·720 | **1485** | 7 | 5 | Ap | 14 | ·83 | 7 | My | 14 | ·36 | 1 | Je | 12 | ·89 | 3 | Jl | 12 | ·42 | 4 | Au | 10☽ | ·95 |
| 4587 | 1543 | 1408 | 27M | ·4952 | 7·6924 | 24·432 | **1486** | 1 | 3 | Ap | 4 | ·19 | 4 | My | 3 | ·72 | 6 | Je | 2 | ·25 | 7 | Jl | 1 | ·78 | 3 | Au | 29 | ·84 |
| | | | | | | | | | | | | | | | | | | | | | 2 | Jl | 31☽ | ·31 | | | | |
| 4588 | 1544 | 1409 | 27M | ·7540 | 26·8813 | 22·565 | **1487** | 2 | 2 | Ap | 23 | ·09 | 3 | My | 22 | ·62 | 5 | Je | 21 | ·15 | 6 | Jl | 20●☽ | ·68 | 1 | Au | 19 | ·21 |
| 4589 | 1545 | 1410 | 27M | ·0127 | 15·4396 | 18·723 | **1488** | 3 | 6 | Ap | 11 | ·46 | 7 | My | 10 | ·99 | 2 | Je | 9 | ·52 | 4 | Jl | 9● | ·05 | 5 | Au | 7 | ·58 |
| 4590 | 1546 | 1411 | 27M | ·2715 | 4·5479 | 14·880 | **1489** | 5 | 3 | Mr | 31 | ·82 | 5 | Ap | 30 | ·35 | 6 | My | 29☽ | ·88 | 2 | Jl | 27 | ·95 | 4 | Au | 26 | ·47 |
| | | | | | | | | | | | | | | | | | 1 | Je | 28 | ·41 | | | | | | | | |
| 4591 | 1547 | 1412 | 27M | ·5303 | 23·1868 | 13·013 | **1490** | 6 | 2 | Ap | 19 | ·72 | 4 | My | 19☽ | ·25 | 5 | Je | 17 | ·78 | 7 | Jl | 17 | ·31 | 1 | Au | 15 | ·84 |
| 4592 | 1548 | 1413 | 27M | ·7890 | 12·2951 | 9·173 | **1491** | 7 | 7 | Ap | 9 | ·09 | 1 | My | 8●☽ | ·62 | 3 | Je | 7 | ·15 | 4 | Jl | 6 | ·68 | 6 | Au | 5 | ·21 |
| 4593 | 1549 | 1414 | 27M | ·0478 | 1·4034 | 5·327 | **1492** | 1 | 4 | Mr | 28 | ·46 | 7 | My | 26 | ·52 | 2 | Je | 25 | ·05 | 3 | Jl | 24 | ·58 | 5 | Au | 23 | ·11 |
| | | | | | | | | | 5 | Ap | 26 | ·99 | | | | | | | | | | | | | | | | |
| 4594 | 1550 | 1415 | 27M | ·3065 | 20·0423 | 3·461 | **1493** | 3 | 3 | Ap | 16● | ·35 | 4 | My | 15 | ·88 | 6 | Je | 14 | ·41 | 7 | Jl | 13 | ·94 | 2 | Au | 12 | ·47 |
| 4595 | 1551 | 1416 | 27M | ·5653 | 9·1506 | 27·173 | **1494** | 4 | 7 | Ap | 5 | ·72 | 2 | My | 5 | ·25 | 3 | Je | 3 | ·78 | 5 | Jl | 3 | ·31 | 6 | Au | 1 | ·84 |
| | | | | | | | | | | | | | | | | | | | | | | | | | 1 | Au | 31☽ | ·37 |
| 4596 | 1552 | 1417 | 27M | ·8240 | 27·7894 | 25·806 | **1495** | 5 | 6 | Ap | 24 | ·62 | 1 | My | 24 | ·15 | 2 | Je | 22 | ·68 | 4 | Jl | 22 | ·21 | 5 | Au | 20● | ·74 |
| 4597 | 1553 | 1418 | 27M | ·0828 | 16·8977 | 21·463 | **1496** | 6 | 3 | Ap | 12 | ·98 | 5 | My | 12 | ·52 | 7 | Je | 11 | ·05 | 1 | Jl | 10 | ·58 | 3 | Au | 9 | ·11 |
| 4598 | 1554 | 1419 | 27M | ·3415 | 6·0060 | 17·620 | **1497** | 1 | 1 | Ap | 2 | ·35 | 2 | My | 1 | ·88 | 4 | My | 31 | ·41 | 5 | Je | 29☽ | ·94 | 2 | Au | 28 | ·00 |
| | | | | | | | | | | | | | | | | | | | | | 7 | Jl | 29● | ·49 | | | | |
| 4599 | 1555 | 1420 | 27M | ·6003 | 24·6449 | 15·754 | **1498** | 2 | 7 | Ap | 21 | ·25 | 1 | My | 20 | ·78 | 3 | Je | 19☽ | ·31 | 4 | Jl | 18 | ·84 | 6 | Au | 17 | ·37 |
| 4600 | 1556 | 1421 | 27M | ·8591 | 13·7532 | 11·911 | **1499** | 3 | 4 | Ap | 10 | ·62 | 6 | My | 10 | ·15 | 7 | Je | 8● | ·68 | 2 | Jl | 8 | ·21 | 3 | Au | 6 | ·74 |
| 4601 | 1557 | 1422 | 27M | ·1178 | 2·8615 | 8·068 | **1500** | 4 | 1 | Mr | 29 | ·98 | 3 | Ap | 28☽ | ·51 | 6 | Je | 26 | ·57 | 1 | Jl | 26 | ·10 | 2 | Au | 24 | ·63 |
| | | | | | | | | | | | | | 5 | My | 28● | ·04 | | | | | | | | | | | | |
| 4602 | 1558 | 1423 | 27M | ·3766 | 21·5004 | 6·201 | **1501** | 6 | 7 | Ap | 17☽ | ·88 | 2 | My | 17 | ·41 | 3 | Je | 15 | ·94 | 5 | Jl | 15 | ·47 | 7 | Au | 14 | ·00 |
| 4603 | 1559 | 1424 | 27M | ·6353 | 10·6087 | 2·359 | **1502** | 7 | 5 | Ap | 7● | ·24 | 6 | My | 6 | ·77 | 1 | Je | 5 | ·30 | 2 | Jl | 4 | ·84 | 4 | Au | 3 | ·37 |
| 4604 | 1560 | 1425 | 27M | ·8941 | 29·2476 | 0·492 | **1503** | 1 | 4 | Ap | 26 | ·14 | 5 | My | 25 | ·67 | 7 | Je | 24 | ·20 | 1 | Jl | 23 | ·73 | 3 | Au | 22 | ·26 |
| 4605 | 1561 | 1426 | 27M | ·1528 | 18·3559 | 24·204 | **1504** | 2 | 1 | Ap | 14 | ·51 | 3 | My | 14 | ·04 | 4 | Je | 12 | ·57 | 6 | Jl | 12 | ·10 | 7 | Au | 10☽ | ·63 |
| 4606 | 1562 | 1427 | 27M | ·4116 | 7·4642 | 20·361 | **1505** | 4 | 5 | Ap | 3 | ·88 | 7 | My | 3 | ·41 | 1 | Je | 1 | ·94 | 3 | Jl | 1 | ·47 | 6 | Au | 29 | ·53 |
| | | | | | | | | | | | | | | | | | | | | | 5 | Jl | 31☽ | ·00 | | | | |

# THE
# INDIAN CALENDAR

WITH TABLES FOR THE CONVERSION OF HINDU AND MUHAMMADAN INTO A.D. DATES, AND VICE VERSÂ

BY

ROBERT SEWELL
*Late of Her Majesty's Indian Civil Service,*

AND

ŚANKARA BÂLKṚISHṆA DÌKSHIT
*Training College, Poona.*

WITH TABLES OF ECLIPSES VISIBLE IN INDIA

BY

DR. ROBERT SCHRAM
*Of Vienna.*




LONDON
SWAN SONNENSCHEIN & Co., LTD.
PATERNOSTER SQUARE
1896

# TABLE I.

*Lunation-parts = 10,000ths of a circle. A tithi = 1/30th of the moon's synodic revolution.*

| I. CONCURRENT YEAR. | | | | | | | | II. ADDED LUNAR MONTHS. | | | | |
|---|---|---|---|---|---|---|---|---|---|---|---|---|
| | | | | | | Samvatsara. | | True. | | | | |
| Kali. | Śaka. | Chaitrâdi. Vikrama. | Meshâdi (Solar) year in Bengal. | Kollam. | A. D. | Luni-Solar cycle. (Southern.) | Bṛihaspati cycle (Northern) current at Mesha saṅkrânti. | Name of month. | Time of the preceding saṅkrânti expressed in: Lunation parts. (*l.*) | Time of the preceding saṅkrânti expressed in: Tithis. | Time of the succeeding saṅkrânti expressed in: Lunation parts. (*l.*) | Time of the succeeding saṅkrânti expressed in: Tithis. |
| 1 | 2 | 3 | 3a | 4 | 5 | 6 | 7 | 8 | 9 | 10 | 11 | 12 |
| 4585 | 1406 | 1541 | 890 | 658-59 | 1483- 84 | 37 Śobhana | 44 Sâdhâraṇa | | | | | |
| 4586 | 1407 | 1542 | 891 | 659-60 | *1484- 85 | 38 Krodhin | 45 Virodhakṛit | 1 Chaitra | 9679 | 29.037 | 41 | 0.123 |
| 4587 | 1408 | 1543 | 892 | 660-61 | 1485- 86 | 39 Viśvâvasu | 46 Paridhâvin | | | | | |
| 4588 | 1409 | 1544 | 893 | 661-62 | 1486- 87 | 40 Parâbhava | 47 Pramâdin | 5 Śrâvaṇa | 9259 | 27.777 | 48 | 0.144 |
| 4589 | 1410 | 1545 | 894 | 662-63 | 1487- 88 | 41 Plavaṅga | 48 Ânanda | | | | | |
| 4590 | 1411 | 1546 | 895 | 663-64 | *1488- 89 | 42 Kîlaka | 49 Râkshasa | | | | | |
| 4591 | 1412 | 1547 | 896 | 664-65 | 1489- 90 | 43 Saumya | 50 Anala | 4 Âshâḍha | 9451 | 28.353 | 170 | 0.510 |
| 4592 | 1413 | 1548 | 897 | 665-66 | 1490- 91 | 44 Sâdhâraṇa | 51 Piṅgala | | | | | |
| 4593 | 1414 | 1549 | 898 | 666-67 | 1491- 92 | 45 Virodhakṛit | 52 Kâlayukta | | | | | |
| 4594 | 1415 | 1550 | 899 | 667-68 | *1492- 93 | 46 Paridhâvin | 53 Siddhârthin | 2 Vaiśâkha | 9575 | 28.725 | 94 | 0.282 |
| 4595 | 1416 | 1551 | 900 | 668-69 | 1493- 94 | 47 Pramâdin | 54 Raudra | | | | | |
| 4596 | 1417 | 1552 | 901 | 669-70 | 1494- 95 | 48 Ânanda | 55 Durmati | 6 Bhâdrapada | 9569 | 28.707 | 75 | 0.225 |
| 4597 | 1418 | 1553 | 902 | 670-71 | 1495- 96 | 49 Râkshasa | 56 Dundubhi | | | | | |
| 4598 | 1419 | 1554 | 903 | 671-72 | *1496- 97 | 50 Anala | 57 Rudhirodgârin | | | | | |
| 4599 | 1420 | 1555 | 904 | 672-73 | 1497- 98 | 51 Piṅgala | 58 Raktâksha | 5 Śrâvaṇa | 9689 | 29.067 | 478 | 1.434 |
| 4600 | 1421 | 1556 | 905 | 673-74 | 1498- 99 | 52 Kâlayukta | 59 Krodhana | | | | | |
| 4601 | 1422 | 1557 | 906 | 674-75 | 1499-500 | 53 Siddhârthin | 60 Kshaya | | | | | |
| 4602 | 1423 | 1558 | 907 | 675-76 | *1500- 1 | 54 Raudra | 1 Prabhava | 3 Jyeshṭha | 9590 | 28.770 | 167 | 0.501 |
| 4603 | 1424 | 1559 | 908 | 676-77 | 1501- 2 | 55 Durmati | 2 Vibhava | | | | | |
| 4604 | 1425 | 1560 | 909 | 677-78 | 1502- 3 | 56 Dundubhi | 3 Śukla | | | | | |
| 4605 | 1426 | 1561 | 910 | 678-79 | 1503- 4 | 57 Rudhirodgârin | 4 Pramoda | 1 Chaitra | 9653 | 28.959 | 4 | 0.012 |
| 4606 | 1427 | 1562 | 911 | 679-80 | *1504- 5 | 58 Raktâksha | 5 Prajâpati | | | | | |
| 4607 | 1428 | 1563 | 912 | 680-81 | 1505- 6 | 59 Krodhana | 6 Aṅgiras | 5 Śrâvaṇa | 9225 | 27.675 | 28 | 0.084 |
| 4608 | 1429 | 1564 | 913 | 681-82 | 1506- 7 | 60 Kshaya | 7 Śrîmukha | | | | | |
| 4609 | 1430 | 1565 | 914 | 682-83 | 1507- 8 | 1 Prabhava | 8 Bhâva | | | | | |
| 4610 | 1431 | 1566 | 915 | 683-84 | *1508- 9 | 2 Vibhava | 9 Yuvan | 4 Âshâḍha | 9630 | 28.890 | 269 | 0.807 |
| 4611 | 1432 | 1567 | 916 | 684-85 | 1509- 10 | 3 Śukla | 10 Dhâtṛi | | | | | |
| 4612 | 1433 | 1568 | 917 | 685-86 | 1510- 11 | 4 Pramoda | 11 Îśvara | | | | | |
| 4613 | 1434 | 1569 | 918 | 686-87 | 1511- 12 | 5 Prajâpati | 12 Bahudhânya | 2 Vaiśâkha | 9551 | 28.653 | 137 | 0.411 |
| 4614 | 1435 | 1570 | 919 | 687-88 | *1512- 13 | 6 Aṅgiras | 13 Pramâthin | | | | | |
| 4615 | 1436 | 1571 | 920 | 688-89 | 1513- 14 | 7 Śrîmukha | 14 Vikrama | 6 Bhâdrapada | 9574 | 28.722 | 145 | 0.435 |
| 4616 | 1437 | 1572 | 921 | 689-90 | 1514- 15 | 8 Bhâva | 15 Vṛisha [1]) | | | | | |
| 4617 | 1438 | 1573 | 922 | 690-91 | 1515- 16 | 9 Yuvan | 17 Subhânu | | | | | |

[1]) Chitrabhânu, No. 16, was suppressed in the north.

**II.** ದ್ವಾದಶಿಯ ಉದಯಕಾಲದಲ್ಲಿ ಸಕಲ ಮಾಧ್ವರೂ ವಿಶೇಷವಾಗಿ ಪರಮಾತ್ಮನ ಪೂಜೆಯಲ್ಲಿ ನಿರತರಾಗಿರುತ್ತಾರೆ. ಅದರಲ್ಲೂ ಶ್ರೀ ಉತ್ತರಾದಿಮಠದಲ್ಲಿ ಪೂಜೆ ವಿಶೇಷವಾಗಿ ನಡೆಯುವುದುಂಟು. ಜನಜಂಗುಳಿ ಸರ್ವೇ ಸಾಮಾನ್ಯ. ಹೀಗಾಗಿ ಆ ಸಂದರ್ಭದಲ್ಲಿ ಯಾರಿಗೂ ಕಾಣದಂತೆ ಪ್ರತಿಮೆಯನ್ನು ಬಾಡದ ಚಂದ್ರಭಟ್ಟ ಅಪಹಾರ ಮಾಡಿಕೊಂಡು ಹೋದನು ಎನ್ನುವುದು ಅಸಂಗತವಾಗುತ್ತದೆ.

- ❖ ದ್ವಾದಶಿಯ ದಿನ ಪೂಜೆ ನಡೆಯುವಾಗ ಉದಯಕಾಲದಲ್ಲಿ ಪ್ರತಿಮೆಯನ್ನು ಕಳವು ಮಾಡುವುದು ಅಸಾಧ್ಯ.
- ❖ ದೇವರನ್ನು ಭುಜಂಗಿಸಿದ ಮೇಲೆ ತೆಗೆದು ಕೊಂಡು ಹೋಗಿದ್ದಾನೆಂದರೆ ಶ್ರೀಮೂಲರಾಮ ಸೀತೆಯರನ್ನು ಒಂದೇ ಪೆಟ್ಟಿಗೆಯಲ್ಲಿ ಭುಜಂಗಿಸುವ ಸಂಪ್ರದಾಯವಿರುವುದರಿಂದ ಶ್ರೀಮೂಲರಾಮಪ್ರತಿಮೆಯನ್ನು ಮಾತ್ರ (ಮೂಲಸೀತಾಪ್ರತಿಮೆಯನ್ನು ಬಿಟ್ಟು) ತೆಗೆದು ಕೊಂಡು ಹೋಗಲು ಸಾಧ್ಯವಿಲ್ಲ.
- ❖ ಪೂಜೆಗೆ ಮುಂಚೆ ತೆಗೆದುಕೊಂಡು ಹೋಗಿದ್ದಾನೆಂದರೆ ದೇವರನ್ನು ಮಂಟಪದಲ್ಲಿ ಕೂಡಿಸಿ ಸುತ್ತಲೂ ಯಾರೂ ಇಲ್ಲದೇ ಎಲ್ಲೋ ಹೋಗಿದ್ದರೆಂದು (ಅದೂ ಸಹ ದ್ವಾದಶಿಯ ದಿನ ಬೆಳಿಗ್ಗೆ) ಊಹಿಸಲೂ ಸಾಧ್ಯವಿಲ್ಲ.

ಆದಕಾರಣ ತಾಮ್ರಪತ್ರದಂತೆ ಕಾರ್ತಿಕ ಶುದ್ಧ ದ್ವಾದಶಿಯ ಉದಯಕಾಲದಲ್ಲಿ ಪ್ರತಿಮೆಯ ಅಪಹರಣ-ವಾಗಿದೆ ಎನ್ನುವುದು ಕೇವಲ ಊಹೆ ಮಾತ್ರ.

**III.** ಈ ತಾಮ್ರಪತ್ರದ ಪ್ರಕಾರ ಶ್ರೀರಾಮನ ಪ್ರತಿಮೆಯ ಅಪಹರಣವಾದದ್ದು ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶೀ. ಅಂದರೆ 1494 ಅಥವಾ 1495 ಎಂದಾಯಿತು.

ಈ ತಾಮ್ರಪತ್ರದಲ್ಲಿ ಉಲ್ಲೇಖಿಸಿದ ಕಾಲಮಾನವನ್ನು ಗಮನಿಸಿ ಈ ಇಸವಿಗೆ ಹೊಂದಿಕೆ ಆಗುವಂತೆ ಮೂ.ಮಠೇ ಪುಸ್ತಕದಲ್ಲಿ ಲೇಖಕರು ಶ್ರೀರಾಮನ ಪ್ರತಿಮೆ ಅಪಹರಣವಾದದ್ದು (ಉತ್ತರಾದಿಮಠದ) ಶ್ರೀರಘುನಾಥತೀರ್ಥರ ಕಾಲದಲ್ಲಿ ಎಂದು ಬರೆದಿದ್ದಾರೆ. (ಪು.126)

ಆದರೆ, ವಿಜಯೀಂದ್ರವಿಜಯದಲ್ಲಿ (3-26) ರಾಮನ ಪ್ರತಿಮೆ ಕಳುವಾದದ್ದು (ಉತ್ತರಾದಿಮಠದಿಂದ) ಶ್ರೀವಿದ್ಯಾನಿಧಿಗಳ ಕಾಲ ಎಂದಿದೆ— ''ಶ್ರೀವಿಜಯೀಂದ್ರವಿಜಯ'' ಕನ್ನಡಾನುವಾದದ 3ನೇ ಸರ್ಗದ ಸಾರಾಂಶದಲ್ಲಿ ಹಾಗೂ 3ನೇ ಸರ್ಗದ 26ನೆಯ ಶ್ಲೋಕ. (ಲೇ. ಕಡಪಾ ರಾಘವೇಂದ್ರಾಚಾರ್ಯ ಮತ್ತು ಗುರುಸಾರ್ವಭೌಮ ವಿದ್ಯಾಪೀಠದ ವಿದ್ವಾಂಸರು, ಪ್ರಕಾಶನ. ಶ್ರೀರಾಘವೇಂದ್ರಪರಿಷತ್, ನಂಜನಗೂಡು. 2003.)

ಸ್ತೋತ್ರಮುಕ್ತಾವಲೀ (ನಂಜನಗೂಡು ರಾಘವೇಂದ್ರಸ್ವಾಮಿಗಳವರ ಮಠದಿಂದ ಪ್ರಕಟಿತ-2006) ಎಂಬ ಪುಸ್ತಕದ ಪುಟ 646 ರಲ್ಲಿ ''ಎಲ್ಲ ಸಂಗತಿಗಳನ್ನು ವಸ್ತುನಿಷ್ಠವಾಗಿ ತೆರೆದಿಟ್ಟ ಮಹಾಕಾವ್ಯ ಶ್ರೀವಿಜಯೀಂದ್ರ ವಿಜಯ..... ವಾಸ್ತವಿಕ ಕಟುಸತ್ಯವನ್ನು ನೇರವಾಗಿ ನಿರೂಪಿಸಿದ ದಿಟ್ಟತನದ ಧೀಮಂತ ಕವಿ ಮಧ್ವಕವಿಗಳು'' ಎಂದು ಬರೆದಿದ್ದಾರೆ. ಅಂತಹ ವಿಜಯೀಂದ್ರವಿಜಯಕ್ಕೂ ತಾಮ್ರಪತ್ರಕ್ಕೂ ವಿರೋಧ ಸ್ಪಷ್ಟವಾಗಿ ಅವರೇ ಒಪ್ಪಿದಂತಾಯಿತು. ತಾಮ್ರಪತ್ರ ನಿಜ ಹೇಳುತ್ತಿದೆಯೋ ವಿಜಯೀಂದ್ರವಿಜಯ ನಿಜ ಹೇಳುತ್ತಿದೆಯೋ ಅವರಿಗೇ ಬಿಡಿಸಲಾರದ ಸಮಸ್ಯೆಯಾಗಿದೆ. ಆದ್ದರಿಂದ ಈ ತಾಮ್ರಪತ್ರದ ಪ್ರಾಮಾಣ್ಯದ ಬಗ್ಗೆ ಸಂದೇಹ ಮೂಡುತ್ತದೆ.

**IV.** ಮೂ.ಮಠೇ ಪುಸ್ತಕದ(2009) ಪುಟ 133ರಲ್ಲಿ ಛಾಪಿಸಿರುವ ರಾಯರ ಮಠದಲ್ಲಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನ ಆಧಾರದ ಪ್ರಕಾರ – ಶ್ರೀರಘುನಂದನರ ನಿರ್ಯಾಣಕಾಲ ಶಾ. ಶಕೆ. 1395 ವಿಜಯಸಂವತ್ಸರ. ಅಂದರೆ ಕ್ರಿ.ಶ. 1474.

ಈ ತಾಮ್ರಪತ್ರದ ದಾಖಲೆಯ ಪ್ರಕಾರ ರಾಮನ ಪ್ರತಿಮೆಯನ್ನು ಶ್ರೀರಘುನಂದನರ ಆಜ್ಞೆಯ ಪ್ರಕಾರ ಬಾಡದ ಚಂದ್ರಭಟ್ಟನು ಅಪಹರಿಸಿದ್ದು ಆನಂದಸಂವತ್ಸರದ ಕಾರ್ತಿಕ ಶುದ್ಧ ದ್ವಾದಶಿಯ ಉದಯಕಾಲದಲ್ಲಿ. ಅಂದರೆ ಕ್ರಿ.ಶ. 1495.

ಮೂ.ಮಠೇ. ಪ್ರಕಾರ ರಾಮಪ್ರತಿಮೆಯ ಅಪಹರಣ ನಡೆದದ್ದು ಕ್ರಿ.ಶ. 1493.

ಶ್ರೀರಘುನಂದನರು ವೃಂದಾವನಸ್ಥರಾದದ್ದು (ಶಾ.ಶಕೆ.1395) ಕ್ರಿ.ಶ.1474 ಎಂದು ಕಲ್ಲಚ್ಚಿನ ಆಧಾರವು ಸಾರುತ್ತಿದೆ. ಹಾಗಾಗಿ ರಾಮಪ್ರತಿಮೆಯ ಅಪಹರಣವಾಯಿತು ಎಂದು ಹೇಳಿಕೊಳ್ಳಲಾಗುವ ಆನಂದನಾಮ ಸಂವತ್ಸರಕ್ಕೆ ಸರಿಹೊಂದುವ ಕ್ರಿ.ಶ. 1495 ರಲ್ಲಾಗಲೀ, ಕ್ರಿ.ಶ.1493ರಲ್ಲಾಗಲೀ ಶ್ರೀರಘುನಂದನರು ಇರಲೇ ಇಲ್ಲ ಎಂಬುದೇ ಅತ್ಯಂತ ಸೋಜಿಗ!

**V.** ಶ್ರೀರಾಯರ ಮಠದ ಅಧಿಕೃತಪ್ರಕಟಣೆಗಳಾದ ಗುರುಚರಿತೆಯ(1949) ಪುಟ 128ರಲ್ಲಿ ರಾಮನ ಪ್ರತಿಮೆಯು ಅಪಹರಣವಾದದ್ದು ಆನಂದನಾಮಸಂವತ್ಸರ ಕಾರ್ತಿಕ ಶುದ್ಧ ಏಕಾದಶೀ ರಾತ್ರಿ ಎಂದು ನಮೂದಿಸಲಾಗಿದೆ. ಆದರೆ ಈ ತಾಮ್ರಪತ್ರದಲ್ಲಿ ಕಾರ್ತಿಕ ಶುದ್ಧ ದ್ವಾದಶೀ ಅರುಣೋದಯಕಾಲದಲ್ಲಿ ಎಂದಿದೆ. ಅಂತೂ ಅಪಹರಣದ ಸಮಯದ ಬಗ್ಗೆಯೂ ರಾಯರ ಮಠದವರಿಗೇ ಭಿನ್ನಾಭಿಪ್ರಾಯಗಳಿವೆ.

**VI.** ಶ್ರೀರಾಮಪ್ರತಿಮೆಯನ್ನು ಶ್ರೀರಘುನಂದನರ ಕಾಲದ ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶೀ ಅಪಹರಿಸಲ್ಪಟ್ಟಿತೆಂದು ಈ ತಾಮ್ರಪತ್ರ ತಿಳಿಸುತ್ತಿದೆ. ಆದರೆ ಮೂ.ಮಠೇ. (2009) ಪುಸ್ತಕದ ಪುಟ 133 ರಲ್ಲಿ ಅವರೇ ಆಧಾರವೆಂದು ಛಾಪಿಸಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಆಧಾರದ ಪ್ರಕಾರ ಶ್ರೀರಘುನಂದನರ ಕಾಲ (ಶ್ರೀಜಿತಾಮಿತ್ರರ ನಿರ್ಯಾಣದಿಂದ ಹಿಡಿದು) ಶಾ.ಶ. 1368 ಅಕ್ಷಯ ಸಂವತ್ಸರದಿಂದ ಶಾ.ಶ. 1395 ವಿಜಯನಾಮ ಸಂವತ್ಸರ. ಆಶ್ಚರ್ಯವೆಂದರೆ ಶ್ರೀರಘುನಂದನರ ಆಳ್ವಿಕೆಯ ಈ ಅವಧಿಯಲ್ಲಿ **ಆನಂದನಾಮ ಸಂವತ್ಸರವೇ ಬರುವುದಿಲ್ಲ**. ಹೆಚ್ಚಿನ ವಿವರಗಳಿಗೆ 'ಅಪಹರಣದ ಹಗರಣ' ಶೀರ್ಷಿಕೆಯನ್ನು ನೋಡಿ.

**VII.** ಈ ತಾಮ್ರಪತ್ರದಲ್ಲಿ ಉಲ್ಲಿಖಿತವಾಗಿರುವ ಪ್ರತಿಮೆಯ ಅಪಹರಣದ ಸಂವತ್ಸರವನ್ನು ಗಮನಿಸಿ ಮೂ.ಮಠೇ ಲೇಖಕರು ಪ್ರತಿಮೆ ಅಪಹರಣದ ಕಾಲವನ್ನು ಆನಂದನಾಮ ಸಂವತ್ಸರ, ಕ್ರಿ.ಶ. 1493, ಕಾರ್ತಿಕ ಶುದ್ಧ ದ್ವಾದಶಿ ಬೆಳಿಗ್ಗೆ ಎಂದು ಪುಟ viii, xi, 16, 126 ರಲ್ಲಿ ಬರೆದಿದ್ದಾರೆ. ಅದರಂತೆ ಈ ಕಾಲಕ್ಕೆ ಸರಿ ಹೊಂದುವಂತೆ ಮೂ.ಮಠೇ ಲೇಖಕರು ಪುಟ 126 ರಲ್ಲಿ ಪ್ರತಿಮೆ ಕಳುವಾದದ್ದು ಉತ್ತರಾದಿಮಠದ ಶ್ರೀರಘುನಾಥರ ಕಾಲದಲ್ಲಿ ಎಂದು ಬರೆದಿದ್ದಾರೆ. ಈ ಲೇಖಕರು ಶ್ರೀರಘುನಾಥರು ಕ್ರಿ.ಶ. 1444 ರಿಂದ 1493ರವರೆಗೆ ಮೂಲರಾಮನನ್ನು ಪೂಜಿಸಿದರೆಂದು ಒಪ್ಪುತ್ತಾರೆ. ಆಶ್ಚರ್ಯವೆಂದರೆ, ಶ್ರೀರಘುನಾಥತೀರ್ಥರ ಆಳ್ವಿಕೆಯಲ್ಲಿ ಕ್ರಿ.ಶ. 1444 ರಿಂದ 1493 ರವರೆಗೆ ಇರುವ ಅವಧಿಯಲ್ಲಿ **ಆನಂದನಾಮ ಸಂವತ್ಸರವೇ ಬರುವದಿಲ್ಲ**. ಪಾಪ ಮೂ.ಮಠೇ ಲೇಖಕರು ತಾಮ್ರಪತ್ರ ಹಾಗೂ ಡಾ||ಬಿ.ಎನ್.ಕೆ ಯವರ ಕಾಲ ನಿರ್ಣಯಗಳೆಂಬ ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತಾಗಿದ್ದಾರೆ.

**VIII.** ಶ್ರೀರಾಯರ ಮಠದಿಂದ ಅಧಿಕೃತವಾಗಿ ಪ್ರಕಟಗೊಂಡ ''ಶ್ರೀಜಿತಾಮಿತ್ರತೀರ್ಥರು'' (1992) ಎಂಬ ಪುಸ್ತಕದಲ್ಲಿ ಶ್ರೀಜಿತಾಮಿತ್ರರ ನಿರ್ಯಾಣಕಾಲ ಅರ್ಥಾತ್ ಶ್ರೀರಘುನಂದನರ ಆಳ್ವಿಕೆಯ ಆರಂಭದ ಕಾಲ ಕ್ರಿ.ಶ. 1497 ಎಂದಿದೆ (ಪುಟ.45). ಆದರೆ ತಾಮ್ರಪತ್ರ ಉಲ್ಲೇಖಿಸಿರುವಂತೆ

ರಾಮಪ್ರತಿಮೆಯ ಅಪಹರಣಕಾಲವಾದ ಆನಂದನಾಮ ಸಂವತ್ಸರ (ಕ್ರಿ.ಶ.1495) ಈ ಕಾಲ ಶ್ರೀರಘುನಂದನರ ಆಳ್ವಿಕೆಯ ಕಾಲವೇ ಅಲ್ಲ.

ರಾಮಪ್ರತಿಮೆಯ ಅಪಹರಣದ ಬಗ್ಗೆ ಶ್ರೀರಾಯರ ಮಠದವರು ಆಧಾರವಾಗಿ ಕೊಟ್ಟಿರುವ ಈ ತಾಮ್ರಪತ್ರ—

**ಶ್ರೀರಾಯರ ಮಠದವರೇ ಪರಮಪ್ರಮಾಣವೆಂದು ಕೊಡುವ ಅಧಿಕೃತವಾಗಿ ಪ್ರಕಟಿಸಿರುವ ವಿಜಯೀಂದ್ರವಿಜಯ ಹಾಗೂ ಪ್ರಾಚೀನತಮ ಆಧಾರ, ಗುರುಚರಿತೆ ಹಾಗೂ ಶ್ರೀಜಿತಾಮಿತ್ರತೀರ್ಥರು, ಮೂ.ಮಠೇ, ಈ ಪುಸ್ತಕಗಳಲ್ಲಿರುವ ಕಾಲಮಾನಗಳಿಗೆ ವಿರುದ್ಧವಾದದ್ದರಿಂದ,**

**ತಾಮ್ರಪತ್ರ ತಿಳಿಸುತ್ತಿರುವಂತೆ ಶಾ.ಶ. 1426 ಅಂದರೆ ಕ್ರಿ.ಶ. 1504/1505 ರ ರಕ್ತಾಕ್ಷಿನಾಮ ಸಂವತ್ಸರದ ಮಾಘ ಬಹುಳ ಅಮಾವಾಸ್ಯೆಯ ದಿನ ಪ್ರಯಾಗದಲ್ಲಿ, (ಭಾರತದಲ್ಲಿ) ಸೂರ್ಯಗ್ರಹಣ ಸಂಭವಿಸಿಯೇ ಇಲ್ಲವಾದ ಕಾರಣ ಕೃತ್ರಿಮವೇ ಸರಿ.**

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮೂಲರಾಮಪ್ರತಿಮೆಯ ಅಪಹರಣದ ಕಥೆಯು ಶುದ್ಧ ಸುಳ್ಳೆಂದು ನಿರ್ಣಯವಾಗುತ್ತದೆ.

**ಅಲ್ಲದೇ ಈ ತಾಮ್ರಪತ್ರದಲ್ಲಿ -**

ಅ. 'ಮೂಲರಾಮ' ಎಂಬ ಶಬ್ದವಿಲ್ಲ. ಕೇವಲ ''ರಘುಪತಿವಿಗ್ರಹ'' ಎಂಬುದಾಗಿ ಮಾತ್ರ ಇದೆ.

ಆ. 'ಉತ್ತರಾದಿಮಠ' ಎಂದಾಗಲೀ, 'ಶ್ರೀವಿದ್ಯಾನಿಧಿಗಳ ಮಠ' ಎಂದಾಗಲೀ ಅಥವಾ ಇನ್ನಾವುದೇ ಉತ್ತರಾದಿಮಠದ ಪೀಠಾಧಿಪತಿಗಳ ಉಲ್ಲೇಖವಿಲ್ಲ.

ಹಾಗಾಗಿ ಉತ್ತರಾದಿಮಠದಿಂದ ಮೂಲರಾಮನ ಅಪಹರಣವಾಗಿದೆ ಎಂಬುದಕ್ಕೆ ಈ ತಾಮ್ರಪತ್ರ ಪ್ರಮಾಣವೆಂದೆನಿಸುವದಿಲ್ಲ. ಆದ್ದರಿಂದ ಸಾಕ್ಷ್ಯಾಧಾರವಾಗುವದಿಲ್ಲ.

* * * *

# ‘‘ಪ್ರಾಚೀನತಮ’’ ದಾಖಲೆಯ ವಿಮರ್ಶೆ

ಮೂ.ಮಠೇ. ಪುಸ್ತಕದಲ್ಲಿ (ಪು.17) ಶ್ರೀರಘುನಂದನರು ಮೂಲರಾಮನ ಪ್ರತಿಮೆಯನ್ನು ಸಂಪಾದಿಸಿದರು ಎಂಬ ಹೇಳಿಕೆಗೆ ಎರಡನೆಯ ಆಧಾರವೆಂದು ‘‘ಪರ್ಯೈರಪಹೃತಾ....’’ ಎಂಬ ಶ್ರೀರಘುನಂದನತೀರ್ಥರ ಚರಮಶ್ಲೋಕವನ್ನು ನೀಡಿದ್ದಾರೆ. ಈ ಚರಮಶ್ಲೋಕದ ಪ್ರಾಚೀನತೆಯನ್ನು ಸಮರ್ಥಿಸುವುದಕ್ಕಾಗಿ ಅದರ ಹಸ್ತಪ್ರತಿಯನ್ನು ಅನುಬಂಧದಲ್ಲಿ ‘ಪ್ರಾಚೀನತಮ ಕಲ್ಲಚ್ಚಿನ ಮುದ್ರಣದ ಪ್ರತಿ’ ಎಂದು ನಮೂದಿಸಿ (ಪು. 133) ಮುದ್ರಿಸಿದ್ದಾರೆ. ಎರಡು ಭಾಗಗಳುಳ್ಳದ್ದಾಗಿ (ಒಂದರ ಕೆಳಗೆ ಮತ್ತೊಂದು) ಪ್ರಕಟಿಸಿದ್ದಾರೆ. ಆ ದಾಖಲೆಯ ವಿಮರ್ಶೆಯನ್ನು ಈ ಶೀರ್ಷಿಕೆಯಲ್ಲಿ ಮಾಡುತ್ತಿದ್ದೇವೆ. ಈ ದಾಖಲೆಯನ್ನು ಓದುವುದಕ್ಕೆ ಅನುಕೂಲವಾಗುವಂತೆ ಗಣಕಯಂತ್ರದ ಸಾಧನದಿಂದ ದೊಡ್ಡದನ್ನಾಗಿ ಏರ್ಪಡಿಸಿ ಪರಿಶೀಲನೆಯನ್ನು ಮಾಡಿದಾಗ ಗಮನಾರ್ಹವಾದ ಅನೇಕ ಅಂಶಗಳು ಬೆಳಕಿಗೆ ಬಂದಿವೆ.

ಶ್ರೀಸುಗುಣೇಂದ್ರತೀರ್ಥರ ಕಾಲ ಕ್ರಿ.ಶ. 1872-1884. ಅಂದರೆ ಸುಮಾರು ಒಂದೂ ಕಾಲು ಶತಮಾನಗಳ ಪೂರ್ವದಲ್ಲಿ ಆ ಸಾಕ್ಷ್ಯಾಧಾರವು ರಚಿತವಾಗಿದೆ. ಅದನ್ನು ಹಸ್ತಪ್ರತಿ ಎಂದೇ ಲೇಖಕರು ಪು. 17ರಲ್ಲಿ ಸ್ಪಷ್ಟಪಡಿಸಿದ್ದಾರೆ. ಏಕೆಂದರೆ ಹಿಂದಿನ ಕಾಲದಲ್ಲಿ ಕಲ್ಲಚ್ಚು ಎಂಬ ಮುದ್ರಣ ವ್ಯವಸ್ಥೆ ಇರಲಿಲ್ಲವೆಂದು ಪ್ರಸಿದ್ಧಿ ಇದೆ. (ಬಹುಶಃ ಕ್ರಿ.ಶ. 19ನೆಯ ಶತಮಾನದ ಪ್ರಾರಂಭದಲ್ಲಿ ಬಳಕೆಗೆ ಬಂದ ಕಲ್ಲಚ್ಚಿನ ಮುದ್ರಣದ ಸಹಾಯದಿಂದ ಆ ಹಸ್ತಪ್ರತಿಯಿಂದ ನಂತರ ಪ್ರತಿಗಳನ್ನು ಮಾಡಿರಬಹುದು) ಮೂಲ ಬರಹ 18ನೇ ಶತಮಾನದ ಹಸ್ತಪ್ರತಿಯಾಗಿದೆ.

ಪು. 133ರಲ್ಲಿರುವ ಸಾಕ್ಷ್ಯಾಧಾರದ ಪ್ರತಿಯ ಮೇಲಿನ ಭಾಗದಲ್ಲಿ ಶ್ರೀರಾಯರ ಮಠದ ಪರಂಪರೆಯಲ್ಲಿದ್ದ ಶ್ರೀಸುಧರ್ಮೇಂದ್ರತೀರ್ಥರ ವರೆಗಿನ ಗುರುವೃಂದದವರ ಪೂರ್ಣ ಮಾಹಿತಿಗಳನ್ನು ಪ್ರಚುರಪಡಿಸಲಾಗಿದೆ. ಕೆಳಗಿನ 2ನೇ ಭಾಗದಲ್ಲಿ ಗುರುವೃಂದಕ್ಕೆ ಸಂಬಂಧಿಸಿದ ಚರಮಶ್ಲೋಕಗಳ ಬರಹವಿದೆ. ಆ ಸಾಕ್ಷ್ಯಾಧಾರ ಪ್ರತಿಯ ಮೇಲಿನ ಭಾಗದಲ್ಲಿರುವುದನ್ನು ವಿಶ್ಲೇಷಣೆ ಮಾಡುತ್ತಿದ್ದೇವೆ.

**ಅದರ ಶೀರ್ಷಿಕೆ:** ‘‘ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಗುರುಪರಂಪರಾ’’ (ಈ ಶೀರ್ಷಿಕೆಯು ದೊಡ್ಡ ಅಕ್ಷರದಲ್ಲಿದೆ. ಎಲ್ಲವೂ ದೇವನಾಗರಿ ಲಿಪಿಯಲ್ಲಿ ತಿಳಿಸಲ್ಪಟ್ಟಿದೆ) ನಂತರ ಐದು ಸಾಲಿನಲ್ಲಿ ಈ ಮಾಹಿತಿಗಳಿಗೆ ಸಂಬಂಧಿಸಿದಂತೆ ಬರಹವಿದೆ. ನಂತರ ಎಂಟು ಕಾಲಂಗಳಲ್ಲಿ ಗುರು ಪರಂಪರೆಯ ವಿವರ-ಅಂಕಿ, ಅಕ್ಷರಗಳನ್ನೊಳಗೊಂಡಿದೆ. ನಾಲ್ಕು ಮತ್ತು ಐದನೇ ಕಾಲಂಗಳನ್ನು ಎಂಟು ಸಣ್ಣ ಭಾಗವಾಗಿ ವಿಭಜಿಸಿ, ಅಧಿಕವಾಗಿ ವಿಷಯಗಳನ್ನು ತಿಳಿಸಲಾಗಿದೆ. ಶ್ರೀಮದಾನಂದತೀರ್ಥರಿಂದ (ಕ್ರಮ ಸಂಖ್ಯೆ 01) ಪ್ರಾರಂಭಿಸಿ ಶ್ರೀಸುಧರ್ಮೇಂದ್ರತೀರ್ಥರ ನಾಮವನ್ನು ಸೇರಿಸಿ (ಕ್ರಮ ಸಂಖ್ಯೆ 26) ವಿಸ್ತೃತ ವಿವರವುಳ್ಳ ಮಾಹಿತಿಗಳನ್ನು ದಾಖಲಿಸಲಾಗಿದೆ. ಪ್ರಾಚೀನತಮವೆಂದು ಆ ಪಕ್ಷದವರೇ ಗುರುತಿಸಿರುವುದು ಗಮನಾರ್ಹವಾಗಿದೆ. ಆ ಪ್ರತಿಯಲ್ಲಿ ದಾಖಲಿಸಲಾಗಿರುವ ವಿವರಗಳೆಲ್ಲವನ್ನೂ ನಾವು ಇಲ್ಲಿ ನಕಲು ಮಾಡುತ್ತಿಲ್ಲ.

ಪ್ರಾಚೀನತಮ ದಾಖಲೆಯಲ್ಲಿರುವ ಶಕ ಸಂಖ್ಯೆಗೆ ಅನುಗುಣವಾಗಿರುವ ಹಿಂದೂ ಸಂವತ್ಸರ ತಿಳಿಸಲ್ಪಟ್ಟಿದೆ. ಪರಂಪರೆಯಲ್ಲಿದ್ದ ಗುರುಗಳು ವೃಂದಾವನಸ್ಥರಾದ ವರ್ಷ, ಮಾಸ, ತಿಥಿಗಳೂ, ಅವರುಗಳು ಪೀಠದಲ್ಲಿದ್ದ ವರ್ಷಗಳು, ತಿಂಗಳುಗಳು, ದಿನಗಳು ಮತ್ತು ವೃಂದಾವನ ಸ್ಥಳಗಳು ಈ ರೀತಿಯ ಮಾಹಿತಿಗಳನ್ನು ಪ್ರತ್ಯೇಕವಾಗಿ ಆ ದಾಖಲೆಯಲ್ಲಿ ಕಾಣಬಹುದು.

ಪ್ರಸ್ತುತ ಚಿಂತನೆಗೋಸ್ಕರ ನಾವು ಕೇಂದ್ರೀಕರಿಸುವ ಗುರುತ್ರಯರ ಕಾಲಮಾನದ ಅಂಶಕ್ಕೆ ಅವಶ್ಯಕವಾಗಿರುವುದನ್ನು ಮಾತ್ರ ದಾಖಲೆಯಿಂದ ಆಯ್ದು ಈ ಕೆಳಗೆ ಕೊಡಲಾಗಿದೆ. (ತಿಥಿ ಮತ್ತು ದಿನಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ನೀಡುತ್ತಿಲ್ಲ.)

| ಕ್ರ. | ಯತಿಗಳು | ನಿರ್ಯಾಣ | | | ಪೀಠಸ್ಥ ಕಾಲದ ಅವಧಿ (ವರ್ಷ - ತಿಂಗಳು) | ವೃಂದಾವನದ ಸ್ಥಳ |
|---|---|---|---|---|---|---|
| 12 | ಶ್ರೀಜಿತಾಮಿತ್ರರು | 1368 ಶಕ | ಅಕ್ಷಯ | ಮಾರ್ಗಶಿರ | 20 | ಕಾಡಲೂರು |
| 13 | ಶ್ರೀರಘುನಂದನತೀರ್ಥರು | 1395 ಶಕ | ವಿಜಯ | ಕಾರ್ತಿಕ | 26 -11 | ಪಂಪಾ ಕ್ಷೇತ್ರ |
| 14 | ಶ್ರೀಸುರೇಂದ್ರತೀರ್ಥರು | 1461 ಶಕ | ವಿಕಾರಿ | ಪುಷ್ಯ | 66 - 2 | ಮಧುರೈ |

**ಮೇಲಿನ ಮಾಹಿತಿಗಳ ವಿಶ್ಲೇಷಣೆ:**

1. ಶ್ರೀಜಿತಾಮಿತ್ರರು: ಶಾ. ಶಕೆ 1368 (ಕ್ರಿ.ಶ. 1446) ಅಕ್ಷಯ ಸಂವತ್ಸರ ಮಾರ್ಗಶಿರದವರೆಗೂ ಪೀಠದಲ್ಲಿ ವಿರಾಜಮಾನರಾಗಿದ್ದರು.

2) ಶ್ರೀರಘುನಂದನರು: ಅಕ್ಷಯ ಸಂವತ್ಸರದಿಂದ ವಿಜಯ ಸಂವತ್ಸರದ ಕಾರ್ತಿಕಮಾಸದವರೆಗೂ ಅಂದರೆ ಶಾ.ಶಕ 1368 (ಕ್ರಿ.ಶ. 1446) ರಿಂದ ಶಾ.ಶಕ 1395 (ಕ್ರಿ.ಶ.1473) ರವರೆಗೆ 26 ವರ್ಷ 11 ತಿಂಗಳುಗಳಷ್ಟು ಅವಧಿಯಲ್ಲಿ ಪೀಠಸ್ಥರಾಗಿದ್ದರು ಎಂದು ಅತಿ ಸ್ಪಷ್ಟವಾಗಿ ಪ್ರಾಚೀನತಮ ಆಧಾರದಲ್ಲಿ ವಿವರವಾಗಿ ಉಲ್ಲೇಖಿಸಲ್ಪಟ್ಟಿದೆ. **ಇದು ಪ್ರಬಲತಮ ಆಧಾರವೂ ಆಗಿದೆ.**

ಅ. ಶ್ರೀರಘುನಂದನರು ಮೂಲಪ್ರತಿಮೆಯನ್ನು ಸಂಪಾದಿಸಿದರು ಎಂಬ ಹೇಳಿಕೆಗೆ ಮೊದಲನೆಯ ಆಧಾರವೆಂದು ಒಂದು ತಾಮ್ರಪತ್ರದ ಪ್ರತಿಯನ್ನು ಪುಟ 155ರಲ್ಲಿ ಛಾಪಿಸಿದ್ದಾರೆ. ಈ ಆಧಾರದಲ್ಲಿರುವಂತೆ **ಆನಂದ ಸಂವತ್ಸರದಲ್ಲಿ** ಪ್ರತಿಮೆಯ ವರ್ಗಾವಣೆ ಘಟನೆ ನಡೆದಿದೆ. ಮೇಲ್ಕಂಡ ಗುರುವೃಂದದವರ ಮಾಹಿತಿಗಳುಳ್ಳ ಪ್ರಾಚೀನತಮ ಆಧಾರ (ಪು.133)ದಲ್ಲಿರುವಂತೆ, ಶ್ರೀರಘುನಂದನರು ಪೀಠಸ್ಥರಾಗಿದ್ದ ಕಾಲ ಅಕ್ಷಯ ಸಂವತ್ಸರದಿಂದ ವಿಜಯ ಸಂವತ್ಸರವಾಗಿದೆ. ಈ ಎರಡು ಸಂವತ್ಸರಗಳ ಅಂತರದಲ್ಲಿ **ಆನಂದ ಸಂವತ್ಸರವು** ಬರುವುದಿಲ್ಲ. ಅವರ ನಿರ್ಯಾಣದ ಸಂ॥ ದಿಂದ ಇಪ್ಪತ್ತು (20) ವರ್ಷಗಳ ನಂತರ ಆನಂದ ಸಂ॥ ಬರುತ್ತದೆ. ಆದ್ದರಿಂದ ಮೊದಲನೆಯ ಆಕರ (ತಾಮ್ರಪತ್ರ) ಅಪ್ರಮಾಣವೆಂದೇ ನಿಶ್ಚಯವಾಗುತ್ತದೆ.

ಶ್ರೀರಘುನಂದನರ ನಿರ್ಯಾಣವು ವಿಜಯ ಸಂ॥ (ಶಕ 1395 - ಕ್ರಿ.ಶ. 1473) ದಲ್ಲಿ ಆಗಿದೆ ಎಂದು ಅತ್ಯಂತ ಸ್ಪಷ್ಟವಾಗಿ ಶ್ರೀರಾಯರ ಮಠದಲ್ಲಿ ಶತಮಾನದ ಪೂರ್ವದ ಪ್ರಾಚೀನತಮ ದಾಖಲೆಯಲ್ಲಿ ತಿಳಿಸಲ್ಪಟ್ಟಿದ್ದರೂ ಕ್ರಿ. ಶ. 1493ರಲ್ಲಿ ಶ್ರೀರಘುನಂದನರು ಪ್ರತಿಮೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡಿರುವುದು ಐತಿಹಾಸಿಕ ಘಟನೆ (ಮೂ.ಮಠೇ. ಪು 126) ಎಂದು ವೈಭವೀಕರಿಸಿದ್ದಾರೆ! ಈ ಸುಳ್ಳಿನ ಸರಪಳಿಯ ಸಾಲಿಗೆ ಮೂ.ಮ.ದಲ್ಲಿ (ಪು. 16-17)ರುವ ಉಳಿದ ಎರಡು ಪ್ರಬಲ ಆಕರಗಳು ಅಂದರೆ ಮಧ್ವಕವಿ ಕೃತ ಗ್ರಂಥದಲ್ಲಿರುವ ಶ್ಲೋಕ ಮತ್ತು ಅರ್ಚಾಗತಿಕ್ರಮದಲ್ಲಿಯ ಶ್ಲೋಕ ಸೇರುತ್ತವೆ.

ಆ. ಈ ರೀತಿಯ ವಿವರಗಳುಳ್ಳ ಪರಂಪರೆಯ ಪೂರ್ವ ಗುರುವೃಂದದವರ ಮಾಹಿತಿಗಳುಳ್ಳ ಪಟ್ಟಿಯಲ್ಲಿ ನಮೂದಿಸಿರುವಂತೆಯೇ, ಅಂದರೆ ಆ ಆಧಾರದಲ್ಲಿ ದಾಖಲಾಗಿರುವ ತಿಥಿ-ದಿನಗಳಲ್ಲಿಯೇ ಅವರುಗಳ ಆರಾಧನೆಯನ್ನು ಮತ್ತು ಆಯಾಯ ಸ್ಥಳಗಳಲ್ಲಿ ಆಚರಿಸಿಕೊಂಡು ಬರಲಾಗುತ್ತಿದೆ. ಪೀಠಸ್ಥರಾಗಿದ್ದ ಅವಧಿಯನ್ನೂ ಸಹ ಅತಿ ವಿವರವಾಗಿ ಸ್ಪಷ್ಟವಾಗಿ ವರ್ಷ-ತಿಂಗಳು-ದಿನ ಒದಗಿಸಿರುವುದರಿಂದ, ನಿರ್ಯಾಣದ ಶಕ ಸಂಖ್ಯೆ ಮತ್ತು ಸಂವತ್ಸರದ ಹೆಸರುಗಳೂ ಸಹ ಆ ಪಟ್ಟಿಯಲ್ಲಿ ದಾಖಲಾಗಿರುವುದರಿಂದ ಕೆಲವು ಅಂಕಿ ಅಕಸ್ಮಾತ್ ತಪ್ಪಾಗಿದೆ ಎಂದು ಜಾರಿಕೊಳ್ಳಲು ಅವಕಾಶವೇ ಇಲ್ಲವಾಗಿದೆ.

ಇ. ಇದರಲ್ಲಿರುವ ಮಾಹಿತಿಗಳಿಗೆ ಸಂವಾದವಾಗಿ ಸರ್ಕಾರದ ರೆಕಾರ್ಡ್‌ಗಳಲ್ಲಿಯೂ ಕಾಲಮಾನ ತೋರಿಸಲ್ಪಟ್ಟಿದೆ. ಉದಾಹರಣೆಗಾಗಿ, ಶ್ರೀರಾಯರ ಮಠದ ಪೀಠಸ್ಥರುಗಳಿಗೆ ಸಂಬಂಧಿಸಿದಂತೆ ಪೂರ್ವದಲ್ಲಿ ದಾನ ಶಾಸನಗಳಿವೆ. ಒಂದು ಶತಮಾನದ ಹಿಂದೆ ಅಂದರೆ 1900ನೇ ಶತಕದಲ್ಲಿ ಬ್ರಿಟಿಷ್ ಸರ್ಕಾರದಿಂದ ನಿಯಮಿಸಲ್ಪಟ್ಟ ಅಧಿಕಾರಿಗಳು ತಂಜಾವೂರಿನ ಪ್ರಾಂತ್ಯದಲ್ಲಿಯ ಶಾಸನಗಳನ್ನು ಪರೀಕ್ಷಿಸಿ, ರಿಪೋರ್ಟ್‌ಗಳನ್ನು ತಯಾರುಮಾಡಿ, 1913-14ರಲ್ಲಿ ಪ್ರಕಟಿಸಿದ್ದಾರೆ. Epigraphia Indica and Record of the Archeological Survey of India – Vol XII - (Edited by Prof. Sten Kanow Ph.D.) ಅದರಲ್ಲಿ ಪು.340ರಿಂದ Arivili mangalam Plates of Srirangaraya II - Samvat 1499 (1578 AD) - ವಿಶ್ಲೇಷಣೆ ಪ್ರಕಟವಾಗಿದೆ. ಪು. 345ರಲ್ಲಿ ಪ್ರಕಟವಾಗಿರುವ ವಿಷಯ: ಶ್ರೀರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಕಾಪಾಡಿಕೊಂಡು ಬಂದಿರುವ ದಾಖಲಾತಿಯಂತೆ ಶ್ರೀವಿಜಯೀಂದ್ರಸ್ವಾಮಿಗಳವರ ಕಾಲಾವಧಿ ಈ ರೀತಿ ಇದೆ ಎಂದಿದ್ದಾರೆ. ಅದರಲ್ಲಿರುವಂತೆ ಆ ಸ್ವಾಮಿಗಳು ಶಕ 1461(1539-40)ರಿಂದ ಶಕ 1517 (1595-1596) ಮನ್ಮಥ ಸಂ|| ಜ್ಯೇಷ್ಠ ವದ್ಯ 13ರ ವರೆಗೆ (55 ವರ್ಷ, 5 ತಿಂಗಳು) ಪೀಠಸ್ಥರಾಗಿದ್ದರು. ಈ ವಿವರಗಳು ಮೂ.ಮಠೇ.ದಲ್ಲಿಯ ಪು. 133ರ ಪ್ರಾಚೀನತಮ ಹಸ್ತಪ್ರತಿ ದಾಖಲೆಗೆ ಸರಿಹೊಂದುತ್ತವೆ. ಆದ್ದರಿಂದ ಈ ಮಾಹಿತಿಗಳು ಸತ್ಯವಾಗಿವೆ.

ಈ. ಶ್ರೀರಾಯರ ಮಠದ ವತಿಯಿಂದ ಪ್ರಕಟವಾದ ಕನ್ನಡ ಅನುವಾದ ಪುಸ್ತಕ ವಿಜಯೀಂದ್ರವಿಜಯದ ಪ್ರಸ್ತಾವನೆಯಲ್ಲಿ ಪ್ರಾಚೀನತಮ ದಾಖಲೆಯಲ್ಲಿರುವಂತೆ ಶ್ರೀಸುರೇಂದ್ರರ ಬಗೆಗೆ ಕಾಲಮಾನ ತಿಳಿಸಿದ್ದಾರೆ.

ಇದರಂತೆ ''ಶ್ರೀಸುರೇಂದ್ರರು ಕ್ರಿ.ಶ 1539/40'' ರಲ್ಲಿ ವೃಂದಾವನಸ್ಥರಾದರು ಎಂಬ ವಿಷಯವನ್ನು ಮೂ.ಮಠೇ. ಪುಸ್ತಕದಲ್ಲಿಯೇ ಎರಡು ಸ್ಥಳಗಳಲ್ಲಿದೆ. (ಪುಟ 18, 88)

ಈ ಎಲ್ಲ ಕಾರಣಗಳಿಂದಾಗಿ ಶ್ರೀಸುರೇಂದ್ರರ ಗುರುಗಳಾದ ಶ್ರೀರಘುನಂದನರ ಕಾಲಮಾನವನ್ನು, ಇತರ ವಿವರಗಳೊಂದಿಗೆ ಸ್ಪಷ್ಟವಾಗಿ ಪ್ರಾಚೀನತಮ ದಾಖಲೆಯಲ್ಲಿ (ಪು. 133) ತಿಳಿಸಲ್ಪಟ್ಟಿರುವುದನ್ನು ರಾಯರ ಮಠದವರು ಮಾನ್ಯ ಮಾಡಲೇಬೇಕಾದ ಅವಶ್ಯಕತೆ ಇದೆ.

**ಈ ಚಿಂತನೆಯಿಂದ ಕಂಡುಬರುವ ಮುಖ್ಯಾಂಶ**

ಕ್ರಿ.ಶ.1493 ರಲ್ಲಿ ಅಥವಾ ಆನಂದ ಸಂವತ್ಸರದಲ್ಲಿಯಾಗಲೀ ಉತ್ತರಾದಿಮಠದಿಂದ ಮೂಲರಾಮ ಪ್ರತಿಮೆಯನ್ನು ತರಿಸಿಕೊಂಡರು ಎಂಬ ಹೇಳಿಕೆಯು ಅವರಿಂದಲೇ ಪ್ರಕಟಿತ ಪ್ರಬಲ ಆಧಾರ (ಪು.18)ದ ಅಡಿಯಲ್ಲಿ ಅಯುಕ್ತವೆಂದೆನಿಸಿ ಸುಳ್ಳೆಂದು ಸಾಬೀತಾಗುತ್ತದೆ.

ಪು.133ರಲ್ಲಿರುವ ಪ್ರಥಮ ಭಾಗದಲ್ಲಿರುವ ಗುರುಗಳ ಕಾಲಮಾನ, ವೃಂದಾವನದ ಸ್ಥಳ ಇತ್ಯಾದಿ ಅಂಶಗಳುಳ್ಳ ಸಾಕ್ಷ್ಯಾಧಾರವು (ಪ್ರಾಚೀನತಮ) ಅವರೇ ಅಂಗೀಕರಿಸಿರುವಂತೆ ಪ್ರಬಲಪ್ರಮಾಣವಾಗಿರುವದರಿಂದ ಇದಕ್ಕೆ ತಾಳೆಯಾಗದೇ ಇರುವ ಮತ್ತಿತರ ದುರ್ಬಲ ಆಕರಗಳು ಅರ್ಥವಿಹೀನವಾಗುತ್ತವೆ. ಮೊದಲನೆಯ ಪ್ರಬಲ ಆಕರ ತಾಮ್ರಪತ್ರ ಕೃತಕವಾದದ್ದು ಎಂದೇ ನಿಶ್ಚಯಿಸಬೇಕಾಗುತ್ತದೆ.

ಮೂ.ಮಠೇ.ಲೇಖಕರು ಈ ಪ್ರಾಚೀನತಮ ಆಧಾರದ ಪ್ರತಿಯನ್ನು ಛಾಪಿಸಿದ್ದು ''ಪರ್ಯೈರಪಹೃತಾ...'' ಎಂಬ ಶ್ರೀರಘುನಂದನರ ಚರಮಶ್ಲೋಕ(?)ದ ಪ್ರಾಚೀನತೆಯನ್ನು ಸಾಬೀತು ಪಡಿಸಲು. ಆದರೆ ಅದೇ ಪುಟದಲ್ಲಿ ಮೇಲಿನ ಭಾಗದಲ್ಲಿ ಛಾಪಿಸಿರುವ ಶ್ರೀರಘುನಂದನರ ನಿರ್ಯಾಣಕಾಲ ಅವರಿಗೇ ಬಾಧಕವಾಗಿದೆ. ಕಾರಣ ಚರಮಶ್ಲೋಕವು ಕೇವಲ ಕಲ್ಪನಾವರ್ಗದಲ್ಲಿರಿಸಲು ಅರ್ಹವೆಂದೆನಿಸಿದೆ.

ಶ್ರೀರಘುನಂದನರು ಕ್ರಿ.ಶ.1473/74ರಲ್ಲಿ ವೃಂದಾವನಸ್ಥರಾದ ನಂತರದ ಕಾಲದಲ್ಲಿ ಅಂದರೆ ಕ್ರಿ.ಶ.1493ರಲ್ಲಿ ಚಂದ್ರಭಟ್ಟನು ಆ ಗುರುಗಳಿಗೆ ಪ್ರತಿಮೆಯನ್ನು ಒಪ್ಪಿಸಿದನು ಎಂದು ಹೇಳುವುದು ಸುಳ್ಳಿನ ಪರಮಾವಧಿ. ಈ ಚರಮಶ್ಲೋಕದಲ್ಲಿ ಉಲ್ಲೇಖವಾಗಿರುವ ಘಟನೆಯೇ ಅಸತ್ಯವೆಂದು ಅತ್ಯಂತ ಸ್ಪಷ್ಟವಾಗಿ ಸಂಶಯಾತೀತವಾಗಿ ನಿರ್ಣಯವನ್ನು ಓದುಗರ ಮುಂದೆ ಇಡಲಾಗಿದೆ.

**ವಾಚಕರೇ!** ಮೂ.ಮಠೇ ಲೇಖಕರ ಹೇಳಿಕೆಗಳೂ, ತಾಮ್ರಪತ್ರದಲ್ಲಿಯ ಆನಂದ ಸಂ|| ದಲ್ಲಿ ಪ್ರತಿಮೆ ಸಂಪಾದಿಸಲ್ಪಟ್ಟಿತು ಎಂಬ ಪ್ರಕಟನೆಯೂ, ವಿಜಯೀಂದ್ರವಿಜಯದ ನಿಲುವು ಇವುಗಳೆಲ್ಲ ಪ್ರಾಚೀನತಮ ಆಧಾರದ ಮೇಲಿನ ಭಾಗದ ಮಾಹಿತಿಗೆ ಅತ್ಯಂತ ವಿರುದ್ಧವಾಗಿವೆ. ಕಾರಣ ಶ್ರೀರಘುನಂದನರ ಕಲ್ಪನೆಯ ಚರಮ ಶ್ಲೋಕವನ್ನು ಕೈಬಿಡಬೇಕಾಗಿರುವ ಅನಿವಾರ್ಯತೆ ಇದೆ.

ಪ್ರಾಚೀನತಮ ಎಂದು ಹೇಳಿಕೊಳ್ಳುವ ಈ ಆಧಾರವನ್ನು ಪರಿಶೀಲಿಸಿದಾಗ ಕಂಡುಬಂದ ಇನ್ನಿತರ ಗಮನಾರ್ಹವಾದ ಅಂಶಗಳು ಹೀಗಿವೆ :

1. ಶ್ರೀಜಯತೀರ್ಥರ ವೃಂದಾವನಸ್ಥಳ – ಮಳಖೇಡ, ಕಾಗಿಣೀತೀರ
2. ಶ್ರೀಜಿತಾಮಿತ್ರತೀರ್ಥರ ನಿರ್ಯಾಣಕಾಲ – ಶಾ.ಶ. 1368 (ಕ್ರಿ.ಶ.1447) ಅಕ್ಷಯ ಸಂ. ಮಾರ್ಗಶಿರ ಅಮಾವಾಸ್ಯಾ .
3. ಶ್ರೀಸುರೇಂದ್ರತೀರ್ಥರ ನಿರ್ಯಾಣಕಾಲ ಹಾಗೂ ವೃಂದಾವನಸ್ಥಳ – ಶಾ.ಶ. 1461 (ಕ್ರಿ.ಶ.1540) ವಿಕಾರಿ ಸಂ. ಮಧುರೈ.

ಪ್ರಾಚೀನತಮ ಆಧಾರವೆಂದು ಛಾಪಿಸಿರುವ ಈ ಆಧಾರದಲ್ಲಿರುವ ಅನೇಕ ಅಂಶಗಳನ್ನು ರಾಯರ ಮಠದವರೇ ಒಪ್ಪದೇ, ಅನ್ಯ ನಿಲುವನ್ನು ಹೇಗೆ ಹೊಂದಿದ್ದಾರೆ ಎಂಬುದನ್ನು ನೋಡೋಣ:

1. ಶ್ರೀಜಯತೀರ್ಥರ ಮೂಲವೃಂದಾವನ ಮಳಖೇಡದ ಕಾಗಿಣೀತೀರದಲ್ಲಿದೆ ಎಂದು ಅವರ ಪ್ರಾಚೀನತಮ ಕಲ್ಲಚ್ಚು ಸ್ಪಷ್ಟವಾಗಿ ಹೇಳುತ್ತಿರುವಾಗ ನವವೃಂದಾವನದಲ್ಲಿರುವ ಶ್ರೀರಘುವರ್ಯರ ವೃಂದಾವನವೇ ಶ್ರೀಜಯತೀರ್ಥರ ಮೂಲವೃಂದಾವನವೆಂದು ಶ್ರೀರಾಯರ ಮಠದ ಪಂಚಾಂಗಗಳಲ್ಲಿ ಮತ್ತು ಇತರ ಪ್ರಕಟಣೆಗಳಲ್ಲಿ ಉಲ್ಲೇಖಿಸುತ್ತಿರುವುದು ಸರಿಯೇ? ಇದು ಅವರ ಹಿರಿಯರಿಗೆ ಅವರೇ ಮಾಡುತ್ತಿರುವ ದ್ರೋಹವಲ್ಲವೇ?

2. ಶ್ರೀಜಿತಾಮಿತ್ರರು ಕಣ್ಮರೆಯಾದದ್ದು ಆಶ್ವಿನ ಕೃಷ್ಣ ಅಷ್ಟಮೀ ಎಂದು ವಿಜಯೀಂದ್ರವಿಜಯ ಹೇಳುತ್ತಿದೆ–

**ಆಶ್ವಿನೇ ಮಾಸಿ ಪಕ್ಷೇ ಚ ಕೃಷ್ಣೇ ಕೀಲಕವತ್ಸರೇ ।**
**ಅಷ್ಟಮ್ಯಾಂ ಕಾಡಲೂರಾಖ್ಯಸಂಗಮೇ ಸಂಸ್ಥಿತೋಽಭವತ್ ॥ 3-13**

ಆದರೆ ಪ್ರಾಚೀನತಮ ಕಲ್ಲಚ್ಚು ಮಾರ್ಗಶಿರ ಅಮಾವಾಸ್ಯೆ ಎಂದು ಹೇಳುತ್ತಿದೆ. ಅದರಂತೆ, ರಾಯರ ಮಠದಲ್ಲೂ ಅಮಾವಾಸ್ಯೆಯಂದೇ ಆರಾಧನೆ ಆಚರಿಸಲ್ಪಡುತ್ತಿದೆ. ಹೀಗಾಗಿ ಮಧ್ವಕವಿ ಬರೆದ ವಿಜಯೀಂದ್ರವಿಜಯ ಅಪ್ರಮಾಣವೆಂದೇ ನಿರ್ಣಯಿಸಬೇಕಾಗುತ್ತದಲ್ಲವೆ?

3. ಪ್ರಾಚೀನತಮ ಪಟ್ಟಿಯಲ್ಲಿರುವಂತೆ ಶ್ರೀಸುರೇಂದ್ರತೀರ್ಥರ ನಿರ್ಯಾಣದ ವರ್ಷ ಶಾ.ಶಕ 1461 (ಕಿ.ಶ.1539-40) ವಿಕಾರಿ ಸಂ॥ ಮತ್ತು ಬೃಂದಾವನ ಸ್ಥಳವು ಮಧುರೈ ಎಂದಿದೆ.

ಆದರೆ ಅಧಿಕೃತ ಪುಸ್ತಕಗಳಾದ ಗುರುಚರಿತೆ, ಶ್ರೀ ಮೂಲರಾಮ, ಅಜಯ್ಯವಿಜಯೀಂದ್ರರು ಇವುಗಳಲ್ಲಿ ಅವರ ನಿರ್ಯಾಣದ ವರ್ಷ ಶಾ.ಶ.1497 (ಕ್ರಿ.ಶ.1575) ಎಂದಿದೆ, ಮತ್ತು ವಿಜಯೀಂದ್ರವಿಜಯದಲ್ಲಿ ಅವರ ಬೃಂದಾವನ ಗಜಗಹ್ವರದಲ್ಲಿದೆ (5-36) ಎಂದು ತಿಳಿಸಲ್ಪಟ್ಟಿದೆ. ಪ್ರಾಚೀನತಮ ಪಟ್ಟಿಯಲ್ಲಿರುವ ಮಾಹಿತಿಯನ್ನು ಅವರೇ ಅಂಗೀಕರಿಸಿ ಆಧಾರವೆಂದು ಒದಗಿಸಿರುವುದರಿಂದ, ಮೇಲಿನ ಎರಡೂ ಪುಸ್ತಕಗಳನ್ನು ಅಪ್ರಾಮಾಣದ ವರ್ಗದಲ್ಲಿಡಬೇಕಾಗುತ್ತದೆ.

4. ಈ ಪ್ರಾಚೀನತಮ ಪಟ್ಟಿಯಲ್ಲಿ ಶ್ರೀಧೀರೇಂದ್ರತೀರ್ಥರ ಹೆಸರು ಮತ್ತು ಚರಮಶ್ಲೋಕ ಇಲ್ಲದಿರುವುದು ಗಮನಾರ್ಹ. ಆದರೆ, ಇಂದು ರಾಯರ ಮಠದವರು ತಮ್ಮ ಗುರುಪೀಳಿಗೆಯಲ್ಲಿ ಶ್ರೀಧೀರೇಂದ್ರರ ಹೆಸರನ್ನು ಮತ್ತು ಚರಮಶ್ಲೋಕವನ್ನು ಸೇರಿಸಿಕೊಂಡಿದ್ದಾರೆ. ಹೀಗಾದರೆ, ಅವರ ಪರಂಪರೆಯಲ್ಲಿ ಬಂದ ಯತಿಗಳ ಕಾಲಮಾನವನ್ನು ಹೇಗೆ ಕೂಡಿಸುತ್ತಾರೆ ಎಂಬುದು ಪ್ರಶ್ನೆಯಾಗಿ ಉಳಿಯುತ್ತದೆ. ಶ್ರೀಧೀರೇಂದ್ರರನ್ನು ಸ್ವೀಕರಿಸಿದ ಮೇಲೆ ಶ್ರೀಯಾದವೇಂದ್ರತೀರ್ಥರನ್ನು ಗುರುಪರಂಪರೆಯಲ್ಲಿ ಸ್ವೀಕರಿಸದಿರಲು ಕಾರಣವೇನು?

ನಿಜ ಹೇಳಬೇಕೆಂದರೆ, ಈ ಪ್ರಾಚೀನತಮ ಪರಂಪರಾಪಟ್ಟಿಯು ಬಿತ್ತರಿಸಿರುವ ಬೆಳದಿಂಗಳು ಮೂ.ಮಠೇ ಲೇಖಕರು ಹರಡಲು ಪ್ರಯತ್ನಸಿರುವ ಅಜ್ಞಾನದ ಕತ್ತಲೆಯನ್ನು ಪೂರ್ಣನಾಶಪಡಿಸಿದೆ ಮತ್ತು ಪ್ರತಿಮಾ ಸಂಪಾದನೆಯ ಕಥೆಯನ್ನು ಧೂಳಿಪಟ ಮಾಡಿದೆ.

**(ಈ ಆಧಾರದ ಸ್ಕ್ಯಾನ್ ಮಾಡಿದ ಪ್ರತಿಯನ್ನು ಮುಂದಿನ ಪುಟಗಳಲ್ಲಿ ನೀಡಿದ್ದೇವೆ)**

* * * *



ಮೂ.ಮತೇ ಪುಸ್ತಕದ ಪುಟ 136ರಲ್ಲಿ ಮುದ್ರಿಸಲಾದ ''ಶ್ರೀಸುಗುಣೇಂದ್ರತೀರ್ಥರ ಕಾಲದ ಪ್ರಾಚೀನತಮ ಕಲ್ಲಚ್ಚಿನ ಮುದ್ರಣದ ಪ್ರತಿ''ಯ ಹಾಳೆಯ ಹಿಂಭಾಗ.

# श्रीराघवेंद्रस्वामिगळवरमठदगुरुपरंपरापीळगी

श्रीमदाच्यार्यरु कल्यब्द ४२२० केसरियाद शके १०४० ने विलंबीवर्ष आषाढ कृष्ण ४ दिनदल्लीं अवतरिसि १०४८ ने पराभव वर्षदल्लि उपनीत राद नंतर अच्युत प्रेक्षरिंद संन्यास पडदु ४० दिवस प्रसंगदल्लि बहुवादिगळंनु जयमाडि गुरुगळिंद पट्टाभिषेक पूर्वक आनंदतीर्थरेंब हेसरु पडदु सच्छास्त्र गळंनु निर्मिसि बदरिकाश्रमदिंद ८ व्यासमुष्टिगिगळंनु संपादिसिकोंडु बंदशक १०५६ ने आनंदवर्षमदलु माडि ६२ वर्ष ७ तिंगळु १९ दिवस दिग्विजय रामदेवर पूजामाडुता गजपतिकोशदिंद नरहरि तीर्थरु तंदुसमर्पिसिद श्रीमूलराम सीतापतिमेंगळंनु २ तिंगळु २० दिन पूजा माडि पद्मनाभ यतिगळिगे संस्थानकोट्टु ११२० ने पिंगळ वर्ष माघ शुद्ध ९ दिन बदरिकाश्रमकेदयमाडि दारभ्य गुरु परंपरा पीळगी.

| संख्या | स्वामिगळवर हेसरु | पूर्वाश्रमनाम | वृंदावनस्थराद वर्षमासदिनगळु | | | | संस्थान आळिद मिती | | | वृंदावनस्थल | नदितीर अथवा तटाकादि | विरचित ग्रंथ नामगळु |
|---|---|---|---|---|---|---|---|---|---|---|---|---|
| | | | शक | वर्ष | मास | दिन | वर्ष | मास | दिन | | | |
| १ | श्रीमदानंद तीर्थरु. | वासुदेवाच्यार्यरु. | ११२० | पिंगल. | माघशुद्ध. | ९ | ६२ | १० | ९ | बदरिका. | भागीरथी. | मूळग्रंथ ३७ |
| २ | पद्मनाभतीर्थरु. | शोभन भट्टरु. | ११२७ | रक्ताक्षि | कार्तीकवद्य | १४ | ६ | ९ | २० | आनेगोंदी. | तुंगभद्रा. | संन्यायरत्नावळी. |
| ३ | नरहरीतीर्थरु. | रामशास्त्री. | ११३६ | श्रीमुख | पौष वद्य. | ७ | ९ | १ | २३ | चक्रतीर्थ. | तुंगभद्रा. | भाष्यव्यारव्यान. |
| ४ | माधव तीर्थरु. | गोविंदशास्त्री. | ११५२ | विकृति. | भाद्र. वद्य. | ३० | १६ | ८ | ८ | मंणूरु. | भीमरथी. | मूळव्यारव्यान. |
| ५ | अक्षोभ्यतीर्थरु. | गोविंदशास्त्री. | ११६७ | विश्वावसु | मार्ग. वद्य. | ५ | १५ | २ | २० | मळखेड. | कागिनी. | वेदव्यारव्यान. |
| ६ | जयरायरु. | धोंडोरघुनाथ. | ११९० | विभव. | आषा. वद्य. | ५ | २२ | ७ | ० | ” | ” | टीकाग्रंथगळु. |
| ७ | विद्याधिराजरु. | कृष्ण भट्टरु. | १२५४ | आंगिर. | वैशारवशुद्ध | ३ | ६१ | ९ | १३ | यरगोळ. | तटाक. | |
| ८ | कवींद्र तीर्थरु. | वासुदेवशास्त्री. | १२६१ | प्रमाथि | चैत्रशुद्ध. | ९ | ६ | ११ | ६ | आनेगोंदी. | तुंगभद्रा. | |
| ९ | वागीशतीर्थरु. | रघुनाथाच्यार्यरु. | १२६९ | सर्वजित्तु | चैत्रवद्य. | ३ | ८ | ० | ९ | ” | ” | |
| १० | रामचंद्रतीर्थरु. | माधव शास्त्री. | १२९८ | नळ. | वैशारवशुद्ध | ६ | २९ | ० | १९ | यरगोळ. | तटाक. | |
| ११ | विबुधेंद्रतीर्थरु. | रघुनाथ भट्टरु. | १३४८ | पराभव | मार्ग. शुद्ध. | १० | ५० | ७ | ४ | तिर्नवल्ली | ताम्रपर्णी. | |
| १२ | जितामित्ररु. | अनंतप्पनवरु. | १३६८ | अक्षय | मार्ग. वद्य. | ३० | २० | ० | २० | काडूरु | कृष्णा. | |
| १३ | रघुनंदनतीर्थरु. | रामचंद्राचारु. | १३९५ | विजय. | कार्तीकवद्य. | ८ | २६ | १० | २२ | पंपाक्षेत्र. | तुंगभद्रा. | |
| १४ | सुरेंद्र तीर्थरु. | वेंकटकृष्णाचारु. | १४६१ | विकारि | पौषशुद्ध. | १२ | ६६ | १ | १९ | मधुरी. | वैघा. | परतत्त्वप्रकाशिकाआमोदादि ग्रंथगळु १०४. |
| १५ | विजयींद्र तीर्थरु. | विठ्ठलाचारु. | १५१७ | मन्मथ | जेष्टवद्य. | १२ | ५५ | ५ | १६ | कुंभकोण | कावेरी. | |
| १६ | सुधींद्रतीर्थरु. | नारायणाचारु. | १५४५ | रुधिरोद्गारी | फाल्गुनवद्य. | २ | २८ | ८ | १९ | आनेगोंदी. | तुंगभद्रा. | अळंकारमंजर्यादि. |
| १७ | राघवेंद्र तीर्थरु. | वेणीवेंकट भट्टरु. | १५९३ | विरोधिकृत् | श्रावणवद्य. | २ | ४७ | ५ | ० | मंत्रालय. | ” | परिमळादि. |
| १८ | योगिंद्रतीर्थरु. | यंकंणाचारु. | १६१० | विभव | माघशुद्ध | १० | १७ | ५ | २३ | श्रीरंग. | कावेरी. | |
| १९ | सुरींद्र तीर्थरु. | वासुदेवाचारु. | १६१३ | आंगीरस | जेष्टशुद्ध | २ | ३ | ३ | २२ | मधुरी. | वैघा. | |
| २० | सुमतींद्र तीर्थरु. | मुद्दुकृष्णाचारु. | १६४७ | विश्वावसु | आषाढवद्य. | ११ | ३३ | १ | २४ | श्रीरंग. | कावेरी. | भावरत्नकोश. |
| २१ | उपेंद्र तीर्थरु. | विजयींद्राचारु. | १६५० | कीलक. | मार्ग. वद्य. | ८ | ३ | ४ | २७ | ” | ” | |
| २२ | वादींद्रतीर्थरु. | श्रीनिवासाचारु. | १६७२ | प्रमोदूत. | जेष्टशुद्ध. | ९ | २१ | ५ | १६ | मंत्रालय. | तुंगभद्रा. | तत्वोद्योत टिप्पणी. |
| २३ | वसुधेंद्रतीर्थरु. | पुरुषोत्तमाचारु. | १६९२ | विषु. | आश्वि. वद्य. | ७ | ११ | ४ | १२ | केंचनगुड्डु. | ” | |
| २४ | वरदेंद्रतीर्थरु. | बलरामाचारु. | १७०७ | विश्वावसु | आषाढशुद्ध | ६ | २३ | ८ | १४ | पुणें | मुचकुंदा. | |
| २५ | भुवनेंद्रतीर्थरु. | लक्ष्मीनारायणाचारु | १७२१ | सिद्धार्थि | वैशारववद्य. | ७ | १३ | १० | १६ | राजोळी. | तुंगभद्रा. | |
| २६ | सुबोधेंद्रतीर्थरु | मुद्दुकृष्णाचारु. | १७५७ | मन्मथ | चैत्रवद्य. | ३ | ३५ | १० | २६ | नंजनगुडी. | कपिला. | |
| २७ | सुजनेंद्र तीर्थरु. | जयरामाचारु. | १७५८ | दुर्मुरवी | कार्तिकवद्य. | ८ | १ | ७ | ५ | ” | ” | चंद्रिकादूषणभूषण. |
| २८ | सुज्ञानेंद्र तीर्थरु. | राघवेंद्राचारु. | १७८२ | दुर्मति. | श्रावणवद्य. | ४ | २४ | ८ | २६ | ” | ” | |
| २९ | सुधर्मेंद्र तीर्थरु. | गणेशाचारु. | १७९९ | आंगिरस | पौषवद्य. | ५ | ११ | ५ | १ | मंत्रालय. | तुंगभद्रा. | |

ही पिळगी बेळगांव पैकी भिकाजीहरी सामंत यांणीं आपल्या "बेळगांव समाचार" छापखान्यांत छापून प्रसिद्ध केली. मिती आश्विन शुद्ध ६ शके १८०३ वृ. संवत्सर

ಮೂ.ಮಠೇ ಪುಸ್ತಕದ ಪುಟ 136ರಲ್ಲಿ ''ಶ್ರೀಸುಗುಣೇಂದ್ರತೀರ್ಥರ ಕಾಲದ ಪ್ರಾಚೀನತಮ ಕಲ್ಲಚ್ಚಿನ ಮುದ್ರಣದ ಪ್ರತಿ'' ಎಂಬುದಾಗಿ ಶ್ರೀರಾಘವೇಂದ್ರಸ್ವಾಮಿಗಳ ಮಠದ ಯತಿಪರಂಪರೆಯ ಪಟ್ಟಿಯನ್ನು ತಿಳಿಸುವ ಒಂದು ಜೀರ್ಣವಾದ ಹಾಳೆಯ ನಕಲನ್ನು ಮುದ್ರಿಸಿದ್ದಾರೆ. ಅದೇ ಕಲ್ಲಚ್ಚಿನ ಮುದ್ರಣದ ಸ್ಪಷ್ಟವಾದ ಹಾಳೆಯ ನಕಲನ್ನು ವಾಚಕರ ಅನುಕೂಲಕ್ಕಾಗಿ ನೀಡಲಾಗಿದೆ.

# ''ವಿಜಯೀಂದ್ರವಿಜಯ'' ಕೃತಿಯ ವಿಮರ್ಶೆ

ಮೂ.ಮಠೇ ಲೇಖಕರು, ಶ್ರೀರಘುನಂದನತೀರ್ಥರು ಮೂಲರಾಮಪ್ರತಿಮೆಯನ್ನು ಸಂಪಾದಿಸಿದರು ಎಂಬ ವಾದಕ್ಕೆ ವಿಜಯೀಂದ್ರವಿಜಯ (ವಿ.ವಿ.) ದಲ್ಲಿರುವ

ತದ್ವಂಶೇ ಜನಿತೋ ಜ್ಞಾನೀ ರಘುನಂದನಸಂಜ್ಞಿತಃ ।
ತೇನ ಸಂಪಾದಿತಾ ರಾಮಪ್ರತಿಮಾ ಪರಹಸ್ತಗಾ ॥
ರಘುನಂದನಃ ಸ್ವಶಿಷ್ಯೇಣ ವಿಪ್ರೇಣ ಪ್ರಿಯವಾದಿನಾ ।
ಆನಯಾಮಾಸ ರಾಮಸ್ಯ ಅರ್ಚಾಂ ತಾಂ ಸೀತಯಾ ವಿನಾ ॥

ಎಂಬ ಎರಡು ಶ್ಲೋಕಗಳನ್ನು ಸಾಕ್ಷ್ಯಾಧಾರವೆಂದು ಪ್ರಕಟಿಸಿದ್ದಾರೆ. (ಮೂ.ಮಠೇ. ಪು 17). ಶ್ಲೋಕದ ಸಂಖ್ಯೆ, ಸರ್ಗ ಇತ್ಯಾದಿಗಳ ವಿವರವಿಲ್ಲ. ಈ ವಿಜಯೀಂದ್ರವಿಜಯ ಕೃತಿಯನ್ನು ಆಧಾರವೆಂದು ಪರಿಗಣಿಸುವುದಕ್ಕಾಗುವುದಿಲ್ಲವೆಂಬ ವಿವರಗಳೊಂದಿಗೆ ಒಂದು ವಿಮರ್ಶಾತ್ಮಕ ಲೇಖನ ವಾಚಕರ ಮುಂದೆ ಇಡಲಾಗುತ್ತಿದೆ.

ಶ್ರೀರಾಯರ ಮಠದವರು ತಮ್ಮ ಪರಂಪರೆಯನ್ನು ಹೇಳಿಕೊಳ್ಳುವಾಗಲೆಲ್ಲ ನಿಯಮೇನ ಶ್ರೀಮದುತ್ತರಾದಿಮಠದ ಪರಂಪರೆಯನ್ನು ವಿಶೇಷವಾಗಿ ಶ್ರೀವಿದ್ಯಾನಿಧಿತೀರ್ಥರನ್ನು ದೂಷಿಸುತ್ತಲೇ ಬಂದಿದ್ದಾರೆ. ಅಲ್ಲದೇ ''ಉತ್ತರಾದಿಮಠದಲ್ಲಿರುವ ಮೂಲರಾಮಪ್ರತಿಮೆಯನ್ನು ಕದ್ದುಕೊಂಡು ಬಂದಿದ್ದೇವೆ'' ಎಂದು ಹೇಳಿಕೊಳ್ಳುತ್ತಲೇ ಇದ್ದಾರೆ. ಈ ಹೇಳಿಕೆಗಳಿಗೆಲ್ಲಾ ಅವರಿಗಿರುವ ಮೂಲ ಆಧಾರ ವಿಜಯೀಂದ್ರವಿಜಯವೆಂಬ ಕೃತಿಯೇ ಆಗಿದೆ.

**ವಿಮರ್ಶೆಯ ಮುನ್ನ...**

ವಿಜಯೀಂದ್ರವಿಜಯ ಕಾವ್ಯದ ಪ್ರಥಮ ಉಲ್ಲೇಖ ಬರುವುದು, 1949ರಲ್ಲಿ ಪ್ರಕಟವಾದ ಡಾ।। ಹೆಚ್. ಕೆ.ವೇದವ್ಯಾಸಾಚಾರ್ಯರ ''ಗುರುಚರಿತೆ'' ಎಂಬ ಸಂಶೋಧನಾತ್ಮಕ ಐತಿಹಾಸಿಕ ಎಂದು ಹೇಳಿಕೊಳ್ಳುವ ಗ್ರಂಥದಲ್ಲಿ. ಕಾವ್ಯದ ಕರ್ತೃ ಮಧ್ವಕವಿ. ಶ್ರೀವಾದಿರಾಜತೀರ್ಥರ ಶಿಷ್ಯ ಎಂದು ಹೇಳಿಕೊಂಡಿದ್ದಾರೆ. ಅದನ್ನು ನಂಬುವುದಾದರೆ ಅವನ ಕಾಲ ಶ್ರೀವಾದಿರಾಜತೀರ್ಥರ ಕಾಲವಾದ ಕ್ರಿ. ಶ. 1480-1600ರ ಮಧ್ಯದ್ದು ಎಂದು ಊಹಿಸಬೇಕು. 1949ರಲ್ಲಿ ಪ್ರಥಮ ಬಾರಿ ಅವನ ಉಲ್ಲೇಖ ಬರುವವರೆಗೆ ಮಧ್ವಕವಿ ಎಂಬ ಹೆಸರಾಗಲೀ, ಅವನ ಕಾವ್ಯ ವಿಜಯೀಂದ್ರವಿಜಯದ ಉಲ್ಲೇಖ ಕ್ರಿ. ಶ. 1600 ರಿಂದ 1949ರ ವರೆಗೆ ಎಲ್ಲಿಯೂ ಬಂದಿಲ್ಲ.

ಅಂತಾರಾಷ್ಟ್ರೀಯ ಖ್ಯಾತಿಯ ಸಂಶೋಧಕ ಡಾ।। ಬಿ.ಎನ್.ಕೆ ಶರ್ಮ ಅವರು ತಮ್ಮ ಮಹಾಪ್ರಬಂಧದಲ್ಲಿ ಈ ಕಾವ್ಯದ ಕುರಿತಾಗಿ ಹೇಳಿದ ಮಾತುಗಳೂ ಗಮನಾರ್ಹ. "I have not had access to the Vijayindra Vijaya of Madhvakavi mentioned in Gurucharite in any manuscript library." (Dr. B.N.K Sharma - *A History of Dvaita School of Vedanta and its literature, Vol II* pp 169, - 1961)

''ಗುರುಚರಿತೆಯಲ್ಲಿ ಉಲ್ಲೇಖಿತವಾದ ಮಧ್ವಕವಿಯ ವಿಜಯೀಂದ್ರವಿಜಯದ ಹಸ್ತಲಿಖಿತ ಪ್ರತಿಯು ಯಾವ ಪುಸ್ತಕ ಭಾಂಡಾರದಲ್ಲಿಯೂ ನನಗೆ ದೊರೆತಿಲ್ಲ''— ಕನ್ನಡ ಅನುವಾದ ಡಾ।। ಎಂ.ಕೆ. ಭಾರತಿರಮಣಾಚಾರ್, *ದ್ವೈತ ವಾಙ್ಮಯ ಹಾಗೂ ಇತಿಹಾಸ ಸಂಪುಟ 2* ಪುಟ 281 (1987)

ಈ ಹಿನ್ನೆಲೆಯನ್ನಿಟ್ಟುಕೊಂಡು ಈ ಕಾವ್ಯದಲ್ಲಿ ಹೇಳಿದ ವಿವಾದಾತ್ಮಕ ವಿಷಯಗಳನ್ನು ಪರಿಶೀಲಿಸೋಣ–

ಈ ಕೃತಿಯನ್ನು ರಚಿಸಿದವರು ಮಧ್ವಕವಿಗಳು. ಸೋದೆಯ ಶ್ರೀವಾದಿರಾಜರ ಶಿಷ್ಯ ಎಂದು ಹೇಳಿಕೊಂಡಿದ್ದಾರೆ. ಈ ಕೃತಿಯನ್ನು ಕಾವ್ಯವೆಂದು ಕರೆಯುವುದೂ ಉಂಟು. ಈ ಕೃತಿ ರಚಿತವಾದದ್ದು 17ನೇ ಶತಮಾನದ ಪೂರ್ವಾರ್ಧವೆಂದು ಡಾ।। ಬಿ.ಎನ್.ಕೆ.ಶರ್ಮಾ ಅವರು 1995ರಲ್ಲಿ ತಾವೇ ಈ ಕೃತಿಯನ್ನು ಪ್ರಕಟಿಸುತ್ತ ತಮ್ಮ ಪೀಠಿಕೆಯಲ್ಲಿ ತಿಳಿಸಿದ್ದಾರೆ. ಆದರೆ ಖ್ಯಾತಸಂಶೋಧಕರಾದ ಡಾ।। ಶ್ರೀನಿವಾಸ ಹಾವನೂರವರು ಈ ಕೃತಿ ರಚಿತವಾದದ್ದು 18ನೇ ಶತಮಾನದ ಕೊನೆ ಎಂದು ನಿರೂಪಿಸಿದ್ದಾರೆ (ನೋಡಿರಿ ಅನುಬಂಧ 2). ಈ ಕಾವ್ಯದಲ್ಲಿ ಒಟ್ಟು 7 ಸರ್ಗಗಳುಂಟು ಎಂದು ಹೇಳುತ್ತಾರೆ. ಅವುಗಳಲ್ಲಿ ಉತ್ತರಾದಿಮಠವನ್ನು (ಶ್ರೀವಿದ್ಯಾನಿಧಿಗಳನ್ನು ಹಾಗೂ ಶ್ರೀರಾಮಚಂದ್ರತೀರ್ಥರ ವಿಶ್ವಾಸಕ್ಕೆ ಪಾತ್ರರಾದ ಶಿಷ್ಯರನ್ನು) ದೂಷಿಸುವುದಕ್ಕೋಸ್ಕರವೇ 5 ಸರ್ಗಗಳು ಮೀಸಲಾಗಿವೆ. ಅದಕ್ಕೆ ತಕ್ಕಂತೆ ಸನ್ನಿವೇಶಗಳನ್ನು ಹೆಣೆಯುತ್ತಾ ಇತರ ಪೀಠಾಧಿಪತಿಗಳ ವಿಚಾರಗಳೂ ಅಲ್ಪ-ಸ್ವಲ್ಪ ನಿರೂಪಿಸಲ್ಪಟ್ಟಿದೆ. ಮುಂದಿನ 2 ಸರ್ಗಗಳಲ್ಲಿ ಶ್ರೀವಿಜಯೀಂದ್ರರ ವಿಷಯವನ್ನು ತಕ್ಕಮಟ್ಟಿಗೆ ನಿರೂಪಿಸಲಾಗಿದೆ. ಶ್ರೀವಿಜಯೀಂದ್ರರ ಬಗ್ಗೆ ಸರಿಯಾದ ಮಹಿತಿಯೂ ಇಲ್ಲ.

ಶ್ರೀವಾದಿರಾಜರ ಶಿಷ್ಯರಲ್ಲಿ ''ಮಧ್ವಕವಿ'' ಎಂಬ ಹೆಸರಿನ ಒಬ್ಬ ಶಿಷ್ಯರಿದ್ದರೆಂದು ಅವರ ಚರಿತ್ರೆಯನ್ನು ತಿಳಿಸುವ ಯಾವ ಪುಸ್ತಕಗಳಲ್ಲೂ ಉಲ್ಲೇಖವಿಲ್ಲ. ವಿಜಯೀಂದ್ರವಿಜಯಕಾವ್ಯದ ಬಗ್ಗೆ ಮೊಟ್ಟ ಮೊದಲ ಉಲ್ಲೇಖ ಬಂದದ್ದು 1949ರಲ್ಲಿ (ಗುರುಚರಿತೆ). ನಂತರ ಮೊಟ್ಟ ಮೊದಲು ಪ್ರಕಟವಾದದ್ದು ಕ್ರಿ.ಶ. 1995ರಲ್ಲಿ. (ಡಾ।। ಬಿ.ಎನ್.ಕೆ.ರವರಿಂದ.)

ಈ ವಿಜಯೀಂದ್ರವಿಜಯಕಾವ್ಯ ಪ್ರಾಮಾಣಿಕ ಕಾವ್ಯವೆಂದು ನಂಬಲು ಅರ್ಹವಾಗಿಲ್ಲವೆಂಬುದು ಆ ಕಾವ್ಯದಲ್ಲೇ ಇರುವ ಅನೇಕ ಅಂಶಗಳಿಂದಲೇ ಹೇಗೆ ತಿಳಿದು ಬರುತ್ತದೆ ಎಂಬುದನ್ನು ನೋಡೋಣ–

1. ವಿ.ವಿ. ಕಾವ್ಯದಲ್ಲಿ ಕಾವ್ಯದ ಲಕ್ಷಣಗಳೇ ಇಲ್ಲದಿರುವುದರಿಂದ ಇದನ್ನು ಕಾವ್ಯವೆಂದು ಗುರುತಿಸಲಾಗದು. ಮಹಾಕಾವ್ಯವೆಂದು ಹೇಳಿಕೊಳ್ಳುತ್ತಿರುವುದು ಹಾಸ್ಯಾಸ್ಪದ.
2. ವಿಷಯಗಳ ನಿರೂಪಣೆ ಸಮಂಜಸವಾಗಿಲ್ಲ.
3. ಶ್ರೀವಿಜಯೀಂದ್ರರಂತಹ ಮಹಾನುಭಾವರ ಹೆಸರನ್ನಿಟ್ಟುಕೊಂಡಿರುವ ಈ ಕೃತಿಯಲ್ಲಿ ಶ್ರೀವಿಜಯೀಂದ್ರರ ಬಗ್ಗೆ ಸಮಗ್ರವಾದ ಮಾಹಿತಿ ಇಲ್ಲ. ಅವರ ಪೂರ್ವಾಶ್ರಮದ ತಂದೆ-ತಾಯಿಗಳ ಹೆಸರು, ಹುಟ್ಟಿದ ಊರಿನ ಹೆಸರು, ಸನ್ಯಾಸಾಶ್ರಮಸ್ವೀಕಾರ ಇತ್ಯಾದಿಗಳ ಬಗ್ಗೆ ಪ್ರಸ್ತಾಪವೇ ಇಲ್ಲ. ಶ್ರೀವಿಜಯೀಂದ್ರರ ಅಸಾಧಾರಣಕಾರ್ಯವಾದ 104 ಗ್ರಂಥಗಳ ರಚನೆ, ಅವುಗಳ ಹೆಸರು, ಅವುಗಳ ಮಹತ್ವ ಇವಾವುದರ ಬಗ್ಗೆಯೂ ಚಕಾರವಿಲ್ಲ. ಹೀಗೆ ಕಾವ್ಯದ ನಾಯಕನನ್ನು ಕಡೆಗಾಣಿಸಿ ಇತರ ಅಪ್ರಸ್ತುತವಾದ ವಿಷಯಗಳಿಗೇ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಗಿದೆ. ಶ್ರೀವಿಜಯೀಂದ್ರರು ತೋರಿದ ಮಹಿಮೆಗಳಲ್ಲಿ ಯಾವುದಕ್ಕೂ ಹೆಚ್ಚಿನ ವಿವರಣೆಯನ್ನು ಕೊಡದೆ ಚುಟುಕಾಗಿ ಮುಗಿಸಿದ್ದಾರೆ ಕೃತಿಕಾರರು. ಆದರೆ ಶ್ರೀವಿಜಯೀಂದ್ರರು ವೇಶ್ಯೆಯರನ್ನು, ಅವರ ಕಾಮಕೇಳಿಯನ್ನು ಗೆದ್ದ ವಿಷಯವನ್ನು ವರ್ಣಿಸಲು ಮಾತ್ರ ಸುಮಾರು 20 ಶ್ಲೋಕಗಳನ್ನು ಮೀಸಲಿಟ್ಟಿರುವುದು ನಿಜಕ್ಕೂ ಆಶ್ಚರ್ಯಕರ.

   ಈ ವಿಶಿಷ್ಟ ಶೈಲಿ ಯಾವ ಯಾವ ಕಾವ್ಯಗಳಲ್ಲೂ ಕಾಣಬರದು. ಪುನರುಕ್ತಿಗಳಿಗಂತೂ ಲೆಕ್ಕವೇ ಇಲ್ಲ. ಒಟ್ಟು 252 ಶ್ಲೋಕಗಳಲ್ಲಿ (ಸ್ತೋತ್ರಮುಕ್ತಾವಲಿ) 90 ಶ್ಲೋಕಗಳು ಮಾತ್ರ ಶ್ರೀವಿಜಯೀಂದ್ರರ ಬಗ್ಗೆ ಉಲ್ಲೇಖಿಸುತ್ತವೆ. ಉಳಿದ 162 ಶ್ಲೋಕಗಳು ಒಂದಕ್ಕೊಂದು ಸಂಬಂಧವಿಲ್ಲದೆ ಉತ್ತರಾದಿಮಠದ ಶ್ರೀವಿದ್ಯಾನಿಧಿತೀರ್ಥ ಶ್ರೀಪಾದಂಗಳವರನ್ನು ಹಾಗೂ ಆ ಪರಂಪರೆಯನ್ನು ದೂಷಿಸುತ್ತಾ ಹೇಳಿದ್ದನ್ನೇ ಹೇಳುತ್ತವೆ.

4. ಕೃತಿಕಾರ ತಾನು ನಿರೂಪಿಸುವ ಘಟನೆಗಳಿಗೆ ಯಾವ ಆಧಾರಗಳನ್ನು ಕೊಡುವುದಿಲ್ಲ. ಸಮಕಾಲೀನ ಎಂಬುದು ನಿರ್ಣಯವಾಗುವುದಿಲ್ಲವಾದಕಾರಣ ಕೃತಿಕಾರನ ಮಾತನ್ನು ನಂಬಲು ಸಾಧ್ಯವಿಲ್ಲ.
5. ಶ್ರೀವಾದಿರಾಜರ ಶಿಷ್ಯನೆಂದು ಹೇಳಿಕೊಳ್ಳುವ ಮಧ್ವಕವಿಯು ಶ್ರೀಜಯತೀರ್ಥಾದಿಗಳಿಗೆ ನಮನವನ್ನು ಸಲ್ಲಿಸಿ ಎಲ್ಲಿಯೂ ತನ್ನ ಗುರುಗಳಾದ ಶ್ರೀವಾದಿರಾಜರಿಗೆ ನಮಿಸದೇ ಇರುವುದು ಆಶ್ಚರ್ಯ!

**ಮತ್ತೂ ಕೆಲವು ಗೊಂದಲಗಳು**

1. ಶ್ರೀಸುರೇಂದ್ರತೀರ್ಥರ ನಿರ್ಯಾಣಕಾಲವನ್ನು ವಿಕಾರಿನಾಮ ಸಂವತ್ಸರ ಎನ್ನುತ್ತಾರೆ ಮಧ್ವಕವಿಗಳು. ಅಂದರೆ ಕ್ರಿ.ಶ. 1539-40 ಎಂದಾಯಿತು–

**ಸ್ವಾಂತಕಾಲೇ ಚ ಸಂಪ್ರಾಪ್ತೇ ಸುರೇಂದ್ರೋ ಗಜಗಹ್ವರೇ ।**
**ವಿಕಾರಿಸಂವತ್ಸರೇ ಪುಷ್ಯಶುಕ್ಲದ್ವಾದಶೀ ತಿಥೌ**
**ಸುರೇಂದ್ರಸ್ಯ ಪುಣ್ಯದಿನಂ ಪ್ರಥಿತಂ ಭುವಿ ಸರ್ವತಃ ॥** – (ವಿ.ವಿ. ಸರ್ಗ 5, ಶ್ಲೋಕ 36, 37)

**ವಿ.ಸೂ.: ವಿಜಯೀಂದ್ರವಿಜಯದಲ್ಲಿ ಕೇವಲ ಸಂವತ್ಸರಗಳ ಹೆಸರುಗಳನ್ನು ಮಾತ್ರ ಉಲ್ಲೇಖಿಸಿದ್ದಾರೆ. ಆದರೂ ಪೂರ್ವಾಪರ ಪೀಠಾಧಿಪತಿಗಳ ಕಾಲಮಾನಗಳನ್ನು ಅನುಸರಿಸಿ ಆ ಸಂವತ್ಸರಕ್ಕೆ ಸರಿಹೊಂದುವಂತೆ ಇಸ್ವಿಗಳನ್ನು ಇಲ್ಲಿ ನಮೂದಿಸಿದ್ದೇವೆ. ಇಲ್ಲಿ ನಮೂದಿಸಿದ ಇಸ್ವಿಗಳನ್ನು ಒಪ್ಪದಿದ್ದ ಪಕ್ಷದಲ್ಲಿ ಆ ಸಂವತ್ಸರಕ್ಕೆ ಸರಿಹೊಂದುವ 60 ವರ್ಷ ಮುಂದಿನ ಅಥವಾ ಹಿಂದಿನ ಇಸ್ವಿಗಳನ್ನು ಅಂಗೀಕರಿಸಬೇಕಾಗುತ್ತದೆ. ಅದು ಅತ್ಯಂತ ಅಸಂಭಾವಿತ.**

ಆದರೆ ರಾಯರಮಠದ ಅಧಿಕೃತ ಲೇಖಕರುಗಳಾದ–

ಅ. ದಿ. ಹೆಚ್.ಕೆ.ವೇದವ್ಯಾಸಾಚಾರ್ಯರು ತಮ್ಮ ''ಗುರುಚರಿತೆ'' (1949)ಯಲ್ಲಿ ಪುಟ 129ರಲ್ಲಿ ಕ್ರಿ.ಶ. 1575 ಎಂದು ಬರೆದಿದ್ದಾರೆ. (ವಿಕಾರಿ ಸಂವತ್ಸರ ಕ್ರಿ.ಶ. 1540ರ ನಂತರ ಮತ್ತೆ ಇನ್ನೊಮ್ಮೆ ಬರುವುದು ಕ್ರಿ.ಶ. 1600 ರಲ್ಲಿಯೇ ಎಂಬುದು ಗಮನಾರ್ಹ.)

ಆ. ದಿ. ರಾಜಾ ಎಸ್. ಗುರುರಾಜಾಚಾರ್ಯರ ಪ್ರಕಾರ (ಅಜಯ್ಯ ವಿಜಯೀಂದ್ರರು – 1987 ಎಂಬ ಪುಸ್ತಕದ ಪ್ರಸ್ತಾವನೆಯ ಪುಟ 36ರಲ್ಲಿ) ಕ್ರಿ.ಶ. 1575 ಎಂಬುದಾಗಿ ಸಮರ್ಥಿಸಿಕೊಂಡಿದ್ದಾರೆ.

ಇ. ಮೂ.ಮಠೇ (2009) ಪು. 133ರಲ್ಲಿ ಛಾಪಿಸಿರುವ ರಾಯರ ಮಠದ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನ ಮುದ್ರಣದ ಪ್ರತಿಯ ಪ್ರಕಾರ ಶಾ.ಶ. 1461. ವಿಕಾರಿ ಸಂವತ್ಸರ. ಅಂದರೆ ಕ್ರಿ.ಶ. 1539-40.

ಈ. ದಿ. ಬಿ.ಎನ್.ಕೆ. ಅವರ ಸತ್ಯಮೇವ ಜಯತೇ (ಕನ್ನಡ) ಪರಿಶಿಷ್ಟ-2 ಪ್ರಕಾರ ಕ್ರಿ. ಶ. 1539.

ಇವುಗಳಲ್ಲಿ ಯಾವುದನ್ನು ನಂಬಬೇಕು? ಯಾವುದು ಪ್ರಮಾಣ? ವಿಜಯೀಂದ್ರವಿಜಯದಲ್ಲಿರುವ ಶ್ರೀಸುರೇಂದ್ರರ ಕಾಲವನ್ನು ರಾಯರ ಮಠದ ಪರಂಪರೆಯವರೇ ಒಪ್ಪುವುದಿಲ್ಲ ಎಂಬುದೇ ಆಶ್ಚರ್ಯ.

2. ಶ್ರೀಸುರೇಂದ್ರತೀರ್ಥರು ವೃಂದಾವನ ಪ್ರವೇಶಿಸಿದ್ದು ಗಜಗಹ್ವರ (ಆನೆಗೊಂದಿ) ''ಸ್ವಾಂತಕಾಲೇ ಚ ಸಂಪ್ರಾಪ್ತೇ ಸುರೇಂದ್ರೋ ಗಜಗಹ್ವರೇ'' ಎಂದು ವಿಜಯೀಂದ್ರವಿಜಯ (5-36)ದಲ್ಲಿದೆ. ಆದರೆ ಶ್ರೀರಾಯರ ಮಠದ ಪರಂಪರೆ ಪ್ರಕಾರ ಅಧಿಕೃತವಾಗಿ ಶ್ರೀಸುರೇಂದ್ರತೀರ್ಥರ ಆರಾಧನೆ ನಡೆಯುತ್ತಿರುವುದು ತಮಿಳುನಾಡಿನ ಮಧುರೆಯಲ್ಲಿರುವ ವೃಂದಾವನಸನ್ನಿಧಿಯಲ್ಲಿ.

ಶ್ರೀಸುರೇಂದ್ರತೀರ್ಥರ ವೃಂದಾವನವು ತಮಿಳುನಾಡಿನ ಮಧುರೈಯಲ್ಲಿ ಇದೆ ಎಂಬ ವಿಷಯವನ್ನೇ ಆ ಮಠದ ಅಧಿಕೃತ ಲೇಖಕರಾದ -

ಅ. ದಿ.ಹೆಚ್.ಕೆ.ವೇದವ್ಯಾಸಾಚಾರ್ಯರು ತಮ್ಮ ''ಗುರುಚರಿತೆಯ (1949)''ಪುಟ-140ರಲ್ಲಿ ದಾಖಲಿಸಿದ್ದಾರೆ.

ಆ. ಮೂ.ಮಠೇ ಪುಸ್ತಕದ (2009) ಪುಟ-133 ರಲ್ಲಿ ಒದಗಿಸಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನ ಪ್ರಕಾರವೂ ಕೂಡ ಮಧುರೈ ಆಗಿದೆ.

ಇ. ದಿ.ರಾಜಾ.ಎಸ್.ಗುರುರಾಜಾಚಾರ್ಯರೂ ಸಹ ಕಲಿಯುಗದ ಕಲ್ಪತರು ಇತ್ಯಾದಿ ತಮ್ಮ ಪುಸ್ತಕಗಳಲ್ಲಿ ಮಧುರೈ ಎಂದಿದ್ದಾರೆ.

ಮತ್ತೆ ಇಲ್ಲಿಯೂ ಸಹ ವಿಜಯೀಂದ್ರವಿಜಯದಲ್ಲಿ ತಿಳಿಸಿದ ಶ್ರೀಸುರೇಂದ್ರತೀರ್ಥರ ವೃಂದಾವನಸ್ಥಳದ ವಿಷಯವನ್ನು ಶ್ರೀರಾಯರ ಮಠದ ಪರಂಪರೆಯೇ ಪ್ರಮಾಣವೆಂದು ಒಪ್ಪಿಕೊಂಡಿಲ್ಲ ಎಂಬುದು ಗಮನಾರ್ಹ. ವೃಂದಾವನಸ್ಥಳವನ್ನೂ ಸರಿಯಾಗಿ ಒದಗಿಸದಿರುವ ಈ ಕೃತಿಯನ್ನು ನಂಬುವುದು ಹೇಗೆ?

3. ಶ್ರೀವಿಜಯೀಂದ್ರವಿಜಯಕಾರರು ಉಲ್ಲೇಖಿಸಿರುವ ಶ್ರೀಸುರೇಂದ್ರತೀರ್ಥರ ನಿರ್ಯಾಣ ಕಾಲವು ವಿಕಾರಿಸಂವತ್ಸರ 1539 ಎಂಬ ವಿಷಯವನ್ನು ಡಾ|| ಬಿ.ಎನ್.ಕೆ ಶರ್ಮಾ ಅವರು ಎತ್ತಿ ತೋರಿಸಿ-ದ್ದಾರೆ. ಈ ವಿಷಯವನ್ನು ಶ್ರೀ ರಾಜಾ.ಎಸ್.ಗುರುರಾಜಾಚಾರ್ಯರು ಅಲ್ಲಗಳೆಯುತ್ತಾ ತಮ್ಮ ಅಜಯ್ಯವಿಜಯೀಂದ್ರರು (1987) ಎಂಬ ಪುಸ್ತಕದ ಪ್ರಸ್ತಾವನೆಯ ಪುಟ 29ರಲ್ಲಿ ಹೀಗೆ ಬರೆದಿದ್ದಾರೆ-

**''ಡಾ|| ಶರ್ಮಾರವರು ಹೇಳುವಂತೆ ಶ್ರೀಸುರೇಂದ್ರರು ಕ್ರಿ.ಶ. 1539 (ವಿಕಾರಿ)ರಲ್ಲಿ ನಿರ್ಯಾಣ ಹೊಂದಿದರೆಂದು ಒಪ್ಪಿದರೆ ಪ್ರಬಲವಾದ ತಾಮ್ರಶಾಸನ ಪ್ರಮಾಣಕ್ಕೆ ವಿರೋಧ ಬರುತ್ತದೆ....''**

ಮುಂತಾಗಿ ಅನೇಕ ರೀತಿಯಿಂದ ಶ್ರೀರಾಯರ ಮಠದ ಪರಂಪರೆಯ ಅನೇಕ ಶಾಸನ ಹಾಗೂ ಆಧಾರಗಳ ಹಿನ್ನೆಲೆಯಲ್ಲಿ ಶ್ರೀಸುರೇಂದ್ರತೀರ್ಥರ ನಿರ್ಯಾಣಕಾಲವನ್ನು ಕ್ರಿ.ಶ. 1575 ಎಂಬುದಾಗಿ ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. **ಇದರಿಂದ ಶ್ರೀರಾಯರಮಠದ ಅನೇಕ ಶಾಸನ ಹಾಗೂ ಆಧಾರಗಳಿಗೆ ಶ್ರೀವಿಜಯೀಂದ್ರವಿಜಯ ವಿರುದ್ಧವಾಗಿ ಹೇಳುತ್ತದೆ** ಎಂಬುದಾಗಿ ಅವರೇ ಒಪ್ಪಿಕೊಂಡಂತಾಗಿದೆ.

4. ವಿ.ವಿ.ಕಾರರು ಶ್ರೀಜಿತಾಮಿತ್ರರು ಕಣ್ಮರೆಯಾದದ್ದು ಕೀಲಕನಾಮ ಸಂವತ್ಸರ ಎಂದಿದ್ದಾರೆ. ಅಂದರೆ ಕ್ರಿ.ಶ. 1488-89

**ಆಶ್ವಿನೇ ಮಾಸಿ ಪಕ್ಷೇ ಚ ಕೃಷ್ಣೇ ಕೀಲಕವತ್ಸರೇ ।**
**ಅಷ್ಟಮ್ಯಾಂ ಕಾಡಲೂರಾಖ್ಯಸಂಗಮೇ ಸಂಸ್ಥಿತೋಽಭವತ್ ॥** -ವಿ.ವಿ. ಸರ್ಗ 3, ಶ್ಲೋಕ 13

ಆದರೆ,

ಅ. ಶ್ರೀರಾಯರ ಮಠದ ಪರಂಪರೆಯ ಪ್ರಕಾರ ಶ್ರೀಜಿತಾಮಿತ್ರರು ಕಣ್ಮರೆಯಾದದ್ದು ಕ್ರಿ.ಶ.1492. ಇದನ್ನೇ ಅಧಿಕೃತ ಲೇಖಕರಾದ ''ಗುರುಚರಿತೆ''(1949)ಕಾರರು ಪುಟ-122 ರಲ್ಲಿ ಕಾಣಿಸಿದ್ದಾರೆ.

ಆ. ಮೂ.ಮಠೇ (2009) ಪುಸ್ತಕದ ಪುಟ 133ರಲ್ಲಿ ಛಾಪಿಸಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನ ಪ್ರಕಾರ ಶಾ.ಶ. 1368 ಅಂದರೆ ಕ್ರಿ.ಶ. 1447. ಅಕ್ಷಯ (ಕ್ಷಯ) ಸಂವತ್ಸರ.

ಇ. ಶ್ರೀಜಿತಾಮಿತ್ರತೀರ್ಥರು (1992) ಎಂಬ ಪುಸ್ತಕದಲ್ಲಿ (ಪ್ರಕಾಶಕರು: ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಶ್ರೀರಾಘವೇಂದ್ರಸ್ವಾಮಿಗಳ ವಿದ್ಯಾಮಠ, ಮಂತ್ರಾಲಯ. ಲೇಖಕರು: ಶ್ರೀಪಾದಪೌತ್ರ ರಾಜಾ ಎಸ್. ಪವಮಾನಾಚಾರ್ಯರು (ಪ್ರಸ್ತುತ ಶ್ರೀಸುಬುಧೇಂದ್ರತೀರ್ಥರು) ಮತ್ತು ಆ.ರಾ. ಪಂಚಮುಖಿ) ಪುಟ 45ರಲ್ಲಿ ಶ್ರೀಜಿತಾಮಿತ್ರರು ಕಣ್ಮರೆಯಾದದ್ದು ಕ್ರಿ.ಶ. 1497 ಎಂದು ಬರೆದಿದ್ದಾರೆ.

ಈ. ಕಲಿಯುಗಕಲ್ಪತರು (ಮೊದಲ ಮುದ್ರಣ 1985) ಪುಟ 1026 ರಲ್ಲಿ ಜಿತಾಮಿತ್ರರ ಕಾಲವನ್ನು 1490-92 ಎಂದು ಉಲ್ಲೇಖಿಸಿದ್ದಾರೆ.

ಉ. ಖ್ಯಾತ ಸಂಶೋಧಕರಾದ ಬಿ.ಎನ್.ಕೆ. ಶರ್ಮಾರವರ ಪ್ರಕಾರ ಕ್ರಿ.ಶ. 1475 (ಸತ್ಯಮೇವಜಯತೇ-ಕನ್ನಡ, 2005).

ಈ ಎಲ್ಲರೂ ಈ ವಿಷಯದಲ್ಲಿ ಕಟುಸತ್ಯವನ್ನೇ ಹೇಳುವ (ಅವರ ಪ್ರಕಾರ) ವಿ.ವಿ.ಗ್ರಂಥದಲ್ಲಿರುವ ಉಲ್ಲೇಖವನ್ನು ಒಪ್ಪುವುದಿಲ್ಲ ಎಂಬುದೇ ಆಶ್ಚರ್ಯದ ಸಂಗತಿ.

5. ಶ್ರೀಜಿತಾಮಿತ್ರರ ಪುಣ್ಯದಿನ ವಿ.ವಿ.ಕಾರರ ಪ್ರಕಾರ ಆಶ್ವಿನ ಕೃಷ್ಣ ಅಷ್ಟಮೀ.

**ಆಶ್ವಿನೇ ಮಾಸಿ ಪಕ್ಷೇ ಚ ಕೃಷ್ಣೇ ಕೀಲಕವತ್ಸರೇ ।**
**ಅಷ್ಟಮ್ಯಾಂ ಕಾಡಲೂರಾಖ್ಯಸಂಗಮೇ ಸಂಸ್ಥಿತೋಽಭವತ್ ॥** –(ವಿ.ವಿ. ಸರ್ಗ 3, ಶ್ಲೋಕ 13)

ಆದರೆ,

ಅ. ಶ್ರೀಪಾದರಾಜರು ರಚಿಸಿರುವ ಶ್ರೀಜಿತಾಮಿತ್ರರ ಕುರಿತಾದ ''ವಂದನ ಮಾಡಿರೈ ಯತಿಕುಲ ಚಂದ್ರನ ಪಾಡಿರೈ'' ಎಂಬ ಕೃತಿಯ 4ನೇ ನುಡಿ ಹೀಗಿದೆ:

**ಮಾಸ ಮಾರ್ಗಶೀರ್ಷಾರಾಧನೆಗಶೇಷದಿನ ಅಮಾ-**
**ವಾಸ್ಯ ದಾಸರು ಪ್ರತಿವರುಷ ಮಾಳ್ಪರು.........**

''ಶ್ರೀಪಾದರಾಜರ ಕೃತಿಗಳು'', ಸಂ. ಡಾ॥ ವರದರಾಜರಾವ್, ಮೈಸೂರು ವಿಶ್ವವಿದ್ಯಾನಿಲಯ, ಪುಟ 62-63 ಮತ್ತು ಶ್ರೀಪಾದರಾಜರ ಸಂಪುಟ, ಕೀರ್ತನೆ 52, ಸ.ದಾ.ಸಾ.

ಇದರಲ್ಲಿ ಜಿತಾಮಿತ್ರರ ಆರಾಧನೆ ಮಾರ್ಗಶಿರ ಅಮಾವಾಸ್ಯೆ ಎಂದು ದಾಖಲಿಸಿದ್ದಲ್ಲದೇ ಭಕ್ತರೆಲ್ಲರೂ (ದಾಸರು) ಆ ದಿನದಂದೇ ಆರಾಧನೆಯನ್ನು ಮಾಡುತ್ತಾ ಬಂದಿದ್ದಾರೆ ಎಂಬ ಅಂಶವನ್ನು ಉಲ್ಲೇಖಿಸಿರುವುದು ಗಮನಾರ್ಹ. ಮಧ್ವಕವಿಗಿಂತಲೂ ಪ್ರಾಚೀನರಾದ, ಮಹಾನುಭಾವರಾದ ಶ್ರೀಪಾದರಾಜರ ಕೃತಿಗೆ ವಿರುದ್ಧವಾದ್ದರಿಂದ ವಿಜಯೀಂದ್ರವಿಜಯಕಾವ್ಯದಲ್ಲಿರುವ ಅಂಶಗಳು ಸ್ವಕಪೋಲಕಲ್ಪಿತವಾಗಿವೆ ಎಂದು ಸಿದ್ಧವಾಗುತ್ತದೆ.

ಆ. ಶ್ರೀರಾಯರ ಮಠದಲ್ಲಿ ಅಧಿಕೃತವಾಗಿ ಶ್ರೀಜಿತಾಮಿತ್ರರ ಆರಾಧನೆಯನ್ನು ಆಚರಿಸುತ್ತ ಬಂದಿರುವುದು ಮಾರ್ಗಶೀರ್ಷ ಅಮಾವಾಸ್ಯೆಯಂದು. ಪುಣ್ಯತಿಥಿಯ ಬಗ್ಗೆಯೂ ಅವರೇ ವಿ.ವಿ.ಕಾವ್ಯಕ್ಕೆ ಬೆಲೆ ಕೊಟ್ಟಿಲ್ಲ.

6. ಶ್ರೀವಿಬುಧೇಂದ್ರರ, ಶ್ರೀಜಿತಾಮಿತ್ರರ ಹಾಗೂ ಶ್ರೀಸುರೇಂದ್ರರ ನಿರ್ಯಾಣಕಾಲವನ್ನು ತಿಳಿಸುವ ಕವಿ ಮೂಲರಾಮನ ವಿವಾದಕ್ಕೆ ಆಸ್ಪದರಾದ ಶ್ರೀರಘುನಂದನರ ಕಾಲದ ಬಗ್ಗೆ ಮೌನವಹಿಸಿರುವುದನ್ನು ನೋಡಿದರೆ ಇವರ ಕಾಲದ ವಿಷಯದಲ್ಲಿ ಏನೋ ಸಂಚು ನಡೆದಿರುವುದು ಸ್ಪಷ್ಟ.

7. ಶ್ರೀವಿಬುಧೇಂದ್ರತೀರ್ಥರ ನಿರ್ಯಾಣ ವಿ.ವಿ.ಕಾರರ ಪ್ರಕಾರ ಪರಾಭವ ಸಂವತ್ಸರ. ಅಂದರೆ ಕ್ರಿ.ಶ. 1486-87.

**ವಿಬುಧೇಂದ್ರಗುರೂಣಾಂ ಚ ಬ್ರುವೇ ಪುಣ್ಯದಿನಂ ಶ್ರುಣು ।**
**ಪರಾಭವೇ ಮಾರ್ಗಶೀರ್ಷ ಶುಕ್ಲೇ ಚ ದಶಮೀ ದಿನೇ ॥** –ವಿ.ವಿ. ಸರ್ಗ 3, ಶ್ಲೋಕ 9

ಆದರೆ,

ಅ. ರಾಯರ ಮಠದ ಪರಂಪರೆ, ಗುರುಚರಿತೆ, ಅಜಯ್ಯವಿಜಯೀಂದ್ರರು, ಕಲಿಯುಗಕಲ್ಪತರು, ಶ್ರೀಮೂಲರಾಮ ಈ ಪುಸ್ತಕಗಳ ಪ್ರಕಾರ ಸಾಧಾರಣಸಂವತ್ಸರ-ಕ್ರಿ.ಶ.1490.

ಆ. ಶ್ರೀ ಬಿ.ಎನ್.ಕೆ.ರವರ ಪ್ರಕಾರ ಕ್ರಿ.ಶ. 1470 (ಸತ್ಯಮೇವ ಜಯತೇ ಕನ್ನಡ- 2005, ಪರಿಶಿಷ್ಟ 2).

ಇ. ಪ್ರಾಚೀನತಮ ಎಂದು ಹೇಳಿಕೊಳ್ಳುವ ಆಧಾರದ ಪ್ರಕಾರ ಶಾ.ಶ. 1348, ಪರಾಭವ. ಅಂದರೆ ಕ್ರಿ.ಶ.1427.

ಶ್ರೀವಿಬುಧೇಂದ್ರತೀರ್ಥರ ನಿರ್ಯಾಣ ಕಾಲದ ವಿಷಯದಲ್ಲೂ ವಿಜಯೀಂದ್ರವಿಜಯ ಇವರಾರಿಗೂ ಪ್ರಮಾಣವಾಗಿಲ್ಲ ಎಂಬುದು ಗಮನಾರ್ಹ.

8. ವಿಜಯೀಂದ್ರವಿಜಯದ ಕನ್ನಡ ಅನುವಾದದಲ್ಲಿ (ಪ್ರಕಟಣೆ: ರಾಘವೇಂದ್ರಸಾಹಿತ್ಯಪರಿಷತ್, ನಂಜನಗೂಡು, 2003) ಮೂಲರಾಮ ಪ್ರತಿಮೆಯನ್ನು (ಉತ್ತರಾದಿಮಠದಿಂದ) ಅಪಹರಿಸಿದ್ದು ಶ್ರೀವಿದ್ಯಾನಿಧಿಗಳ ಕಾಲದಲ್ಲಿ (3-26) ಎಂದಿದ್ದಾರೆ. ಆಶ್ಚರ್ಯವೆಂದರೆ ''ಮೂ.ಮಠೇ'' ಪುಸ್ತಕದ (2009)ಪುಟ viii, xi, 16, 126 ಕ್ರಿ.ಶ 1493ರಲ್ಲಿ (ಶ್ರೀರಘುನಾಥತೀರ್ಥರ ಕಾಲ) ಎಂದು ಬರೆಯಲಾಗಿದೆ. ಅಂತೂ ''ಮೂ.ಮಠೇ'' ಲೇಖಕರಿಗೂ ''ವಿಜಯೀಂದ್ರವಿಜಯ'' ಸಮ್ಮತವಾಗಿಲ್ಲ. ಉತ್ತರಾದಿಮಠಕ್ಕೆ ಬೈಯುವಾಗ ಮಾತ್ರ ಪರಮಪ್ರಮಾಣ, ಇತರ ವಿಷಯಗಳ ಬಗ್ಗೆ ಪ್ರಮಾಣವಲ್ಲ. ಇದು ಮೋಸವಲ್ಲದೇ ಮತ್ತೇನು?

9. ಶ್ರೀವಿಬುಧೇಂದ್ರರು ಮೂಲರಾಮನನ್ನು ಪೂಜಿಸಲಾಗಲಿಲ್ಲ, ಅದಕ್ಕಾಗಿಯೇ ಶ್ರೀವಿಜಯೀಂದ್ರರಾಗಿ ಮತ್ತೆ ಹುಟ್ಟಿದರು ಎಂದು ವಿ.ವಿ.ಕಾರರು ತಿಳಿಸಿದ್ದಾರೆ.

**ಶ್ರೀವಿಬುಧೇಂದ್ರಜಿತಾಮಿತ್ರೌ ಹಂಸೌ ಹಂಸಕುಲೋದ್ಭವೌ ।**
**ತಾಭ್ಯಾಂ ನ ಪೂಜಿತಾ ಹ್ಯರ್ಚಾ ರಾಮಸ್ಯ ಪರಮಾತ್ಮನಃ ॥ 5 ॥** –ವಿ.ವಿಜಯ. ಸರ್ಗ 5, ಶ್ಲೋಕ 5.

ಆದರೆ ಮೂ.ಮಠೇ ಪುಸ್ತಕದ ಪುಟ 15 ರಲ್ಲಿ ''ಶ್ರೀವಿಬುಧೇಂದ್ರತೀರ್ಥರು ಶ್ರೀಮೂಲಸೀತಾರಾಮದೇವರ ವಿಗ್ರಹಗಳನ್ನು ಕೆಲವು ಕಾಲ ಪೂಜಿಸಿ ಗುರುಗಳ ಆಜ್ಞಾನುಸಾರ ಉತ್ತರಭಾರತದ ವಾರಣಾಸಿ ಮೊದಲಾದ ಸ್ಥಳಗಳಿಗೆ ಪ್ರವಾಸ ಕೈಕೊಂಡು... ... .''ಎಂದು ಬರೆದಿದ್ದಾರೆ.

ಮಂತ್ರಾಲಯವಿದ್ಯಾಪೀಠದ ವಿದ್ವಾಂಸರೇ ''ಶ್ರೀಜಿತಾಮಿತ್ರತೀರ್ಥರು'' ಎಂಬ ಪುಸ್ತಕ ಬರೆದು 1992ರಲ್ಲಿ ಪ್ರಕಟಿಸಿದ್ದಾರೆ. ಇದರ ಪುಟ 15ರಲ್ಲಿ ''ಶ್ರೀರಾಮಚಂದ್ರತೀರ್ಥರು ಮುಂದೆ ರಘುನಾಥಭಟ್ಟರೆಂಬ ವಿರಕ್ತರು ಮಹಾಜ್ಞಾನಿಗಳೂ ಉದ್ದಾಮಪಂಡಿತರೂ ಆದ ತಮ್ಮ ಶಿಷ್ಯರಿಗೆ ಆಶ್ರಮಪ್ರದಾನಪೂರ್ವಕ ಪಟ್ಟಾಭಿಷಿಕ್ತರನ್ನಾಗಿ ಮಾಡಿ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿದರು. ಅವರಿಗೆ ಶ್ರೀವಿಬುಧೇಂದ್ರತೀರ್ಥರೆಂದು ನಾಮಕರಣ ಮಾಡಿದರು. ಇವರು ಕೆಲದಿನಗಳ ವರೆಗೆ ಗುರುಗಳೊಂದಿಗಿದ್ದು ಶ್ರೀಮೂಲರಾಮಾದಿ ಸಂಸ್ಥಾನಪ್ರತಿಮೆಗಳನ್ನು ಪೂಜಿಸಿದರು'' ಎಂದು ಬರೆದಿದ್ದಾರೆ.

ಇದರಿಂದ ಶ್ರೀಗುರುಸಾರ್ವಭೌಮವಿದ್ಯಾಪೀಠದ ವಿದ್ವಾಂಸರಿಗೂ ಮೂ.ಮಠೀ ಲೇಖಕರಿಗೂ ವಿ.ವಿ.ಕಾವ್ಯದ ಮೇಲೆ ವಿಶ್ವಾಸವಿಲ್ಲವೆಂದಾಯಿತು. ಇನ್ನು ಸಾಮಾನ್ಯ ಜನರಿಗೆ ವಿಶ್ವಾಸ ಹೇಗೆ? ಅಥವಾ ಸಾಮಾನ್ಯರಿಗೆ ವಿಶ್ವಾಸ ಮೂಡಿಸಿ ತಾವು ಮಾತ್ರ ವಿಶ್ವಾಸವಿಡದೇ ಮೋಸಮಾಡಿದ್ದಾರಾ?

10. ವಿಜಯೀಂದ್ರವಿಜಯಕಾರರ ಪ್ರಕಾರ ಶ್ರೀಮೂಲಸೀತಾರಾಮಪ್ರತಿಮೆಗಳು ಬ್ರಹ್ಮನಿರ್ಮಿತ.

**ಯೇ ಬ್ರಹ್ಮನಿರ್ಮಿತೇ ದಿವ್ಯೇ ಶುದ್ಧತಾಮ್ರಮಯೇ ಶುಭೇ ।**
**ಅರ್ಚೇ ತೇ ರಾಮಚಂದ್ರಸ್ಯ ಸೀತಾಯಾಶ್ಚ ಸುಲಕ್ಷಣೇ ॥ 1.24 ॥**
**ಜಗನ್ನಾಥಪುರೀಸಂಸ್ಥೇ ನಿರ್ಮಿತೇ ಬ್ರಹ್ಮಣಾ ಪುರಾ ॥ 2.26 ॥**

**ಅರ್ಚೇ ತೇ ರಾಮಸೀತಾಯಾ ವರ್ತೇತೇ ಮಮ ಮಂದಿರೇ । 2.27 ॥**

**ವಿಧಿನಾ ನಿರ್ಮಿತಾ ರಾಮಪ್ರತಿಮಾ ಯಾ ಬಹುಶ್ರುತಾ ।**
**ರಘುನಂದನಸ್ಯ ವಶಗಾ ಬಭೂವಾಸ್ಮತ್ತುದುರ್ಲಭಾ ॥ 3.24 ॥**

ಆದರೆ, ಶ್ರೀರಾಘವೇಂದ್ರತೀರ್ಥಮಠಗತಾರ್ಚಾಗತಿಕ್ರಮದ ಪ್ರಕಾರ ಹಾಗೂ ಇನ್ನನೇಕ ದಾಸರ ನುಡಿಗಳ ಪ್ರಕಾರ ವಿಶ್ವಕರ್ಮನಿರ್ಮಿತ. ವಾಸಿಷ್ಠರಾಮಾಯಣದ ಪ್ರಕಾರ ಸ್ವಯಂವ್ಯಕ್ತ ಇವೆರಡಕ್ಕೂ ವಿಜಯೀಂದ್ರವಿಜಯ ವಿರುದ್ಧವಾಗಿದೆ.

**ಇದರಂತೆ ಈ ಕೃತಿಯಲ್ಲಿ ಇನ್ನೂ ಅನೇಕ ವಿಚಿತ್ರವಾದ ಕಥೆಗಳಿವೆ...**

1. ಸ್ವತಃ ಶ್ರೀವ್ಯಾಸರಾಜಗುರುಸಾರ್ವಭೌಮರೇ ಆನೆಗೊಂದಿಯ ರಾಜನಿಗೆ ಎಲ್ಲರ ಸಮಕ್ಷಮದಲ್ಲಿ ಶ್ರೀವಿಬುಧೇಂದ್ರರು ಹಾಗೂ ಶ್ರೀಜಿತಾಮಿತ್ರರು ಶ್ರೀಮೂಲರಾಮನನ್ನು ಪೂಜಿಸಲಿಲ್ಲವಾದ ಕಾರಣ ಅವರೇ ಮತ್ತೆ (ತಮ್ಮ ಶಿಷ್ಯರಾದ ವಿಷ್ಣುತೀರ್ಥರೇ) ಶ್ರೀವಿಜಯೀಂದ್ರರಾಗಿ ಹಾಗೂ ಶ್ರೀ ಸುಧೀಂದ್ರರಾಗಿ ಅವತರಿಸುತ್ತಾರೆ ಎಂದು ಹೇಳಿದರಂತೆ. (1942ರ ನಂತರ ರಾಯರಮಠದಿಂದ ಪ್ರಕಟಗೊಂಡ ಎಲ್ಲ ಪುಸ್ತಕಗಳಲ್ಲಿ ಇದಕ್ಕೆ ವಿರುದ್ಧವಾಗಿ ಶ್ರೀವಿಬುಧೇಂದ್ರರು ಮೂಲರಾಮನನ್ನು ಪೂಜಿಸಿದರೆಂದು ಬರೆಯಲಾಗಿದೆ. ಪೂಜಿಸುವ ಜನ್ಮವೇ ಚರಮಜನ್ಮವೆಂದೂ ಬರೆಯಲಾಗಿದೆ. ಹಾಗಾದರೆ ವಿಜಯೀಂದ್ರವಿಜಯ ಹೇಳುವಂತೆ ಶ್ರೀವಿಬುಧೇಂದ್ರರು ಶ್ರೀವಿಜಯೀಂದ್ರರಾಗಿ ಮೂಲರಾಮನ ಪೂಜೆಗಾಗಿ ಮತ್ತೆ ಹುಟ್ಟಬಾರದಿತ್ತು .) ಅಷ್ಟೇಕೆ ತಾವೇ ಮುಂದೆ ಶ್ರೀರಾಘವೇಂದ್ರರಾಗಿ ಅವತರಿಸಲಿದ್ದೇವೆ ಎಂದು ಹೇಳಿದರಂತೆ ''**ರಾಘವೇಂದ್ರ ಇತಿ ಖ್ಯಾತೋ ಜನಿಷ್ಯೇ ರಾಮಕಾರಣಾತ್**'' (ವಿ.ವಿ. 5-12). ತಮ್ಮ ಸ್ವರೂಪ, ಮುಂದಿನ ಅವತಾರಗಳನ್ನಲ್ಲದೆ ಇತರರ ಸ್ವರೂಪ ಅವತಾರಗಳನ್ನು ಒಂದು ಶತಮಾನಕ್ಕೆ ಮುಂಚೆ, ಎಲ್ಲರ ಸಮಕ್ಷಮದಲ್ಲಿ, ಅದೂ ಸಹ ಶ್ರೀವ್ಯಾಸರಾಜರಂತಹ ಮಹಾನುಭಾವರು ಹೇಳಿದರೆಂದರೆ ನಂಬಲು ಸಾಧ್ಯವೇ? ಇಷ್ಟು ಬಹಿರಂಗವಾಗಿದ್ದ ವಿಷಯವನ್ನು ಶ್ರೀರಾಘವೇಂದ್ರವಿಜಯದಲ್ಲಾಗಲೀ, ವ್ಯಾಸಯೋಗಿಚರಿತೆಯಲ್ಲಾಗಲೀ ಏಕೆ ಉಲ್ಲೇಖಿಸಿಲ್ಲ?

2. ವಿ.ವಿ.ಯ 4ನೇ ಸರ್ಗದಲ್ಲಿ ಆನೆಗೊಂದಿಯ ರಾಜ ಶ್ರೀಸುರೇಂದ್ರತೀರ್ಥರನ್ನು ನೋಡಿ ಇವರು ಯಾವ ವಂಶದಲ್ಲಿ ಬಂದಿರುವರು? ಶ್ರೀವಿಬುಧೇಂದ್ರರ ವಂಶದಲ್ಲಿ ಬಂದವರೋ ಅಥವಾ ಶ್ರೀವಿದ್ಯಾನಿಧಿಗಳ ವಂಶದಲ್ಲಿ ಬಂದವರೋ? ಹೇಳಿ ಎಂದು ಶ್ರೀವ್ಯಾಸರಾಜರನ್ನು ಕೇಳುತ್ತಾನೆ (4-5). ಅಂದ ಮೇಲೆ ಪರಂಪರೆಯ ವಿಭಜನೆಯ ಬಗ್ಗೆ ರಾಜನಿಗೆ ಗೊತ್ತಿರಲೇ ಬೇಕಲ್ಲವೇ? ಇಲ್ಲದಿದ್ದರೆ ಈ ಪ್ರಶ್ನೆಯೇ

ಕೊಡುವುದಿಲ್ಲ. ಈ ಪ್ರಶ್ನೆಗೆ ಶ್ರೀವ್ಯಾಸರಾಜರು ಶ್ರೀವಿಬುಧೇಂದ್ರರ ವಂಶದವರೆಂದು ಹೇಳಿದ್ದರೆ, ಪ್ರಶ್ನೆಗೆ ತಕ್ಕ ಉತ್ತರವಾಗುತ್ತಿತ್ತು. ಆದರೆ ಕವಿ ಶ್ರೀವ್ಯಾಸರಾಜರಿಂದ ಅಪ್ರಸ್ತುತವಾದ ಪರಂಪರೆ ಎರಡು ಕವಲಾಗಿ ಒಡೆದ ಎಲ್ಲ ವಿಷಯ ಹೇಳಿಸುತ್ತಾ ಶ್ರೀವಿದ್ಯಾನಿಧಿಗಳನ್ನು ನಿಂದಿಸುತ್ತಾನೆ. ಶ್ರೀರಘುನಂದನರು ತಮ್ಮ ಶಿಷ್ಯನಿಗೆ ಮೂಲರಾಮನನ್ನು ಕದ್ದು ತಾ ಎಂದು ಹೇಳಿದ್ದು, ಅದರಂತೆ ಅವ ಮಾಡಿದ್ದನ್ನೂ ಶ್ರೀವ್ಯಾಸರಾಜರ ಮುಖದಿಂದ ಹೇಳಿಸುತ್ತಾನೆ. ಅಂತೂ ಕೃತಿಕಾರ ತನ್ನ ತಲೆಯಲ್ಲಿದ್ದದ್ದನ್ನೆಲ್ಲ ಶ್ರೀವ್ಯಾಸರಾಜರ ಮೇಲೆ ಹೊರಿಸುತ್ತಾ ಅವರ ವ್ಯಕ್ತಿತ್ವಕ್ಕೂ ಕಳಂಕ ತಂದಿದ್ದಾನೆ.

**ಈ ಎಲ್ಲ ವಿಷಯಗಳನ್ನೊಳಗೊಂಡ ವಿಜಯೀಂದ್ರವಿಜಯದ (4ನೇ ಸರ್ಗದ 18ನೇ ಶ್ಲೋಕದಿಂದ 48ನೇ ಶ್ಲೋಕದ ವರೆಗೆ) 30 ಶ್ಲೋಕಗಳು ಅವರೇ ಮೂ.ಮತೇ ಪುಸ್ತಕದ ಪುಟ 134ರಲ್ಲಿ ಛಾಪಿಸಿರುವ ವಿಜಯೀಂದ್ರವಿಜಯ ಕಾವ್ಯದ ಪ್ರಾಚೀನ ಹಸ್ತಲಿಖಿತ ಪ್ರತಿಯಲ್ಲಿ ಇಲ್ಲದಿರುವುದು ಅತ್ಯಂತ ಆಶ್ಚರ್ಯ. ಇದರಿಂದ ಶ್ರೀ ವ್ಯಾಸರಾಜರ ವ್ಯಕ್ತಿತ್ವಕ್ಕೆ ಕಳಂಕ ತರುವ ಈ ಶ್ಲೋಕಗಳನ್ನು ಸೇರಿಸಿರುವುದು ಸ್ಪಷ್ಟ.**

ಮೇಲಿನ ಅಂಶಗಳನ್ನು ಗಮನಿಸಿದಾಗ ಈ ಕಾವ್ಯವನ್ನು ಎಷ್ಟರ ಮಟ್ಟಿಗೆ ನಂಬಬಹುದು ವಾಚಕರೇ ತೀರ್ಮಾನಿಸಬೇಕು.

ವಿ.ವಿ.ದಲ್ಲಿರುವ ಅನೇಕ ಅಂಶಗಳನ್ನು ಪರಂಪರೆಯಾಗಿ ಶ್ರೀರಾಯರ ಮಠದವರೇ ಒಪ್ಪಿಕೊಳ್ಳದೇ ಅನ್ಯ ನಿಲುವನ್ನು ಹೊಂದಿರುವಾಗ ಮತ್ತು ಅವರೇ ಛಾಪಿಸಿರುವ (ಮೂ.ಮತೇ ಪುಸ್ತಕ ಪುಟ.134ರಲ್ಲಿ) ಈ ಕಾವ್ಯದ ಹಸ್ತಪ್ರತಿಯಲ್ಲಿ ಮುದ್ರಿತ ಪುಸ್ತಕದಲ್ಲಿರುವ 30 ಶ್ಲೋಕಗಳು ಇಲ್ಲದಿರುವಾಗ ಇತರರು ಹೇಗೆ ಈ ಕಾವ್ಯವನ್ನು ನಂಬಲು ಸಾಧ್ಯ?

ಈ ಮಧ್ವಕವಿಯ ಬಗ್ಗೆ ಪ್ರಾಚೀನ, ಅರ್ವಾಚೀನ ಯಾವ ಕಾವ್ಯಗಳಲ್ಲೂ ಉಲ್ಲೇಖಗಳೇ ಇಲ್ಲದಿರುವುದರಿಂದ ಮತ್ತು ರಾಯರ ಮಠದವರೇ ಈ ಕಾವ್ಯದ ಅನೇಕ ಅಂಶಗಳನ್ನು ಒಪ್ಪದಿರುವುದರಿಂದ, ಅಪ್ರಸಿದ್ಧವಾದ, ವಿವಾದಾಸ್ಪದವಾದ, ಅಪ್ರಾಮಾಣಿಕವಾದ ವಿಷಯಗಳನ್ನೊಳಗೊಂಡ ಈ ಕೃತಿಯನ್ನು ನಂಬಿ ಮಾಧ್ವಸಮಾಜದಲ್ಲಿ ವಿಷಬೀಜ ಬಿತ್ತುತ್ತಾ, ಸಮಾಜವನ್ನು ಒಡೆಯುವ ಕೆಲಸ ಮಾಡುವುದು ಎಷ್ಟರ ಮಟ್ಟಿಗೆ ಸಮಂಜಸ? ಸಜ್ಜನರೇ ತೀರ್ಮಾನಿಸಲಿ.

ಈ ಕಾವ್ಯದ ಅಪ್ರಾಮಾಣ್ಯದ ಬಗ್ಗೆ ಪ್ರಸಿದ್ಧ ಸಂಶೋಧಕರಾದ ಡಾ।। ಶ್ರೀನಿವಾಸ ಹಾವನೂರವರ ಅಭಿಪ್ರಾಯವನ್ನೂ ಕಾಣಬಹುದಾಗಿದೆ. (ಇದನ್ನು ಅನುಬಂಧದಲ್ಲಿ ನೋಡುವುದು)

ದಿ. ಡಾ।। ಬಿ.ಎನ್.ಕೆ. ರವರೂ ಸಹ ಈ ಕಾವ್ಯದಲ್ಲಿರುವ ಅನೇಕ ಅಂಶಗಳನ್ನು ಒಪ್ಪದೇ ತಮ್ಮದೇ ಸ್ವಂತ ನಿಲುವನ್ನು (ನಿರ್ಯಾಣಕಾಲಗಳ ಬಗ್ಗೆ) ಹೊಂದಿರುವುದು ಗಮನಾರ್ಹ.

## ವಿಜಯೀಂದ್ರವಿಜಯದ ಪ್ರಾಚೀನ ಹಸ್ತಪ್ರತಿಯ ವಿಮರ್ಶೆ

ಮೂ.ಮತೇ ಮುನ್ನುಡಿಯಲ್ಲಿ ರಾಯರ ಮಠದ ದಿವಾನರು ''ಮೊನ್ನೆ ಮೊನ್ನೆಯ ಹಸ್ತಪ್ರತಿಗಳಿಗೆ ಅಂದಿನ ಪ್ರಾಚೀನ ಹಸ್ತಪ್ರತಿಗಳ ಆಧಾರ'' ಎಂದು ಬೀಗಿದ್ದಾರೆ. ಆದರೆ ಲೇಖಕರು ತಮ್ಮ ಪುಸ್ತಕದ ಪುಟ 134 ರಲ್ಲಿ ವಿಜಯೀಂದ್ರವಿಜಯದ ಪ್ರಾಚೀನ ಹಸ್ತಪ್ರತಿಯ ಒಂದೇ ಒಂದು ಪುಟವನ್ನು ಛಾಪಿಸಿದ್ದಾರೆ. ಈ ಪ್ರತಿಯನ್ನು ಸಂಶೋಧನೆಯ ದೃಷ್ಟಿಯಲ್ಲಿ ನೋಡಿದಾಗ ಈ ಹಸ್ತಪ್ರತಿಯ ಪಾಠದಲ್ಲಿ ಸೇರದಿರುವ ಅನೇಕ ಶ್ಲೋಕಗಳನ್ನು ಮುದ್ರಿತ ಪ್ರತಿಗಳಲ್ಲಿ ಸೇರಿಸಿರುವ ಅಂಶ ಬೆಳಕಿಗೆ ಬಂದಿದೆ.

''ವಿಜಯೀಂದ್ರವಿಜಯ'' ಎಂಬ ಈ ಕೃತಿ ಮೊಟ್ಟ ಮೊದಲು ಮುದ್ರಣಗೊಂಡದ್ದು 1994 ರಲ್ಲಿ ಡಾ|| ಬಿ.ಎನ್.ಕೆ. ಅವರಿಂದ. ನಂತರ ಈ ಕೃತಿಯನ್ನು ರಾಯರಮಠದವರೇ ಅಧಿಕೃತವಾಗಿ 2 ಬಾರಿ ಮುದ್ರಿಸಿ ಪ್ರಕಟಿಸಿದ್ದಾರೆ.

1. ಕ್ರಿ.ಶ.2003ರಲ್ಲಿ ಶ್ರೀರಾಘವೇಂದ್ರಸಾಹಿತ್ಯಪರಿಷತ್ ನಂಜನಗೂಡಿನಿಂದ (ಇದರ ಅಧ್ಯಕ್ಷರು ಶ್ರೀಗಳವರ ಆಪ್ತಕಾರ್ಯದರ್ಶಿಗಳಾಗಿದ್ದ ದಿ. ರಾಜಾ.ಎಸ್.ರಾಜಗೋಪಾಲಾಚಾರ್ಯ). ಈ ಪುಸ್ತಕದ ಅನುವಾದಕರು ಮಂತ್ರಾಲಯದ ಶ್ರೀಗುರುಸಾರ್ವಭೌಮವಿದ್ಯಾಪೀಠದ ವಿದ್ವಾಂಸರು.
2. ಕ್ರಿ.ಶ. 2006ರಲ್ಲಿ ಶ್ರೀರಾಘವೇಂದ್ರಸ್ವಾಮಿಗಳವರ ಮಠ, ನಂಜನಗೂಡಿನವರು ''ಸ್ತೋತ್ರ ಮುಕ್ತಾವಲೀ'' ಎಂಬ ಗ್ರಂಥದಲ್ಲಿಯೂ ಪ್ರಕಾಶಿಸಿದ್ದಾರೆ. ಈ ಗ್ರಂಥದ ಪ್ರಧಾನಸಂಪಾದಕರು ಶ್ರೀಗಳವರ ಆಪ್ತಕಾರ್ಯದರ್ಶಿಗಳಾಗಿದ್ದ ದಿ. ರಾಜಾ ಎಸ್. ರಾಜಗೋಪಾಲಾಚಾರ್ಯ.

ಮೂ.ಮಠೇ ಪುಸ್ತಕದಲ್ಲಿ ಛಾಪಿಸಿರುವ ವಿಜಯೀಂದ್ರವಿಜಯದ ಪ್ರಾಚೀನ ಹಸ್ತಲಿಖಿತಪ್ರತಿಯ ಒಂದೇ ಒಂದು ಪುಟದಲ್ಲಿ ''**ವಿಬುಧೇಂದ್ರಾರ್ಯವಂಶೇ ವಾ ತಥಾ ವಿದ್ಯಾನಿಧೇರ್ವದ**'' ಎಂಬ ಶ್ಲೋಕ ಆರಂಭವಾಗಿದೆ. ಈ ಶ್ಲೋಕ ಮೇಲಿನ ಮುದ್ರಿತ ಎರಡು ಪುಸ್ತಕಗಳಲ್ಲಿ (ಸ್ತೋತ್ರಮುಕ್ತಾವಲಿಯಲ್ಲಿ ಈ ಒಂದು ವಾಕ್ಯ ಇಲ್ಲ) 4ನೆಯ ಸರ್ಗ, 16ನೆಯ ಶ್ಲೋಕ ಎಂದು ನಮೂದಿಸಲಾಗಿದೆ. (ಅದರಲ್ಲೂ ಶ್ರೀರಾಘವೇಂದ್ರಸಾಹಿತ್ಯಪರಿಷತ್ ನಿಂದ ಮುದ್ರಿತ ಪುಸ್ತಕದಲ್ಲಿ ಶ್ಲೋಕ ಸಂಖ್ಯೆಗಳು ಸ್ಪಷ್ಟವಿಲ್ಲ).

ಈ 16ನೇ ಶ್ಲೋಕದಿಂದ 18ನೇ ಶ್ಲೋಕದವರೆಗೆ ''**ಸಾರಂ ಬ್ರವೀಮಿ ಪುನರೇವ ಮತಂ ಬ್ರವೀಮಿ**'' ಎನ್ನುವವರೆಗೆ ಹಸ್ತಪ್ರತಿಯಲ್ಲಿದೆ. ನಂತರ ಮುದ್ರಿತಪುಸ್ತಕದಲ್ಲಿರುವ ''**ಅಯಂ ಸುರೇಂದ್ರೋ ಮಾಮೇವ ದ್ರಷ್ಟುಮಭ್ಯಾಗತೋ ಧ್ರುವಮ್**'' ಎಂಬ 18ನೇ ಶ್ಲೋಕದಿಂದ ''**ಶ್ರೀವಿಬುಧೇಂದ್ರಯತಿಃ ಶ್ರುತ್ವಾ ಹಾ ಕಷ್ಟಮಿತಿ ಚಾಬ್ರವೀತ್**'' ಎಂಬ 48ನೇ ಶ್ಲೋಕದವರೆಗೆ ಸುಮಾರು 30 ಶ್ಲೋಕಗಳು ಹಸ್ತಪ್ರತಿಯಲ್ಲಿ ಇಲ್ಲವೇ ಇಲ್ಲ.

ಮುಂದೆ ಮುದ್ರಿತಪುಸ್ತಕದಲ್ಲಿರುವ ''**ತದ್ವಂಶೇ ಜನಿತೋ ಜ್ಞಾನೀ ರಘುನಂದನಸಂಜ್ಞಿತಃ**'' ಎಂಬ 49ನೆಯ ಹಾಗೂ ''**ರಘುನಂದನಃ ಸ್ವಶಿಷ್ಯೇಣ ...... ಆನಯಮಾಸ ರಾಮಸ್ಯ ಅರ್ಚಾಂ ತಾಂ ಸೀತಯಾ ವಿನಾ**'' ಎಂಬ 50ನೇ ಶ್ಲೋಕದ ಪಾಠ ಮಾತ್ರ ಹಸ್ತಪ್ರತಿಯಲ್ಲಿದೆ.

ಮತ್ತೆ ಮುದ್ರಿತಪುಸ್ತಕಗಳಲ್ಲಿರುವ ''**ಏವಂ ಪ್ರಾಪ್ತಾ ರಾಘವಾರ್ಚಾ...**''ಎಂದು ಪ್ರಾರಂಭವಾಗುವ 51ನೆಯ ಶ್ಲೋಕದಿಂದ ''**ತೇನ ಸಂಪೂಜಿತೋ ವ್ಯಾಸಂ ಸುರೇಂದ್ರಃ ಪ್ರಾಹ ಸುಸ್ಮಿತಃ**'' ಎಂದು ಕೊನೆಗೊಳ್ಳುವ 57ನೇ ಶ್ಲೋಕಗಳವರೆಗೆ (ಅಂದರೆ 4 ನೇ ಸರ್ಗದ ಕೊನೆಯವರೆಗೆ) ಹಸ್ತಲಿಖಿತ ಪ್ರತಿಯಲ್ಲಿ ಇಲ್ಲವೇ ಇಲ್ಲ.

ಹಸ್ತಪ್ರತಿಯಲ್ಲಿ ''**ಆನಯಾಮಾಸ ರಾಮಸ್ಯ ಅರ್ಚಾಂ ತಾಂ ಸೀತಯಾ ವಿನಾ**'' ಎಂಬ 50ನೇ ಶ್ಲೋಕದ ನಂತರ ಯಾವ ರೀತಿಯ ಸರ್ಗಭೇದದ ಸೂಚನೆಯೂ ಇಲ್ಲದೆ ಮುದ್ರಿತಪುಸ್ತಕದ 5ನೇ ಸರ್ಗದ ಮೊದಲ ಶ್ಲೋಕ ''**ಅಥ ವ್ಯಾಸರಾಜಂ ಸ ಸುರೇಂದ್ರಃ ಪರ್ಯಪೂಜಯತ್**'' ಎಂಬ ಶ್ಲೋಕ ಮುಂದುವರೆದಿದೆ.

ಇಲ್ಲಿಯೂ ಮುದ್ರಿತಪುಸ್ತಕದಲ್ಲಿಯ ''**ವಿದ್ಯಾನಿಧಿಕುಲೋತ್ಪನ್ನಾ ಯತಯಃ ಸರ್ವ ಏವ ಹಿ**'' ಎಂಬ 5ನೇ ಸರ್ಗದ 4ನೇ ಶ್ಲೋಕ ಹಸ್ತಪ್ರತಿಯಲ್ಲಿ ಇಲ್ಲವೇ ಇಲ್ಲ.

ವಾಚಕರ ಅಧ್ಯಯನಕ್ಕಾಗಿ ಮೂ.ಮಠೇ ಪುಸ್ತಕದಲ್ಲಿ ಮುದ್ರಿಸಿದ ವಿಜಯೀಂದ್ರವಿಜಯದ ಹಸ್ತಪ್ರತಿಯ ನಕಲನ್ನು ಹಾಗು ಡಾ|| ಬಿ.ಎನ್.ಕೆ.ಯವರು ಪ್ರಕಾಶಿಸಿದ ವಿಜಯೀಂದ್ರವಿಜಯ ಪುಸ್ತಕದ ನಕಲನ್ನು ಮುಂದಿನ ಪುಟಗಳಲ್ಲಿ ನೀಡಿದ್ದೇವೆ. ಶ್ರೀ ರಾಯರಮಠದಿಂದ ಎರಡು ಬಾರಿ ಪ್ರಕಾಶಿತವಾದ ವಿಜಯೀಂದ್ರವಿಜಯದಲ್ಲಿಯೂ ಪ್ರಾಯಃ ಇದೇ ತರಹದ ಶ್ಲೋಕಕ್ರಮಗಳು ಇರುವುದರಿಂದ ಅವುಗಳ ನಕಲನ್ನು ಪ್ರತ್ಯೇಕವಾಗಿ ನೀಡಿಲ್ಲ.

प्रत्युज्जगाम सहितो स्वशिष्यैः सहितो मुनिः ।
सुरेन्द्रमागतं दृष्ट्वा ननाम भुवि व्यासराट् ॥ ९ ॥

तथा ननाम तं व्यासं सुरेन्द्रो भुवि भक्तितः ।
अन्योन्यालिंगनं चक्रुः बभूव परमाद्भुतम् ॥ १० ॥

शुशुभाते उभावत्र सूर्याचन्द्रमसाविव ।
जना मुमुदिरे तत्र दृष्ट्वा तौ हंससत्तमौ ॥ ११ ॥

परस्परं करौ गृह्य ह्युपविष्टौ मुनी भुवि ।
उक्त्वा कालोचितां वार्तां उभौ दूर्वाससन्निभौ ॥ १२ ॥

अथ तत्पत्तनावासी राजा धर्मपरायणः ।
आगत्य तत्र हंसौ तौ पूजयित्वा ननाम वै ॥ १३ ॥

प्रावेशयत्पुरं रम्यं सर्वालंकारमण्डितम् ।
निनाय स्वगृहं दिव्यं निवेद्यात्मानमात्मना ॥ १४ ॥

अब्रवीत् व्यासतीर्थं स गीष्पतिं देवराडिव ।
अयं सुरेन्द्रको हंसः कस्य वंशे समुत्थितः ॥ १५ ॥

विबुधेन्द्रार्यवंशे वा तथा विद्यानिधेर्वद ।
गजकोणपतिं व्यासतीर्थः प्राह नृपोत्तमम् ।
शृणु राजन् प्रवक्ष्यामि माहात्म्यामतुलं मुनेः ॥ १६ ॥

अयं सुरेन्द्रो विबुधेन्द्रवंशे
जातोऽप्रतेजा विबुधेन्द्रतुल्यः



मठे मठे सन्ति सहस्रशः प्रभो
नानेन तुल्यो भुवि कोऽपि हंसः
सत्यं ब्रवीमि परलोकहितं ब्रवीमि
सारं ब्रवीमि पुनरेव मतं ब्रवीमि ॥ १७ ॥

अयं सुरेन्द्रो मामेव द्रष्टुमभ्यागतो ध्रुवम् ।
संशयं छिन्धि राजेन्द्र मास्तु ते संशयामतिः ॥ १८ ॥

अथ तौ हंसप्रवरौ स्नात्वा देवौ प्रपूजतुः ।
सुरेन्द्रो राघवं व्यासो वासुदेवं महामुनिः ॥ १९ ॥

तत्र राजा व्यासमुनिमुवाच परया मुदा ।
सत्यं वद महाप्राज्ञ रामार्चा यादृशी मम ॥ २० ॥

व्यास उवाच—

रामार्चेयं नृहरिणा येनानीता न संशयः ।
राजती निर्मिता ह्यन्या मध्वेनेयं निबोधय ॥ २१ ॥

पुनः पप्रच्छ राजासौ व्यासतीर्थं महामतिः ।
कथं नृहरिणानीता रामार्चा केन निर्मिता ॥ २२ ॥

कस्मिन् देशे स्थिता पूर्वं, तन्ममाचक्ष्व विस्तरात् ।

[इतःपरं श्लोकैः २३-४४ पर्यन्तैः मूले नरहरितीर्थेन कलिंगदेशे राज्यभारनिर्वहणं तत्रत्यकोशागारात् सीतारामार्चयोः आनयनं, स्वगुरवे समर्पणं, क्रमेण अर्चयोः कवीन्द्रवंशद्वारा रामचन्द्रतीर्थपर्यन्तमागतिः इत्यादिकथा परम्परागता अत्र ग्रन्थे अनूदिता । सुप्रसिद्धत्वात् विस्तरभयादिह नानूदिता । —संपादकः]

ಈ ಚಿಹ್ನೆಯ ಮಧ್ಯದಲ್ಲಿರುವ ಶ್ಲೋಕಗಳು ಮೂ.ಮಠೇ ಪುಸ್ತಕದ ಪುಟ 134ರಲ್ಲಿ ಮುದ್ರಿಸಿದ ವಿಜಯೀಂದ್ರವಿಜಯದ ಹಸ್ತಪ್ರತಿಯಲ್ಲಿ ಇಲ್ಲ.

रामचन्द्रमुनिर्नित्यं पूजयित्वा रघूत्तमम् ॥ २३ ॥

चचार देशे सर्वत्र घोषयन् स्वस्य विक्रमम् ।
स रामचन्द्रः स्वं मत्वा वृद्धमक्षममातुरम् ॥ २४ ॥

द्विजमन्यं ज्ञाननिधिं तुर्याश्रमिणमातनोत् ।
विबुधेन्द्रेति तं नाम्ना विश्रुतं च चकार ह ॥ २५ ॥

विबुधेन्द्रः स्वगुरुणा ह्यनुज्ञातो मुदा युतः ।
स्वीकृत्यार्चां राजतीं माध्वीं रामस्य धीमतः ॥ २६ ॥

चचार देशे सर्वत्र पूज्यैः शिष्यैः द्विजैर्युतः ।
ययौ वाराणसीं वस्तुं तत्र वासमथाकरोत् ॥ २७ ॥

अथासौ रामचन्द्रश्च यरगोळपुरं गतः ।
तत्र तत्पुरपाले संस्थाप्यार्चाद्वयमञ्जसा ॥ २८ ॥

यरगोळपुराधीशमाहूयेदमथाब्रवीत् ।
अर्चेयं रामजानक्योः त्वद्गृहे स्थाप्यते मया ॥ २९ ॥

अर्होऽस्याः विबुधेन्द्रार्यः स्प्रष्टुं नान्योऽस्ति कश्चन ।
यदा त्वत्पुरमायाति देहि तस्मै मुदा स्वयम् ॥ ३० ॥

इति संदिश्य तं हंसः शिष्यानिदमभाषत ।
युष्माभिरत्र वस्तव्यं यावदागमनं मुनेः ॥ ३१ ॥

विबुधेन्द्रो यतिवरो योग्यो राघवपूजने ।
मच्छिष्यो मद्व्रतप्राणः मद्धस्तजनितो महान् ॥ ३२ ॥



मामिवाज्ञां पालयति गुरोर्मध्वस्य धीमतः ।
अहं सदा द्विजवरैर्युष्माभिः सेवितोऽनिशम् ॥ ३३ ॥

तथासौ विबुधेन्द्रश्च सेव्यः स्यादनिशं ध्रुवम् ।
इत्युक्त्वा तत्र संस्थाप्यार्चे राघवसीतयोः ॥ ३४ ॥

देहं विसृज्य मेदिन्यां विवेश हरिमन्दिरम् ।
अथ शिष्या मठीयाश्च चक्रुर्वृन्दावनं तदा ॥ ३५ ॥

अथ काले बहुगते नागते विबुधेन्द्रके ।
अथ ये मठशिष्याश्च दुर्धियः सेवकाः सदा ॥ ३६ ॥

समायातं तौळविप्रं नाम्ना कृष्णेति विश्रुतम् ।
तं दृष्ट्वा तेन संचिन्त्य तं चक्रुः हंससन्निभम् ॥ ३७ ॥

दत्वा कृत्रिमसन्यासं तस्मै तौळाय शिष्यकाः ।
विबुधेन्द्रेति बहुधा वदन्तश्चागताः तदा ॥ ३८ ॥

यरगोळपतिर्दृष्ट्वा तं यतिं विबुधेन्द्रकम् ।
मत्वा ददौ देवदेव्याश्चार्चाद्वयीं मुदा ॥ ३९ ॥

ते गृहीत्वा हंसवेषः तद्गृहे पूजयन्मुदा ।
मुमोद मुदितस्तेन पूजितः प्रययौ खलः ॥ ४० ॥

रामचन्द्रमठे शिष्याः सेवाकार्ये च ब्राह्मणाः ।
ते विद्यानिधिमुत्पाद्य तत्समीपेऽवसन् खलाः ॥ ४१ ॥

[ ] ಈ ಚಿಹ್ನೆಯ ಮಧ್ಯದಲ್ಲಿರುವ ಶ್ಲೋಕಗಳು ಮೂ.ಮಠೇ ಪುಸ್ತಕದ ಪುಟ 134ರಲ್ಲಿ ಮುದ್ರಿಸಿದ ವಿಜಯೀಂದ್ರವಿಜಯದ ಹಸ್ತಪ್ರತಿಯಲ್ಲಿ ಇಲ್ಲ.

ब्राह्मणैर्निर्मितः तौळः कृत्रिमोऽपि बहुश्रुतः ।
तेऽर्चे चादाय प्रययौ सेवाब्राह्मणैः सह ॥ ४२ ॥

अथ देशभवा विप्रा दृष्ट्वा चातुर्मुखीं शुभाम् ।
प्रतिमां रामजानक्योः श्रद्धां तस्मिंश्च चक्रिरे ॥ ४३ ॥

चक्राङ्कितांश्चकारासौ पूजयंश्च द्विजान् बहून् ।
तैः पूजितश्चचारासावुर्वीं सेवाब्राह्मणसंयुतः ॥ ४४ ॥

वैकुण्ठं च गते रामचन्द्रे तच्छिष्यमध्यगः ।
एकस्तस्मै यतीन्द्राय विबुधेन्द्राय चावदत् ॥ ४५ ॥

तच्छ्रुत्वा तु गतस्तत्र दृष्ट्वा बृन्दावनं गुरोः ।
शुशोच शोकसंतप्तः गुरुं रामं च जानकीम् ॥ ४६ ॥

यरगोळपतिः श्रुत्वा विबुधेन्द्रार्यमागतम् ।
दृष्ट्वा श्रुत्वा वदन् सर्वं विद्यानिधिविचेष्टितम् ॥ ४७ ॥

विबुधेन्द्रयतिः श्रुत्वा हा हा कष्टमिति चाब्रवीत् ।
त्यक्ताम्नः त्यक्तनिद्रश्च देवमाराधयत् यतिः ॥ ४८ ॥

तद्वंशे जनितो ज्ञानी रघुनन्दनसंज्ञितः ।
तेन सम्पादिता रामप्रतिमा परहस्तगा ॥ ४९ ॥

रघुनन्दनः स्वशिष्येण विप्रेण प्रियवादिना ।
आनयामास रामस्य अर्चां तां सीतया विना ॥ ५० ॥



एवं प्राप्ता राघवार्चा रघुनन्दनभिक्षुणा ।
तत्रास्ते जानकी राजन् विद्यानिधिकुले शुभा ॥ ५१ ॥

कृत्रिमार्चा राघवस्य कृता विप्रेण धीमता ।
कृत्रिमार्चां पूजयन्ति तत्र जाताश्च भिक्षवः ॥ ५२ ॥

विद्यानिधिकुलोत्पन्ना यतयो राममानसाः ।
विबुधेन्द्रकुले जाता पूजयित्वा रघूद्वहम् ॥ ५३ ॥

तेनोत्पन्नज्ञानकला मुक्ता गच्छन्ति राघवम् ।
इदं तथ्यं विद्धि राजन् न वक्तव्यं च कस्यचित् ॥ ५४ ॥

शिष्यत्वात् ते मया प्रोक्तं सत्यमित्यवधारय ।
इत्युक्त्वा विररामाथ व्यासतीर्थो यतीश्वरः ॥ ५५ ॥

तच्छिष्याः केशवाद्या वादिराजः प्रसन्नधीः ।
सत्यं सत्यं वदन्तश्च मुमुदू राजसन्निधौ ॥ ५६ ॥

स राजा निखिलं श्रुत्वा पूजयामास सादरम् ।
सुरेन्द्रमिन्द्रावरजं यथा बलिरमन्दधीः ॥ ५७ ॥

तेन संपूजितो व्यासं सुरेन्द्रः प्राह सुस्मितः ॥

॥ इति चतुर्थः सर्गः समाप्तः ॥

ಈ ಚಿಹ್ನೆಯ ಮಧ್ಯದಲ್ಲಿರುವ ಶ್ಲೋಕಗಳು ಮೂ.ಮಠೇ ಪುಸ್ತಕದ ಪುಟ 134ರಲ್ಲಿ ಮುದ್ರಿಸಿದ ವಿಜಯೀಂದ್ರವಿಜಯದ ಹಸ್ತಪ್ರತಿಯಲ್ಲಿ ಇಲ್ಲ.

## ॥ पञ्चमः सर्गः ॥

अथ व्यासराजं स सुरेन्द्रः पर्यपूजयत् ।
उवाच वचनं दिव्यं हर्षगद्गदया गिरा ॥ १ ।

धन्योऽस्मि कृतकृत्योऽस्मि त्वत्समागमकारणात् ।
भवान् प्राज्ञश्च पूज्यश्च राजमृत्युनिवारकः ॥ २ ।

श्रुतं त्वद्वचनं सर्वं मया राज्ञा नरैरपि ।
पुनरन्यमहं पृच्छे वद संशयनुत्तये ॥ ३ ।

विद्यानिधिकुलोत्पन्ना यतयः सर्व एव हि ।
जायन्ते यतिरूपेण इत्युक्तं ते ममाग्रतः ॥ ४ ।

विबुधेन्द्रजितामित्रौ हंसौ हंसकुलोद्भवौ ।
ताभ्यां न पूजिता ह्यर्चा रामस्य परमात्मनः ॥ ५ ।

इमं मे संशयं व्यास छिन्धि त्वं ज्ञानसम्पदा ।
इत्युक्तः प्राह धर्मात्मा सुरेन्द्रं व्यासदेशिकः ॥ ६ ।

विबुधेन्द्रयतिर्धीमान् अद्य जातो पुनर्भुवि ।
सेवार्थं रामचन्द्रस्य स मया परिपालितः ॥ ७ ।

केशवादिषु हंसेषु यो विष्णुरिति विश्रुतः ।
स एव विबुधेन्द्रश्च स मया यतिरूपधृत् ॥ ८ ।

त्वं स्वीकुरुष्व मच्छिष्यं विष्णुतीर्थं यतीश्वरम् ।
स एव त्वत्कुले पुत्रः तव नूनं भविष्यति ॥ ९ ।





विजयीन्द्र इति ख्यातो लोके वै विश्रुतो भवेत् ।
जितामित्रः तस्य विजयीन्द्रमुनेः सुतः ॥ १० ॥

पुरतो भविता नूनं रामार्चापूजने रतः ।
सुधीन्द्र इति विख्यातो लोके स प्रथितो भवेत् ॥ ११ ॥

तच्छिष्योऽहं भविष्येऽहं द्विजन्मा यतिसत्तमः ।
राघवेन्द्र इति ख्यातो जनिष्ये रामकारणात् ॥ १२ ॥

उक्तं सर्वं मया तुभ्यं किमन्यत् श्रोतुमिच्छसि ।
इत्युक्तः प्राह व्यासं स श्रुतं सर्वं मया ध्रुवम् ॥ १३ ॥

विष्णुतीर्थं देहि मम पुत्रोऽयं सत्यवान् भव ।
अथ व्यासः प्रसन्नात्मा विष्णुतीर्थमुवाच ह ॥ १४ ॥

भो विष्णुतीर्थ मद्वाक्यं शृणु देशिकवत्सल ।
मद्वाक्यं पालयन् वत्स सुरेन्द्रं त्वमनुव्रज ॥ १५ ॥

तच्छिष्यो भव कल्याण मच्छिष्योऽपि सदा भवान् ।
पूजयन् रामचन्द्रं त्वं विचरस्व महीतले ॥ १६ ॥

जहि वादीन् समस्तांस्त्वं कर्कशान् तर्कभाषणैः ।
ये ये समागता वत्स त्वां जेतुं वाग्रणाजिरे ॥ १७ ॥

समस्तविद्याचतुरो भव त्वं मदनुग्रहात् ।
परकायप्रवेशं त्वं मा कुरुष्व न संशयः ॥ १८ ॥

अस्माकं नोचितो वत्स चतुर्थाश्रमिणो वयम् ।
शङ्करस्योचितं तत्तु यतोऽसावसुरांशकः ॥ १९ ॥

[ ] ಈ ಚಿಹ್ನೆಯ ಮಧ್ಯದಲ್ಲಿರುವ ಶ್ಲೋಕವು ಮೂ.ಮಠೇ ಪುಸ್ತಕದ ಪುಟ 134ರಲ್ಲಿ ಮುದ್ರಿಸಿದ ವಿಜಯೀಂದ್ರವಿಜಯದ ಹಸ್ತಪ್ರತಿಯಲ್ಲಿ ಇಲ್ಲ.

**ವಾಚಕರೇ, ಗಮನಿಸಿ!** ಅವರು ಛಾಪಿಸಿರುವ ಹಸ್ತಲಿಖಿತ ಒಂದೇ ಒಂದು ಪತ್ರದಲ್ಲಿ ಇಲ್ಲದಿರುವ 38 ಶ್ಲೋಕಗಳನ್ನು ಮುದ್ರಿತಪ್ರತಿಯಲ್ಲಿ ಸೇರಿಸಿರುವಾಗ ಸಮಗ್ರ ಕಾವ್ಯದಲ್ಲಿ ನೂರಾರು ಶ್ಲೋಕಗಳು ಸೇರ್ಪಡೆಯಾಗಿರುವುದಕ್ಕೆ ಸಂದೇಹವೇ ಇಲ್ಲ.

ಇಲ್ಲಿ ಕಾಡುವ ಪ್ರಶ್ನೆಗಳು ಹೀಗಿವೆ:

1. ಹಸ್ತಪ್ರತಿಯಲ್ಲಿ ಇಲ್ಲದ ಶ್ಲೋಕಗಳನ್ನು ಸೇರಿಸಿ ಮುದ್ರಿಸಿದ್ದಾರೆ ಎಂದಾಗುತ್ತದೆಯಲ್ಲವೇ?
2. ಹಸ್ತಪ್ರತಿಯಲ್ಲಿ ಶ್ಲೋಕಗಳ ಕ್ರಮಸಂಖ್ಯೆ ಹಾಗೂ ಸರ್ಗಗಳ ವಿಭಜನೆ ಕಾಣದಿರುವುದರಿಂದ ಕಾಲಾಂತರದಲ್ಲಿ ಶ್ಲೋಕಗಳನ್ನು ಸೇರಿಸಿ ಸರ್ಗಗಳಾಗಿ ಮಾರ್ಪಾಟು ಮಾಡಲಾಯಿತೋ?
3. ಹಸ್ತಪ್ರತಿ ಹಾಗೂ ಮುದ್ರಿತಪ್ರತಿಗಳೆರಡೂ ಕೃತ್ರಿಮ ಎಂದಾಗುತ್ತದೆಯಲ್ಲವೇ?
4. ಈ ಕೃತಿಯನ್ನು ಇಷ್ಟು ದಿನ ಮುಚ್ಚಿಟ್ಟ ಗುಟ್ಟೇನು?
5. ಈ ಕೃತಿಯಲ್ಲಿರುವ ಅನೇಕ ಅಂಕಿ-ಅಂಶಗಳನ್ನು, ದೇಶ-ಕಾಲಗಳನ್ನು ಶ್ರೀ ರಾಯರ ಮಠದವರೇ ಸ್ವೀಕರಿಸದಿರುವುದಕ್ಕೆ ಕಾರಣವೇನು?
6. ಶ್ರೀವಿಜಯೀಂದ್ರವಿಜಯಕಾವ್ಯದ ಅನುವಾದದಲ್ಲಿ (ಪ್ರಕಟಣೆ- ಕ್ರಿ.ಶ.2003. ಶ್ರೀರಾಘವೇಂದ್ರ ಸಾಹಿತ್ಯಪರಿಷತ್, ನಂಜನಗೂಡು. ಅನುವಾದಕರು-ಮಂತ್ರಾಲಯದ ಶ್ರೀಗುರುಸಾರ್ವಭೌಮ ವಿದ್ಯಾಪೀಠದ ವಿದ್ವಾಂಸರು) ಶ್ರೀವಿದ್ಯಾನಿಧಿಗಳ ಕಾಲದಲ್ಲೇ (ಉತ್ತರಾದಿಮಠದಿಂದ) ಮೂಲರಾಮನ ಅಪಹರಣವಾದದ್ದೆಂದು ಸ್ಪಷ್ಟ ಕಾಣಿಸಿರುವರು (3/26). ಆದರೆ ಮೂ.ಮಠೇ ಲೇಖಕರು ಆನಂದನಾಮ ಸಂವತ್ಸರ ಕ್ರಿ.ಶ. 1493 ಶ್ರೀರಘುನಾಥತೀರ್ಥರ ಕಾಲವೆಂದು ಐದು ಕಡೆ ಉಲ್ಲೇಖಿಸಿರುವುದು ಯಾವ ಮುಂದಿನ ಗೂಢ ಯೋಜನೆಯ ಹಿನ್ನಲೆಯಲ್ಲಿರಬಹುದು?
7. ಈ ಕಾವ್ಯದಲ್ಲಿ ಶ್ರೀಸುರೇಂದ್ರತೀರ್ಥರ ವೃಂದಾವನ ಗಜಗಹ್ವರ ಎಂದಿರುವಾಗ (5/36) ಶ್ರೀರಾಯರ ಮಠದವರು ಪರಂಪರೆಯಾಗಿ ಮಧುರೆಯಲ್ಲಿ ಆರಾಧಿಸುತ್ತಿರುವ ವೃಂದಾವನ ಯಾವುದು?
8. ಮಧುರೆಯಲ್ಲಿರುವುದೇ ಶ್ರೀಸುರೇಂದ್ರರ ಮೂಲವೃಂದಾವನ ಎನ್ನಲು ವಿಜಯೀಂದ್ರವಿಜಯಕ್ಕಿಂತಲೂ ಪ್ರಾಚೀನವಾದ ದಾಖಲೆಗಳಿವೆಯೋ? ದಾಖಲೆಗಳಿದ್ದರೆ ಅವು ವಿಜಯೀಂದ್ರವಿಜಯಕ್ಕೆ ವಿರುದ್ಧವಾಯಿತಲ್ಲಾ?
9. ಮೂಲರಾಮಪ್ರತಿಮೆಯ ಅಪಹರಣದ ಕಾಲ, ಯತಿಗಳ ನಿರ್ಯಾಣಕಾಲ ಮುಂತಾದವುಗಳ ವಿಷಯದಲ್ಲಿ ಮೂ.ಮಠೇ ಪುಸ್ತಕದಲ್ಲಿ ಆಧಾರಗಳೆಂದು ಛಾಪಿಸಿರುವ ತಾಮ್ರಪತ್ರಕ್ಕೂ, ವಿಜಯೀಂದ್ರವಿಜಯಕ್ಕೂ, ಪ್ರಾಚೀನತಮಕಲ್ಲಿಚ್ಚಿಗೂ ವಿರೋಧಗಳ ಪರಿಹಾರ ಹೇಗೆ?
10. ಶ್ರೀ ಸುರೇಂದ್ರರು ಪ್ರಯಾಗದಲ್ಲಿ ಬಾಡದ ಚಂದ್ರಭಟ್ಟನಿಗೆ ಕೊಟ್ಟ ಐತಿಹಾಸಿಕ ತಾಮ್ರಪತ್ರದ ವಿಷಯದ ಬಗ್ಗೆ ವಿಜಯೀಂದ್ರವಿಜಯಕಾರರು ಚಕಾರ ಎತ್ತದಿರಲು ಕಾರಣವೇನಿರಬಹುದು?

ಈ ಎಲ್ಲ ಪ್ರಶ್ನೆಗಳಿಗೆ ಉತ್ತರಗಳಿಲ್ಲ. ಅವರ ದಿವಾನರು ಮೂ.ಮಠೇ ಪುಸ್ತಕದಲ್ಲಿ ಬೀಗಿರುವಂತೆ ಇದು ಪ್ರಾಚೀನ ಹಸ್ತಪ್ರತಿ ಅಲ್ಲವೇ ಅಲ್ಲ. ಅದರ ಹಸ್ತಪ್ರತಿ ಮುದ್ರಿತಪ್ರತಿ ಎರಡರಲ್ಲೂ ಸ್ಪಷ್ಟವಾಗಿ ಕೈವಾಡ ಮಾಡಲಾಗಿದೆ ಎನ್ನದೆ ಗತಿಯಿಲ್ಲ.

ಈ ಕಾವ್ಯವನ್ನು ಮೊಟ್ಟ ಮೊದಲು ಪ್ರಕಾಶನ ಮಾಡಿದ ಡಾ।। ಬಿ.ಎನ್.ಕೆ ಶರ್ಮಾ ಅವರೂ ಕೂಡ ತಮ್ಮ My further ten research book (2002) Page 45ರಲ್ಲಿ ಹೀಗೆ ಹೇಳಿದ್ದಾರೆ -

Raja Gururajachar and H.K.Vedavyasachar had access to VIJAYINDRA VIJAYA Kavya of Madhva kavi. One wonders – Why then neither of them had taken trouble of getting it published? Why should they have supressed material evidence?

ಆದ್ದರಿಂದ ಈ ಕಾವ್ಯದ ವಿಷಯದಲ್ಲಿ ಏನೋ ನಿಗೂಢವಾದ ಅಂಶಗಳು ಇದ್ದೇ ಇವೆ ಎಂದು ಸಿದ್ಧವಾಗುತ್ತದೆ.

ಮಹಾಜ್ಞಾನಿಗಳಾದ, ಶಾಪಾನುಗ್ರಹಸಮರ್ಥರಾದ, ಮಹಾನ್ ಟಿಪ್ಪಣೀಕಾರರಾದ ಶ್ರೀವಿಜಯೀಂದ್ರತೀರ್ಥರ ವ್ಯಕ್ತಿತ್ವವನ್ನು, ಘನತೆಯನ್ನು ಪ್ರತಿಬಿಂಬಿಸುವಲ್ಲಿ ಸಂಪೂರ್ಣವಾಗಿ ವಿಫಲವಾಗಿದೆ ಈ ಕಾವ್ಯ. ಈ ಎಲ್ಲ ಹಿನ್ನೆಲೆಯಲ್ಲಿ ಈ ಕೃತಿಯನ್ನು ಅಪ್ರಾಮಾಣಿಕ ಎಂದು ತಳ್ಳಿಹಾಕುವುದೇ ಯೋಗ್ಯ.

* * * *

# ''ಅರ್ಚಾಗತಿಕ್ರಮ'' ಕೃತಿಯ ವಿಮರ್ಶೆ

ಶ್ರೀವಾದೀಂದ್ರತೀರ್ಥರಿಂದ ರಚಿತವಾಗಿದೆ ಎಂದು ತಿಳಿಸಲಾಗಿರುವ ಈ ಕೃತಿಯಲ್ಲಿ ಮೂಲರಾಮ-ಪ್ರತಿಮೆಯ ಅಪಹರಣದ ಘಟನೆ ನಡೆದಿದೆ ಎನ್ನುವುದಕ್ಕೆ ಒಂದು ಶ್ಲೋಕವಿದೆ ಎಂದು ಮೂ.ಮರೇ ಪುಸ್ತಕದಲ್ಲಿ ಪ್ರಕಟಿಸಿ (ಪು18), ಅದನ್ನು ಆಧಾರವೆಂದಿದ್ದಾರೆ. ಆ ಕೃತಿಯ ವಿಮರ್ಶೆ.

ಶ್ರೀವಾದೀಂದ್ರತೀರ್ಥರಿಂದ ರಚಿಸಲಾಗಿದೆ ಎಂದು ಹೇಳಲಾಗುವ ಅರ್ಚಾಗತಿಕ್ರಮ ಎಂಬ ಕೃತಿಯನ್ನು ಅಧ್ಯಯನ ಮಾಡಿದಾಗ ಕಂಡು ಬಂದ ಕೆಲವು ಅಂಶಗಳು -

1. ರಾಯರ ಮಠದಲ್ಲಿ ಪೂಜೆಗೊಳ್ಳುತ್ತಿರುವ ಪ್ರತಿಮೆಗಳ ಬಗ್ಗೆಯೇ ತಿಳಿಸಲು ಹೊರಟ ಈ ಗ್ರಂಥದಲ್ಲಿ ನಿತ್ಯವೂ ಅವರ ಮಠದಲ್ಲಿ ಪೂಜೆಗೊಳ್ಳುತ್ತಿದೆ ಎನ್ನಲಾಗುವ ಶ್ರೀಜಯತೀರ್ಥಕರಾರ್ಚಿತ ಶ್ರೀಜಯರಾಮದೇವರ ಉಲ್ಲೇಖವಿಲ್ಲ. ಅನುಕ್ತಿ ದೋಷವಲ್ಲವೆಂಬುದು ನಿಜ. ಆದರೆ ಯಾವ ವಿಷಯ ತಿಳಿಸಲು ಒಂದು ಗ್ರಂಥ ಹೊರಟಿದೆಯೋ ಆ ವಿಷಯದ ಬಗ್ಗೆ ಅನುಕ್ತಿ ಇದ್ದರೆ ಅದು ದೋಷವೇ. ಇದು ಪ್ರಬಲ ದೋಷ. ಅರ್ಚಾಗತಿಕ್ರಮಕ್ಕೆ ನ್ಯೂನ್ಯತೆ. ಶ್ರೀವಾದೀಂದ್ರರಂತಹ ಮಹಾನುಭಾವರು ನಿತ್ಯ ಪ್ರಧಾನಸ್ಥಾನದಲ್ಲಿಟ್ಟು ಪೂಜೆಮಾಡುವ ಶ್ರೀಜಯರಾಮದೇವರನ್ನು ಮರೆತಿದ್ದಾರೆ ಎಂದು ಊಹಿಸಲೂ ಸಾಧ್ಯವಿಲ್ಲ. ಆದ ಕಾರಣ ಈ ಕೃತಿ ಶ್ರೀವಾದೀಂದ್ರರದ್ದು ಎನ್ನುವುದೇ ಸಂದೇಹಾಸ್ಪದವಾಗಿದೆ.
2. ಯಾವ ಮೂಲಪ್ರಮಾಣಗಳ ಉಲ್ಲೇಖದ ಸೂಚನೆಯೂ ಇಲ್ಲದೆ ಮೂರು ಕಡೆ ವಕ್ರ, ದುಂಡುಪೀಠ, ಉದ್ದಕಿವಿ ಮುಂತಾದ ಮೂಲರಾಮ ಪ್ರತಿಮೆಯ ಲಕ್ಷಣಗಳನ್ನು ಹೇಳುತ್ತದೆ. ಈ ವಿಷಯದಲ್ಲಿ ಇದೇ ಮೊಟ್ಟಮೊದಲ ಹಾಗೂ ಏಕೈಕ ಉಲ್ಲೇಖ ಎಂಬುದು ಗಮನಾರ್ಹ. ಈ ಲಕ್ಷಣಗಳ ಬಗ್ಗೆ ಈ ಕೃತಿಗಿಂತ ಪ್ರಾಚೀನವಾದ ಯಾವ ಕೃತಿಗಳಲ್ಲೂ ಉಲ್ಲೇಖ ಇಲ್ಲದಿರುವುದು ಹಾಗೂ ಈ ಕೃತಿಗಿಂತ ಅರ್ವಾಚೀನವಾದ ಯಾವ ಕೃತಿಗಳಲ್ಲೂ (ಹರಿದಾಸರ ಕೀರ್ತನೆಗಳಲ್ಲೂ ಸಹ) ಉಲ್ಲೇಖವಿಲ್ಲದಿರುವುದು ಅತ್ಯಂತ ಗಮನಾರ್ಹ. ಇದರಿಂದಲೂ ಈ ಕೃತಿ ಶ್ರೀವಾದೀಂದ್ರರದ್ದೆಂದು ಹೇಳಲು ಸಾಧ್ಯವಿಲ್ಲ.
3. ಶ್ರೀಮೂಲರಾಮ ಹಾಗೂ ಮೂಲಸೀತೆಯರಲ್ಲಿ ವರ್ಣತಃ, ಪೀಠತಃ, ಪರಿಮಾಣತಃ ಸಾಮ್ಯ ಹೇಳುವ ಈ ಕೃತಿ ಪ್ರತ್ಯಕ್ಷಕ್ಕೆ ವಿರುದ್ಧ. ರಾಯರ ಮಠದವರೇ ಒಪ್ಪಿಕೊಂಡಂತೆ ಶ್ರೀಮೂಲಸೀತಾದೇವಿಯವರು ಇರುವುದು ಉತ್ತರಾದಿಮಠದಲ್ಲೇ. ಆದರೆ, ಮೂಲಸೀತಾಪ್ರತಿಮೆ ಶ್ರೀಮೂಲರಾಮನಂತೆ ತಾಮ್ರವರ್ಣದ್ದಾಗದೇ ಹಿತ್ತಾಳೆ ಬಣ್ಣದ್ದಾಗಿದೆ. ಪೀಠ ತಾಮ್ರದ್ದಾದರೂ ಶ್ರೀಮೂಲರಾಮಪ್ರತಿಮೆಗೆ ಇದ್ದಂತೆ ಕಮಲದ ಆಕಾರದ ಪೀಠ ಇರದೆ ಕೇವಲ ದುಂಡನೆಯ ಗದ್ದುಗೆ ಇದೆ. ಪರಿಮಾಣದಲ್ಲೂ ಸಾಮ್ಯವಿಲ್ಲ.
4. ಈ ಕೃತಿಯಲ್ಲಿ ವ್ಯಾಸಮುಷ್ಟಿಗಳು ಬಹಳ ಮತ್ತು ಬಿಳಿ ಬಣ್ಣವುಳ್ಳವುಗಳು ಎಂದು ಹೇಳಲ್ಪಟ್ಟಿದೆ.

**ಅನಂದತೀರ್ಥಮುನಿನಾ ನಾರಾಯಣಕರಾಂಬುಜಾತ್ ।**

**ಲಬ್ಧಾ ಗೌರೋಪಲಾತ್ಮಾರ್ಚಾ ವ್ಯಾಸಸ್ಯ ಬಹವೋऽನಘಾಃ ॥**

(ಶ್ರೀ ರಾಜಾ ಎಸ್.ಗುರುರಾಚಾರ್ಯರ ಅನುವಾದ- ಬೆಂಗಳೂರಿನ ಸೀತಾಪತಿ ಆಗ್ರಹಾರದ ಶ್ರೀರಾಯರ ಮಠದ ವಜ್ರಮಹೋತ್ಸವಾಚರಣೆಯ ಸಂದರ್ಭದಲ್ಲಿ ಪ್ರಕಟಿತ-1994.)

ಅ. ವ್ಯಾಸಮುಷ್ಟಿಗಳು ಎಂಟು ಎಂದು ವಾಯುಪುರಾಣ, ಶ್ರೀಸತ್ಯಾಭಿನವರ ರಾಮಾಮೃತಮಹಾರ್ಣವ ಗ್ರಂಥದಲ್ಲಿ ಉದ್ಧರಿಸಿರುವ ಪುರಾಣವಾಕ್ಯ, ಸುಮಧ್ವವಿಜಯದ ಛಲಾರೀ ಶೇಷಾಚಾರ್ಯರ ವ್ಯಾಖ್ಯಾನಗಳಲ್ಲಿ ಸ್ಪಷ್ಟವಾದ ಉಲ್ಲೇಖವಿದೆ.

**ಗದ್ಗದಾಕ್ಷರಸಂಯುಕ್ತೋ ನನಾಮ ಚ ಪುನಃ ಪುನಃ ।**
**ತಸ್ಮೈ ಮಧ್ವಾಯ ವಿಶ್ವಾತ್ಮಾ ಸ್ವಾಧಿಷ್ಠಾನಶಿಲಾಷ್ಟಕಮ್ ।। 157 ।।** [1]

ಗದ್ಗದಕಂಠಿತರಾಗಿ ಶ್ರೀವೇದವ್ಯಾಸರಿಗೆ ಪುನಃ ಪುನಃ ಭಕ್ತಿಯಿಂದ ನಮಿಸಿದರು. ವಿಶ್ವಾತ್ಮರಾದ ಶ್ರೀವೇದವ್ಯಾಸರು ತಮ್ಮ ಪೂರ್ಣಸನ್ನಿಧಾನವುಳ್ಳ ವ್ಯಾಸಮುಷ್ಟಿಗಳೆಂಬ 8 ಮುಷ್ಟಿಶಿಲೆಗಳನ್ನು ಮಧ್ವರಿಗೆ ಕೊಟ್ಟರು.

ಆ. **ಸ್ವಾಧಿಷ್ಠಾನಾನ್ ಪರಾನಷ್ಟೌ ಗ್ರಾವಾಣಃ ಕೃಪಯಾ ದದೌ ।**
**ಸಜ್ಜನೇಷು ತತಸ್ತೋಷಾನ್ ಮಧ್ವಃ ಪ್ರತಿಜಗಾಮ ಹ ।। 28 ।।** [2]

**ತಾಶ್ಚ ಶಿಲಾಃ ಅಷ್ಟಸಂಖ್ಯಾಕಾಃ ಜ್ಞೇಯಾಃ ತಚ್ಚೋಕ್ತಂ ವಾಯುಪುರಾಣೇ ಮಧ್ವಾವತಾರೇ-**
**'ಸ್ವಾಧಿಷ್ಠಾನಾನ್ ಪರಂ ಚಾಷ್ಟೌ ಗ್ರಾವಾಣಃ ಕೃಪಯಾ ದದೌ..'**

–ಸುಮಧ್ವವಿಜಯ ಸರ್ಗ 10, ಛಲಾರೀವ್ಯಾಖ್ಯಾನ

ಇ. **ನಾರಾಯಣೇನ ಯಾ ದತ್ತಾ ವೇದವ್ಯಾಸಾಭಿಧಾಃ ಶಿಲಾಃ ।**
**ರೇಜೇ ಸ ತಾಭಿರಷ್ಟಾಭಿಃ ಮೂರ್ತಾಭಿರಿವ ಸಿದ್ಧಿಭಿಃ ।।** –ಸತ್ಯನಿಧಿವಿಲಾಸ, 2-40

ಈ. **ಪೊಗಳಲೆನ್ನಳವೆ ನಿನ್ನ ಗುರುಗಳ ರನ್ನ ।।**

ಎಂಬ ಗೋಪಾಲದಾಸರು ರಚಿಸಿರುವ ವಾಯುದೇವರ ಅವತಾರತ್ರಯನ್ನು ಸ್ತುತಿಸುವ ಕೃತಿಯಲ್ಲಿ

**ವಾಲುಕಮುಷ್ಟಿ ಅಷ್ಟವು ದಿಗ್ವಿಜಯರಾಮ-**
**ಲೋಲವಿಠಲ ನರಹರಿಮುನಿ ತಂದಂಥ**
**ಮೂಲಸೀತಾರಾಮ ಹಯಗ್ರೀವ ಮೂರುತಿ**
**ಸಾಲಿಗ್ರಾಮ ಶಂಖ ಮೊದಲಾದ ಪದಾರ್ಥ**
**ಭೂಲೋಕದೊಳು ನಿಮ್ಮ ಪೀಳಿಗೆಯಲ್ಲಿರಿಸಿ ... ।। 9 ।।**

ಉ. ತೀರ್ಥಪ್ರಬಂಧವನ್ನು ಕನ್ನಡದಲ್ಲಿ ಅನುವಾದಮಾಡಿರುವ ದಿ.ಸಾಣೂರು ಶ್ರೀಭೀಮಭಟ್ಟರು ಹಾಗೂ ಶ್ರೀ ಡಾ।। ವ್ಯಾಸನಕೆರೆ ಪ್ರಭಂಜನಾಚಾರ್ಯರು ಮುಂತಾದವರು ವ್ಯಾಸಮುಷ್ಟಿಗಳನ್ನು ಎಂಟು ಎಂಬುದಾಗಿ ತಿಳಿಸಿದ್ದಾರೆ.

ಊ. ಇಂದು ಪ್ರತ್ಯಕ್ಷವಾಗಿ ವ್ಯಾಸಮುಷ್ಟಿಗಳಿರುವ ಕಡೆಗಳಲ್ಲೆಲ್ಲಾ ಬಿಳಿ ಬಣ್ಣದ ಮುಷ್ಟಿಗಳಿಲ್ಲ.

ಋ. ಗುರುಪುರಂದರವಿಠ್ಠಲರ ವೇದಾಂತವೇದ್ಯನಾದ.. ಎಂಬ ಸುಳಾದಿಯಲ್ಲೂ ಎಂಟು ವೇದವ್ಯಾಸರೆಂಬ ಮಳಲು ಮುಟ್ಟಿಗೆಯನು... (15ನೇ ನುಡಿ) ಎಂಬುದಾಗಿ ವ್ಯಾಸಮುಷ್ಟಿಗಳ ಸಂಖ್ಯೆ ಎಂಟೇ

1. ವಾಯುಪುರಾಣೋಕ್ತ ಶ್ರೀಮಧ್ವಾವತಾರಮಹಿಮಾವರ್ಣನೆ, ಸಂಪಾದಕ ಹಾಗೂ ಅನುವಾದಕ: ಶ್ರೀ ಆ.ರಾ.ಪಂಚಮುಖಿ, ಪ್ರಕಾಶನ: ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥಪ್ರತಿಷ್ಠಾನಂ, ಧಾರವಾಡ., 1999.

2. ಶ್ರೀಸತ್ಯಾಭಿನವತೀರ್ಥಕೃತ ರಾಮಾಮೃತಮಹಾರ್ಣವ, ಸಂಪಾದಕ: ಶ್ರೀ ಡಾ।। ವ್ಯಾಸನಕೆರೆ ಪ್ರಭಂಜನಾಚಾರ್ಯ, ಪ್ರಕಾಶನ: ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ, 2009.

ಎಂದು ಹೇಳಲಾಗಿದೆ. ಅಲ್ಲದೇ ಅವುಗಳ ವಿವಿಧ ಬಣ್ಣಗಳನ್ನು ಮತ್ತು ಯಾವ ಯಾವ ಸ್ಥಳಗಳಲ್ಲಿ ಎಷ್ಟಿವೆ ಎಂಬುದನ್ನೂ ಸ್ಪಷ್ಟ ಉಲ್ಲೇಖಿಸಲಾಗಿದೆ. ಈ ಪ್ರಸಂಗದಲ್ಲಿ ಶ್ರೀಪದ್ಮನಾಭತೀರ್ಥರಿಗೆ ಐದು ವ್ಯಾಸಮುಷ್ಟಿಗಳನ್ನು ನೀಡಿದ ಉಲ್ಲೇಖ ಬಂದಿದೆ. ಈ ಕೃತಿಯನ್ನು ಪ್ರಮಾಣತ್ವೇನ ಉಲ್ಲೇಖಿಸಿದವರು ರಾಯರ ಮಠದ ದಿ. ಪಂ. ರಾಜಾ ಗುರುರಾಜಾಚಾರ್ಯರೇ.('ಶ್ರೀಮೂಲರಾಮ''ಪುಸ್ತಕದಲ್ಲಿ).

ಇಷ್ಟೆಲ್ಲಾ ಪ್ರಮಾಣಗಳು ಸ್ಪಷ್ಟವಾಗಿ 8 ವ್ಯಾಸಮುಷ್ಟಿಗಳು ಎಂದು ಹೇಳುತ್ತಿರುವಾಗ 8 ಎಂಬ ಸಂಖ್ಯೆಯನ್ನು ಸ್ಪಷ್ಟವಾಗಿ ಹೇಳದೇ ಕೇವಲ ಬಹಳ ಎಂದು ಹೇಳಿದ್ದರ ಉದ್ದೇಶವೇನು?

ಈ ಎಲ್ಲ ಅಂಶಗಳನ್ನು ಗಮನಿಸಿದಾಗ, ವಿಜಯೀಂದ್ರವಿಜಯ ಮತ್ತು ಅರ್ಚಾಗತಿಕ್ರಮಗಳನ್ನು ಮುಂದೆ ಮಾಡಿಕೊಂಡು ಶ್ರೀರಘುನಂದನರ ಹಾಗೂ ಶ್ರೀವಾದೀಂದ್ರರ ಹೆಸರಿಗೆ ಕಳಂಕ ತರುವ ಕೆಲಸವನ್ನು ಮಾಡಿದ್ದು ಎದ್ದು ಕಾಣುತ್ತಿದೆ. ಶ್ರೀವಾದೀಂದ್ರರ ಗಂಭೀರಶೈಲಿಯನ್ನು ಗುರುಗುಣಸ್ತವನದಲ್ಲಿ ಕಾಣಬಹುದಾಗಿದೆ. ಅರ್ಚಾಗತಿಕ್ರಮದ ಶೈಲಿಗೂ ಗುರುಗುಣಸ್ತವನದ ಶೈಲಿಗೂ ಅಜಗಜಾಂತರ ಎಂಬುದನ್ನು ಯಾರು ಬೇಕಾದರೂ ಗಮನಿಸಬಹುದು. ಇಂತಹ ಕೃತ್ರಿಮ ಕೃತಿಗಳನ್ನು (ಎರಡೇ ಕೃತಿಗಳು) ಆಧಾರವಾಗಿಟ್ಟುಕೊಂಡು ಉಳಿದೆಲ್ಲ ಆಧಾರಗಳನ್ನು ಇದಕ್ಕೆ ತಕ್ಕಂತೆ ಸೃಷ್ಟಿಸುತ್ತಾ ಹೊರಟವರು ರಾಯರ ಮಠದವರು. ಇದು ನ್ಯಾಯವಲ್ಲ.

ಈ ಎಲ್ಲ ಹಿನ್ನೆಲೆಯಲ್ಲಿ ''ಶ್ರೀರಾಘವೇಂದ್ರಮಠಗತಾರ್ಚಾಗತಿಕ್ರಮಃ'' ಎಂಬ ಕೃತಿ ಶ್ರೀವಾದೀಂದ್ರ-ತೀರ್ಥರದ್ದೆಂದು ಒಪ್ಪಲು ಸಾಧ್ಯವಿಲ್ಲ.

ಅಲ್ಲದೇ ಈ ಕೃತಿಯಲ್ಲಿ -

ಅ. ''ರಜತರಾಮ'' ಎಂದಿದೆ. ದಿಗ್ವಿಜಯರಾಮ ಎಂಬ ಶಬ್ದವಿಲ್ಲ. ಆದ್ದರಿಂದ ದಿಗ್ವಿಜಯರಾಮಪ್ರತಿಮೆ ರಾಯರ ಮಠದಲ್ಲಿ ಇದೆ ಎನ್ನುವುದಕ್ಕೆ ಇದು ಪ್ರಮಾಣವಾಗುವುದಿಲ್ಲ.

ಆ. ''ಅರ್ಚಾಗತಿಕ್ರಮ'' ಗ್ರಂಥದಲ್ಲೂ ಶ್ರೀರಾಮಚಂದ್ರತೀರ್ಥರಿಗೆ ಶ್ರೀವಿದ್ಯಾನಿಧಿಗಳೆಂಬ ಶಿಷ್ಯರಿದ್ದರೆಂದು ಕೆಲವರು ಹೇಳಿದರು ಎಂದು ತಿಳಿಸಿದ್ದಾರೆ. ಶ್ರೀವಾದೀಂದ್ರರ ಕಾಲದಲ್ಲೇ ಶ್ರೀವಿದ್ಯಾನಿಧಿಗಳೆಂಬ ಶಿಷ್ಯರು ಶ್ರೀರಾಮಚಂದ್ರತೀರ್ಥರಿಗೆ ಇದ್ದರು ಎಂಬ ಸುದ್ದಿ ಪ್ರಚಲಿತವಿತ್ತು, ಹಾಗಾದರೆ ರಾಯರ ಮಠದವರೇ ಆರೋಪಿಸುವಂತೆ ಗುರುಚರ್ಯಾ, ಪೂರ್ಣಬೋಧಗುರುವಂಶಕಥಾಕಲ್ಪತರು ಮೊದಲಾದ ಕಾವ್ಯಗಳಲ್ಲಿ ಈ ವಿಷಯ ಸೃಷ್ಟಿಗೊಂಡದ್ದಲ್ಲವೆಂದು ಸಿದ್ಧವಾಯಿತು.

ಮೂ.ಮಠೇ ಲೇಖಕರು ಪುಟ 27ರಲ್ಲಿ ''ಇದರ ಹಸ್ತಪ್ರತಿಯನ್ನು ಅನುಬಂಧದಲ್ಲಿ ನೀಡಲಾಗಿದೆ'' ಎಂದು ಬರೆದು ಅನುಬಂಧದಲ್ಲಿ (ಪುಟ 135) ಮುದ್ರಿತಪ್ರತಿಯ ನಕಲನ್ನು ಕೊಟ್ಟು ವಾಚಕರಿಗೆ ಮೋಸ ಮಾಡಿರುವುದು, ಈ ಎಲ್ಲ ಅಭಿಪ್ರಾಯಗಳಿಗೆ ಪೋಷಕವಾಗಿದೆ.

ಈ ಕೃತಿಯಲ್ಲಿ ಇತರರ ಕೈವಾಡವಿರುವುದು ಸ್ಪಷ್ಟವಾಗುತ್ತದೆ. (ಮೂ.ಮಠೇ ಪುಸ್ತಕದ 2ನೇ ಮುದ್ರಣದಲ್ಲೂ ಈ ಕೃತಿಯ ಹಸ್ತಪ್ರತಿಯನ್ನು ಛಾಪಿಸದೇ ಕೇವಲ ಮುದ್ರಿತ ಪ್ರತಿಯನ್ನೇ ಕೊಟ್ಟಿರುವುದು ಆಶ್ಚರ್ಯ.)

* * * *

ಮೂ.ಮಠೇ. ಪುಸ್ತಕದಲ್ಲಿ ಶ್ರೀರಾಘವೇಂದ್ರವಿಜಯದ ''ಸಾ ಯತ್ರ ರಾಮಪ್ರತಿಮಾಸ್ತಿ ತತ್ರ ಚತುಃಪುಮರ್ಥೀ ಸತತಂ ಚಕಾಸ್ತಿ'' (ಪುಟ 13) ಮತ್ತು ''ಸಾ ರಾಮಚಂದ್ರಪ್ರತಿಮಾ ಜಯೀಂದ್ರಾತ್ ಸುಧೀಂದ್ರಯೋಗೀಂದ್ರಮಗಾತ್ ಕ್ರಮೇಣ'' (ಪುಟ 19) ಈ ಶ್ಲೋಕಗಳನ್ನು ಉಲ್ಲೇಖಿಸಿ ಲೇಖಕರು ರಾಯರಮಠದಲ್ಲಿ ಮೂಲರಾಮ ಪ್ರತಿಮೆ ಇದೆ ಎನ್ನುವ ವಾದಕ್ಕೆ ಈ ಕಾವ್ಯ ಸಾಕ್ಷ್ಯಾಧಾರವಾಗಿದೆ ಎಂದಿದ್ದಾರೆ. ಇದರ ಒಂದು ಅಧ್ಯಯನವನ್ನು ಈ ಭಾಗದಲ್ಲಿ ಮಾಡೋಣ.

**ಸಾ ಯತ್ರ ರಾಮಪ್ರತಿಮಾಸ್ತಿ ತತ್ರ ಚತುಃಪುಮರ್ಥೀ ಸತತಂ ಚಕಾಸ್ತಿ ।**
**ಆದಿಶ್ಯ ಚೈವಂ ಗುರುಣೈವ ದತ್ತಾಮಥಾರ್ಚಯತ್ತಾಮನಿಶಂ ಯಮೀಂದ್ರಃ ॥** ಸ 2. ಶ್ಲೋ. 8

ಎಂಬ ಎರಡನೇ ಸರ್ಗದ 8ನೇ ಶ್ಲೋಕವು ''ಆ ರಾಮಪ್ರತಿಮೆ ಎಲ್ಲಿರುತ್ತದೋ ಅಲ್ಲಿ ಧರ್ಮಾದಿ ಪುರುಷಾರ್ಥಗಳು ನೆಲೆಸಿರುತ್ತವೆ ಎಂದು ಶ್ರೀಮದಾಚಾರ್ಯರು ತಮ್ಮ ಶಿಷ್ಯರಿಗೆ ಹೇಳಿ ಈ ಪ್ರತಿಮೆಯನ್ನು ತಮ್ಮ ಶಿಷ್ಯರಿಗೆ ನೀಡಿದರು. ಅವರು ಅದನ್ನು ಪೂಜಿಸಿದರು'' ಎಂದು ಹೇಳಲಾಗಿದೆ. ಇದು ಮೂಲರಾಮಪ್ರಶಸ್ತಿ ಮಾತ್ರ. ಆ ಪ್ರತಿಮೆಯ ಮಹತ್ತ್ವವನ್ನು ಮಾತ್ರ ತಿಳಿಸಿಕೊಡುತ್ತಿದೆ. ಇದನ್ನು ಉಲ್ಲೇಖಿಸಿದ್ದೂ ಕೂಡ ಶ್ರೀಮದಾಚಾರ್ಯರ ಕಾಲಘಟ್ಟದಲ್ಲಿ ನಡೆದ ಘಟನೆಯನ್ನು ವಿವರಿಸುವಾಗ. ಆದ್ದರಿಂದ ಈ ಶ್ಲೋಕವು ರಾಯರ ಮಠದಲ್ಲಿ ಮೂಲರಾಮ ಇದೆ ಎನ್ನುವುದಕ್ಕೆ ಯಾವುದೇ ತರಹದ ಪುಷ್ಟಿಯನ್ನು ನೀಡುವುದಿಲ್ಲ.

ಇನ್ನು ಅವರು ನೀಡಿದ ಎರಡನೇ ಶ್ಲೋಕ– ''ಸಾ ರಾಮಚಂದ್ರಪ್ರತಿಮಾ ಜಯೀಂದ್ರಾತ್ ಸುಧೀಂದ್ರ-ಯೋಗೀಂದ್ರಮಗಾತ್ ಕ್ರಮೇಣ'' ಎಂಬದು. ಈ ಶ್ಲೋಕವನ್ನು ಆಧರಿಸಿ, ಶ್ರೀವಿಜಯೀಂದ್ರರು ಶ್ರೀಮೂಲರಾಮ ಪ್ರತಿಮೆಯನ್ನು ಹೊಂದಿದ್ದರು ಎಂದಿದ್ದಾರೆ. (ಪು. 19)

ಈಗ ಇದರ ಹಿಂದುಮುಂದಿನ ಶ್ಲೋಕಗಳನ್ನು ಅಧ್ಯಯನ ಮಾಡೋಣ.

ಈ ರಾಘವೇಂದ್ರವಿಜಯಕಾವ್ಯದ 2ನೇ ಸರ್ಗ ಶ್ಲೋಕ 7ರಲ್ಲಿ ಶ್ರೀನರಹರಿತೀರ್ಥರು ಗಜಪತಿರಾಜನ ಕೋಶದಲ್ಲಿರುವ ರಾಮಪ್ರತಿಮೆಯನ್ನು ಶ್ರೀಮದಾಚಾರ್ಯರಿಗೆ ತಂದು ಸಮರ್ಪಿಸಿದ ಉಲ್ಲೇಖವಿದೆ.

ಮುಂದೆ,

**ಸಾ ಯತ್ರ ರಾಮಪ್ರತಿಮಾಸ್ತಿ ತತ್ರ ಚತುಃಪುಮರ್ಥೀ ಸತತಂ ಚಕಾಸ್ತಿ ।**
**ಆದಿಶ್ಯ ಚೈವಂ ಗುರುಣೈವ ದತ್ತಾಮಥಾರ್ಚಯತ್ತಾಮನಿಶಂ ಯಮೀಂದ್ರಃ ॥ 8 ॥**

**ಅಂತೇವಸಂಸ್ತಸ್ಯ ಗುರೋರನೇನ ಸಭಾಜಯತ್ತಾಂ ಪ್ರತಿಮಾಂ ವಿತೀರ್ಣಾಮ್ ।**
**ಸಂವರ್ಧಯನ್ನಾದಿಮಸಂಪ್ರದಾಯಮನ್ಯೋಽಭವನ್ಮಾಧವಸಂಯಮೀಂದ್ರಃ ॥ 9 ॥**

**ಮುನೇರಮುಷ್ಮಾದನವದ್ಯಬೋಧಾತ್ ಕೃತೋಪದೇಶಃ ಪ್ರತಿಮಾಂ ಚ ಗೃಹ್ಣನ್ ।**
**ಕ್ಷೋಭಂ ವಿಧಾತುಂ ಪ್ರತಿವಾದಿವಾಚಾಮಕ್ಷೋಭ್ಯನಾಮಾ ಮುನಿರಾವಿರಾಸೀತ್ ॥ 10 ॥**

**ದೃಢಾಸಿನಾ ತತ್ತ್ವಮಸೀತಿ ವಾಚಾ ಸಾಮರ್ಥ್ಯಭಾಜಾ ಪರಜೀವಭೇದೇ ।**
**ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂ ಬಿಭೇದ ॥ 11 ॥**

ತಲ್ಲಬ್ಧಬೋಧೋ ವಿಮತೈಕಬಾಧೋ ಜಯೈಕಭೂಮಿರ್ಜಯತೀರ್ಥನಾಮಾ ।
ವ್ಯಾಚಷ್ಟ ಪೂರ್ಣಪ್ರಮತಿಪ್ರಣೀತಂ ಸರ್ವಂ ಪ್ರಬಂಧಂ ಸರಸೈರ್ವಚೋಭಿಃ ॥ 12 ॥

ಅಸೌ ಕದಾಚಿದ್ ಗೃಹಿಭಾವಕಾಲೇ ವಿಧಾಯ ಧಾಟೀಂ ತುರಗಾಧಿರೂಢಃ ।
ಅಕ್ಷೋಭ್ಯತೀರ್ಥಾಶ್ರಿತತೀರಸೀಮಾಮಕ್ಷೋಭ್ಯತೀರ್ಥಾಂ ತಟನೀಮಯಾಸೀತ್ ॥ 13 ॥

ಅನುದ್ಧೃತಂ ವಾರಿ ಸಮುದ್ಧತಶ್ರೀಃ ಪೀತ್ವಾ ಮುಖೇನೈವ ತೃಷಾಕುಲೇನ ।
ಮುನಿಂ ಸಮೀಪೇ ಮನನೈಕತಾನಂ ಅಸಾವನಂಸೀದವಲೋಕ್ಯ ಮೂರ್ಧ್ನಾ ॥ 14 ॥

ಅಭ್ಯರ್ಥಿತಸ್ತೇನ ಮುನಿಃ ಸ ಭಕ್ತ್ಯಾ ಸನ್ನ್ಯಾಸಮನ್ಯಾದೃಶವಾರಿಪಾನಾತ್ ।
ಅಮಂಸ್ತ ತಂ ಪೂರ್ಣಮತಿಪ್ರದಿಷ್ಟಂ ವ್ಯಾಖ್ಯಾತೃಭಾವೇ ವೃಷಮನ್ಯಭಾವೇ ॥ 15 ॥

ವಿಧಾಯ ತಂ ಸಂಯಮಿನಂ ಪ್ರಹೃಷ್ಟೇ ಗುರೌ ತದೀಯಾ ರುಷಿತಾಃ ಪುನಸ್ತಮ್ ।
ನಿನ್ಯುಃ ಪುರೀಂ ತತ್ರ ಭಯೇನ ಭಾರ್ಯಾಜನೇನ ದೃಷ್ಟಃ ಸ ತು ಶೇಷವೇಷಃ ॥ 16 ॥

ತತೋऽತಿವಿಶ್ವಾಸಯುಜಾ ನಗರ್ಯಾಃ ಪಿತ್ರಾದಿನಾ ಬಂಧುಜನೇನ ತೂರ್ಣಮ್ ।
ಅನೀಯ ತಸ್ಮೈ ಮುನಯೇ ಸ ದತ್ತಃ ಶಾಸ್ತ್ರಾಣ್ಯಮುಷ್ಮಾದಖಿಲಾನಿ ಲೇಭೇ ॥ 17 ॥

ತಸ್ಮಾದುಪೇತಾ ಪ್ರತಿಮಾ ಹರೇಃ ಸಾ ಕ್ರಮೇಣ ಸಿದ್ಧಾಂತಸಮೃದ್ಧಿಹೇತುಃ ।
ವಿದ್ಯಾಧಿರಾಜಂ ವ್ರತಿನಂ ಕವೀಂದ್ರಂ ವಾಗೀಶಮಸ್ಮಾದಪಿ ರಾಮಚಂದ್ರಮ್ ॥ 18 ॥

ಮೇಲಿನ ಶ್ಲೋಕ 8, 9, 10 ಇವುಗಳಲ್ಲಿ ಕ್ರಮವಾಗಿ ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರ ವಿಷಯವನ್ನು ಉಲ್ಲೇಖಿಸಿ ರಾಮಪ್ರತಿಮೆಯು ಗುರುಗಳಿಂದ ಶಿಷ್ಯರಿಗೆ ಕ್ರಮವಾಗಿ ಪ್ರಾಪ್ತವಾಗಿರುವುದನ್ನು ಉಲ್ಲೇಖಿಸಿದ್ದಾರೆ.

ಮುಂದೆ ಶ್ಲೋಕ 11 ರಲ್ಲಿ ಶ್ರೀಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಜಯಿಸಿದ್ದನ್ನು ಉಲ್ಲೇಖಿಸುತ್ತಾ, ಶ್ಲೋಕ 12ರಿಂದ 17ರವರೆಗೆ ಶ್ರೀಜಯತೀರ್ಥರ ವರ್ಣನೆಯನ್ನು ಮಾಡಿದ್ದಾರೆ.

ಶ್ಲೋಕ 18 ರಲ್ಲಿ ಶ್ರೀಜಯತೀರ್ಥರಿಂದ ಶ್ರೀವಿದ್ಯಾಧಿರಾಜರು ಅವರಿಂದ ನಂತರ ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರು ಹಾಗೂ ಶ್ರೀರಾಮಚಂದ್ರತೀರ್ಥರು ಈ ಎಲ್ಲ ಮಹನೀಯರಿಗೆ ರಾಮಪ್ರತಿಮೆಯು ಗುರುಗಳಿಂದ ಶಿಷ್ಯರಿಗೆ ಕ್ರಮವಾಗಿ ಪ್ರಾಪ್ತವಾಗಿರುವುದನ್ನು ಉಲ್ಲೇಖಿಸಿದ್ದಾರೆ ಎಂಬುದನ್ನು ಸ್ಪಷ್ಟವಾಗಿ ಗಮನಿಸಬಹುದು. ಅಂದರೆ ಪ್ರತಿಮಾಪ್ರಾಪ್ತಿ ಸಹಿತವಾಗಿರುವ ಸಂಸ್ಥಾನಾಧಿಪತ್ಯದ (ಅಂದರೆ ಶಿಷ್ಯ ಯತಿಗಳಿಗೆ ಉತ್ತರಾಧಿಕಾರಿತ್ವ) ವರ್ಗಾವಣೆಯಾಗಿರುವುದನ್ನು ಉಲ್ಲೇಖಿಸಿದ್ದಾರೆ.

ಆದರೆ, ಮುಂದೆ ಇದೇ ಸರ್ಗದ ಶ್ಲೋಕ 19, 20, 21ರಲ್ಲಿ ವಿಷಯದ ನಿರೂಪಣೆಯ ಕ್ರಮ ವ್ಯತ್ಯಾಸವಾಗಿರುವುದು ಗಮನಾರ್ಹ–

ಅಂತೇವಸಂಸ್ತಸ್ಯ ನೃಸಿಂಹದೇವೋಪಾಂತೇ ವಸಂಸ್ತತ್ಕೃಪಯಾ ಪ್ರತೀತಃ ।
ವಿಜಿತ್ಯ ಸರ್ವಾನ್ವಿಬುಧೇಂದ್ರಯೋಗೀ ಬಭೌ ಹರೇರರ್ಪಿತಜೈತ್ರಪತ್ರಃ ॥ 19 ॥

ಜಿತಾರಿರಸ್ಮಾದ್ರಘುನಂದನೋऽತಃ ತತಃ ಸುರೇಂದ್ರವ್ರತಿನೋ ಬಭೂವುಃ ।
ಪವಿತ್ರಿತಾಭೂದಖಿಲಾ ಧರಿತ್ರೀ ಚಿರಂ ಗೃಹೀತಾನಶನವ್ರತೈಸ್ತೈಃ ॥ 20 ॥

**ವಿದ್ವದ್ವರೋಽಸ್ಮಾದ್ವಿಜಯೀಂದ್ರಯೋಗೀ ವಿದ್ಯಾಸು ಹೃದ್ಯಾಸ್ವತುಲಪ್ರಭಾವಃ ।**
**ರತ್ನಾಭಿಷೇಕಂ ಕಿಲ ರಾಮರಾಜಾತ್ ಪ್ರಾಪ್ಯಾಗ್ರ್ಯಲಕ್ಷ್ಮೀನಕೃತಾಗ್ರಹಾರಾನ್ ॥ 21 ॥**

ಮೇಲಿನ ಮೂರು ಶ್ಲೋಕಗಳಲ್ಲಿ ಕ್ರಮವಾಗಿ ಶ್ರೀರಾಮಚಂದ್ರತೀರ್ಥರ ಶಿಷ್ಯರಾದ ಶ್ರೀವಿಬುಧೇಂದ್ರರು ವಾದಿವಿಜಯವನ್ನು ಮಾಡಿದ್ದನ್ನು ಶ್ಲೋ.19 ರಲ್ಲಿ, ಶ್ರೀವಿಬುಧೇಂದ್ರರಿಂದ ಶ್ರೀಜಿತಾಮಿತ್ರರು, ಶ್ರೀಜಿತಾಮಿತ್ರರಿಂದ ಶ್ರೀರಘುನಂದನರು, ಶ್ರೀರಘುನಂದನರಿಂದ ಶ್ರೀಸುರೇಂದ್ರರು ಆಶ್ರಮ ಸ್ವೀಕರಿಸಿ ಪರಂಪರೆ ಮುಂದುವರೆದ ಕ್ರಮವನ್ನು ಶ್ಲೋ. 20 ರಲ್ಲಿ, ಶ್ರೀಸುರೇಂದ್ರರ ನಂತರ ಶ್ರೀವಿಜಯೀಂದ್ರರು ಪರಂಪರೆಯಲ್ಲಿ ಮುಂದುವರೆದ ವಿಷಯವನ್ನು ಶ್ಲೋಕ 21ರಲ್ಲಿ ವರ್ಣಿಸಿದ್ದಾರೆ.

**ವಾಚಕರೇ ಗಮನಿಸಿ!** ಶ್ರೀನರಹರಿತೀರ್ಥರಿಂದ ಶ್ರೀರಾಮಚಂದ್ರತೀರ್ಥರ ವರೆಗಿನ ಪರಂಪರೆಯನ್ನು ಹೇಳುವಾಗ ಪ್ರತಿಯೊಂದು ಕಡೆಗೂ ತಪ್ಪದೇ ರಾಮಪ್ರತಿಮೆ ಪ್ರಾಪ್ತವಾದದ್ದನ್ನು ಉಲ್ಲೇಖಿಸಿದ ಕವಿಗಳು ಈ ಮೇಲಿನ ಮೂರು ಶ್ಲೋಕಗಳಲ್ಲಿ ಶಿಷ್ಯ ಪರಂಪರೆಯ ಕ್ರಮವನ್ನು ಮಾತ್ರ ಹೇಳಿ **ಶಿಷ್ಯ ಯತಿಗಳಿಗೆ ರಾಮಪ್ರತಿಮೆ ಪ್ರಾಪ್ತವಾದ ಮಹತ್ವದ ವಿಷಯವನ್ನು ಉಲ್ಲೇಖಿಸಿಲ್ಲ** ಎಂಬುದು ಅತ್ಯಂತ ಗಮನಾರ್ಹ.

ಶ್ರೀವಿಬುಧೇಂದ್ರರಿಂದ ಪ್ರಾರಂಭಿಸಿ, ಶ್ರೀವಿಜಯೀಂದ್ರರನ್ನೂ ಸೇರಿಸಿ ಪರಂಪರೆಯ **ಐದು ಯತಿಗಳ ಸ್ಥಾನಗಳಲ್ಲಿಯೂ ರಾಮಪ್ರತಿಮೆಯು ಗುರುಗಳಿಂದ ತಮ್ಮ ಯತಿ ಶಿಷ್ಯರಿಗೆ ಪ್ರದಾನವಾಗಿಲ್ಲವೆಂಬ ಸತ್ಯಸಂಗತಿ 19, 20, 21 ಶ್ಲೋಕಗಳಿಂದ ಸ್ಪಷ್ಟವಾಗಿ ಬೆಳಕಿಗೆ ಬರುತ್ತದೆ.**

ಅಲ್ಲದೇ, ಶ್ರೀರಾಯರ ಮಠದವರು ತಮ್ಮ ಪರಂಪರೆಯಲ್ಲಿ ಬಂದ ಶ್ರೀಜಿತಾಮಿತ್ರರ ನಂತರ ಪೀಠಸ್ಥರಾಗಿದ್ದ ಶ್ರೀರಘುನಂದನರು ಶ್ರೀಮೂಲರಾಮಚಂದ್ರವಿಗ್ರಹವನ್ನು ಸಂಪಾದಿಸಿದರು ಎಂದು ಹೇಳುತ್ತಾರೆ. ಹೀಗಾಗಿ ರಾಯರಮಠದ ಪರಂಪರೆಯಲ್ಲಿ ಆ ಪರಂಪರೆಗೆ ಮೂಲರಾಮ ಪ್ರತಿಮೆಯನ್ನು ಸಂಪಾದಿಸಿ ಮಹತ್ವವನ್ನು ತಂದು ಕೊಟ್ಟ ಶ್ರೀರಘುನಂದನರ ಪಾತ್ರ ಹಿರಿದಾಗಿದೆ. ಕಾರಣ ಶ್ರೀರಘುನಂದನರನ್ನು ಈ ಮಹತ್ವದ ಕಾರ್ಯದೊಂದಿಗೇ ಯಾವಾಗಲೂ ಗುರುತಿಸಿ, ಸ್ಮರಿಸುವ ಪರಿಪಾಠ ಶ್ರೀರಾಯರ ಮಠದ ರೂಢಿಯಲ್ಲಿದೆ. ಇದಕ್ಕೆ ಶ್ರೀರಘುನಂದನರ ಚರಮಶ್ಲೋಕ, ಶ್ರೀವಾದೀಂದ್ರರ ಅರ್ಚಾಗತಿಕ್ರಮ, ವಿಜಯೀಂದ್ರವಿಜಯ ಎಲ್ಲೆಡೆಯೂ ಶ್ರೀರಘುನಂದನರ ಈ ಹಿರಿಮೆಯನ್ನು ಗುರುತಿಸಿ ಸ್ಮರಿಸಿದ್ದೇ ಸಾಕ್ಷಿ. ಇದು ಸತ್ಯವಾಗಿದ್ದರೆ ಇಂತಹ ಮಹತ್ವವಾದ ಅಂಶವನ್ನು ಪ್ರಸಿದ್ಧ ರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ಉಲ್ಲೇಖಿಸದೇ ಇರುತ್ತಿರಲಿಲ್ಲ.

ಕವಿಗಳು ಇಂಥ ಮಹತ್ತ್ವದ ಕಾರ್ಯವನ್ನು ಮಾಡಿದ ಶ್ರೀರಘುನಂದನರನ್ನು ''**ಜಿತಾರಿರಸ್ಮಾತ್ ರಘುನಂದನೋಽತಃ**'' ಎಂಬುದಾಗಿ ಒಂದೇ ಶಬ್ದದಿಂದ ಚುಟುಕಾಗಿ ಹೇಳಿ ಮುಗಿಸಿದ್ದನ್ನು ನೋಡಿದರೆ-

ಶ್ರೀರಘುನಂದನರು ಮೂಲರಾಮಪ್ರತಿಮೆಯನ್ನು ಸಂಪಾದಿಸಿದರು ಎಂಬ ವಿಷಯವೇ ಶುದ್ಧ ಸುಳ್ಳು. ಇದು ಕೇವಲ ಕಟ್ಟು ಕಥೆ. ಈ ಕಟ್ಟು ಕಥೆಯೂ ಶ್ರೀರಾಘವೇಂದ್ರವಿಜಯದ ನಂತರ ಸೃಷ್ಟಿಯಾದದ್ದು.

ಅನುಕ್ತಿ ಇದು ದೋಷವಲ್ಲ ಎನ್ನುವುದು ವಾಸ್ತವವಾದರೂ ಒಂದು ವಿಷಯವನ್ನು ಹೇಳುವ ಪ್ರಸಂಗವಿದ್ದಾಗ ಆ ಪ್ರಧಾನವಾದ ವಿಷಯದ ಅನುಕ್ತಿ ಇದು ದೋಷವಾಗುತ್ತದೆ. ಶ್ರೀರಘುನಂದನರ ಉಲ್ಲೇಖ ಮಾಡಿದ ಪ್ರಸಂಗದಲ್ಲಿ ಅವರು ಮಾಡಿರುವ ಮಹತ್ವದ ಕಾರ್ಯವಾದ ಶ್ರೀಮೂಲರಾಮ ಪ್ರತಿಮಾಸಂಪಾದನೆಯ ವಿಷಯವನ್ನು ಹೇಳದಿರುವುದು ದೋಷವಾಗುತ್ತದೆ.

ಅಲ್ಲದೇ, ಪ್ರಾಯಪಾಠ ವಿರೋಧವೂ ಬರುತ್ತದೆ. ಅಂದರೆ ರಾಮಪ್ರತಿಮೆ ಪ್ರಾಪ್ತವಾದದ್ದನ್ನು ಶ್ರೀರಾಮಚಂದ್ರತೀರ್ಥರವರೆಗೆ ತಪ್ಪದೇ ಉಲ್ಲೇಖಿಸಿ ಮುಂದೆ ಮತ್ತೆ ಶ್ರೀಸುಧೀಂದ್ರತೀರ್ಥರಿಂದ ರಾಮಪ್ರತಿಮೆಯ

ಉಲ್ಲೇಖವನ್ನು ಮಾಡಿದ ಕವಿಗಳು ಮಧ್ಯದ ಐದು ಯತಿಗಳ ಪ್ರಸಂಗದಲ್ಲಿ ಮಾತ್ರ ರಾಮಪ್ರತಿಮೆಯ ವರ್ಗಾವಣೆಯ ವಿಷಯವನ್ನು ಹೇಳದಿರುವುದು ದೋಷ ಎಂದೇ ಆಗುತ್ತದೆ.

ರಾಯರಮಠದವರೇ ಅಂಗೀಕರಿಸುವಂತೆ ಶ್ರೀವಿಬುಧೇಂದ್ರರಿಗೆ ಹಾಗೂ ಶ್ರೀಜಿತಾಮಿತ್ರರಿಗೆ ರಾಮಪ್ರತಿಮೆ ಪ್ರಾಪ್ತವಾಗದಿದ್ದ ಕಾರಣ ಅವರ ಪ್ರಸಂಗದಲ್ಲಿ ರಾಮಪ್ರತಿಮೆಯ ವರ್ಗಾವಣೆಯನ್ನು ಉಲ್ಲೇಖಿಸದಿರುವುದು ಅರ್ಥಪೂರ್ಣ. ಆದರೆ ಮುಂದೆ ಶ್ರೀರಘುನಂದನರ, ಶ್ರೀಸುರೇಂದ್ರರ, ಶ್ರೀವಿಜಯೀಂದ್ರರ ಪ್ರಸಂಗದಲ್ಲಿ ರಾಮಪ್ರತಿಮೆ ಪ್ರಾಪ್ತವಾಗಿದ್ದ ಪಕ್ಷದಲ್ಲಿ ಅವಶ್ಯವಾಗಿ ಅದನ್ನು ಉಲ್ಲೇಖಿಸಲೇಬೇಕಿತ್ತು . ಉಲ್ಲೇಖಿಸಿಲ್ಲವಾದ ಕಾರಣ ಮೂಲರಾಮಪ್ರತಿಮೆ ಶ್ರೀರಾಮಚಂದ್ರತೀರ್ಥರ ನಂತರ ಮುಂದೆ ಶ್ರೀವಿಬುಧೇಂದ್ರರ ಪರಂಪರೆಗೆ ಪ್ರಾಪ್ತವಾಗಿಲ್ಲ ಎನ್ನುವುದೇ ಶ್ರೀರಾಘವೇಂದ್ರವಿಜಯಕಾರರ ಹಾರ್ದವಾಗಿದೆ.

ಶ್ಲೋಕ 19 ರಿಂದ 21 ರವರೆಗೆ ರಾಮಪ್ರತಿಮೆಯ ಉಲ್ಲೇಖವನ್ನು ಮಾಡದೇ, ಕವಿಗಳು ಮತ್ತೆ ಶ್ಲೋಕ 23 ರಲ್ಲಿ ಪ್ರತಿಮಾ ಶಬ್ದವನ್ನು ಪ್ರಯೋಗಿಸಿದ್ದಾರೆ-

**ಸಾ ರಾಮಚಂದ್ರಪ್ರತಿಮಾ ಜಯೀಂದ್ರಾತ್ ಸುಧೀಂದ್ರಯೋಗೀಂದ್ರಮಗಾತ್ ಕ್ರಮೇಣ ।**
**ವಿಸ್ತೀರ್ಣಕೀರ್ತಿರ್ವಿಬಭಾವವನ್ಯಾಂ ವಿಖ್ಯಾತವಿದ್ವಜ್ಜನವಂದ್ಯಪಾದಃ ॥ 23 ॥**

ಈ ಮೇಲಿನ ಶ್ಲೋಕದಲ್ಲಿ ''ಆ ರಾಮಪ್ರತಿಮೆಯು ವಿಜಯೀಂದ್ರರಿಂದ ಶ್ರೀಸುಧೀಂದ್ರತೀರ್ಥರಿಗೆ ಕ್ರಮವಾಗಿ ಪ್ರಾಪ್ತವಾಯಿತು'' ಎನ್ನುವ ವಿಷಯವನ್ನು ತಿಳಿಸಿದ್ದಾರೆ.

ಇಲ್ಲಿ ''ಆ ರಾಮಪ್ರತಿಮೆ'' ಎಂದರೆ ಯಾವುದು? ನಾಲ್ಕು ಶ್ಲೋಕಗಳ ಹಿಂದೆ (ಶ್ಲೋ.18) ಶ್ರೀರಾಮಚಂದ್ರ-ತೀರ್ಥರ ಪ್ರಸಂಗದಲ್ಲಿ ಪ್ರಸಕ್ತವಾದ ರಾಮಪ್ರತಿಮೆ ಎಂಬ ಅರ್ಥವನ್ನು ಮಾಡುವುದು ಸಮಂಜಸವಲ್ಲ. ಏಕೆಂದರೆ ಮಧ್ಯದ ಮೂರು ಶ್ಲೋಕಗಳಲ್ಲಿ ಅದರ ವಿಚ್ಛೇದವಾಗಿದೆ.

ಹಿಂದಿನ ಶ್ಲೋಕಗಳಲ್ಲಿ ಶ್ರೀವಿಜಯೀಂದ್ರರಿಗೆ ಶ್ರೀಸುರೇಂದ್ರರಿಂದ ರಾಮಪ್ರತಿಮೆ ಪ್ರಾಪ್ತವಾದ ವಿಷಯದ ಪ್ರಸ್ತಾಪವೇ ಬಂದಿಲ್ಲ. ಹೀಗಾಗಿ ಶ್ರೀವಿಜಯೀಂದ್ರರು ತಮಗೆ ಪ್ರಾಪ್ತವಾಗದೇ ಇರುವ ರಾಮದೇವರ ವಿಗ್ರಹವನ್ನು, ತಮ್ಮ ಶಿಷ್ಯರಾದ ಶ್ರೀಸುಧೀಂದ್ರರಿಗೆ ನೀಡಿದರು ಎಂಬ ವಿಷಯವೇ ಕೂಡುವುದಿಲ್ಲ.

## ಆಲೋಚಿಸಬೇಕಾದ ಕೆಲ ಅಂಶಗಳು

### ಶ್ರೀವಿಜಯೀಂದ್ರರಿಂದ ಶ್ರೀಸುಧೀಂದ್ರರಿಗೆ ಯಾವ ರಾಮಪ್ರತಿಮೆ ಬಂತು?

ಶ್ರೀರಾಘವೇಂದ್ರವಿಜಯಕಾರರು ಶ್ರೀವಿಜಯೀಂದ್ರತೀರ್ಥರಿಂದ ಶ್ರೀಸುಧೀಂದ್ರತೀರ್ಥರಿಗೆ ರಾಮಪ್ರತಿಮೆ ಪ್ರಾಪ್ತವಾಗಿದೆ ಎಂದು ಉಲ್ಲೇಖಿಸಿದ್ದಾರೆ. ಮೂಲರಾಮ ಎಂಬುದಾಗಿ ಹೇಳಿಲ್ಲ. ಇಲ್ಲಿ ಪ್ರಸಕ್ತವಾದ ರಾಮ ಶಬ್ದಕ್ಕೆ ಮೂಲರಾಮ ಎಂಬ ಅರ್ಥ ಸಮಂಜಸವೂ ಅಲ್ಲ. ಪರಂಪರಾಗತವಾದ ಮೂಲರಾಮಪ್ರತಿಮೆಯೇ ಆಗಿದ್ದರೆ ಶ್ರೀರಘುನಂದನರು, ಶ್ರೀಸುರೇಂದ್ರರು, ಶ್ರೀವಿಜಯೀಂದ್ರರು ಈ ಮೂರು ಯತಿಗಳ ಪ್ರಸಂಗಗಳಲ್ಲೂ ರಾಮಪ್ರತಿಮೆಯ ಪ್ರಾಪ್ತಿಯನ್ನು ಉಲ್ಲೇಖಿಸಿಬೇಕಿತ್ತು . ಆದರೆ ಅದನ್ನು ಉಲ್ಲೇಖಿಸಿಲ್ಲ. ಅಂದಮೇಲೆ ಈ ಪ್ರತಿಮೆ ಮೂಲರಾಮ ಪ್ರತಿಮೆಯೆಂದಾಗುವುದಿಲ್ಲ. ಹಾಗಿದ್ದರೆ ಶ್ರೀವಿಜಯೀಂದ್ರರು ಶ್ರೀಸುಧೀಂದ್ರರಿಗೆ ಕೊಟ್ಟ ರಾಮಪ್ರತಿಮೆ ಯಾವುದು? ಎಂಬ ಪ್ರಶ್ನೆ ಕಾಡುತ್ತದೆ. ಆ ರಾಮಪ್ರತಿಮೆ ಬೇರೆ ಯಾವುದೂ ಅಲ್ಲ. ಇಂದು ರಾಯರಮಠದಲ್ಲಿರುವ ದಶಾವತಾರಪೀಠದ ರಜತರಾಮಪ್ರತಿಮೆಯೇ ಆಗಿರುವ ಸಾಧ್ಯತೆ ಹೆಚ್ಚು.

## ದಶಾವತಾರಪೀಠದ ರಜತರಾಮಪ್ರತಿಮೆ

ಶ್ರೀರಾಯರಮಠದಲ್ಲಿ ಇಂದು ದಶಾವತಾರ ಪೀಠ ಇರುವ ಒಂದು ಸುಂದರವಾದ ಬೆಳ್ಳಿಯ ರಾಮಪ್ರತಿಮೆಯು ಪೂಜೆಗೊಳ್ಳುತ್ತಿದೆ. ಇದೇ ತರಹದ ದಶಾವತಾರ ಪೀಠ ಇರುವ ಬೆಳ್ಳಿಯ ರಾಮಪ್ರತಿಮೆ ಶ್ರೀಸೋದಾಮಠದಲ್ಲೂ ಪೂಜೆಗೊಳ್ಳುತ್ತಿದೆ. ಈ ಎರಡೂ ಪ್ರತಿಮೆಗಳು ಸಂಪೂರ್ಣ ಒಂದೇ ತರಹ ಇವೆ. ಇರುವ ಒಂದು-ಎರಡು ವ್ಯತ್ಯಾಸಗಳು ತೀರ ನಗಣ್ಯ.



ಚಿತ್ರ 1 ಚಿತ್ರ 2 ಚಿತ್ರ 3

ಚಿತ್ರ 1, 2. ಶ್ರೀ ಸೋದೇ ವಾದಿರಾಜ ಮಠದಲ್ಲಿ ಪೂಜೆಗೊಳ್ಳುವ ಶ್ರೀ ರಜತ ರಾಮಪ್ರತಿಮೆ.
ಚಿತ್ರ 3. ಶ್ರೀರಾಯರ ಮಠದಲ್ಲಿ ಪೂಜೆಗೊಳ್ಳುವ ರಜತ ರಾಮಪ್ರತಿಮೆ.

ಸೋದಾಮಠದ ಪರಂಪರೆಯ ಹೇಳಿಕೆಯ ಪ್ರಕಾರ ಸುಗ್ರೀವ ಪೂಜೆ ಮಾಡಿದ ಈ ರಜತರಾಮಪ್ರತಿಮೆಯು ಶ್ರೀವಾದಿರಾಜರಿಗೆ ವಾಲಿಯ ಭಂಡಾರದಲ್ಲಿ ಸಿಕ್ಕಿದ್ದು.

ಈ ವಿಲಕ್ಷಣಪ್ರತಿಮೆಯಿಂದ ಆಕರ್ಷಿತರಾದ, ಶ್ರೀವಾದಿರಾಜರ ಪ್ರಿಯಮಿತ್ರರಾದ, 64 ವಿದ್ಯೆಗಳಲ್ಲಿ ಪ್ರವೀಣರಾದ, ಸ್ವಯಂ ಅನೇಕ ಸುಂದರಪ್ರತಿಮೆಗಳನ್ನು ನಿರ್ಮಾಣಮಾಡಿರುವ ಶ್ರೀವಿಜಯೀಂದ್ರರು ಅಂತಹದ್ದೇ ಒಂದು ಸುಂದರ ರಜತಪ್ರತಿಮೆಯನ್ನು ನಿರ್ಮಾಣ ಮಾಡಿಕೊಂಡು ಅರ್ಚಿಸಿರುವ ಸಂಭವವಿದೆ. ಈ ದಶಾವತಾರಪೀಠದ ರಜತರಾಮ ಪ್ರತಿಮೆಯೇ ಶ್ರೀವಿಜಯೀಂದ್ರರಿಂದ ಶ್ರೀಸುಧೀಂದ್ರರಿಗೆ ಕ್ರಮವಾಗಿ ಪ್ರಾಪ್ತವಾಗಿದೆ.

ಹೀಗೆ ಹೇಳಿದಾಗ ಶ್ರೀರಾಘವೇಂದ್ರವಿಜಯದಲ್ಲಿ ಶ್ರೀವಿಜಯೀಂದ್ರರಿಂದ ಶ್ರೀರಾಮಪ್ರತಿಮೆಯ ಉಲ್ಲೇಖವನ್ನು ಮಾಡಿದ್ದು ಉಚಿತ ಹಾಗೂ ಅರ್ಥಪೂರ್ಣವಾಗುತ್ತದೆ.

ಶ್ರೀರಾಘವೇಂದ್ರವಿಜಯಕ್ಕೆ ಸಮಕಾಲೀನವಾದ ಪ್ರಾಚೀನ ವ್ಯಾಖ್ಯಾನಗಳು ಉಪಲಬ್ಧವಿಲ್ಲ. ಸದ್ಯಕ್ಕೆ ಎರಡು ವ್ಯಾಖ್ಯಾನಗಳು ಉಪಲಬ್ಧವಾಗಿವೆ. ಅದರಲ್ಲಿ ತೀರಾ ಇತ್ತೀಚಿನ ವ್ಯಾಖ್ಯಾನ ಒಂದು. ಇನ್ನೊಂದು ಸ್ವಲ್ಪ ಹಳೆಯ ವ್ಯಾಖ್ಯಾನ. ಆ ಹಳೆಯ ವ್ಯಾಖ್ಯಾನದಲ್ಲಿ ಈ ಶ್ಲೋಕದ ವಿವರಣೆ ಮಾಡುವಾಗ ರಾಮಶಬ್ದಕ್ಕೆ ಮೂಲರಾಮ ಎಂಬ ಅರ್ಥವನ್ನು ಹೇಳದಿರುವುದೂ ನಮ್ಮ ಈ ಸಂಭಾವನೆಗೆ ಪುಷ್ಟಿಯನ್ನು ನೀಡುತ್ತದೆ.

ಆದ್ದರಿಂದ ಶ್ರೀವಿಜಯೀಂದ್ರರಿಂದ ಶ್ರೀಸುಧೀಂದ್ರರಿಗೆ ಪ್ರಾಪ್ತವಾಯಿತು ಎಂದು ಪ್ರಸಕ್ತವಾದ ಶ್ರೀರಾಮಪ್ರತಿಮೆಯು ಮೂಲರಾಮನಾಗಿರದೇ ದಶಾವತಾರಪೀಠದ ರಜತರಾಮ ಎಂದೇ ಸಿದ್ಧವಾಗುತ್ತದೆ.

**ಜಿಜ್ಞಾಸೆ:** ಶ್ಲೋಕ 23 ರಲ್ಲಿ ''ಕ್ರಮೇಣ'' ಎನ್ನುವ ಪದವಿದೆ. ಅದಕ್ಕೆ ಶ್ರೀನರಹರಿತೀರ್ಥರಿಂದ ಕ್ರಮವಾಗಿ ಪರಂಪರೆಯಿಂದ ವರ್ಗಾವಣೆ ಆದ ಮೂಲರಾಮಪ್ರತಿಮಾ ಎಂದು ಅರ್ಥ. ಆದ್ದರಿಂದ ಕವಿಗಳು ಹಿಂದಿನ ಶ್ಲೋಕಗಳಲ್ಲಿ (19,20,21 ಶ್ರೀವಿಬುಧೇಂದ್ರರಿಂದ ಶ್ರೀವಿಜಯೀಂದ್ರರ ವರೆಗಿನ ಶ್ಲೋಕಗಳು) ರಾಮಪ್ರತಿಮೆಯನ್ನು ಉಲ್ಲೇಖಿಸದಿದ್ದರೂ ಈ ಶ್ಲೋಕದಲ್ಲಿ ಕ್ರಮೇಣ ಎಂಬ ಪದ ಬಳಿಸಿದ್ದರಿಂದ ಹಿಂದಿನ ಯತಿಗಳಿಗೂ ರಾಮಪ್ರತಿಮೆ ಪ್ರಾಪ್ತವಾಗಿತ್ತು ಎಂದು ಅರ್ಥ ಮಾಡಬಹುದಲ್ಲವೇ..?

**ಸಮಾಧಾನ:** ಕ್ರಮೇಣ ಎನ್ನುವುದಕ್ಕೆ ಮೇಲೆ ಹೇಳಿದಂತೆ ಅರ್ಥಮಾಡುವುದು ಸಮಂಜಸವಲ್ಲ. ಏಕೆಂದರೆ, ಶ್ರೀರಾಯರಮಠದವರೇ ಅಂಗೀಕರಿಸಿದಂತೆ ಶ್ರೀವಿಬುಧೇಂದ್ರರಿಗೆ ಹಾಗೂ ಶ್ರೀಜಿತಾಮಿತ್ರರಿಗೆ ಮೂಲರಾಮ ಪ್ರತಿಮೆ ಪ್ರಾಪ್ತವಾಗಿಲ್ಲ. ಕ್ರಮ ವಿಚ್ಛೇದವಾಗಿದೆ. ಇಲ್ಲಿಯೂ ಹಿಂದಿನ ಕ್ರಮವನ್ನು (ಪ್ರತಿಮಾಪ್ರಾಪ್ತಿಯನ್ನು) ಅಂಗೀಕರಿಸಿದರೆ ವಾಸ್ತವಾಂಶಕ್ಕೆ ವಿರುದ್ಧವಾದ ಚಿಂತನೆಯಾಗುತ್ತದೆ.

ಶ್ರೀರಾಮಚಂದ್ರತೀರ್ಥರಿಗೆ ಪ್ರಾಪ್ತವಾಗಿದ್ದ ಪೂಜಾಭಂಡಾರವು ಶ್ರೀವಿಬುಧೇಂದ್ರರಿಗೆ ಪ್ರಾಪ್ತವಾಗಿ, ನಂತರದಲ್ಲಿ ಅವರು ತಮ್ಮ ಪ್ರಧಾನ ಶಿಷ್ಯಯತಿಗಳಿಗೆ ನೀಡಿ ಪರಂಪರಾ ಮುಂದುವರೆದಿದೆ ಎಂಬ ವಿಷಯವನ್ನು ಒಪ್ಪಲೇಬೇಕಾಗುತ್ತದೆ. ಶ್ರೀವಿಬುಧೇಂದ್ರರು ಹಾಗೂ ಶ್ರೀಜಿತಾಮಿತ್ರರು ಶ್ರೀಮೂಲರಾಮನನ್ನು ಪೂಜಿಸಿದರೆಂದಾಗುತ್ತದೆ. ಇದರಿಂದ ಅನೇಕ ಬಾಧಕಗಳನ್ನು ರಾಯರಮಠದವರು ಎದುರಿಸಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದವುಗಳು ಹೀಗಿವೆ-

ಅ. ಶ್ರೀವಾದೀಂದ್ರರ ಕೃತಿ ಎನ್ನಲಾಗಿರುವ ''ಅರ್ಚಾಗತಿಕ್ರಮ''ದಲ್ಲಿ ಉಲ್ಲೇಖವಾಗಿರುವ ಘಟನೆಗಳು ಅಸತ್ಯವಾಗುತ್ತವೆ. (ಈ ಕೃತಿ ಅವರಿಗೆ ಆಧಾರ ಗ್ರಂಥವೆಂದೆನಿಸಿದೆ) ಈ ಗ್ರಂಥದಲ್ಲಿ ಶ್ರೀವಿಬುಧೇಂದ್ರರಿಗೆ ಮೂಲರಾಮ ಪ್ರತಿಮೆ ದೊರಕಿಲ್ಲವೆಂದಿದೆ. ಇವರ ಪ್ರಶಿಷ್ಯರಾದ ಶ್ರೀರಘುನಂದನರು ಮೂಲರಾಮ-ಪ್ರತಿಮೆಯನ್ನು ಸಂಪಾದಿಸಿದರು ಎಂದಿದೆ. ಇವೆರಡೂ ಅಸತ್ಯವಾಗಬೇಕಾಗುತ್ತದೆ.

ಆ. ಶ್ರೀರಘುನಂದನರ ಕಾಲದಲ್ಲಿ ಚಂದ್ರಭಟ್ಟನು ಪರಮಠದಿಂದ ಪ್ರತಿಮೆಯನ್ನು ಅಪಹರಿಸಿ, ಆ ಗುರುಗಳಿಗೆ ಒಪ್ಪಿಸಿದನು ಎಂಬ ಘೋಷಣೆಯು ಅಪದ್ಧವಾಗುತ್ತದೆ ಮತ್ತು ಆ ಗುರುಗಳ ಚರಮಶ್ಲೋಕಕ್ಕೆ ಧಕ್ಕೆ ಉಂಟಾಗುತ್ತದೆ.

ಇ. ಪ್ರಾಮಾಣಿಕ ಮತ್ತು ವಸ್ತುನಿಷ್ಠ ಮತ್ತು ಕಟುಸತ್ಯವೆಂದು ಅವರಿಂದಲೇ ಶ್ಲಾಘನೆ ಮಾಡಲ್ಪಟ್ಟಿರುವ ಮಧ್ವಕವಿಕೃತ ವಿಜಯೀಂದ್ರವಿಜಯ ಸುಳ್ಳಿನ ಕಂತೆಯಾಗುತ್ತದೆ. ಇದರಲ್ಲಿ ಶ್ರೀವಿಬುಧೇಂದ್ರರು, ಶ್ರೀಜಿತಾಮಿತ್ರರು ಮೂಲರಾಮನನ್ನು ಪೂಜಿಸಲಿಲ್ಲ. ಶ್ರೀಮೂಲರಾಮನನ್ನು ಪೂಜಿಸುವುದಕ್ಕಾಗಿಯೇ ಮತ್ತೆ ಶ್ರೀವಿಜಯೀಂದ್ರರಾಗಿ ಹಾಗೂ ಶ್ರೀಸುಧೀಂದ್ರರಾಗಿ ಅವತಾರ ಮಾಡುತ್ತಾರೆ ಎಂದು ಉಲ್ಲೇಖಿಸಲಾಗಿದೆ. (ಸರ್ಗ 5.)

ಈ. ಶ್ರೀರಾಯರ ಮಠದ ಅಧಿಕೃತ ಮತ್ತು ಸಂಶೋಧಿತ ಪುಸ್ತಕ ಗುರುಚರಿತೆ (1949), ಶ್ರೀ ಮೂಲರಾಮ, ಮೂ.ಮಠೇ ಇವುಗಳಲ್ಲಿ ಸುಳ್ಳಿನ ಸರಪಳಿಗಳಿವೆ ಎಂದೇ ನಿರ್ಣಯಿಸಬೇಕಾಗುತ್ತದೆ.

ಆದ್ದರಿಂದ ''ಕ್ರಮೇಣ'' ಎನ್ನುವ ಪದಕ್ಕೆ ನರಹರಿತೀರ್ಥರಿಂದ ಕ್ರಮವಾಗಿ ಪ್ರಾಪ್ತವಾದ ರಾಮಪ್ರತಿಮಾ ಎಂಬ ಅರ್ಥ ಸ್ವರಸವಾಗುವುದಿಲ್ಲ.

ಇನ್ನು, ಮಂಡೂಕಪ್ಲುತಿನ್ಯಾಯದಿಂದ ಶ್ರೀವಿಬುಧೇಂದ್ರ-ಶ್ರೀಜಿತಾಮಿತ್ರರನ್ನು ಬಿಟ್ಟು ಮುಂದೆ ರಾಮಪ್ರತಿಮಾ ಕ್ರಮೇಣ ಪ್ರಾಪ್ತವಾಗಿದೆ ಎಂದು ಹೇಳುವುದಾದರೆ ಶ್ರೀಮೂಲರಾಮಪ್ರತಿಮೆಯನ್ನು ಸಂಪಾದಿಸಿದರು ಎಂದು ಹೇಳಲ್ಪಡುವ ಶ್ರೀರಘುನಂದನರ ಪ್ರಸಂಗದಲ್ಲಿಯೇ ''ಕ್ರಮೇಣ'' ''ಸಾ ರಾಮಚಂದ್ರಪ್ರತಿಮಾ'' ಎಂದು ಹೇಳಬೇಕಿತ್ತು. ಹಾಗೇ ಹೇಳದೇ ಶ್ರೀಸುಧೀಂದ್ರರ ಪ್ರಸಂಗದಲ್ಲಿ ಹೇಳಿದ್ದು ಅಸ್ವರಸವಾಗುತ್ತದೆ.

ಆದ್ದರಿಂದ ಶ್ಲೋಕ 23ರಲ್ಲಿ ಹೇಳಿರುವ ರಾಮಪ್ರತಿಮೆಯು ಮೂಲರಾಮ ಪ್ರತಿಮೆ ಎಂದು ನಿರ್ಣಯಿಸಲು ಅಶಕ್ಯವಾದ್ದರಿಂದ ಅದು ಬೇರೊಂದು ರಾಮಪ್ರತಿಮೆಯೇ ಆಗಿದೆ ಎಂಬುದೇ ವಾಸ್ತವಾಂಶ.

ಇನ್ನು, ಶ್ರೀರಾಘವೇಂದ್ರವಿಜಯಕಾವ್ಯದಲ್ಲಿ ನಿರೂಪಿಸಲ್ಪಟ್ಟ:

1. ಶ್ರೀರಾಮನವಮೀ ಉತ್ಸವಾಚರಣೆಯಲ್ಲಿ ವಿಗ್ರಹಗಳಿಗೆ ಮಹಾ ಅಭಿಷೇಕದ ವಿಷಯ (ಶ್ಲೋಕ 8, ಸರ್ಗ 8.)
2. ಪೂಜಾಕಾಲದಲ್ಲಿ ಶ್ರೀರಾಮರಿಗೆ ಷೋಡಶೋಪಚಾರ ಪೂಜಾ ಸಮರ್ಪಣೆಯ ವಿಷಯ (ಶ್ಲೋಕ 57, 58- ಸರ್ಗ 9)
3. ಅರ್ಚನೆಯ ನಂತರ-ಸಂಪುಟ ಇತ್ಯಾದಿಗಳನ್ನು ಮುಚ್ಚಿ ಬೀಗ ಹಾಕುವ ಪ್ರಸಂಗ (ಶ್ಲೋಕ 13, ಸರ್ಗ 10.)
4. ಶ್ರೀರಾಘವೇಂದ್ರಸ್ವಾಮಿಗಳು ಧ್ಯಾನನಿರತರಾಗಿರುವ ಸಂದರ್ಭ- (ಶ್ಲೋಕ 40, ಸರ್ಗ 10)
5. ಸಾಯಂಕಾಲದಲ್ಲಿ ಅರ್ಚಿಸಿದ ರೀತಿ-ಪುಷ್ಪಾರ್ಚನೆ, ಆರತಿ ಇತ್ಯಾದಿ ಸಂಭ್ರಮದ ವಿವರಣೆ, ರಾಮಾವತಾರದ ಸ್ತುತಿ (ಸರ್ಗ 10, ಶ್ಲೋಕ 39 ರಿಂದ.)

ಮೊದಲಾದ ಸಂದರ್ಭಗಳಲ್ಲಿ ''ಶ್ರೀದಿಗ್ವಿಜಯ'' ಅಥವಾ ''ಶ್ರೀಮೂಲ'' ಅಥವಾ ''ಶ್ರೀಮದಾಚಾರ್ಯಕರಾರ್ಚಿತ'' ಹೀಗೆ ವಿಶಿಷ್ಟ ಪದಗಳು ಪ್ರಯೋಗಿಸಲ್ಪಡದೇ ಇರುವುದು ಗಮನಾರ್ಹ.

ಹೀಗಾಗಿ ಮೇಲಿನ ಎಲ್ಲ ಕಾರಣಗಳಿಂದ ಮೂಲರಾಮ-ದಿಗ್ವಿಜಯರಾಮ ಮೊದಲಾದ ಶ್ರೀಮದಾಚಾರ್ಯಕರಾರ್ಚಿತ ಪ್ರತಿಮೆಗಳು ಶ್ರೀರಾಘವೇಂದ್ರಮಠದಲ್ಲಿ ಇದೆ ಎಂಬುದಕ್ಕೆ ಶ್ರೀರಾಘವೇಂದ್ರವಿಜಯವು ಯಾವುದೇ ಸ್ಪಷ್ಟ ಮಾಹಿತಿಯನ್ನು ನೀಡುವುದಿಲ್ಲ. ಕಾರಣ ಈ ವಿಷಯದ ಸಮರ್ಥನೆಗೆ ಈ ಕಾವ್ಯವು ಸಾಧಕವಾಗುವುದಿಲ್ಲ. ಶ್ರೀಮೂಲರಾಮಾದಿಪ್ರತಿಮೆಗಳ ವಿಷಯದಲ್ಲಿ ಈ ಕಾವ್ಯ ಆಧಾರವಾಗುವುದಿಲ್ಲ.

**ಗಮನಿಸಬೇಕಾದ ಅಂಶ:** ಈ ರೀತಿಯ ವಿಜಯಕಾವ್ಯಗಳು, ಶ್ರೀರಾಘವೇಂದ್ರಸ್ವಾಮಿಗಳಿಗಿಂತಲೂ ಹಿಂದು-ಮುಂದಿನ ಕಾಲದಲ್ಲಿದ್ದ ಹಾಗೂ ಸಮಕಾಲೀನರಾಗಿದ್ದ ಉತ್ತರಾದಿಮಠದ ಪರಂಪರೆಯಲ್ಲಿ ವಿರಾಜಮಾನರಾಗಿದ್ದ ಯತಿಗಳ ಬಗ್ಗೆಯೂ ರಚಿತವಾಗಿವೆ. (ಶ್ರೀವಿದ್ಯಾಧೀಶವಿಜಯ ಇತ್ಯಾದಿ.) ಈ ವಿಜಯಕಾವ್ಯಗಳಲ್ಲಿ ರಾಮಪ್ರತಿಮೆಯ ಉಲ್ಲೇಖದ ಸಂದರ್ಭದಲ್ಲಿ ''ಮೂಲ'' ಅಥವಾ ''ದಿಗ್ವಿಜಯ'' ಎಂಬ ವಿಶೇಷಣಗಳನ್ನು ಸ್ಪಷ್ಟವಾಗಿ ಬಳಸಿದ್ದಾರೆ. ಸಮಕಾಲೀನ ಕಾವ್ಯ ಗ್ರಂಥಗಳಲ್ಲಿ ಕಾಣುವ ಈ ವ್ಯತ್ಯಾಸವನ್ನು ಗಮನಿಸಬೇಕಾಗಿದೆ. (ಸ.ಸೀ.ಮೂ ಪುಸ್ತಕದಲ್ಲಿ ಅವುಗಳನ್ನು ಕಾಣಬಹುದು.)

''ಶ್ರೀಮೂಲರಾಮಶುಭವಿಗ್ರಹಾರ್ಚಕ ಶ್ರೀರಾಘವೇಂದ್ರರು'', ಮೂ.ಮಠೇ ಲೇಖಕರು ಪುಟ 20ರಲ್ಲಿ ಈ ಶೀರ್ಷಿಕೆಯ ಅಡಿಯಲ್ಲಿ ''ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಶ್ರೀಮೂಲರಾಮದೇವರನ್ನು ಪೂಜಿಸಿದ ಐತಿಹಾಸಿಕ ವಿಚಾರದಲ್ಲಿ ಕೆಲವು ಪ್ರಮಾಣಗಳು'' ಎಂದು ಕೆಲವು ಪ್ರಮಾಣಗಳನ್ನು ನೀಡಿದ್ದಾರೆ. ಅದರ ಬಗ್ಗೆ ವಿಮರ್ಶೆ ಮಾಡೋಣ.

1. ''ಯದ್ಯದ್ವೈಧಸಮಾತ್ಮನೀನಮನಘ ಯಚ್ಚಾಂತಿಮೇ ಚಾಂತಿಮೇ'' ಎಂಬ ವಾಮನಪುರಾಣದ ಶ್ಲೋಕವನ್ನು ನೀಡಿ ಈ ಶ್ಲೋಕಕ್ಕೆ - ಹೇ ಪಾಪರಹಿತನಾದ ಪ್ರಹ್ಲಾದನೇ ನೀನು ಬ್ರಹ್ಮಸಂಬಂಧಿಯಾದ (ಬ್ರಹ್ಮದೇವರಿಂದ ಕರಾರ್ಚಿತವಾದ) ನನ್ನದೇ ಆದ (ಮೂಲರಾಮದೇವರ ಪ್ರತಿಮೆಯನ್ನು) ಮೂರ್ತಿಯನ್ನು ಅಂತಿಮಯುಗವಾದ ಕಲಿಯುಗದಲ್ಲಿ, ನಿನ್ನ ಅಂತಿಮ ಅವತಾರದಲ್ಲಿ (ಶ್ರೀರಾಘವೇಂದ್ರರಾದಾಗ) ಕೊನೆಯ ಆಶ್ರಮದಲ್ಲಿ (ಯತ್ಯಾಶ್ರಮದಲ್ಲಿ) ಬಹುಕಾಲ ಪೂಜಿಸಿ ನಂತರ ನನ್ನನ್ನು ಸೇರುತ್ತೀ'' ಎಂದು ಅರ್ಥವನ್ನು ಬರೆದಿದ್ದಾರೆ. ರಾಜಾ. ಎಸ್. ಗುರುರಾಜಾರ್ಯರೂ ಇದೇ ಅರ್ಥವನ್ನು ಬರೆದಿದ್ದಾರೆ.

ಈ ಶ್ಲೋಕವು ಇಂದು ಮುದ್ರಿತವಾದ ವಾಮನಪುರಾಣದಲ್ಲಿ ಸಿಗುವುದಿಲ್ಲ. ಬೇರೆ ಪ್ರತಿಗಳಲ್ಲಿ ಇರಬಹುದು. ಇದ್ದರೂ ಈ ಶ್ಲೋಕಕ್ಕೆ ಶ್ರೀರಾಘವೇಂದ್ರಸ್ವಾಮಿಗಳು ಮೂಲರಾಮನ ಪೂಜೆ ಮಾಡಿದರು ಎಂಬ ಅರ್ಥ ತೋರಿಬರುವುದಿಲ್ಲ. ಒಂದು ಸಂದಿಗ್ಧ ವಿಷಯದಲ್ಲಿ ನಿರ್ಣಯ ಮಾಡುವುದಕ್ಕೆ ಸ್ಪಷ್ಟ ಪ್ರಮಾಣಗಳಿರಬೇಕೆ ಹೊರತು ಈ ತರಹದ ಅಸ್ಪಷ್ಟ ವಾಕ್ಯಗಳು ಪ್ರಮಾಣವಾಗುವುದಿಲ್ಲ. ಅದರ ಹಿಂದಿನ ಮುಂದಿನ ವಚನಗಳನ್ನು ಉದಾಹರಿಸದ ಹೊರತು ಈ ವಿಷಯವು ಸಿದ್ಧವಾಗುವುದಿಲ್ಲ. ಮೂ.ಮಠೇ.ಲೇಖಕರು ಹಾಗೂ ರಾಜಾ. ಎಸ್. ಗುರುರಾಜಾರ್ಯರು ಮಾಡಿದಂತೆ ಶಬ್ದಗಳಿಗೆ ಅರ್ಥಮಾಡುವುದಾದರೆ ''ಅಂತಿಮೇ ಅಂತಿಮಯುಗವಾದ ಕಲಿಯುಗದಲ್ಲಿ ಅಂತಿಮೇ ನಿನ್ನ ಅಂತಿಮ ಅವತಾರದಲ್ಲಿ ಶ್ರೀಸತ್ಯಸಂಧರಾದಾಗ ನನ್ನನ್ನು ಪೂಜಿಸುತ್ತೀ'' ಎಂದೂ ಅರ್ಥವನ್ನು ಮಾಡಲು ಬರುತ್ತದೆ ಅಲ್ಲವೇ? ಆದ್ದರಿಂದ ಶ್ರೀರಾಘವೇಂದ್ರಸ್ವಾಮಿಗಳು ಮೂಲರಾಮನನ್ನು ಪೂಜಿಸಿದರು ಎಂಬ ವಿಷಯಕ್ಕೆ ಈ ವಾಕ್ಯವು ಪ್ರಮಾಣವಾಗುವುದಿಲ್ಲ.

2. ''ಶ್ರೀರಾಮಾರ್ಚಾ ಪೂಜ್ಯತೇ ಯೇನ..'' ಎಂಬ ಶ್ರೀರಾಘವೇಂದ್ರವಿಜಯದ ಶ್ಲೋಕವನ್ನು ನೀಡಿದ್ದಾರೆ. ಅದರ ತಾತ್ಪರ್ಯವನ್ನು ಬರೆಯುತ್ತಾ ''ಶ್ರೀಬ್ರಹ್ಮಕರಾರ್ಚಿತವಾದ ಶ್ರೀಮೂಲರಾಮನು ಪೂಜೆಗೊಂಬಲ್ಲಿ...'' ಎಂಬುದಾಗಿ ವಿವರಿಸಿದ್ದಾರೆ. ಮೂಲ ಶ್ಲೋಕದಲ್ಲಿ ಮೂಲ, ಬ್ರಹ್ಮಕರಾರ್ಚಿತ ಎಂಬ ಪದಗಳೇ ಇಲ್ಲ ಎಂಬುದು ಗಮನಾರ್ಹ. ಅದ್ದರಿಂದ ಈ ಶ್ಲೋಕವೂ ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮೂಲರಾಮನನ್ನು ಪೂಜಿಸಿದರು ಎಂಬ ವಿಷಯವನ್ನು ತಿಳಿಸುತ್ತಿಲ್ಲ.

3. ಶ್ರೀಅಪ್ಪಣಾಚಾರ್ಯರ ಶ್ರೀರಾಘವೇಂದ್ರಗದ್ಯದ ''ರಮಾದೇವಸಂಘಾನ್ ಋಷೀನ್ ಸಿದ್ಧಮುಖ್ಯಾನ್ ಗುರೂಂಶ್ಚಾಪಿ ಮೂಲಾದಿಸಂಜ್ಞಾನ್'' ಎನ್ನುವ ವಾಕ್ಯವನ್ನು ನೀಡಿ '' ಇಲ್ಲಿ ಮೂಲಾದಿ ಸಂಜ್ಞಾನ್ ಎಂದರೆ ''ಮೂಲರಾಮನೇ ಮೊದಲಾದ ತಮ್ಮ ಉಪಾಸ್ಯಮೂರ್ತಿಗಳಿಗೆ ನಮಸ್ಕರಿಸಿ'' ಎಂದರ್ಥ'' ಎಂಬುದಾಗಿ ಬರೆದಿದ್ದಾರೆ.

ಇದರಲ್ಲೂ ಮೂಲರಾಮನ ಪ್ರಸ್ತಾಪವೇ ಬಂದಿಲ್ಲ. ಮೂಲಾದಿಸಂಜ್ಞಾನ್ ಎನ್ನುವುದು ಗುರೂನ್ ಎಂಬುದಕ್ಕೆ ವಿಶೇಷಣವಾಗಿದೆ. ಇದರ ಹೊರತಾಗಿ ಬೇರೆ ವಿಶೇಷ್ಯವು ಯಾವುದೂ ಇಲ್ಲಿ ಇಲ್ಲ. ಹೀಗಾಗಿ ಮೂಲಾದಿ ಸಂಜ್ಞಾನ್ ಗುರೂನ್ ಎಂದರೆ ಮೂಲಗುರು ಆದಿಗುರು... ಇತ್ಯಾದಿಯಾಗಿ ಗುರುಗಳನ್ನು ನಮಸ್ಕರಿಸಿ ಎಂದು ತಂತ್ರಸಾರದಲ್ಲಿ ಪ್ರಸಿದ್ಧವಾದ ಅರ್ಥವನ್ನೇ ಹೇಳಬೇಕು.

**ಸ್ಮೃತ್ವಾ ಗುರುಂ ಪೂರ್ವಗುರುಂ ಆದಿಮೂಲಗುರೂನ್ ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥** (ವಿವರ: ನೋಡಿ ಪುಟ 193)

4. ಶ್ರೀರಾಘವೇಂದ್ರಅಷ್ಟೋತ್ತರಶತನಾಮಾವಳಿ ಎಂಬ ಕೃತಿಯನ್ನು ಉದಾಹರಿಸಿ ಅದರಲ್ಲಿ ''ಓಂ ಶ್ರೀಶ್ರೀಮೂಲರಾಮಾರ್ಚಕ ರಾಘವೇಂದ್ರಯತೀಂದ್ರಾಯ ನಮಃ ॥'' ಎಂಬ ಮಹತ್ವಪೂರ್ಣ ಉಲ್ಲೇಖದಿಂದ ಮುಕ್ತಾಯವಾಗುತ್ತದೆ'' ಎಂದಿದ್ದಾರೆ.

ಇದೇ ನಾಮಾವಳಿಯಲ್ಲಿ 28ನೇ ನಾಮ ''ಶ್ರೀರಾಮಪಾದಾಂಬುಜಾಸಕ್ತಾಯ ನಮಃ'' ಎಂದಿದೆ. ಅಲ್ಲಿ ಮೂಲ ಎಂಬ ಪದ ಇಲ್ಲ. ಅಪ್ಪಣಾಚಾರ್ಯರು ಅಲ್ಲಿ ಹೇಳದೇ ಬಿಟ್ಟದ್ದೇಕೆ? ಇದನ್ನು ಗಮನಿಸಿದಾಗ ಈ ಕೊನೆಯ ನಾಮವನ್ನು ಇತ್ತೀಚಿನವರು ಸೇರಿಸಿದ್ದು ಎಂಬುದು ನಿರ್ವಿವಾದ.

**ಗಮನಿಸಿಬೇಕಾದ ಅಂಶ:** ಶ್ರೀಅಪ್ಪಣಾಚಾರ್ಯರು ಶ್ರೀರಾಘವೇಂದ್ರಸ್ತೋತ್ರದಲ್ಲಿ ಶ್ರೀರಾಮನ ಉಲ್ಲೇಖವನ್ನು ಮಾಡಿಲ್ಲ. ಶ್ರೀರಾಘವೇಂದ್ರಕವಚದಲ್ಲಿ ಹಾಗೂ ಶ್ರೀರಾಘವೇಂದ್ರಮಂಗಳಾಷ್ಟಕದಲ್ಲಿ ಶ್ರೀರಾಮನ ಪ್ರಸಕ್ತಿಬಂದಿದ್ದರೂ ಶ್ರೀಮೂಲರಾಮ ಎಂದು ಹೇಳಿಲ್ಲ. ಛಂದೋಬದ್ಧವಾದ ಪದ್ಯರೂಪವಾದ ಈ ಮೂರು ಕೃತಿಗಳಲ್ಲಿ ಕೈವಾಡ ಮಾಡಲು ಕಷ್ಟ ಆದ್ದರಿಂದ ಗದ್ಯರೂಪವಾದ ಶ್ರೀರಾಘವೇಂದ್ರಗದ್ಯ ಹಾಗೂ ನಾಮಾವಳಿಗಳಲ್ಲಿ ಸೇರಿಸುವುದು ಸುಲಭವಾದ್ದರಿಂದ ಇತ್ತೀಚಿನವರು ''ಮೂಲ'' ಎಂಬುದಾಗಿ ಸೇರ್ಪಡೆಯನ್ನು ಮಾಡಿದ್ದಾರೆ.

ಅದರಂತೆ, ಶ್ರೀರಾಯರ ಮಠದವರು ಇನ್ನನೇಕ ಅರ್ವಾಚೀನ ದಾಸರ ನುಡಿಗಳನ್ನು ನೀಡಿದ್ದಾರೆ. ಆದರೆ, ಪ್ರಾಚೀನ ದಾಸರ, ಜ್ಞಾನಿಗಳ ಪದಗಳನ್ನು ಶ್ರೀಉತ್ತರಾದಿಮಠದವರೂ ನೀಡಿದ್ದಾರೆ. ದಾಸರ ಪರಂಪರೆಯಲ್ಲಿ ಅತ್ಯಂತ ಪ್ರಾಚೀನರಾದ ಆದ್ಯರ, ಶ್ರೀ ಶ್ರೀಪಾದರಾಜರ, ಶ್ರೀಪುರಂದರದಾಸರ, ಶ್ರೀಪ್ರಸನ್ನವೆಂಕಟದಾಸರೇ ಮೊದಲಾದವರ ನುಡಿಗಳಲ್ಲಿ ಅತೀ ಸ್ಪಷ್ಟವಾಗಿ ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ಮೂಲರಾಮಮೂಲಸೀತಾದಿಗ್ವಿಜಯರಾಮಾದಿ ಪ್ರತಿಮೆಗಳ ಉಲ್ಲೇಖಗಳಿವೆ ಎಂಬುದು ಗಮನಾರ್ಹ.

## ಶ್ರೀಮೂಲರಾಮ - ಶ್ರೀರಾಘವೇಂದ್ರಸ್ವಾಮಿಗಳು

**ಶ್ರೀರಾಘವೇಂದ್ರಸ್ವಾಮಿಗಳಂತಹ ಮಹನೀಯರು ಶ್ರೀಮೂಲರಾಮನನ್ನು ಪೂಜಿಸಲಿಲ್ಲ ಎನ್ನಬಹುದೇ?!**

ಇತಿಹಾಸದ ಬಗ್ಗೆ, ವಸ್ತುಸ್ಥಿತಿಯ ಬಗ್ಗೆ, ಸತ್ಯದ ಬಗ್ಗೆ, ಪರಿಚಯವಿಲ್ಲದ ಭಾವುಕವರ್ಗಕ್ಕೆ ಸೇರಿದ ಇಂದಿನ ಕೆಲಜನಗಳು ಮಾಡುವ ಪ್ರಶ್ನೆ ಇದು.

ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮೂಲರಾಮನ ಪೂಜೆಯನ್ನು ಮಾಡಿಲ್ಲ ಎಂದು ಹೇಳುವವರೆಲ್ಲಾ ಶ್ರೀರಾಘವೇಂದ್ರಸ್ವಾಮಿಗಳ ಮಹಾದ್ರೋಹಿಗಳು ಎಂದು ಮುಗ್ಧಜನರಲ್ಲಿ ಬಿಂಬಿಸುವ ಪ್ರವೃತ್ತಿ ನಡೆದೇ ಇದೆ.

''ಶ್ರೀಮೂಲಸೀತಾಸಮೇತ ಶ್ರೀಮೂಲರಾಮನ ಪೂಜೆ ಮಾಡುವ ಭಾಗ್ಯ ದೈವಾಂಶಸಂಭೂತರಿಗೆ ಮಾತ್ರ'' ಎಂಬ ನಂಬಿಕೆ, ರಾಯರ ಮಠ ಹಾಗೂ ಉತ್ತರಾದಿಮಠದ ಪರಂಪರೆಯಲ್ಲಿ ಉಂಟು. ಈ ರೀತಿಯ ಉಲ್ಲೇಖಗಳೂ ಪ್ರಾಚೀನಕೃತಿಗಳಲ್ಲುಂಟು. ಇದರಲ್ಲಿ ಯಾರಿಗೂ ವಿವಾದವಿಲ್ಲ.

ಆದರೆ ಈ ಸಂದರ್ಭದಲ್ಲಿ ಒಂದು ವಿಷಯವನ್ನು ಚೆನ್ನಾಗಿ ತಿಳಿಯುವುದು ಒಳಿತು. ಶ್ರೀಮೂಲರಾಮನ ಪೂಜೆಯನ್ನು ಮಾಡುವ ಭಾಗ್ಯ ಯಾರೆಲ್ಲರಿಗೆ ದೊರೆತಿಲ್ಲ ಅವರೆಲ್ಲ ಮಹನೀಯರೇ ಅಲ್ಲ, ದೈವಾಂಶಸಂಭೂತರೇ ಅಲ್ಲ ಎಂದು ಸರ್ವಥಾ ಅರ್ಥ ಮಾಡಿಕೊಳ್ಳಬಾರದು.

ಇತಿಹಾಸದಲ್ಲಿ ಅನೇಕ ಮಹನೀಯರೂ ಶ್ರೀಮೂಲರಾಮನನ್ನು ಪೂಜಿಸದೇ ಇದ್ದದ್ದುಂಟು. ಶ್ರೀಅಚ್ಯುತಪ್ರೇಕ್ಷಾಚಾರ್ಯರು, ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು, ಶ್ರೀವಿಷ್ಣುತೀರ್ಥರು (ಶ್ರೀಮದಾಚಾರ್ಯರ ತಮ್ಮಂದಿರು) ಶ್ರೀಸತ್ಯತೀರ್ಥರು, ಶ್ರೀವಿಜಯಧ್ವಜತೀರ್ಥರು, ಶ್ರೀಶ್ರೀಪಾದರಾಜರು, ಶ್ರೀಬ್ರಹ್ಮಣ್ಯತೀರ್ಥರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀಯಾದವಾರ್ಯರು, ಶ್ರೀಶ್ರೀನಿವಾಸತೀರ್ಥರು, ...... ಮುಂತಾದ ಅನೇಕ ಮಹನೀಯರು ದೈವಾಂಶಸಂಭೂತರೆಂದು ಪ್ರಸಿದ್ಧರು. ಮಹಾಜ್ಞಾನಿಗಳು. ಮಹಾತಪಸ್ವಿಗಳು. ಶಾಪಾನುಗ್ರಹಸಮರ್ಥರು. ಇವರೆಲ್ಲ ಶ್ರೀಮೂಲರಾಮನ ಪೂಜೆ ಮಾಡಿದ್ದಾರೆಯೇ? ಇಲ್ಲ. ಅದರಿಂದ ಇವರೆಲ್ಲರ ವ್ಯಕ್ತಿತ್ವಕ್ಕೆ ಏನಾದರೂ ಹಾನಿಯಾಗಿದೆಯೇ? ಸರ್ವಥಾ ಇಲ್ಲ! ಇವರಲ್ಲಿ ಅನೇಕರು ಶ್ರೀರಾಘವೇಂದ್ರಸ್ವಾಮಿಗಳಿಗಿಂತ ಉತ್ತಮರಾಗಿರುವುದು ಗಮನಾರ್ಹ.

ರಾಯರಮಠದವರೂ, ಆ ಎಲ್ಲ ಮಹನೀಯರು ಮೂಲರಾಮನ ಪೂಜೆಯನ್ನು ಮಾಡಿದ್ದಾರೆ ಎಂದು ಒಪ್ಪುವುದಿಲ್ಲ. ಹಾಗಾದರೆ ಆ ಮಹನೀಯರು ಮೂಲರಾಮನ ಪೂಜೆಯನ್ನು ಮಾಡಿಲ್ಲ ಎಂದು ಹೇಳಿದ ಮಾತ್ರಕ್ಕೆ ಆ ಮಹನೀಯರ ದ್ರೋಹಮಾಡಿದಂತಾಗುತ್ತದೆಯೇ? ಸರ್ವಥಾ ಇಲ್ಲ.

ಶ್ರೀರಾಘವೇಂದ್ರಸ್ವಾಮಿಗಳು ಮಹಾನುಭಾವರು. ಮಹಾಜ್ಞಾನಿಗಳು. ಮಹಾತಪಸ್ವಿಗಳು. ಶಾಪಾನುಗ್ರಹ ಸಮರ್ಥರು. ಕಲಿಯುಗ ಕಲ್ಪವೃಕ್ಷ-ಕಾಮಧೇನುಗಳು. ಅವರ ಸ್ಥಾನ ಅವರದ್ದೇ. ಮತ್ತಾರೂ ಆ ಸ್ಥಾನವನ್ನು ತುಂಬಲು ಸಾಧ್ಯವಿಲ್ಲ. ಅದ್ಭುತ ವ್ಯಾಖ್ಯಾನಗಳನ್ನು ರಚಿಸಿ ತತ್ತ್ವಜ್ಞಾನಪ್ರಪಂಚಕ್ಕೆ ಅಸದೃಶ ಕೊಡುಗೆಯನ್ನು ನೀಡಿದ ಧೀಮಂತರು. ಇಂತಹ ಮಹಾನುಭಾವರಾದ ಶ್ರೀರಾಯರ ಹೆಸರನ್ನು ಮುಂದು ಮಾಡಿ ಮುಗ್ಧ ಭಾವುಕ ಜನರನ್ನು ಬೆರಗುಗೊಳಿಸಿ ಮರಳುಮಾಡುವುದು ಸರಿಯಲ್ಲ.

ನಮ್ಮ ಈ ಪುಸ್ತಕದಲ್ಲಿ ಅನೇಕ ರೀತಿಯಲ್ಲಿ ಸಪ್ರಮಾಣವಾಗಿ ಮೂಲರಾಮನ ಮೂಲಸೀತಾದೇವಿಯ ವಿಷಯವನ್ನು ಹಾಗೂ ಆ ದಿವ್ಯಭವ್ಯಮೂರ್ತಿಗಳ ನಿತ್ಯನೆಲೆಯನ್ನು ಬಿಂಬಿಸಿದ್ದೇವೆ. ಎಲ್ಲಿಯೂ ಶ್ರೀರಾಯರು ಮೂಲಸೀತಾಸಮೇತ ಮೂಲರಾಮನ ಪೂಜೆಮಾಡಿದ ಉಲ್ಲೇಖಗಳಿಲ್ಲ. ಶ್ರೀರಾಯರ ಚರಿತ್ರೆಯನ್ನು ಹೇಳಲು ಹೊರಟ ಶ್ರೀರಾಘವೇಂದ್ರವಿಜಯವೂ ಈ ವಿಷಯವನ್ನು ಉಲ್ಲೇಖಿಸಿಲ್ಲ ಎನ್ನುವುದು ಗಮನಾರ್ಹ. ಸ್ವಯಂ ಶ್ರೀರಾಯರೂ ಸಹ ಎಲ್ಲಿಯೂ ಈ ವಿಷಯದ ಬಗ್ಗೆ ಚಕಾರ ಆಡಿಲ್ಲ!! ಇದಕ್ಕೆ ವಿಪರೀತವಾಗಿ ಶ್ರೀರಾಯರೇ ಉತ್ತರಾದಿಮಠದ ಶ್ರೀವೇದನಿಧಿತೀರ್ಥರಿಗೆ ಉತ್ತರಾದಿಮಠದಲ್ಲೇ ಶ್ರೀಮೂಲರಾಮಪ್ರತಿಮೆ ಇದೆಯೆಂದು ಪತ್ರ ಬರೆದುಕೊಟ್ಟ ಉಲ್ಲೇಖ ''ಗುರುಚರ್ಯಾ'' ಎಂಬ ಪ್ರಾಚೀನ ಗ್ರಂಥದಲ್ಲುಂಟು. ಈ ''ಗುರುಚರ್ಯಾ'' ಗ್ರಂಥವನ್ನು ದಿ. ಬಿ.ಎನ್.ಕೆ.ರವರು ತಮ್ಮ ಪಿ.ಹೆಚ್.ಡಿ.ಗೆ ಪ್ರಮಾಣಗ್ರಂಥವೆಂದು ಸ್ವೀಕರಿಸಿದ್ದಾರೆ. ಈ ಕೃತಿಯನ್ನು ತಮ್ಮ ಅನೇಕ ಪುಸ್ತಕಗಳಲ್ಲಿ ಉದಾಹರಿಸಿರುವುದು ಗಮನಾರ್ಹ.

ಹೀಗಾಗಿ ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮೂಲರಾಮನನ್ನು ಪೂಜಿಸಿಲ್ಲ ಅಂದಮಾತ್ರಕ್ಕೆ ಅವರ ಭವ್ಯ ವ್ಯಕ್ತಿತ್ವಕ್ಕೆ ಯಾವ ಕಳಂಕವೂ ಇಲ್ಲ. ಭಾವುಕರಾಗಿ ಪ್ರಶ್ನೆ ಮಾಡುವುದಾದರೆ ಶ್ರೀವಾದಿರಾಜರಂತಹ, ಶ್ರೀಪಾದರಾಜರಂತಹ ಮಹನೀಯರು ಮೂಲರಾಮನನ್ನು ಪೂಜಿಸಲಿಲ್ಲ ಎನ್ನಬಹುದೇ? ಎಂಬ ಭಾವುಕ ಪ್ರಶ್ನೆಗಳೂ ತಲೆ ಎತ್ತಿದಾಗ ಉತ್ತರ ಕೊಡಬೇಕಾದ ಜವಾಬ್ದಾರಿ ರಾಯರಮಠದವರಿಗೆ ಉಂಟು. ಆದಕಾರಣ ಕೇವಲ ಭಾವುಕರಾಗದೆ ವಿಷಯದ ಬಗ್ಗೆ ಚೆನ್ನಾಗಿ ವಿಚಾರಮಾಡಿ ವಸ್ತುಸ್ಥಿತಿಯನ್ನು ತಿಳಿಯುವುದು ಒಳ್ಳೆಯದು.

* * * *

# ಪ್ರತಿಮಾಲಕ್ಷಣಗಳ ತುಲನೆ

ಶ್ರೀಮೂಲರಾಮ ಶ್ರೀಮೂಲಸೀತಾ ಪ್ರತಿಮೆಯ ಲಕ್ಷಣಗಳನ್ನು ತಿಳಿಸುವ ಕೃತಿಗಳು ಇಂತಿವೆ–

1. ವಾಸಿಷ್ಠರಾಮಾಯಣ ಅಥವಾ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿ (ಮೂ.ಮ). ಈ ಗ್ರಂಥದಲ್ಲಿ ಶ್ರೀಮೂಲರಾಮನ ಲಕ್ಷಣಗಳನ್ನು ತಿಳಿಸುವಾಗ

**ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್ ।**
**ಸರ್ವಲಕ್ಷಣಸಂಪನ್ನಾಂ ಪಾದೇ ಬಿರದ (ದ್ವಿರದ)ಸಂಯುತಾಮ್ ॥**

ಶುದ್ಧತಾಮ್ರಮಯ, ಪಾದದಲ್ಲಿ ದ್ವಿರದ (ಗೆಜ್ಜೆ) ಅಥವಾ ಬಿರದ (ವೀರಕಂಕಣ)ಗಳಿಂದ ಕೂಡಿದ ಪ್ರತಿಮೆ.

2. ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು ಹಸ್ತಪ್ರತಿ (ಸಸೀತಾಮೂಲರಾಮಾರ್ಚಾ). ಈ ಕೃತಿ ಶ್ರೀಸತ್ಯಬೋಧತೀರ್ಥರ ಆಜ್ಞಾಪ್ರಕಾರ ಅವರ ಸಮಕಾಲೀನರಾದ ಶ್ರೀದೈವಜ್ಞಭೀಮಾಚಾರ್ಯರಿಂದ ರಚಿತವಾದದ್ದು. ಇದರಲ್ಲಿ

**ತಾಮ್ರಾಧಿಕ್ಯಾತ್ ತನ್ಮಯೀಂ ತಾಂ ವಸಿಷ್ಠಮುನಿರಬ್ರವೀತ್ ।**

.......

**ವಿಚಿತ್ರಸತ್ಕಿರೀಟಾದಿಸಹಜಾಭರಣೈರ್ಯುತಾ ।**
**ವಾಮಜಂಘಾಲಸದ್ವೀರಕಂಕಣಾಮಿತಲಕ್ಷಣಾ ॥ 34 ॥**
**ಭಾತಿ ಯಸ್ಯಾಃ ಸವ್ಯಪಾದೇ ಬ್ರಹ್ಮನಿರ್ಮಿತನೂಪುರಃ ।**

.......

**ತಥೈವ ಸೀತಾಪ್ರತಿಮಾ ವರ್ತತೇ ಪಿತ್ತಲಾತ್ಮಿಕಾ ।**
**ಪಶ್ಚಾದ್ಭಾಗಸ್ಥಕಬರಾ ವೃತ್ತತಾಮ್ರಾ ಸುಪೀಠಗಾ ॥ 37 ॥**

.......

**ಮಾರ್ಕಂಡೇಯಪುರಾಣೇ ತೂತ್ತರಕಾಂಡೇ ತಥೈವ ಚ ।**
**ಅಧ್ಯಾಯೇ ಷಣ್ಣವತಿಕೇ ಗ್ರಂಥೇ ಪುಷ್ಕರಸಂಜ್ಞಕೇ ॥ 41 ॥**
**ರಾಮಾಯಣೇ ತು ವಾಸಿಷ್ಠೇ ಜಾನಕೀ ಮೂಲರಾಮಯೋಃ ।**

ಈ ಕೃತಿಕಾರರು ಮಾರ್ಕಂಡೇಯಪುರಾಣ ಹಾಗೂ ಪುಷ್ಕರ ಎಂಬ ಗ್ರಂಥಗಳನ್ನು ಪ್ರಮಾಣವಾಗಿ ಉದಾಹರಿಸಿರುವುದು ಗಮನಾರ್ಹ. ಇದರಿಂದ ಕವಿಯು ಶ್ರೀವೇದವ್ಯಾಸವಿರಚಿತ ಗ್ರಂಥಗಳ ಸಮ್ಮತಿಯನ್ನೂ ಸೂಚಿಸಿದಂತಾಗಿದೆ.

ತಾಮ್ರಮಯವಾದ ವಿಚಿತ್ರ ಕಿರೀಟಾದಿ ಸಹಜಾಭರಣಗಳು, ಎಡಗಾಲಲ್ಲಿ ವೀರಕಂಕಣ, ಪಾದದಲ್ಲಿ ಕಿರುಗೆಜ್ಜೆ ಮುಂತಾದ ಲಕ್ಷಣಗಳಿಂದ ಕೂಡಿರುವುದು ಮೂಲರಾಮಪ್ರತಿಮೆ.

ಹಿತ್ತಾಳೆಯ ಬಣ್ಣ, ದುಂಡಾದ ತಾಮ್ರಪೀಠ, ಸುಂದರಜಡೆಯ ಆಭರಣ, ಕಬರಾದಿ ಲಕ್ಷಣಗಳಿಂದ ಕೂಡಿರುವುದು ಮೂಲಸೀತಾಪ್ರತಿಮೆ.

3. ಶ್ರೀಶ್ರೀಪಾದರಾಜರಿಂದ ರಚಿತ ''ತೂಗಿರೋ ರಾಮನ'' ಕೃತಿ - ಹಸ್ತಪ್ರತಿ.

**ಕಾಲಲಿ ಕಿರುಗೆಜ್ಜೆ ಮ್ಯೆಲೆ ಪೊನ್ನಂದಿಗೆ**

ಆಧಾರ 1: ಹರಿದಾಸರತ್ನಂ ಗೋಪಾಲದಾಸರಿಂದ ಸಂಗ್ರಹೀತವಾದ ಶ್ರೀವಿಜಯದಾಸರ ಕಟ್ಟೆಯಲ್ಲಿದ್ದ ಮೂಲಹಸ್ತಪ್ರತಿ,
ಆಧಾರ 2: ದಾಸಶಾಸ್ತ್ರನಿಧಿ ಶ್ರೀ ಎಂ.ಟಿ.ಪ್ರಹ್ಲಾದರ ಪ್ರಾಚೀನ ಹಸ್ತಪ್ರತಿಗಳಲ್ಲಿಯ
''ಹರಿದಾಸ ಕೃತಿಗಳು''ವ್ಯೋಮಕೇಶ ಪ್ರಕಾಶನ ಬೆಂಗಳೂರು)

4. ಶ್ರೀಗೋಪಾಲದಾಸರ ಕೃತಿ (ಸುಳಾದಿ)-

**ತರಣಿಕುಲೋತ್ಪನ್ನ ತಪ್ತಕಾಂಚನವರ್ಣ**

**........................**

**ಚರಣದಂದುಗೆ ಗೆಜ್ಜೆ ವರ ಜಾನು ಜಂಘೆ ಕಟಿ**
**ಕರ ಮೇಲೆ ಒಲಿವ ಕಿಂಕಿಣಿಯ ಘಂಟಿ**
**ಪರಮಶೋಭಿತದ ಉದರ ವಕ್ಷಕೌಸ್ತುಭ**
**ಕೊರಳಪದಕ ನಾನಾ ಸರಗಳಿಂದೊಪ್ಪುತ**

ಆಧಾರ: ಶ್ರೀರಘುನಂದನರಾಘವೇಂದ್ರಮಾಲಾ-39 ಶ್ರೀಮೂಲರಾಮ; ರಚನೆ: ಶ್ರೀ ರಾಜಾ ಶ್ರೀಗುರುರಾಜಾಚಾರ್ಯ, ಪ್ರಧಾನ ಸಂಪಾದಕರು: ಶ್ರೀರಾಜಾ.ಎಸ್.ರಾಜಗೋಪಾಲಾಚಾರ್ಯ; ಪ್ರಕಾಶಕರು: ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ, 2004

5. ಮುದ್ದು ವಿಠ್ಠಲರ ಕೃತಿ (ಸುಳಾದಿ)

**ಪದುಮಕರ್ಣಿಕೆಯಲ್ಲಿ ನಿಂದು ಎಡದ ಕಾಲಿನಲ್ಲಿ ಸ್ವರ್ಣ । ದಂದಿಗೆ ಗೆಜ್ಜೆ ಘೆಲೆವಾರಂದಿಗೆ ಧರಿಸಿ ಮೂಲರಾಮ । ಸೀತೆಯಲ್ಲಿ ಸತತ ನಿರಲೆಂದು ಕೊಟ್ಟು ರಾಮ । ಮುದ್ದು ವಿಠಲನು ಪರಂಧಾಮಕ್ಕೆ ಪೋಗುವಾಗ ॥ 4 ॥**

**ಕಾಲಾಂತರದಲ್ಲಿ ಭೂಸುರನು ತೀರ್ಥಯಾತ್ರೆ...ಬಟುವಾದ ತಾಂಬ್ರಗದ್ದುಗೆಯಲ್ಲಿ । ನಿಂದಿದ್ದ ತನ್ನ ಪತಿ ಆನಾಭಿಪ್ರಮಾಣಳಾಗಿ ಕರದಿ ಕಮಲಾ ಅಮೃತ । ಕಲಶವಾ ಪಿಡಿದಿಹಳು ಪುಥ್ಥಳಿಂದದಲಿಹ ಸೀತಾಸಹಿತ ಮೂಲರಾಮನ ತಂದರ್ಚಿಸಿ ಕೋಶದೊಳಿಟ್ಟಿದ್ದ । ಅನಿಮಿಷವಂದ್ಯನಾದ ಚತುರ್ಮುಖನೊಂದು ರೂಪದಿ ಬಂದು ಪೂಜಿಸುವ । ಮೂಲಸೀತಾರಾಮ ಮುದ್ದುವಿಠ್ಠಲನ್ನ ॥ 5 ॥**

ಆಧಾರ: ಶ್ರೀರಘುನಂದನರಾಘವೇಂದ್ರಮಾಲಾ-39 ಶ್ರೀಮೂಲರಾಮ; ರಚನೆ: ಶ್ರೀರಾಜಾ. ಶ್ರೀಗುರುರಾಜಾಚಾರ್ಯ, ಪ್ರಧಾನಸಂಪಾದಕರು: ಶ್ರೀರಾಜಾ ಎಸ್. ರಾಜಗೋಪಾಲಾಚಾರ್ಯ; ರಾಘವೇಂದ್ರಸ್ವಾಮಿಗಳಮಠ, ಮಂತ್ರಾಲಯ; 2004)

6. ಅರ್ಚಾಗತಿಕ್ರಮ -

**ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ॥ 12 ॥**
**ಕರ್ಣತೋ ವರ್ಣತಶ್ಚೈವ ಪೀಠತಃ ಪರಿಮಾಣತಃ ।**
**ಸೀತಾರಾಮಾರ್ಚಯೋಃ ಸಾಮ್ಯಂ ಅತೋಽನ್ಯಸ್ವಮಠಸ್ಥಯೋಃ ॥ 31 ॥**

ವೃತ್ತಪೀಠ, ಲಂಬಕರ್ಣ, ತ್ರಿವಕ್ರಾ , ರಾಮಸೀತಾಪ್ರತಿಮೆಗಳಿಗೆ ಪೀಠ, ವರ್ಣ, ಕರ್ಣ, ಪರಿಮಾಣಗಳಲ್ಲಿ ಸಾಮ್ಯ .

ಮೇಲೆ ತಿಳಿಸಿದ ಇತರ ಆಧಾರಗಳಲ್ಲಿ ಉಲ್ಲಿಖಿತವಾಗಿರುವ ಶ್ರೀಮೂಲರಾಮನ ಲಕ್ಷಣಗಳನ್ನು ಇಂದಿಗೂ ಶ್ರೀಮದುತ್ತರಾದಿಮಠದಲ್ಲಿರುವ ಶ್ರೀಮೂಲರಾಮನ ಪ್ರತಿಮೆಯಲ್ಲಿ ಸ್ಪಷ್ಟ ಕಾಣಬಹುದಾಗಿದೆ.

## ವಾಚಕರು ಗಮನಿಸಿಬೇಕಾದ ಅಂಶ...

ಮೇಲಿರುವ ಆಧಾರಗಳಲ್ಲಿ ಶ್ರೀವಾದೀಂದ್ರರದ್ದೆಂದು ಹೇಳುವ ಅರ್ಚಾಗತಿಕ್ರಮ ಎಂಬ ಏಕೈಕ ಆಕರದಲ್ಲಿ ಹೇಳಿರುವ ''ದುಂಡುಪೀಠ, ಉದ್ದಕಿವಿ, ಮೂರುಕಡೆ ಸೊಟ್ಟ'' ಎಂಬ ಲಕ್ಷಣಗಳು ಶ್ರೀರಾಯರ ಮಠದಲ್ಲಿರುವ ಶ್ರೀರಾಮನ ಪ್ರತಿಮೆಯಲ್ಲಿವೆ. ಇದೇ ಕೃತಿಯಲ್ಲಿ ಮೂಲಸೀತಾರಾಮರ ಪ್ರತಿಮೆಗಳಿಗೆ ವರ್ಣತಃ ಪೀಠತಃ ಪರಿಮಾಣತಃ ಸಾಮ್ಯ ಹೇಳಿದ್ದಿದೆ. ಆದರೆ ಶ್ರೀರಾಯರ ಮಠದವರೇ ಒಪ್ಪಿಕೊಂಡಂತೆ ಉತ್ತರಾದಿಮಠದಲ್ಲಿಯೇ ಶ್ರೀಮೂಲಸೀತೆಯ ಪ್ರತಿಮೆ ಇದೆ. ಈ ಪ್ರತಿಮೆಗೂ ಶ್ರೀರಾಯರ ಮಠದಲ್ಲಿರುವ ಶ್ರೀರಾಮನ ಪ್ರತಿಮೆಗೂ ಯಾವರೀತಿಯ ಸಾಮ್ಯವೂ ಇಲ್ಲ. ಅಲ್ಲದೇ ಅರ್ಚಾಗತಿಕ್ರಮದಲ್ಲಿ ಉಲ್ಲೇಖಿಸಿರುವ ಪ್ರತಿಮೆಯ ಲಕ್ಷಣಗಳ ಬಗ್ಗೆ ಪ್ರಾಚೀನ ಹಾಗೂ ಅರ್ವಾಚೀನವಾದ ಯಾವ ಆಧಾರ ಕೃತಿಗಳಲ್ಲೂ (ಶ್ರೀರಾಯರಮಠದ ಅಧಿಕೃತಕೃತಿಗಳಾದ ಶ್ರೀರಾಘವೇಂದ್ರವಿಜಯವೇ ಮೊದಲಾದ ಯಾವ ಗ್ರಂಥಗಳಲ್ಲೂ) ಉಲ್ಲೇಖ ಇಲ್ಲದಿರುವುದು ಗಮನಾರ್ಹ. ಅಲ್ಲದೇ ಈ ಕೃತಿಯ ಪ್ರಾಚೀನಹಸ್ತಪ್ರತಿ ಇದುವರೆಗೆ ಬೆಳಕಿಗೆ ಬಂದಿಲ್ಲ. ಮೂ.ಮಠೇ. ಪುಸ್ತಕದ ಎರಡನೇ ಆವೃತ್ತಿಯಲ್ಲೂ ಈ ಅರ್ಚಾಗತಿಕ್ರಮದ ಮುದ್ರಿತ ಪ್ರತಿಯನ್ನು ಛಾಪಿಸಿ ಕೆಳಗೆ ಪ್ರಾಚೀನ ಹಸ್ತಪ್ರತಿ ಎಂದು ಬರೆದುಕೊಂಡಿದ್ದು ಸೋಜಿಗವೇ ಸರಿ.

ಆಶ್ಚರ್ಯವೆಂದರೆ ರಾಯರ ಮಠದವರೇ ಅಧಿಕೃತವಾಗಿ ಪ್ರಕಟಿಸಿರುವ ''ಶ್ರೀಮೂಲರಾಮ'' ಎಂಬ ಪುಸ್ತಕದಲ್ಲಿ (ಶ್ರೀರಘುನಂದನರಾಘವೇಂದ್ರಮಾಲಾ -39 ಶ್ರೀಮೂಲರಾಮ - ರಚನೆ: ಶ್ರೀರಾಜಾ. ಗುರುರಾಜಾಚಾರ್ಯ, ಪ್ರಧಾನ ಸಂಪಾದಕರು: ಶ್ರೀರಾಜಾ.ಎಸ್.ರಾಜಗೋಪಾಲಾಚಾರ್ಯ, ಪ್ರಕಾಶಕರು: ರಾಘವೇಂದ್ರಸ್ವಾಮಿಗಳಮಠ, ಮಂತ್ರಾಲಯ - 2004) ಅವರೇ ಕೊಟ್ಟಿರುವ ಅನೇಕ ಆಧಾರಗಳಲ್ಲಿರುವ ಪ್ರತಿಮಾಲಕ್ಷಣಗಳು ಉತ್ತರಾದಿಮಠದಲ್ಲಿರುವ ಶ್ರೀಮೂಲರಾಮನ ಪ್ರತಿಮೆಯಲ್ಲಿವೆಯೇ ಹೊರತು ಶ್ರೀರಾಯರ ಮಠದ ಶ್ರೀರಾಮನ ಪ್ರತಿಮೆಯಲ್ಲಿ ಇಲ್ಲ. ಅಲ್ಲದೇ, ದಿ. ರಾಜಾ. ಎಸ್. ಶ್ರೀ ಗುರುರಾಜಾಚಾರ್ಯರು ತಮ್ಮ ''ಶ್ರೀಮೂಲರಾಮ'' ಎಂಬ ಪುಸ್ತಕದ ಪುಟ 25ರಲ್ಲಿ ಶ್ರೀವಸುಧೇಂದ್ರತೀರ್ಥರು ಪೂಜಿಸುವ ಶ್ರೀಮೂಲರಾಮನನ್ನು ಶ್ರೀಗೋಪಾಲದಾಸರು ''ತರಣಿಕುಲೋತ್ಪನ್ನ ತಪುತ ಕಾಂಚನವರುಣ'' ಎಂಬ ಸುಳಾದಿಯಲ್ಲಿ ಸುಂದರಶೈಲಿಯಲ್ಲಿ ವರ್ಣಿಸಿ ಸ್ತುತಿಸಿದ್ದಾರೆ ಎಂದು ತಿಳಿಸಿದ್ದಾರೆ. ಆದರೆ ಈ ಕೃತಿಯಲ್ಲಿ ವರ್ಣಿಸಲ್ಪಟ್ಟ ''ಚರಣದಂದುಗೆ ಗೆಜ್ಜೆ ವರ ಜಾನು ಜಂಘೆ ಕಟಿ ಕರ ಮೇಲೆ ಒಲಿವ ಕಿಂಕಿಣಿಯ ಘಂಟಿ'' ಮೊದಲಾದ ಲಕ್ಷಣಗಳು ಶ್ರೀರಾಯರಮಠದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀರಾಮಪ್ರತಿಮೆಯಲ್ಲಿ ಇಲ್ಲದಿರುವುದು ಅತ್ಯಂತ ಸೋಜಿಗವೇ ಸರಿ. ಇದೇ ಕಾರಣಕ್ಕೆ ಈ ಶ್ರೀಗೋಪಾಲದಾಸರ ಕೃತಿಯಲ್ಲೂ ಇತರರ ಕೈವಾಡವಿದೆ ಎನ್ನದೇ ಗತಿಯಿಲ್ಲ.

ಉಭಯಪಕ್ಷಗಳ ಆಧಾರಗಳಲ್ಲಿ ಉಲ್ಲೇಖಿಸಿರುವ ಎಲ್ಲ ಲಕ್ಷಣಗಳುಳ್ಳ (ಅರ್ಚಾಗತಿಕ್ರಮವನ್ನು ಹೊರತು ಪಡಿಸಿ) ಶ್ರೀಮೂಲರಾಮನ ಪ್ರತಿಮೆಯು ಸುರಕ್ಷಿತವಾಗಿ ಇಂದಿಗೂ ಶ್ರೀಮದುತ್ತರಾದಿಮಠದಲ್ಲಿಯೇ ಪೂಜೆಗೊಳ್ಳುತ್ತಾ ಇದೆ. ಅಪಹರಣವಾಗಿಲ್ಲ ಎಂಬುದು ಇದರಿಂದ ಸ್ಪಷ್ಟ. ಶ್ರೀರಾಯರ ಮಠದವರು ಅವರಿಗಿರುವ ಏಕೈಕ ಆಧಾರವಾದ ಅರ್ಚಾಗತಿಕ್ರಮದಲ್ಲಿ ಹೇಳಿರುವ ಲಕ್ಷಣಗಳುಳ್ಳ ಶ್ರೀರಾಮಪ್ರತಿಮೆಯನ್ನೇ ಮೂಲಪ್ರತಿಮೆ ಎಂದು ಹೇಳಿಕೊಂಡರೆ ಮೂಲಸೀತಾರಾಮಪ್ರತಿಮೆಗಳ ಲಕ್ಷಣಗಳನ್ನು ತಿಳಿಸುವ ಇನ್ನುಳಿದ ಆಧಾರಗಳ ವಿರೋಧ ಬರುತ್ತದೆ.

* * * *









'ಪಾದೇ ದ್ವಿರದ(ಬಿರದ)ಸಂಯುತಾ' ಎಂದು ವಾಸಿಷ್ಠ ರಾಮಾಯಾಣದಲ್ಲಿ ಉಕ್ತವಾದ ಕಾಲಿನಲ್ಲಿ 'ಕಡಗ', 'ಕಂಕಣ' ಮೊದಲಾದ ಯಾವ ಲಕ್ಷಣಗಳೂ ರಾಯರ ಮಠದಲ್ಲಿ ಪೂಜೆಗೊಳ್ಳುವ ರಾಮಪ್ರತಿಮೆಯಲ್ಲಿ ಇಲ್ಲ ಎಂಬುದನ್ನು ನೋಡಬಹುದು. (ರಾಯರ ಮಠದವರು ಹೇಳುವಂತೆ ಪಾದದಲ್ಲಾಗಲಿ, ಪಾದಪೀಠದಲ್ಲಾಗಲಿ ಆನೆಯ ಚಿಹ್ನೆಯೂ ಕಂಡುಬರುವುದಿಲ್ಲ.)

# ದಿಗ್ವಿಜಯರಾಮಪ್ರತಿಮೆ ಶಾಸನ?

ಶ್ರೀರಾಯರ ಮಠದ ಅಧಿಕೃತಲೇಖಕರಾದ ದಿ. ಶ್ರೀ.ರಾಜಾ.ಎಸ್. ಗುರುರಾಜಾಚಾರ್ಯರು ತಮ್ಮ ಅಜಯ್ಯವಿಜಯೀಂದ್ರರು ಎಂಬ ಪುಸ್ತಕ(07)ದಲ್ಲಿ ''ದಿಗ್ವಿಜಯರಾಮದೇವರ ಪೂಜಾ ಕಾಲದಲ್ಲಿ'' ಎಂದು ಬರೆದಿರುವ ಪೂರ್ವಕಾಲದ ತಾಮ್ರಶಾಸನವಿದೆ ಎಂದು ಬರೆದಿದ್ದಾರೆ.

ಅದರಂತೆ ಶ್ರೀರಾಯರ ಮಠದ ಶಾಸನಗಳು ಎಂಬ ಪುಸ್ತಕದಲ್ಲಿಯೂ (No. I, Vol 1) ಈ ತಾಮ್ರಶಾಸನವನ್ನು ಛಾಪಿಸಿದ್ದಾರೆ.

ಈ ಶಾಸನದ ಆಧಾರದ ಮೇಲೆ ಶ್ರೀದಿಗ್ವಿಜಯರಾಮದೇವರ ಪ್ರತಿಮೆಯು ಶ್ರೀವಿಬುಧೇಂದ್ರರಿಂದ ಪೂಜಿತವಾಗಿ ಅದ್ಯಾಪಿ ಆ ಪ್ರತಿಮೆಯು ಶ್ರೀವಿಬುಧೇಂದ್ರರ ಪರಂಪರೆಯಲ್ಲಿಯೇ ಪೂಜೆಗೊಳ್ಳುತ್ತಿದೆ ಎಂಬುದನ್ನು ಸಾಧಿಸುವುದು ಅವರ ಆಶಯವಾಗಿದೆ. ಈ ಪ್ರಕರಣದಲ್ಲಿ ಆ ತಾಮ್ರಪತ್ರದ ಬಗ್ಗೆ ಅಧ್ಯಯನವನ್ನು ಮಾಡೋಣ–

ಈ ತಾಮ್ರಪತ್ರದ ವಿಶ್ಲೇಷಣೆ :

ಒಂದು ಹೇಳಿಕೆಗೆ ಸಾಕ್ಷ್ಯಾಧಾರವೆಂದು ತಾಮ್ರಪತ್ರ ಅಥವಾ ಕಲ್ಲಿನ ಶಾಸನವನ್ನು ಅಂಗೀಕರಿಸಬೇಕಾದರೆ, ಪ್ರಚಲಿತ ನಿಯಮಗಳಿವೆ.

ಅ) ಆಧಾರವು ಸಂಶಯ ಉಂಟಾಗುವಂತೆ ಇರಬಾರದು. ಸರ್ಕಾರದ ಸಂಬಂಧಪಟ್ಟ ಇಲಾಖೆಯ ತಜ್ಞರಿಂದ ಮಾನ್ಯತೆ ಹೊಂದಿರಬೇಕು. ಸಂದೇಹವಿದ್ದರೆ ಸಾಕ್ಷ್ಯಾಧಾರ ಎಂದೆನಿಸುವುದಕ್ಕೆ ಬಾಧಕವಾಗುತ್ತದೆ.

ಆ) ಶಾಸನಗಳನ್ನು ವಿಮರ್ಶಿಸತಕ್ಕ ತಜ್ಞರು – whether ತಾಮ್ರಪತ್ರ or such other documentary evidence is a genuine one or a spurious one ಎಂದು ನಿರ್ಣಯ ಮಾಡುತ್ತಾರೆ.

ಮೇಲೆ ತಿಳಿಸಿರುವ ತಾಮ್ರಪತ್ರವು ಗು.ಚ. ಮತ್ತು ಇನ್ನಿತರ ಪುಸ್ತಕಗಳಲ್ಲಿ ಕ್ರಿ.ಶ.1949 ರ ನಂತರದಲ್ಲಿ ಸೂಚಿಸಲ್ಪಟ್ಟಿದೆ.

ಆದರೆ ಕ್ರಿ.ಶ. 1917 ರಲ್ಲಿಯೇ ಪ್ರಾಚ್ಯ ಸಂಶೋಧನೆಯ ಇಲಾಖೆಯ ಉನ್ನತ ಹುದ್ದೆಯಲ್ಲಿದ್ದ ಅಧಿಕಾರಿಯು ಈ ತಾಮ್ರಪತ್ರವನ್ನು ಪ್ರಾಮಾಣಿಕ ವರ್ಗದಲ್ಲಿ ಸೇರಿಸುವುದಕ್ಕಾಗುವುದಿಲ್ಲ ಎಂದು ನಿರ್ಣಯಿಸಿದ್ದಾರೆ. ಅದಕ್ಕೆ ಕಾರಣಗಳನ್ನೂ ತಿಳಿಸಿದ್ದಾರೆ.

ಹಿಂದಿನ ಮೈಸೂರು ರಾಜ್ಯದಲ್ಲಿದ್ದ ಹುಣಸೂರು, ಪಿರಿಯಾಪಟ್ಟಣ, ನಂಜನಗೂಡು ತಾಲ್ಲೂಕುಗಳಲ್ಲಿದ್ದ ತಾಮ್ರಶಾಸನ, ಕಲ್ಲಿನ ಶಾಸನಾದಿಗಳನ್ನು ಮೇಲ್ಕಂಡ ಪ್ರಾಚ್ಯಸಂಶೋಧನಾಧಿಕಾರಿಯು ಪರೀಕ್ಷಿಸಿ, ವಿವರಗಳನ್ನಿತ್ತಿದ್ದಾರೆ. ಶ್ರೀರಾಯರಮಠದಲ್ಲಿದ್ದ 16 ಪತ್ರ ಹಾಗೂ ಶಾಸನಗಳ ಬಗ್ಗೆ ವಿವರಗಳಿವೆ. ಅದರಲ್ಲಿ ಮೇಲಿನ ತಾಮ್ರಪತ್ರವನ್ನೂ 1917 ರಲ್ಲಿ ವಿಮರ್ಶಿಸಿಸಲಾಗಿದೆ. 1944ನೆಯ ವಾರ್ಷಿಕ ವರದಿಯಲ್ಲಿ ಆಗಿನ ಮೈಸೂರು ಸರ್ಕಾರದವರು ಈ ವಿಷಯವನ್ನು ಪ್ರಕಟಿಸಿದ್ದಾರೆ.

ಅದರ ಪುಟ 71ರಲ್ಲಿ -

''ನಂಜನಗೂಡು ತಾಲ್ಲೂಕು ಕಸಬೆಯಲ್ಲಿ ಶ್ರೀರಾಘವೇಂದ್ರಸ್ವಾಮಿಗಳವರ ಮಠದಲ್ಲಿರುವ ಒಂದನೆಯ ತಾಮ್ರಶಾಸನ ತೆಲುಗಕ್ಷರ: ಒಂದು ಹಲಗೆ''

ಎಂಬ ಉಲ್ಲೇಖದೊಂದಿಗೆ ಈ ಶಾಸನ ಮುದ್ರಿತವಾಗಿದೆ. ಇದರಲ್ಲಿ ಶಕ 1412, ಸಾಧಾರಣ ಸಂವತ್ಸರವನ್ನು ನಮೂದಿಸಿದ್ದರಿಂದ ಆ ಕಾಲಕ್ಕೆ ಸಂಬಂಧಿಸಿದ ವಿಷಯಗಳು ಎಂದು ತಿಳಿಯುತ್ತದೆ.

ಶಾಸನ ಸಂಶೋಧನೆಯ ತಜ್ಞರು ಕ್ರಿ.ಶ. 1917 ರಲ್ಲಿ (M.A.R. 1917, Para III, reproduced in P. 77 & 78 of the annual report for the year 1944) ಈ ತಾಮ್ರಪತ್ರದಲ್ಲಿರುವ ಕ್ರಮ ಮತ್ತು ಒಕ್ಕಣಕೆಯನ್ನು ಇನ್ನಿತರ ನಿಶ್ಚಯಾಂಶಗಳೊಂದಿಗೆ ತಾಳೆ ಮಾಡಿ ಈ ತಾಮ್ರಪತ್ರದ ಪ್ರಾಮಾಣಿಕತೆಯ ಬಗ್ಗೆ ಸಂದೇಹವಿದೆ ಎಂದು ನಿರ್ಣಯಿಸಿದ್ದಾರೆ.

ಈ ವಿವರಗಳನ್ನು ಪುಟ 77ರಲ್ಲಿ ಮುದ್ರಿಸಿದ್ದಾರೆ -

ಶಾಸನ ತೆಲುಗು ಲಿಪಿಯಲ್ಲಿದೆ. ಒಂದೇ ತಾಮ್ರದ ಹಾಳೆಯಾಗಿದೆ. ಒಕ್ಕಣಿಕೆಯಲ್ಲಿ ವಿಜಯನಗರದ ಅರಸ ಕೃಷ್ಣದೇವರಾಯನು ಪ್ರತಾಪರುದ್ರನನ್ನು ಸೋಲಿಸಿ ಉದಯಗಿರಿ ಕೋಟೆಯನ್ನು ಗೆದ್ದು ವಶಪಡಿಸಿಕೊಂಡ ಸಮಯದಲ್ಲಿ ಶ್ರೀವಿಬುಧೇಂದ್ರರಿಗೆ ಶ್ರೀದಿಗ್ವಿಜಯರಾಮದೇವರ ಪೂಜೆಗಾಗಿ ಹಾಗೂ ಮಠದಲ್ಲಿ ದೀಪ ಹಚ್ಚುವುದಕ್ಕಾಗಿ ಚಿಕ್ಕಕುಳ್ಳಿ ಗ್ರಾಮದಲ್ಲಿ ಭೂಮಿಯನ್ನು ಶಕ 1412- ಸಾಧಾರಣ ಸಂ||ದಲ್ಲಿ ದಾನವನ್ನಾಗಿ ಕೊಟ್ಟಿರುವ ತಾಮ್ರಪತ್ರವಾಗಿದೆ.

**ತಜ್ಞರು ಪರೀಕ್ಷೆ ಮಾಡಿ ದಾಖಲಿಸಿರುವ ಮುಖ್ಯಾಂಶಗಳು :**

1. ವಿಜಯನಗರದ ಅರಸ ಕೃಷ್ಣದೇವರಾಯನು ದಾನ ಮಾಡಿ ಬರೆದುಕೊಟ್ಟಿರುವ ತಾಮ್ರ ಪತ್ರಗಳೆಲ್ಲವೂ ನಾಗರೀ ಲಿಪಿಯಿಂದ ಕೂಡಿದ್ದಾಗಿದೆ. ಆದರೆ ಈ ಪತ್ರ ತೆಲಗು ಲಿಪಿಯಲ್ಲಿದೆ.
2. ಈ ಎಲ್ಲಾ ದಾನಪತ್ರಗಳು ಮೂರು ಹಾಳೆಗಳಿಂದ ಕೂಡಿದ್ದಾಗಿದೆ. ಆದರೆ ಇದು ಒಂದೇ ಪತ್ರವಾಗಿದೆ.
3. ಕೃಷ್ಣದೇವರಾಯನು ಸಿಂಹಾಸನವನ್ನೇರಿದ್ದು ಕ್ರಿ.ಶ. 1509ರಲ್ಲಿ. ಅವನು ಉದಯಗಿರಿ ಕೋಟೆಯನ್ನು ಗೆದ್ದಿರುವುದು ಕ್ರಿ.ಶ. 1513ರಲ್ಲಿ. ಆದರೆ ಈ ಪತ್ರ ತಯಾರಾಗಿರುವುದು ಶಕ 1412 ಅಂದರೆ ಕ್ರಿ.ಶ. 1490ರಲ್ಲಿ. (ಅಂದರೆ ಕೃಷ್ಣದೇವರಾಯ ರಾಜನಾಗುವುದಕ್ಕಿಂತ 19 ವರ್ಷ ಮೊದಲು)
4. ಎಲ್ಲ ದಾನಪತ್ರಗಳಲ್ಲಿ ದಾಖಲಾಗಿರುವ ಕ್ರಮದಲ್ಲಿ ದಾನ ಕೊಟ್ಟ ಪಕ್ಷ, ತಿಥಿ, ವಾರ ಇತ್ಯಾದಿಗಳು ಈ ಪತ್ರದಲ್ಲಿಲ್ಲ.

ಈ ಕಾರಣಗಳಿಂದಾಗಿ – ಪತ್ರದ ಪ್ರಾಮಾಣಿಕತೆಯ ಬಗ್ಗೆ ಸಾಕಷ್ಟು ಸಂದೇಹವಿದೆ ಎಂದು ತಿಳಿಸುತ್ತಾ – ಇತರ ಸನ್ನಿವೇಶಗಳೂ ಸಂದೇಹಕ್ಕೆ ಪುಷ್ಟಿ ಕೊಡುತ್ತವೆ ಎಂದೂ ತಜ್ಞರು (ಕ್ರಿ.ಶ. 1917 ರಲ್ಲಿ) ಬರೆದಿದ್ದಾರೆ.

ರಾಯರ ಮಠದ ಪ್ರಾಚೀನ ದಾಖಲೆಗಳಲ್ಲಿ (ಮೂ.ಮಠೇ. ಪು 133) ಸ್ಪಷ್ಟವಾಗಿ ಶ್ರೀವಿಬುಧೇಂದ್ರರು ಪರಾಭವ ಸಂ|| ದ ಮಾರ್ಗಶಿರದಲ್ಲಿ ವೃಂದಾವನಸ್ಥರಾಗಿದ್ದಾರೆ ಎಂದಿದೆ. ತಾಮ್ರಪತ್ರದಲ್ಲಿರುವ ಶಕ 1412 ಆಗಿದೆ. (ಸಾಧಾರಣ ಸಂ||) ಆದುದರಿಂದ ದಾನದ ವರ್ಷ ಶಕ 1412ಕ್ಕಿಂತ ಮುಂಚಿತವಾಗಿಯೇ ಅಂದರೆ ಶಕ 1348(ಕ್ರಿ.ಶ.1426)ರಲ್ಲಿ ಶ್ರೀವಿಬುಧೇಂದ್ರರು ವೃಂದಾವನಸ್ಥವಾಗಿದ್ದಾರೆ.

ದಾನದ ತಾಮ್ರಪತ್ರದಲ್ಲಿಯ ಶಕ 1412ರಲ್ಲಿ (ಕ್ರಿ.ಶ. 1490-91) ದಾನ ಕೊಟ್ಟ ಕೃಷ್ಣದೇವರಾಯನು (Donor) ಸಿಂಹಾಸನಕ್ಕೆ ಬಂದಿರಲಿಲ್ಲ ಮತ್ತು ಯಾರಿಗೆ ದಾನ ಕೊಡಲ್ಪಟ್ಟಿತೋ (Donee) ಅವರು ಜೀವಂತವಾಗಿರಲಿಲ್ಲ. ಹಾಗೆಯೇ ಉದ್ದೇಶ : ಉದಯಗಿರಿ ಕೋಟೆ ವಶ – ಇದು ಕ್ರಿ.ಶ. 1513 – ಇದೂ ಸಹ ನಂತರದ ಕಾಲವಾಗಿದೆ. ಇದರ ಜೊತೆಗೆ ಮೇಲೆ ತಿಳಿಸಿರುವ ತಾಳೆ ನೋಡಬೇಕಾಗಿರುವ ಅಂಶಗಳಲ್ಲೂ ಏಕತೆ ಇಲ್ಲ.

ಆದುದರಿಂದ ಶಕ 1412 ರಲ್ಲಿ ರಚಿತವಾದ ತಾಮ್ರಪತ್ರವು ದಾಖಲೆ ಎಂದೆನಿಸಲಾರದು. ಈ ತಾಮ್ರಪತ್ರದ ಬಗೆಗೆ ಗು.ಚ. (ಇಂಗ್ಲೀಷ್ 2008) ನಲ್ಲಿ ತಿಳಿಸಿರುವ ಸಮಾಧಾನದಲ್ಲಿ ಮೇಲಿನ ಎಲ್ಲ ಅಂಶಗಳನ್ನು ಪರಿಗಣಿಸಿಲ್ಲ.

ಸಂಶೋಧನೆ ಮಾಡಿದ ತಜ್ಞರು ಇನ್ನೊಂದು ಮಹತ್ತರವಾದ ಅಂಶವನ್ನು ದಾಖಲಿಸುತ್ತ ''ಪತ್ರದ ಒಕ್ಕಣೆಯಲ್ಲಿರುವ ದಿಗ್ವಿಜಯ ರಾಮಮೂರ್ತಿಯು ಉತ್ತರಾದಿಮಠದಲ್ಲಿದೆ ಎಂದೇ ಹೇಳಲ್ಪಟ್ಟಿದೆ. ಈ ಸನ್ನಿವೇಶದಿಂದ ಈ ಪತ್ರದಲ್ಲಿ ಉಲ್ಲೇಖವಾಗಿರುವ ಬಗ್ಗೆ ಏನನ್ನೂ ಹೇಳುವುದಕ್ಕೆ ಆಗುವುದಿಲ್ಲ.'' ಎಂದೂ ಹೇಳಿದ್ದಾರೆ.

ಈ ಎಲ್ಲ ಕಾರಣಗಳಿಂದ ಮೇಲ್ಕಂಡ ತಾಮ್ರಪತ್ರವಾಗಲೀ ಅಥವಾ ಒಕ್ಕಣೆಯಾಗಲೀ ನಿರ್ಣಯಾತ್ಮಕ ಸಾಕ್ಷ್ಯಾಧಾರವಾಗುವುದಿಲ್ಲವೆಂದೇ ನಿಶ್ಚಯವಾಗುತ್ತದೆ. ದಾಖಲೆಯು ಆಧಾರ ವರ್ಗದ ಪಟ್ಟಿಯಲ್ಲಿ ಸೇರಿಸಬೇಕಾದರೆ, ದಾಖಲೆಯ ಸ್ವರೂಪ, ದಾಖಲೆಯ ಕಾಲಮಾನ ಇವುಗಳು ಇನ್ನಿತರ ದಾಖಲಾತಿಗಳಿಗೆ ತಾಳೆಯಾಗಬೇಕು. ಇಲಾಖೆಯ ಸಂಶೋಧನೆಯ ತಜ್ಞರು ಪ್ರಮಾಣವೆಂದು ವರ್ಗೀಕರಿಸುವುದಕ್ಕೆ ಅರ್ಹತೆಯುಳ್ಳದ್ದು ಎಂದು ಮಾನ್ಯ (Certify) ಮಾಡಿರಬೇಕು. ಶಾಸನ ತಜ್ಞರು ಕಾರಣಗಳನ್ನು ವಿವರಿಸಿ, ದಾಖಲೆಯು ಸಂಶಯಾತ್ಮಕ ಎಂದು ನಿರ್ಣಯ ಮಾಡಿದರೆ ಅದನ್ನು ಆಧಾರ ವರ್ಗದಲ್ಲಿ ಸೇರಿಸಬಾರದು.

ಕ್ರಿ.ಶ. 1917ರ ರಿಪೋರ್ಟಿನ ಪ್ರತಿಯನ್ನು ಮುಂದಿನ ಪುಟದಲ್ಲಿ ಕೊಡಲಾಗಿದೆ.

ಇಷ್ಟೆಲ್ಲಾ ಬಲವತ್ತರ ಕಾರಣಗಳಿದ್ದರೂ ಶ್ರೀರಾಯರ ಮಠದವರು ಮುಖ್ಯಾಂಶಗಳನ್ನು ಮುಚ್ಚಿಟ್ಟು, ಕೃತ್ರಿಮವಾದದ್ದನ್ನು ದಾಖಲೆಯ ವರ್ಗಕ್ಕೆ ಸೇರಿಸಿ, ಮುಗ್ಧಜನರನ್ನು ವಂಚಿಸುತ್ತಿದ್ದಾರೆ.

ಈ ವಿಮರ್ಶೆಯಿಂದ ದಿಗ್ವಿಜಯರಾಮಪ್ರತಿಮೆಯು ಶ್ರೀವಿಬುಧೇಂದ್ರರಲ್ಲಿತ್ತು ಎಂಬ ಬರಹ ಸುಳ್ಳು ಎಂದು ನಿರ್ಣಯವಾಗುತ್ತದೆ.

## ದಿಗ್ವಿಜಯರಾಮಪ್ರತಿಮೆಯ ಬಗ್ಗೆ ನಿರಾಧಾರ ಕಲ್ಪನೆ

''ಗೋಪೀಚಂದನದ ಗಡ್ಡೆಯಲ್ಲಿ ಶ್ರೀಕೃಷ್ಣನೊಡನೆ ದೊರಕಿದ್ದ ರಜತಮಯ ದಶಾವತಾರ ಪೀಠದ ಮೇಲೆ ಶ್ರೀಮದಾಚಾರ್ಯರು ಸ್ವಹಸ್ತದಿಂದ ಸುಂದರವಾದ ರಜತಮಯ ಶ್ರೀರಾಮಚಂದ್ರನನ್ನು ನಿರ್ಮಿಸಿ ಶ್ರೀದಿಗ್ವಿಜಯರಾಮ ಎಂಬ ಹೆಸರಿನಿಂದ ಪೂಜಿಸಿದರು'' ಎಂಬುದಾಗಿ ಶ್ರೀರಾಜಾ ಎಸ್.ಗುರುರಾಜಾಚಾರ್ಯರು ತಮ್ಮ ಕಲಿಯುಗ ಕಲ್ಪತರು ಪುಸ್ತಕದ ಪುಟ 30ರಲ್ಲಿ ಬರೆದಿದ್ದಾರೆ.

ಇದು ಎಂತಹ ಕಲ್ಪನೆ.! ಗೋಪೀಚಂದನ ಗಡ್ಡೆಯಲ್ಲಿ ಉಡುಪಿ ಶ್ರೀಕೃಷ್ಣನ ಜೊತೆ ದಶಾವತಾರದ ಪೀಠವೊಂದು ಇತ್ತು. ಅದರ ಮೇಲೆ ಆಚಾರ್ಯರು ರಜತರಾಮನನ್ನು ನಿರ್ಮಿಸಿದರೆಂಬ ಉಲ್ಲೇಖ ಎಲ್ಲಾದರೂ ಉಂಟೇ? ಇದಕ್ಕೆ ಆಧಾರವೇನು? ಶ್ರೀವಿಜಯದಾಸರದ್ದೆಂದು ಹೇಳಿಕೊಳ್ಳುವ ದಿಗ್ವಿಜಯರಾಮ ಸುಳಾದಿಯಲ್ಲಿ ಗೋಪಿಚಂದನಗಡ್ಡೆಯಲ್ಲಿದ್ದ ದಶಾವತಾರ ಪೀಠದ ಬಗ್ಗೆ ಯಾಕೆ ಉಲ್ಲೇಖವಿಲ್ಲ? ಪಾಪ ! ಶ್ರೀವಿಜಯದಾಸರಿಗೆ ಈ ವಿಷಯ ಗೊತ್ತಿರಲಿಲ್ಲವೆಂದು ಕಾಣುತ್ತದೆ. ಶ್ರೀವಿಜಯದಾಸರಿಗೆ ತಿಳಿಯದ ಈ ಎಲ್ಲ ವಿಷಯಗಳು ದಿ.ರಾಜಾ.ಎಸ್. ಗುರುರಾಜಾಚಾರ್ಯರಿಗೆ ತಿಳಿದ ಬಗೆ ಹೇಗೆ?

ಬೇಡ, ಈ ಗೋಪೀಚಂದನದೊಳಗಿಂದ ಆಗಮಿಸಿದ ದಶಾವತಾರ ಪೀಠದ ಬಗ್ಗೆ ಅರ್ಚಾಗತಿಕ್ರಮ ಏಕೆ ಉಲ್ಲೇಖ ಮಾಡಿಲ್ಲ. ಶ್ರೀವಾದೀಂದ್ರರದ್ದೆಂದು ಹೇಳಿಕೊಳ್ಳುವ ಈ ಕೃತಿಯಲ್ಲಿ ಆಗತಿಕ್ರಮವನ್ನು ಸರಿಯಾಗಿ ಉಲ್ಲೇಖಿಸಿಲ್ಲವೆಂದಾಯಿತಷ್ಟೇ?

ಇದೆಲ್ಲವೂ ಸ್ವಕಪೋಲಕಲ್ಪಿತಗಳೆನ್ನದೆ ಗತಿ ಇಲ್ಲ.

**ತಜ್ಞರು ಮಾಡಿದ ಕೃಷ್ಣದೇವರಾಯನ ಶಾಸನದ ಅಧ್ಯಯನದ ನಕಲನ್ನು ಮುಂದಿನ ಪುಟದಲ್ಲಿ ನೀಡಲಾಗಿದೆ.**

* * * *

**Back side—**

0 ॥ śrî Virûpaksha ॥0 (in Kannada character)

*Note.*

(*see* M. A. R. 1917, Para 111)

This and the following copper plate records belonging to the Raghavendrasvamy matt at Nanjangud have been noticed by Mr. R. Narasimhachar in M.A.R. 1917. The text and transliteration of those records have now been published with Mr. R. Narasimhachar's note on them.

This copper plate inscription consists of only one plate measuring 15" by 10½" engraved in Telugu characters. After invocation of Sambhu, the Boar incarnation of Vishṇu and Gaṇapati in three seperate verses, the record proceeds to give the Puraṇic genealogy from the Moon to Turvasu. Then the pedigree of Krishṇa Dēva-Rāya is given thus:—In the line of Turvasu was born Tirumala, husband of Dēvaki; his son was Īśvara, husband of Bukkamā; his son was Narasimha; his son Krishṇa-Rāja. We are then told that in the month of Vaiśākha of the year Sādhāraṇa corresponding to the Śaka year reckoned by the eyes, the moon, the Vēdas and the earth (1412) on the bank of the Krishṇavēnī, the rājādhirāja raja-paramēśvara vīrapratāpa Krishṇa-Dēva Rāja, son of the lord of the Kshatriyas Narasimha-mahīpati, granted, on the happy occasion of the achievement of victory in battle over Pratāpa-Rudra and the capture of his favourite fort Udayagiri, for the welfare of his ancestors, himself and posterity, the village Chikka-Kūḷḷi consisting of two *khāris* of land situated in Beḷadoṇe dēśa, at the holy confluence of the Krishṇavēṇi and the Bhīmarathi, with all the usual rights, at the time of the worship of Digvijaya Rāma, to the *paramahaṃsa parivrājakāchārya, padavākya pramāṇābdhi-pārīṇa Vaishṇava-siddhānta sthāpaka, sarvatantra-svatantra*, Vibudhēndra-yatīndra, disciple of Rāmachandra who was the spiritual son (*Karakamala-sanjāta*) of Vāgīśa-yōgi. The grant was made by the king in the company of his queens, ministers, ṛitviks, purōhitas and court paṇdits in order to provide for the daily gifts of food, the worship of the god Rāmachandra and the maintenance of perpetual lamps in the maṭha. The village was to be enjoyed by the svāmi and his successors in perpetuity. Its boundaries are given thus—to the east Honniṭṭige and Bommanahāḷu, to the south Khānāpura, to the west Hire-Kūḷḷi and to the north Koḷḷūru and Modarakallu. By order of the king the grant was engraved by Mangaṇāchārya, son of Vīraṇa. The number of verses in the inscription is given as 33. Then follow five usual final verses, and the signature of the King-śrī Vīrūpāksha in Kannaḍa characters. The figure of a boar, the Vijayanagar crest, is carved at the bottom of the plate. (NOTE) REPORT!

All the copper grants of this king that have been hitherto met with in Mysore are in Nāgari characters. 2 They generally consist of 3 plates. But the present grant which consists of only one plate, is engraved in Telugu characters Further the date given corresponds to 1490 A. D. which is 3 about 19 years early for this king seeing that he came to the throne only in 1509. From the other records of this king we learn that he captured Udayagiri in 1513 A. D. 4 but the present record leads us to suppose that this event took place in 1490. 5 The omission of the *paksha, tithi* and *vāra* is also unusual. These circumstances raise a reasonable doubt as to the genuineness of the plate. 7 There is also another circumstance to be considered. Two images of Rāma are mentioned in connection with Madhva maṭhas: Digvijaya Rāma named in this record is the one which is said to have been consecrated by Madhvāchārya and worshipped by him, the other image named Mūla-Rāma, is the one which is said to have been acquired by Narahari-tīrtha, disciple of

78

Madhvāchārya. It is also said that the former is in the possession of the Uttarādi maṭha. If this is true, its mention in the present record is inexplicable.

ಕ್ರಿ.ಶ. 1917ರಲ್ಲಿ ಮೈಸೂರು ಸರಕಾರದಿಂದ ಪ್ರಕಟಿತವಾದ ಶ್ರೀಕೃಷ್ಣದೇವರಾಯನ ಶಾಸನದ ವಿಶ್ಲೇಷಣೆ (M.A.R. 1917, Para III, re-produced in P. 77 & 78 of the annual report for the year 1944)

# ವಾಸಿಷ್ಠೋತ್ತರರಾಮಾಯಣ ಹಸ್ತಪ್ರತಿಯ ವಿಮರ್ಶೆ

ಉತ್ತರಾದಿಮಠದ ''ಸಸೀತಾಮೂಲರಾಮಾರ್ಚಾ'' ಕೃತಿಯಲ್ಲಿ ಶ್ರೀಮೂಲರಾಮನ ವಿಷಯಕ್ಕೆ ಸಂಬಂಧಪಟ್ಟ ವಾಸಿಷ್ಠರಾಮಾಯಣದ ಕೆಲವು ಶ್ಲೋಕಗಳನ್ನು ಮುದ್ರಿಸಿದ್ದಾರೆ. ಅನುಬಂಧದಲ್ಲಿ ಅದರ ಹಸ್ತಪ್ರತಿಯ ಒಂದು ನಕಲನ್ನೂ ಛಾಪಿಸಿದ್ದಾರೆ. ಅದಕ್ಕೆ ಉತ್ತರರೂಪವಾಗಿ ಮೂ.ಮಠೇ ಪುಸ್ತಕದ ಪುಟ 131 ರಲ್ಲಿ ''ಶ್ರೀವಾಸಿಷ್ಠರಾಮಾಯಣವು ಅದ್ವೈತಪರವಾಗಿದ್ದು ಅದರಲ್ಲಿ ಶ್ರೀಮೂಲರಾಮನ ವಿಚಾರವು ಬಂದಿರುವುದಿಲ್ಲ. ನಮ್ಮ ಪೂರ್ವೀಕರ ಸಂಗ್ರಹದಲ್ಲಿರುವ ಶ್ರೀವಾಸಿಷ್ಠೋತ್ತರರಾಮಾಯಣದಲ್ಲಿ ಶ್ರೀಮೂಲರಾಮನ ವಿಚಾರವು ಬಂದಿರುವುದು ಗಮನಾರ್ಹ ಹಾಗೂ ಇದರಲ್ಲಿ ಭೀಮಕವಿ ಉಕ್ತವಾದ ಮತ್ತು ಉತ್ತರಾದಿಮಠದ ಸೀತಾಪ್ರತಿಮೆಯ ಲಕ್ಷಣಗಳ ಉಲ್ಲೇಖವಿಲ್ಲದಿರುವುದು ಗಮನಿಸಬೇಕಾದ ಅಂಶ. ಅವರು ಮುದ್ರಿಸಿರುವ ವಾಸಿಷ್ಠರಾಮಾಯಣವು ಅನುಮಾನಾಸ್ಪದವಾಗಿದೆ'' ಎಂಬ ಕೆಳಬರಹದೊಂದಿಗೆ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯೊಂದನ್ನು ಆಧಾರವಾಗಿ ಛಾಪಿಸಿದ್ದಾರೆ. ಅದರ ವಿಮರ್ಶೆ ಇಲ್ಲಿದೆ.

ಈ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯ ಬಗ್ಗೆ ವಿಮರ್ಶೆ ಮಾಡುವ ಮೊದಲು ಕೆಲವು ಮಾತುಗಳು.

- ಉತ್ತರಾದಿಮಠದವರು ಮುದ್ರಿಸಿರುವ ವಾಸಿಷ್ಠರಾಮಾಯಣ ಯಾವ ಆಧಾರದ ಮೇಲೆ ಅನುಮಾನಾಸ್ಪದವಾಗಿದೆ? ಅದಕ್ಕೆ ಯಾವುದೇ ಕಾರಣಗಳನ್ನು ನೀಡಿಲ್ಲ. ಯಾವ ಯುಕ್ತಿಗಳನ್ನೂ ನೀಡದೆ ಅನುಮಾನಾಸ್ಪದವಾಗಿದೆ ಎಂಬುದಾಗಿ ತಾವೇ ನಿರ್ಣಯವನ್ನು ಮಾಡಿ ಹೇಳಿದ್ದಾರೆ. ಇದು ವಿಮರ್ಶೆಯಾಗುವುದಿಲ್ಲ. ಸಸೀತಾಮೂಲರಾಮಾರ್ಚಾದಲ್ಲಿ ವಾಸಿಷ್ಠರಾಮಾಯಣದ ಹಸ್ತಪ್ರತಿಯನ್ನು ಛಾಪಿಸಿದ್ದಾರೆ. ಅದರಲ್ಲಿ ಶ್ರೀಮೂಲರಾಮನ ವಿಷಯವೂ ಬಂದಿದೆ. ಆ ಹಸ್ತಪ್ರತಿಯಲ್ಲಿ ಅಧ್ಯಾಯಗಳ ಸಂಖ್ಯೆ ಇತ್ಯಾದಿಗಳನ್ನು ಸ್ಪಷ್ಟವಾಗಿ ನಮೂದಿಸಿದ್ದಾರೆ. ಆದ್ದರಿಂದ ಇದು ನಂಬಲರ್ಹವಾದ ಹಸ್ತಪ್ರತಿಯೇ ಆಗಿದೆ. ಹಸ್ತಪ್ರತಿಯ ಬಗ್ಗೆ ಅನುಮಾನಕ್ಕೆ ಅವಕಾಶ ಇಲ್ಲ.
- ಇನ್ನು ಮೂ.ಮಠೇ ಲೇಖಕರು ''ವಾಸಿಷ್ಠರಾಮಾಯಣ'' ಎಂಬ ಗ್ರಂಥವೇ ಅನುಮಾನಾಸ್ಪದ. ಅದು ಅದ್ವೈತಪರವಾದ ಗ್ರಂಥ. ಪ್ರಾಮಾಣಿಕ ಕೃತಿಯಲ್ಲ ಎಂದು ವಾದಿಸುವುದಾದರೆ ಅದೂ ಸರಿಯಲ್ಲ. ಅದ್ವೈತಪರವಾಗಿರುವ ವಾಸಿಷ್ಠರಾಮಾಯಣ ಒಂದು ಬೇರೆಯೇ ಇದೆ. ಅದು ಯೋಗವಾಸಿಷ್ಠ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ. ಇದು ವಾಸಿಷ್ಠರಾಮಾಯಣ. ಇದು ಅನೇಕ ಬಾರಿ ಮುದ್ರಣವೂ ಆಗಿದೆ. ಉತ್ತರಾದಿಮಠದವರು ಛಾಪಿಸಿರುವ ವಾಸಿಷ್ಠರಾಮಾಯಣ ಅನುಮಾನಾಸ್ಪದವಾಗಿರುವುದಾದರೆ ಶ್ರೀರಾಯರ ಮಠದ ಹಿರಿಯರಾದ ದಿ.ಎಚ್.ಕೆ. ವೇದವ್ಯಾಸಾಚಾರ್ಯರು, ದಿ. ರಾಜಾ ಎಸ್. ಗುರುರಾಜಾಚಾರ್ಯರು ತಮ್ಮ ಪುಸ್ತಕಗಳಾದ ''ಗುರುಚರಿತೆ'' ''ಶ್ರೀಮೂಲರಾಮ'' ಇತ್ಯಾದಿ ಗ್ರಂಥಗಳಲ್ಲಿ (ಅವರಿಂದಲೇ ಅಧಿಕೃತವಾಗಿ ಪ್ರಕಟಿಸಲ್ಪಟ್ಟಿವೆ) ಉದಾಹರಿಸಿರುವ ವಾಸಿಷ್ಠರಾಮಾಯಣದ ಶ್ಲೋಕಗಳು ಎಲ್ಲಿಯವು? ಅವರೆಲ್ಲರೂ ವಾಸಿಷ್ಠರಾಮಾಯಣವನ್ನೇ ಪ್ರಮಾಣ ಎಂಬುದಾಗಿ ಸ್ವೀಕರಿಸಿದ್ದಾರಲ್ಲವೇ?
- ಇನ್ನೂ ಆಶ್ಚರ್ಯವೆಂದರೆ, ವಾಸಿಷ್ಠರಾಮಾಯಣ ಅದ್ವೈತಪರ, ಅನುಮಾನಾಸ್ಪದ ಎಂದು ಆರೋಪಿಸಿರುವ ಮೂ.ಮಠೇ ಲೇಖಕರು ತಾವೇ ಪುಟ 7 ರಲ್ಲಿ ವಾಸಿಷ್ಠರಾಮಾಯಣದ ವಚನ ಎಂಬುದಾಗಿ

''ಸುರಾಶ್ಚ ಯತಯೋ...'' ಎಂಬ ಶ್ಲೋಕವನ್ನು ಉದಾಹರಿಸುತ್ತಾರೆ. ಈ ವಾಸಿಷ್ಠರಾಮಾಯಣ ಎಲ್ಲಿಂದ ಬಂತು? ಅವರ ಪೂರ್ವಿಕರು ಸಂಗ್ರಹಿಸಿದ ವಾಸಿಷ್ಠೋತ್ತರರಾಮಾಯಣ ಎಲ್ಲಿ ಹೋಯಿತು? ಇದು ಕಪಟವಲ್ಲವೇ?

ಇನ್ನು ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯ ಬಗ್ಗೆ ಸ್ವಲ್ಪ ವಿಮರ್ಶೆ ಮಾಡೋಣ–

ಮೂ.ಮತೇ. ಪುಸ್ತಕದಲ್ಲಿ ಮುದ್ರಿಸಿರುವ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯಲ್ಲಿ (ಒಂದೇ ಪುಟ) ಕೆಳಗಿನ ಶ್ಲೋಕ ಕಂಡು ಬರುತ್ತದೆ -

**ಸ್ವಯಂವ್ಯಕ್ತಂ ಮಹೀಪಾಲ ಬ್ರಹ್ಮಣೋ ದೇವತಾರ್ಚನಮ್ ।**
**ಇಕ್ಷ್ವಾಕುಪ್ರಮುಖ್ಯೈಃ ಸಮ್ಯಕ್ ಪೂಜಿತಂ ಮಾನವೋತ್ತಮೈ: ॥ 23 ॥**

ಈ ಶ್ಲೋಕವು ಮೂಲರಾಮಪ್ರತಿಮೆಯ ಬಗ್ಗೆ ಹೇಳಲ್ಪಟ್ಟಿದೆ. ಇದರಲ್ಲಿ ಸ್ಪಷ್ಟವಾಗಿ ಶ್ರೀಮೂಲರಾಮ ಪ್ರತಿಮೆಯು ''ಸ್ವಯಂವ್ಯಕ್ತ'' ಎಂದು ಹೇಳಿದ್ದಾರೆ.

**ವಾಚಕರೇ ! ಗಮನಿಸಿ...**

ಮೂ.ಮತೇ ಪುಸ್ತಕದ ಪುಟ 78ರಿಂದ 81ರವರೆಗೆ ಲೇಖಕರು ''ಮೂಲರಾಮನ ಪ್ರತಿಮೆಯು ಸ್ವಯಂವ್ಯಕ್ತವೇ?'' ಎಂಬ ಮತ್ತು ''ಸ್ವಯಂವ್ಯಕ್ತವೆಂದರೇನು?'' ಎಂಬ ಎರಡು ಉಪಶೀರ್ಷಿಕೆಗಳ ಅಡಿಯಲ್ಲಿ ಶ್ರೀಮೂಲರಾಮನ ಪ್ರತಿಮೆಯು ಸ್ವಯಂವ್ಯಕ್ತವಲ್ಲ. ಅದು ವಿಶ್ವಕರ್ಮನಿಂದ ನಿರ್ಮಿತ ಎಂದು ಸಾಧಿಸಲು ಶ್ರಮಪಟ್ಟಿದ್ದಾರೆ. ಇದಕ್ಕೆ ಶ್ರೀವಿಜಯದಾಸರ ಸುಳಾದಿ ಹಾಗೂ ಅರ್ಚಾಗತಿಕ್ರಮದ ವಾಕ್ಯಗಳನ್ನೂ ಉದಾಹರಿಸಿ ಸಮರ್ಥಿಸಿಕೊಳ್ಳುತ್ತಾ ''ಸ್ವಯಂವ್ಯಕ್ತ'' ಎಂಬ ಶಬ್ದಕ್ಕೆ ಅಪ್ರಸಕ್ತ ವಿಕಲ್ಪಗಳನ್ನು ಮಾಡಿದ್ದಾರೆ.

ಆದರೆ, ಅವರೇ ಆಧಾರವೆಂದು ಛಾಪಿಸಿರುವ (ಮೂ.ಮತೇ ಪುಟ 131) ಅವರ ಪೂರ್ವಿಕರ ಸಂಗ್ರಹವಾದ ವಾಸಿಷ್ಠೋತ್ತರರಾಮಾಯಣದಲ್ಲಿ ಶ್ರೀಮೂಲರಾಮ ''ಸ್ವಯಂವ್ಯಕ್ತ'' ಎಂದು ಸ್ಪಷ್ಟವಿದೆ. ತಾವೇ ಕೊಡುವ ಆಧಾರಗಳಲ್ಲಿ ಪರಸ್ಪರ ವಿರೋಧಗಳಿದ್ದರೂ ಗಮನಿಸದೆ ಮುದ್ರಿಸಿ ಭಾರೀ ಭಾರೀ ಆಧಾರಗಳನ್ನು ಕೊಟ್ಟಿದ್ದೇವೆ ಎಂಬ ಭಾವನೆ ಸಜ್ಜನರಿಗೆ ಮೂಡಿಸಿ ಮೋಸ ಮಾಡುವ ಇಂತಹ ಪ್ರವೃತ್ತಿಗೆ ಏನೆನ್ನಬೇಕು?

ಅವರ ಪೂರ್ವೀಕರದ್ದಾದ ಅರ್ಚಾಗತಿಕ್ರಮ ಪ್ರಮಾಣವೋ?, ವಾಸಿಷ್ಠೋತ್ತರರಾಮಾಯಣ ಪ್ರಮಾಣವೋ?, ಗುರುಚರಿತೆ ಹಾಗು ಶ್ರೀಮೂಲರಾಮ ಪುಸ್ತಕಗಳಲ್ಲಿ ಅವರ ಹಿರಿಯರು ಅಧಿಕೃತವಾಗಿ ಉದಾಹರಿಸಿರುವ ವಾಸಿಷ್ಠರಾಮಾಯಣ ಪ್ರಮಾಣವೋ? ದೇವರೇ ಬಲ್ಲ!. ಹೀಗಾಗಿ ವ್ಯಾಹತಭಾಷಿಗಳಾದ ಇವರ ಮಾತುಗಳು ವಿಮರ್ಶೆಗೂ ಅನರ್ಹವಾಗಿವೆ ಎನ್ನದೆ ಗತಿಯಿಲ್ಲ.

ರಾಯರ ಮಠದವರಿಂದ ಪ್ರಕಾಶಿತವಾದ ''ಶ್ರೀಮೂಲರಾಮ'' ಪುಸ್ತಕದಲ್ಲಿ ವಾಸಿಷ್ಠರಾಮಾಯಣದಿಂದ ಉದ್ಧೃತವೆಂದು ಹೇಳಿಕೊಳ್ಳುವ ಮೂಲರಾಮನ ಪ್ರತಿಮೆಯ ಲಕ್ಷಣಗಳನ್ನು ತಿಳಿಸುವ ಶ್ಲೋಕಗಳನ್ನು ಮುದ್ರಿಸಿದ್ದಾರೆ. ಅವು ಹೀಗಿವೆ-

**ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್ ।**
**ಸರ್ವಲಕ್ಷಣಸಂಪನ್ನಾಂ ಪಾದೇ ದ್ವಿರದಸಂಯುತಾಮ್ ॥**

**ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ।**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ॥**

'ಶ್ರೀಮೂಲರಾಮ' ಪುಟ 3, ಪ್ರಕಾಶನ : ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

ಆಶ್ಚರ್ಯವೆಂದರೆ 'ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ' ಎಂಬ ಶ್ಲೋಕದ ಪಾದವು ಅವರ ಅಧಿಕೃತ ಲೇಖಕರಾದ ದಿ. ರಾಜಾ. ಎಸ್. ಗುರುರಾಜಾಚಾರ್ಯರು ಪ್ರಮಾಣವೆಂದು ಅಂಗೀಕರಿಸಿರುವ ವಾಸಿಷ್ಠರಾಮಾಯಣದ ಮುದ್ರಿತಪ್ರತಿಯಲ್ಲಾಗಲೀ, ಹಸ್ತಪ್ರತಿಯಲ್ಲಾಗಲೀ ಇಲ್ಲ. ಮತ್ತು ಅವರ ಪೂರ್ವೀಕರ ಸಂಗ್ರಹ ಎಂದು ಮೂ.ಮ. ಪುಸ್ತಕದಲ್ಲಿ ಛಾಪಿಸಿರುವ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯಲ್ಲೂ ಇಲ್ಲದಿರುವುದು ಆಶ್ಚರ್ಯ. ಮೂಲದಲ್ಲಿಲ್ಲದ ಶ್ಲೋಕವನ್ನು ಬೇಕಾದಾಗ ಸೇರಿಸುವುದು, ಬೇಡವಾದಾಗ ಕಿತ್ತೊಗೆಯುವುದು, ಇದು ಅವರ ಅಪ್ರಾಮಾಣಿಕತೆಯಲ್ಲದೇ ಇನ್ನೇನು ?

ಇದೇ ಹಸ್ತಪ್ರತಿಯಲ್ಲಿ ಕಂಡುಬರುವ ಮತ್ತೊಂದು ಶ್ಲೋಕ ಹೀಗಿದೆ -

**ಪ್ರತಿಮಾ ಸ್ವಸ್ಯ ಸಂಪ್ರೀತ್ಯಾ ಬಹುಮಾನಪುರಃಸರಮ್ ।**
**ಸರ್ವಲಕ್ಷಣಸಂಪನ್ನಾ ಪಾದೇ ಬಿರದಸಂಯುತಾ** **॥31॥**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ।**

ಈ ಶ್ಲೋಕವು ಮೂಲರಾಮನ ಪ್ರತಿಮೆಯ ಲಕ್ಷಣವನ್ನು ತಿಳಿಸುತ್ತಾ 'ಪಾದೇ ಬಿರದಸಂಯುತಾ' ಬಿರದದಿಂದ ಕೂಡಿದ ಪಾದ ಎಂಬುದಾಗಿ ತಿಳಿಸುತ್ತಿದೆ.

**ವಾಚಕರೇ ! ಮತ್ತೆ ಗಮನಿಸಿ, ಮೂ.ಮಠೇ. ಲೇಖಕರು ಪುಟ 48 ರಿಂದ ಪುಟ 51 ರವರೆಗೆ ಉತ್ತರಾದಿಮಠದ ಸ.ಸೀ.ಮೂ ಕೃತಿಯಲ್ಲಿ ಉದಾಹರಿಸಲಾದ ''ಸರ್ವಲಕ್ಷಣಸಂಪನ್ನಾ ಪಾದೇ ದ್ವಿರದ ಸಂಯುತಾ'' ಎಂಬ ವಾಸಿಷ್ಠರಾಮಾಯಣದ ವಾಕ್ಯವನ್ನು ವಿಮರ್ಶೆ ಮಾಡಿದ್ದಾರೆ. ''ಪಾದೇ ದ್ವಿರದಸಂಯುತಾ'' ಎಂದರೇನು? ಎಂಬ ಶೀರ್ಷಿಕೆಯಲ್ಲಿ ತುಂಬಾ ಕಷ್ಟಪಟ್ಟು ''ದ್ವಿರದ'' ಶಬ್ದಕ್ಕೆ ''ಆನೆ'' ಎಂಬ ಪ್ರಸಿದ್ಧವಾದ ಅರ್ಥ ತಿಳಿಸಿಕೊಡಲು ಅನೇಕ ಕೋಶಗಳನ್ನು ಉದಾಹರಿಸಿದ್ದಾರೆ. ''ಪಾದೇ ದ್ವಿರದ'' ಎಂಬುದಕ್ಕೆ ಪಾದೇ=ಪಾದ ಪ್ರದೇಶವಾದ ಪೀಠದಲ್ಲಿ, ದ್ವಿರದ = ಆನೆ ಎಂದು ಅರ್ಥವನ್ನು ಮಾಡಿದ್ದಾರೆ. ರಾಯರಮಠದಲ್ಲಿರುವ ಶ್ರೀರಾಮನ ಪ್ರತಿಮೆಯ ಪಾದ ಪೀಠದಲ್ಲಿ (ಆನೆ ಚಿತ್ರ) ಗಜಚಿಹ್ನೆ ಇದೆ. ಆದ ಕಾರಣ ತಮ್ಮ ಮಠದಲ್ಲಿರುವ ರಾಮನೇ ಮೂಲರಾಮಚಂದ್ರನೆಂದು ಸಾಧಿಸಲು ಪ್ರಯತ್ನ ಪಟ್ಟಿದ್ದಾರೆ. ಈ ವರೆಗೆ ಅವರ ಅಧಿಕೃತ ಲೇಖಕರು ಯಾರೂ ಹೇಳದಿರುವ ''ಪಾದ ಪೀಠದಲ್ಲಿ ಗಜಚಿಹ್ನೆ'' ಎಂಬ ಹೊಸ ವಾದ ಒಂದನ್ನು ಸೃಷ್ಟಿಸಿದ್ದಾರೆ.**

ಆದರೆ ಎಷ್ಟು ಹಾಸ್ಯಾಸ್ಪದವೆಂದರೆ, ಅವರೇ ಆಧಾರವಾಗಿ ಛಾಪಿಸಿರುವ ವಾಸಿಷ್ಠೋತ್ತರ ರಾಮಾಯಣದ ಹಸ್ತಪ್ರತಿಯಲ್ಲಿ ''ಪಾದೇ ಬಿರದಸಂಯುತಾ'' ಎಂದಿದೆಯೇ ಹೊರತು ''ಪಾದೇ ದ್ವಿರದಸಂಯುತಾ''ಎಂಬುದಾಗಿ ಇಲ್ಲವೇ ಇಲ್ಲ! ಬಿರದ ಎಂಬ ಶಬ್ದಕ್ಕೆ ಆನೆ ಎಂಬ ಅರ್ಥ ಎಲ್ಲಿಂದ ತರಬೇಕು? ಬಿರದ ಎಂಬ ಶಬ್ದಕ್ಕೆ ಆನೆ ಎಂಬ ಅರ್ಥ ಇಲ್ಲ. ಆದ್ದರಿಂದ ಮೂ.ಮಠೇ ಲೇಖಕರ''ಪಾದಪೀಠದಲ್ಲಿ ಆನೆ'' ಎಂಬ ಈ ಹೊಸ ವಾದದ ಸೌಧ ಅಡಿಪಾಯವಿಲ್ಲದೇ ಉರಳಿ ಬಿದ್ದಿದೆ.

ಮುಂದಿನ ಪುಟದಲ್ಲಿ ಮೂ.ಮಠೇ ಪುಸ್ತಕದಲ್ಲಿ ಛಾಪಿಸಲಾದ ವಾಸಿಷ್ಠೋತ್ತರ ರಾಮಾಯಣದ ಹಸ್ತಪ್ರತಿಯ ನಕಲನ್ನು ವಾಚಕರ ಅಧ್ಯಯನಕ್ಕಾಗಿ ನೀಡಲಾಗಿದೆ.

पूजितं मानवोत्तमैः ॥ यं पूजयसि देवेशं स मूलरघुपुंगवः ॥ सीतया सहितं मह्यं प्रदेहि पुरुषोत्त
मं ॥ २४ ॥ पूजयेयमहं नित्यं त्वदनुग्रहकाम्यया ॥ यं मे राजा दशरथः श्वशुरो पूजयेच्चिरं ॥ २५ ॥
यत्कारनामकरणं यस्य देवस्य नामतः ॥ तं वरामि नरेन्द्र मम प्युठल्लतः परी ॥ २६ ॥ सीतेति जान
कीमाहुर्भक्ताः सीतापतेः सहि ॥ तं देहि प्रतिमे देव मे सीतारामयोरिह ॥ २७ ॥ सीतारामं पूजयेय
मिति वांछा ममास्ति हि ॥ भक्ताभीष्टप्रदो यस्त्वमतस्त्वां प्रार्थये धुना ॥ २८ ॥ सदा त्वद्दर्शनं म
ह्यं सर्वदा भवति प्रभो ॥ इति प्रार्थितः पुरा देवः सीतया प्रिययातया ॥ २९ ॥ संतुष्टः स तया तस्याः
देवदेवो रघूत्तमः ॥ तस्यै ददौ स प्रसन्नः रघुपुंगवः ॥ ३० ॥ प्रतिमा स्वस्य सीमा बहुमान
पुरःसरं ॥ सर्वलक्षणसंपन्ना पादे बिरदसंयुता ॥ ३१ ॥ ममेयं प्रतिमा देवि यथाहं नात्र संशयः ॥ श्री

'ಶ್ರೀವಾಸಿಷ್ಠರಾಮಾಯಣ'ವು ಅದ್ವೈತಪರವಾಗಿದ್ದು, ಅದರಲ್ಲಿ ಶ್ರೀಮೂಲರಾಮನ ವಿಚಾರವು ಬಂದಿರುವುದಿಲ್ಲ. ನಮ್ಮ ಪೂರ್ವೀಕರ ಸಂಗ್ರಹದಲ್ಲಿರುವ 'ಶ್ರೀವಾಸಿಷ್ಠೋತ್ತರ ರಾಮಾಯಣದಲ್ಲಿ ಶ್ರೀಮೂಲರಾಮ ವಿಚಾರವು ಬಂದಿರುವುದು ಗಮನಾರ್ಹ. ಹಾಗು ಇದರಲ್ಲಿ ಭೀಮಕವಿ ಉಕ್ತವಾದ ಮತ್ತು ಉತ್ತರಾದಿಮಠದ ಸೀತಾಪ್ರತಿಮೆಯ ಲಕ್ಷಣಗಳು ಉಲ್ಲೇಖವಿಲ್ಲದಿರುವುದು ಗಮನಿಸಬೇಕಾದ ಅಂಶ. ಅವರು ಮುದ್ರಿಸಿರುವ ವಾಸಿಷ್ಠ ರಾಮಾಯಣವು ಅನುಮಾನಾಸ್ಪದವಾಗಿದೆ. (ಮೂ.ಮಠೇ ಪುಸ್ತಕ ಪುಟ 131)

ಮೂ.ಮಠೇ ಪುಸ್ತಕದಲ್ಲಿ ಆಧಾರವೆಂದು ಮುದ್ರಿಸಿರುವ ಶ್ರೀ ರಾಯರ ಮಠದ ಪೂರ್ವಿಕರ ಸಂಗ್ರಹದಲ್ಲಿರುವ ವಾಸಿಷ್ಠೋತ್ತರ ರಾಮಾಯಣದ ನಕಲು. ಇದರಲ್ಲಿ ''ಪಾದೇ ದ್ವಿರದಸಂಯುತಾ'' ಎಂದು ಇರದೇ ''ಪಾದೇ ಬಿ(ವಿ)ರದಸಂಯುತಾ'' ಎಂಬ ಪಾಠ ಇರುವುದನ್ನು ಗಮನಿಸಿ.

ಮೂ.ಮಠೇ ಪುಸ್ತಕದಲ್ಲಿ ಆಧಾರವೆಂದು ಮುದ್ರಿಸಿರುವ ಶ್ರೀ ರಾಯರ ಮಠದ ಪೂರ್ವಿಕರ ಸಂಗ್ರಹದಲ್ಲಿರುವ ವಾಸಿಷ್ಠೋತ್ತರ ರಾಮಾಯಣದಲ್ಲಿ 'ಪಾದೇ ದ್ವಿರದಸಂಯುತಾ' ಎಂದು ಇರದೇ 'ಪಾದೇ ಬಿ(ವಿ)ರದಸಂಯುತಾ' ಎಂಬ ಪಾಠ ಇರುವುದನ್ನು ಗಮನಿಸಿದಾಗ ಎದುರಾಗುವ ಅಂಶಗಳು ಹೀಗಿವೆ–

''ಪಾದೇ ಬಿರದಸಂಯುತಾ'' ಎಂದರೇನು?

1. ರಾಯರಮಠದ ಅಧಿಕೃತ ಕೃತಿಗಳಾದ ಗುರುಚರಿತೆ ಹಾಗು ಶ್ರೀಮೂಲರಾಮ ಪುಸ್ತಕಗಳಲ್ಲಿ ಉದಾಹರಿಸಿದ ವಾಸಿಷ್ಠರಾಮಾಯಣದ 'ಪಾದೇ ದ್ವಿರದಸಂಯುತಾ' ಎಂಬ ಪಾಠಕ್ಕೂ ಅವರ ಪೂರ್ವೀಕರ ಸಂಗ್ರಹವಾದ ವಾಸಿಷ್ಠೋತ್ತರರಾಮಾಯಣದ 'ಪಾದೇ ಬಿರದಸಂಯುತಾ' ಎಂಬ ಪಾಠಕ್ಕೂ ವಿರೋಧ ಬಂತಲ್ಲಾ?
2. ''ಬಿರದ'' ಎಂದರೆ ಆನೆಯೇ?
3. ''ಬಿರದ ಶಬ್ದಕ್ಕೆ ಆನೆ ಎಂಬ ಅರ್ಥ ಯಾವ ಕೋಶದಲ್ಲಿದೆ?
4. ಅವರ ಪೂರ್ವೀಕರ ಸಂಗ್ರಹವಾದ ಈ ವಾಸಿಷ್ಠೋತ್ತರರಾಮಾಯಣದಲ್ಲಿ ಸ್ಪಷ್ಟವಾಗಿ ''ಬಿರದ'' ಎಂಬ ಶಬ್ದವಿರುವಾಗ ಸ.ಸೀತಾ.ಮೂಲ ದಲ್ಲಿಯ ವಾಸಿಷ್ಠರಾಮಾಯಣೋಕ್ತ ''ದ್ವಿರದ'' ಶಬ್ದಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟು ''ಆನೆ'' ಚಿಹ್ನೆಗಳು ತಮ್ಮ ರಾಮನ ಪಾದಪೀಠದಲ್ಲಿದೆ ಎಂದು ಹೊಸದಾಗಿ ಸಾಧಿಸಿದ ಉದ್ದೇಶವೇನು?

5. ಮೂ.ಮತೇ ಪುಸ್ತಕದ ಪುಟ 50ರಲ್ಲಿ ''ಪಾದೇ ದ್ವಿರದಸಂಯುತಾ'' ಅಂದರೆ ಪಾದಪ್ರದೇಶವಾದ ಪೀಠದಲ್ಲಿ ಗಜಚಿಹ್ನೆಯನ್ನು (ಆನೆಯ ಚಿತ್ರವನ್ನು) ಎಂದು ಏಕವಚನ ಪ್ರಯೋಗಿಸಿ ಮತ್ತೆ ಮುಂದಿನ ವಾಕ್ಯಗಳಲ್ಲಿ ಪುಟ 51 ರಲ್ಲಿ ''ಶ್ರೀಮೂಲರಾಮನ ಪ್ರತಿಮೆಯ ಪೀಠದಲ್ಲಿ ಆನೆಯ ಚಿತ್ರಗಳು'' ಎಂಬ ಬಹುವಚನ ಪ್ರಯೋಗ ಮಾಡಲಾಗಿದೆ. (ಇದುವರೆಗೂ ಅಜ್ಞಾತವಾಗಿದ್ದ) ಲೇಖಕರಿಗೆ ಅವರ ರಾಮನ ಪಾದಪೀಠದಲ್ಲಿ ಒಂದೇ ಆನೆಯ ಚಿತ್ರವಿದೆಯೋ ಅನೇಕ ಆನೆಯ ಚಿತ್ರಗಳಿವೆಯೋ ಎಂಬುದರ ಬಗ್ಗೆ ಸಂದೇಹವಿರುವದು ಆಶ್ಚರ್ಯ. ಇದರಿಂದ ಆನೆಯ ಚಿತ್ರ ಇರುವುದೇ ಸುಳ್ಳು.

6. ವಾಸಿಷ್ಠರಾಮಾಯಣದಲ್ಲಿರುವ ''ದ್ವಿರದ'' ಹಾಗೂ ವಾಸಿಷ್ಠೋತ್ತರರಾಮಾಯಣದಲ್ಲಿರುವ ''ಬಿರದ'' ಈ ಎರಡರ ಬಗ್ಗೆಯೂ ಪ್ರತಿಮೆಯ ಲಕ್ಷಣ ತಿಳಿಸುವ ಅವರ ''ವಿಜಯೀಂದ್ರವಿಜಯ''ವಾಗಲೀ, ಶ್ರೀವಾದೀಂದ್ರರ ''ಅರ್ಚಾಗತಿಕ್ರಮ''ವಾಗಲೀ, ಈ ಆನೆಗಳ ಚಿತ್ರದ ಬಗ್ಗೆ ಮೌನವಹಿಸಿರುವುದೇಕೆ? ಪ್ರತಿನಿತ್ಯ ಆ ಪ್ರತಿಮೆಯನ್ನು ಮುಟ್ಟಿ ಪೂಜಿಸಿದ ಶ್ರೀವಾದೀಂದ್ರರ ದೃಷ್ಟಿಗೂ ಗೋಚರಿಸದ ಅನೆಯ ಚಿಹ್ನೆ ಮೂ.ಮತೇ.ಲೇಖಕರಿಗೆ ಕಂಡಿದ್ದು ಅದ್ಭುತವೇ ಸರಿ.

7. ರಾಯರ ಮಠದ ಎಲ್ಲ ಅಧಿಕೃತ ಲೇಖಕರೂ (ಹೆಚ್.ಕೆ. ವೇದವ್ಯಾಸಾಚಾರ್ಯ, ರಾಜಾ. ಎಸ್. ಗುರುರಾಜಾಚಾರ್ಯ) ಆನೆಯ ಚಿತ್ರಗಳ ಬಗ್ಗೆ ಮೌನವಹಿಸಿರುವುದೇಕೇ?

8. ಅದರಂತೆ ರಾಯರಮಠದ ಪ್ರಾಚೀನ-ಅರ್ವಾಚೀನವಾದ ಯಾವ ಆಧಾರಗಳಲ್ಲೂ ಈ ಆನೆ ಬಗ್ಗೆ ಚಕಾರವೇ ಇಲ್ಲದಿರುವುದು ಅತ್ಯಂತ ಗಮನಾರ್ಹ. ಶ್ರೀರಾಯರಮಠದ ವಿದ್ವಾಂಸರಾಗಲೀ, ಯತಿಗಳಾಗಲೀ ಇಂದಿನವರೆಗೆ ತಮ್ಮ ಉಪನ್ಯಾಸಗಳಲ್ಲಾಗಲೀ, ಕೃತಿಗಳಲ್ಲಾಗಲೀ ಆನೆಯ ಹೆಸರನ್ನೇ ಎತ್ತಿಲ್ಲ. ಶ್ರೀಮೂಲರಾಮನ ಪ್ರತಿಮೆಯ ಇತಿಹಾಸದಲ್ಲೇ ಈ ಆನೆಗಳ ಚಿತ್ರಗಳ ವಿಷಯ ಎಲ್ಲೂ ಕಂಡು ಬಂದಿಲ್ಲ. ಮೂ.ಮತೇ ಲೇಖಕರೇ ಮೊಟ್ಟಮೊದಲ ಬಾರಿಗೆ ಇದನ್ನು ಸೃಷ್ಟಿಸಿದ್ದಾರೆ.

9. ರಾಯರಮಠದ ಅಧಿಕೃತಲೇಖಕರಾದ ಶ್ರೀ ದಿ. ರಾಜಾ. ಎಸ್ ಗುರುರಾಜಾಚಾರ್ಯರು 'ಶ್ರೀಮೂಲರಾಮ' ಎಂಬ ಕೃತಿಯನ್ನು ಬರೆದಿದ್ದಾರೆ. ಇದು ಶ್ರೀರಾಯರಮಠದವರಿಂದ ಅಧಿಕೃತವಾಗಿ ಪ್ರಕಟವಾಗಿದೆ. ಈ ಪುಸ್ತಕದ ಪುಟ 3 ರಲ್ಲಿ ಮೂಲರಾಮನ ಪ್ರತಿಮೆಯ ಲಕ್ಷಣಗಳನ್ನು ಹೇಳುವ ವಾಸಿಷ್ಠರಾಮಾಯಣದ ಇದೇ ಶ್ಲೋಕಗಳನ್ನು ಉಲ್ಲೇಖಿಸಿದ್ದಾರೆ -

**ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್ ।**
**ಸರ್ವಲಕ್ಷಣಸಂಪನ್ನಾಂ ಪಾದೇ ದ್ವಿರದಸಂಯುತಾಮ್ ॥**

**ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ।**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ॥**

ಈ ಶ್ಲೋಕಗಳ ವಿವರಣೆಯನ್ನೂ ಶ್ಲೋಕಕ್ಕಿಂತ ಮೊದಲು ನೀಡಿದ್ದಾರೆ -

'ಅತ್ಯಂತಸುಂದರವಾದ, ದುಂಡುಪೀಠದ, ಉದ್ದಕಿವಿಗಳ, ಸೊಟ್ಟಭಂಗಿಯ (ತ್ರಿವಕ್ರ - ಮೂರುಕಡೆ ವಕ್ರವಾಗಿ ಭವ್ಯಭಂಗಿಯಲ್ಲಿ ನಿಂತಿರುವ) ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ, ಸರ್ವಲಕ್ಷಣಸಂಪನ್ನವಾದ.......'

ಈ ವಿವರಣೆಯಲ್ಲಿರುವ ದುಂಡುಪೀಠದ, ಉದ್ದಕಿವಿಗಳ, ಸೊಟ್ಟಭಂಗಿಯ ಎಂಬುದಕ್ಕೆ ಕ್ರಮವಾಗಿ ವೃತ್ತಪೀಠಾ, ಲಂಬಕರ್ಣಾ, ತ್ರಿವಕ್ರಾ, ಎಂಬ ಪದಗಳು ಶ್ಲೋಕದಲ್ಲಿವೆ. ಸರ್ವಲಕ್ಷಣಸಂಪನ್ನವಾದ

ಎಂಬ ವಿವರಣೆಗೆ ಸರ್ವಲಕ್ಷಣಸಂಪನ್ನಾಂ ಎಂಬ ಶಬ್ದ ಶ್ಲೋಕದಲ್ಲಿದೆ. ಈಗ ಉಳಿದದ್ದು ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ ಎಂಬ ವಿವರಣೆ ಮಾತ್ರ . ಇದಕ್ಕೆ ಶ್ಲೋಕದಲ್ಲಿ ಇರುವುದು ಪಾದೇ ದ್ವಿರದಸಂಯುತಾ ಎಂಬ ಪದಗಳು ಮಾತ್ರ. ಇನ್ನಿತರ ಬೇರೆ ಯಾವ ಪದಗಳಿಗೂ 'ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ' ಎಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲ. ಹಾಗಾದರೆ ಪಾದೇ ದ್ವಿರದ ಸಂಯುತಾ ಎಂಬುದಕ್ಕೆ ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ ಎಂಬ ಅರ್ಥವೇ ರಾಜಾ. ಎಸ್. ಗುರುರಾಜಾಚಾರ್ಯರಿಗೂ ಸಮ್ಮತ. ಈ ಅರ್ಥವೇ ರಾಯರಮಠದಲ್ಲಿ ಸಾಂಪ್ರದಾಯಿಕವಾಗಿ ಹೇಳಿಕೊಂಡು ಬಂದ ಅರ್ಥವೂ ಆಗಿರುತ್ತದೆ. ಮೇಲಿನ ಸಮಗ್ರವಿವರಣೆಯಲ್ಲಿ ಮೂಲರಾಮಪ್ರತಿಮೆಯ ಪಾದದಲ್ಲಿ ಅಥವಾ ಪಾದಪೀಠದಲ್ಲಿ ಆನೆಯ ಚಿತ್ರ ಇರುವ ಉಲ್ಲೇಖವನ್ನು ಮಾಡಿಯೇ ಇಲ್ಲ! (ಇದರ ನಕಲನ್ನು ಒದಗಿಸಿದ್ದೇವೆ.)

ಶ್ರೀಮೂಲರಾಮ ೩

ಸ್ವೀಕರಿಸಲು ಮೈದೋರಿದ ಶ್ರೀರಾಮರೂಪೀಹರಿಯನ್ನು ಪ್ರತಿಮಾರೂಪವಾಗಿ ಪೂಜಿಸಿ ಜಗತ್ತಿನ ಜನತೆಗೆ ಪ್ರತಿಮಾಪೂಜೆಯ ಮಹತ್ವವನ್ನು ತಿಳಿಸಿಕೊಡಲಾಶಿಸಿ ತಮ್ಮ ಪೂಜೆಯನ್ನು ಸ್ವೀಕರಿಸಿ ಅನುಗ್ರಹಿಸಿದ ಮಂಗಳಮೂರ್ತಿ ಶ್ರೀರಾಮ ಮತ್ತು ಸೀತಾದೇವಿಯರು ತಮಗೆ ಮೈದೋರಿದ ಭಂಗಿಯಲ್ಲಿಯೇ ರಚಿಸಿಕೊಡಬೇಕೆಂದು ವಿಶ್ವಕರ್ಮನಿಗೆ ಆಜ್ಞಾಪಿಸಿ ಪ್ರತಿಮಾಲಕ್ಷಣಗಳನ್ನು ತಿಳಿಸಿದರು. ವಿಶ್ವಕರ್ಮನು ಅದರಂತೆ ಸರ್ವಾಂಗಸುಂದರವಾದ ಶ್ರೀರಾಮಸೀತಾಪ್ರತಿಮೆಗಳನ್ನು ನಿರ್ಮಿಸಿ ಕೊಟ್ಟನು. ಅತ್ಯಂತ ಸುಂದರವಾದ, ದುಂಡುಪೀಠದ, ಉದ್ದ ಕಿವಿಗಳ, ಸೊಟ್ಟಭಂಗಿಯ (ತ್ರಿವಕ್ರ-ಮೂರುಕಡೆ ವಕ್ರವಾಗಿ ಭವ್ಯಭಂಗಿಯಲ್ಲಿ ನಿಂತಿರುವ) ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ, ಸರ್ವಲಕ್ಷಣ ಸಂಪನ್ನವಾದ, ಅನುರೂಪ ವಧೂವರ ಸಾಮ್ಯ ಶೋಭಿತವಾದ-ಶ್ರೀಸೀತಾರಾಮ ಪ್ರತಿಮೆಗಳನ್ನು ಕಮಲಸಂಭವರು ಬಹುಕಾಲ ಭಕ್ತಿಶ್ರದ್ಧೆಗಳಿಂದ ಪೂಜಿಸಿ ಪರಮಾನಂದಭರಿತರಾದರು.

"ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್।
ಸರ್ವಲಕ್ಷಣಸಂಪನ್ನಾಂ ಪಾದೇ ದ್ವಿರದಸಂಯುತಾಮ್ ॥"

"ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ।
ಮಮೇಯಂ ಪ್ರತಿಮಾ ದೇವಿ ! ಯಥಾಽಹಂ ನಾತ್ರ ಸಂಶಯಃ॥"

-ಶ್ರೀವಾಸಿಷ್ಠರಾಮಾಯಣ

"ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ।
ಕರ್ಣತೋ ವರ್ಣತಶ್ಚೈವ ಪೀಠತ ಪರಿಮಾಣತ ॥"

- ಶ್ರೀಆರ್ಚಾಗತಿಕ್ರಮ.

ಶ್ರೀರಾಯರಮಠದ ಅಧಿಕೃತಲೇಖಕರಾದ, ರಾಯಮಠದ ಇತಿಹಾಸದ ಬಗ್ಗೆ ಅನೇಕದಾಖಲೆಗಳು-ಶಾಸನಗಳನ್ನು ಅಧ್ಯಯನ ಮಾಡಿರುವ, ಅವರ ಸಮಕಾಲೀನ ಯತಿಗಳೊಡನೆ ಅತ್ಯಂತ ನಿಕಟಸಂಬಂಧವನ್ನು ಹೊಂದಿದ್ದ, ತಮ್ಮ ಜೀವನ ಕಾಲದಲ್ಲಿ ಸಾವಿರಾರು ಬಾರಿ ರಾಯರಮಠದ ರಾಮದೇವರ ಪೂಜೆಯನ್ನು ನೋಡಿರುವ ದಿ. ರಾಜಾ. ಎಸ್. ಗುರುರಾಜಾಚಾರ್ಯರು ಈ ಆನೆಯ ಚಿಹ್ನೆಗಳ ಬಗ್ಗೆ ಚ ಕಾರವನ್ನೇ ಎತ್ತಿಲ್ಲ. ಪಾದದಲ್ಲಿ ಅಥವಾ ಪಾದಪೀಠದಲ್ಲಿ ಆನೆಯ ಚಿತ್ರ ಇರುವ ಉಲ್ಲೇಖವನ್ನು ಮಾಡಿಲ್ಲ.'ಪಾದೇ ದ್ವಿರದಸಂಯುತಾ' ಎಂಬುದಕ್ಕೆ ಪಾದದಲ್ಲಿ ಅಥವಾ ಪಾದಪೀಠದಲ್ಲಿ ಆನೆ ಎಂಬ ಅರ್ಥವನ್ನು ರಾಯರಮಠದ ಹಿರಿಯ ಅಧಿಕೃತ ವಿದ್ವಾಂಸರೇ ಒಪ್ಪಿಲ್ಲ. ಹಾಗಾದರೆ ರಾಮನ ಪ್ರತಿಮೆಯ ಪಾದದಲ್ಲಿ ಆನೆಯ ಚಿತ್ರ ಇದೆ ಎಂಬುದು ಕೇವಲ ಮೂ.ಮಠೀ. ಲೇಖಕರ ಹೊಸ ಕಲ್ಪನೆ ಮಾತ್ರ.

10. ಅದರಂತೆ ಶ್ರೀರಾಯರ ಮಠದ ಶ್ರೀರಾಮಪ್ರತಿಮೆಯ ಕಾಲಿನಲ್ಲಿ ಆನೆ ಚಿತ್ರವಿಲ್ಲ ಎನ್ನುವುದು ಪ್ರತ್ಯಕ್ಷದಿಂದಲೂ ಸಿದ್ಧ. ಆದ ಕಾರಣ 'ಪಾದೇ' ಎನ್ನುವುದಕ್ಕೆ ಕಾಲಿನಲ್ಲಿ ಎಂದು ಅರ್ಥ ಮಾಡದೇ ಪಾದ ಪೀಠದಲ್ಲಿದೆ ಎಂಬ ಹಾರಿಕೆಯ ಉತ್ತರ ಕೊಟ್ಟಿರುವುದು ಗಮನಾರ್ಹ. ಪಾದದಲ್ಲಿ ಆಗಲೀ, ಪೀಠದಲ್ಲಿ ಆಗಲೀ ಆನೆಯ ಚಿತ್ರವಿರುವುದು ಇಂದು ನಾನಾ ಮಾಧ್ಯಮಗಳಲ್ಲಿ ಉಪಲಬ್ಧವಾಗುವ ಹಾಗೂ ಮುದ್ರಿತವಾಗಿರುವ ರಾಯರಮಠದ ಶ್ರೀರಾಮದೇವರ ಪ್ರತಿಮೆಯ ಯಾವ ಭಾವಚಿತ್ರ(ಫೋಟೋ) ಗಳಲ್ಲೂ' ಕಂಡು ಬಂದಿಲ್ಲದಿರುವುದು ಗಮನಾರ್ಹ.

(**ಆನೆಯೂ ಇಲ್ಲ, ಕಂಕಣವೂ ಇಲ್ಲ** - ಆಶ್ಚರ್ಯವೆಂದರೆ, ಶ್ರೀರಾಯರ ಮಠದಲ್ಲಿ ಪೂಜೆಗೊಳ್ಳುವ ಶ್ರೀರಾಮನ ಪ್ರತಿಮೆಯಲ್ಲಿ ಆನೆಯ ಚಿಹ್ನೆಗಳಿಲ್ಲ ಎನ್ನುವುದು ಮಾತ್ರವಲ್ಲ, ಶ್ರೀ ದಿ. ರಾಜಾ. ಎಸ್ ಗುರುರಾಜಾಚಾರ್ಯರು ವಿವರಣೆಯಲ್ಲಿ ಹೇಳಿದ, ವಾಸಿಷ್ಠರಾಮಾಯಣದಲ್ಲಿ ಉಕ್ತವಾದ 'ಪಾದೇ ದ್ವಿರದ' 'ಕಾಲುಗಳಲ್ಲಿ ಕಂಕಣ' ಎಂಬ ಲಕ್ಷಣವೂ ಶ್ರೀರಾಯರಮಠದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀರಾಮನ ಪ್ರತಿಮೆಯ ಕಾಲುಗಳಲ್ಲಿ ಕಂಡುಬರುವುದಿಲ್ಲ! ದುಂಡುಪೀಠ, ಉದ್ದಕಿವಿ, ಸೊಟ್ಟಭಂಗಿ ಈ ಲಕ್ಷಣಗಳು ಶ್ರೀರಾಯರಮಠದ ರಾಮದೇವರಲ್ಲಿ ಕಂಡುಬರುತ್ತದೆ. ಆದರೆ ಈ ಲಕ್ಷಣಗಳು ವಾಸಿಷ್ಠರಾಮಾಯಣದಲ್ಲಿ ಹೇಳಿದ ಮೂಲರಾಮನ ಲಕ್ಷಣಗಳಲ್ಲ. ಈ ಲಕ್ಷಣಗಳನ್ನು ಹೇಳುವ ಶ್ಲೋಕದ ಈ ಪಾದವು ಅರ್ಚಾಗತಿಕ್ರಮದಲ್ಲಿ ಹೇಳಲ್ಪಟ್ಟದ್ದು. ಅದನ್ನು ವಾಸಿಷ್ಠರಾಮಾಯಣದಲ್ಲಿ ಪ್ರಕ್ಷೇಪ ಮಾಡಲಾಗಿದೆ ಎನ್ನುವುದನ್ನು ಹಿಂದೆ ವಿವರಿಸಿದ್ದೇವೆ. ಆದ್ದರಿಂದ ವಾಸಿಷ್ಠರಾಮಾಯಣೋಕ್ತವಾದ ಲಕ್ಷಣಗಳಿಂದ ಕೂಡಿದ ಶ್ರೀಮೂಲರಾಮಪ್ರತಿಮೆ ರಾಯರಮಠದಲ್ಲಿ ಇಲ್ಲ ಎಂದೇ ಸಿದ್ಧವಾಗುತ್ತದೆ.)

ಮೂ.ಮಠೀ ಲೇಖಕರು ರಾಯರಮಠದ ರಾಮಪ್ರತಿಮೆಯಲ್ಲಿ ಹೊಸದಾಗಿ ಆನೆಯ ಚಿತ್ರವನ್ನು ಕಲ್ಪನೆ ಮಾಡುವ ಮೊದಲು ತಾವು ಛಾಪಿಸುತ್ತಿರುವ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯನ್ನು ಗಮನಿಸಬೇಕಿತ್ತು. ಗಮನಿಸಿದ್ದರೆ ತಮ್ಮ ಸಂಪ್ರದಾಯಕ್ಕೆ ಹಾಗೂ ಪ್ರತ್ಯಕ್ಷಕ್ಕೆ ವಿರುದ್ಧವಾದ ಈ ಹೊಸ ನಿರ್ಣಯನ್ನು ಮಾಡುತ್ತಿರಲಿಲ್ಲ. ಬಹುಶಃ ಉತ್ತರಾದಿಮಠದವರನ್ನು ಖಂಡನೆ ಮಾಡುವ ಅವಸರದಲ್ಲಿ ಪುರುಸೊತ್ತಾಗಿಲ್ಲ ಅನಿಸತ್ತೆ. ಆದ್ದರಿಂದಲೇ ಮೂ.ಮಠೀ. ಲೇಖಕರು 'ಪಾದಪೀಠದಲ್ಲಿ ಆನೆ' ಎಂಬುದಾಗಿ ಹೊಸ ಉದ್ಘೋಷವನ್ನು ಮಾಡಿದ್ದಾರೆ ! ಇನ್ನು ಈ ಹೊಸವಿಷಯವನ್ನು ಸಮರ್ಥಿಸುವುದಕ್ಕಾಗಿ ಇನ್ನೇನು ಕಸರತ್ತು ಮಾಡುತ್ತಾರೋ ? ಯಾವ ಯಾವ ಹೊಸ ಆಧಾರಗಳನ್ನು ಸೃಷ್ಟಿಸುತ್ತಾರೋ? ಅಥವಾ ರಾಮದೇವರ ಪ್ರತಿಮೆಯ ಪೀಠದಲ್ಲಿ ಆನೆಯ ಚಿಹ್ನೆಯನ್ನೇ ಹೊಸದಾಗಿ ಕೆತ್ತಿಸುತ್ತಾರೋ? ಕಾದು ನೋಡಬೇಕು.

ಹೀಗೆ ಮೂ.ಮತೇ ಲೇಖಕರು ಕೊಟ್ಟ ಆಧಾರಗಳೆಲ್ಲವೂ ಪರಸ್ಪರ ವಿರುದ್ಧ ಹೇಳಿಕೆಗಳಿಂದ ಕೂಡಿವೆ. ಸ್ವವ್ಯಾಹತವೂ ಆಗಿವೆ. ಇತರ ಅನೇಕ ಐತಿಹಾಸಿಕ ಆಧಾರಗಳಿಗೆ ವಿರುದ್ಧವಾಗಿವೆ. ಆದ್ದರಿಂದ ಅವರು ಕೊಟ್ಟ ಆಧಾರದ ಮೇಲೆ ಸತ್ಯದ ಶೋಧನೆ ಅಸಾಧ್ಯವಾದದ್ದು ಎಂದು ಜಿಜ್ಞಾಸುಗಳು ಗಮನಿಸಬೇಕು.

**ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ರಾಮನ ಪಾದದಲ್ಲಿ ಬಿರದವಿದೆಯೋ? ದ್ವಿರದವಿದೆಯೋ?**

'ದ್ವಿರದ' 'ಬಿರದ' ಯಾವುದು ಸರಿ ? ಯಾವುದು ತಪ್ಪು? ಏನಿದರ ಅರ್ಥ? ಅಲ್ಲದೇ ವಾಸಿಷ್ಠರಾಮಾಯಣದ ಇದೇ ಶ್ಲೋಕಗಳನ್ನೇ ಪ್ರಮಾಣ ಎಂದು ಒಪ್ಪುವ ಉತ್ತರಾದಿಮಠದವರಿಗೂ ಇದು ಕಗ್ಗಂಟಲ್ಲವೇ? ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ರಾಮನ ಪ್ರತಿಮೆಯ ಪಾದದಲ್ಲಿ ಆನೆಯ ಚಿಹ್ನೆ ಇದೆಯೋ? ಈ ಗೊಂದಲಗಳು, ಪ್ರಶ್ನೆಗಳು ವಾಚಕರ ಮನಸ್ಸಿನಲ್ಲಿ ಬಂದಿರಬಹುದು. ಅದಕ್ಕೆ ಸಮಾಧಾನವನ್ನು ತಿಳಿಯೋಣ.

ಮೂ.ಮತೇ ಕೃತಿಯ ಪುಟ 48-50ರಲ್ಲಿ ಲೇಖಕರು ಇದೇ ವಿಷಯಕ್ಕೆ ಸಂಬಂಧ ಪಟ್ಟಂತೆ ಮಾಡಿದ ಪ್ರಶ್ನೆಗೂ ಇದು ಉತ್ತರವಾಗುತ್ತದೆ. ಅವರ ಸಂದೇಹ ಹೀಗಿದೆ -

**ಸಂದೇಹ** - ಪಾದೇ ದ್ವಿರದಸಂಯುತಾ ಎಂದರೇನು? ದ್ವಿರದ ಎಂದರೇನು? ದ್ವಿರದ ಎಂಬ ಶಬ್ದಕ್ಕೆ ಗೆಜ್ಜೆ ಅಥವಾ ಕಡಗ ಎಂಬ ಅರ್ಥ ಯಾವ ಕೋಶದಲ್ಲೂ ಕಂಡುಬರುವುದಿಲ್ಲ. (ಮೂ.ಮತೇ ಪುಟ 48-50)

**ಉತ್ತರ** : ದ್ವಿರದ ಎಂಬ ಶಬ್ದಕ್ಕೆ ರಾಯರಮಠದ ಅಧಿಕೃತಲೇಖಕರೂ ಕೂಡ ಗೆಜ್ಜೆ-ಕಡಗ ಎಂಬ ಅರ್ಥವನ್ನೇ ಮಾಡಿದ್ದಾರೆ ಎಂಬುದನ್ನು ಹಿಂದೆ ತೋರಿಸಿದ್ದೇವೆ. ಆದ್ದರಿಂದ ಈ ಪ್ರಶ್ನೆಯನ್ನು ಅವರಿಗೇ ಮಾಡುವುದು ಒಳಿತು.

ಆದರೂ ಇದಕ್ಕೆ ನಾವು ಹೀಗೆ ಪರಿಹಾರವನ್ನು ತಿಳಿಯಬಹುದು–

ವಾಸಿಷ್ಠರಾಮಾಯಣಗ್ರಂಥದಲ್ಲಿ ಶ್ರೀಮೂಲರಾಮನ ಲಕ್ಷಣಗಳನ್ನು ತಿಳಿಸುವ ಕೆಳಗಿನ ಶ್ಲೋಕಗಳನ್ನು ಉಭಯರೂ (ಉತ್ತರಾದಿಮಠ-ರಾಯರಮಠ) ಉದಾಹರಿಸಿರುವುದು ಗಮನಾರ್ಹ.

**ಸರ್ವಲಕ್ಷಣಸಂಪನ್ನಾ ಪಾದೇ ದ್ವಿರದಸಂಯುತಾ ।**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ॥**

ಇಲ್ಲಿರುವ ದ್ವಿರದ ಎಂಬ ಶಬ್ದಕ್ಕೆ ರೂಢಿಯಲ್ಲಿರುವ ಪ್ರಸಿದ್ಧ ಅರ್ಥ ಆನೆ. ಆದರೆ ದ್ವಿರದ ಶಬ್ದಕ್ಕೆ ಯೌಗಿಕವಾಗಿ ಗೆಜ್ಜೆ ಎಂಬ ಅರ್ಥವನ್ನೂ ಮಾಡಬಹುದು. ಈ ರೀತಿಯಾಗಿ ಪುರಾಣದಲ್ಲಿರುವ ಶಬ್ದಗಳಿಗೆ ಲೋಕದಲ್ಲಿ ಪ್ರಸಿದ್ಧವಾದ ಅರ್ಥಗಳನ್ನು ಬಿಟ್ಟು ಶ್ರೀಮದಾಚಾರ್ಯರು ಯೌಗಿಕವಾಗಿ ಹೊಸ ಅರ್ಥಗಳನ್ನು ಹೇಳುವುದು ಸರ್ವವಿದಿತ. ಆ ಅರ್ಥಗಳು ಕೋಶದಲ್ಲೆಲ್ಲೂ ಕಾಣಸಿಗುವುದಿಲ್ಲ.

**ಯೌಗಿಕ ಅರ್ಥವನ್ನೇ ಏಕೆ ಮಾಡಬೇಕು?**

ವಾಸಿಷ್ಠರಾಮಾಯಣದ ಮೇಲಿನ ಶ್ಲೋಕದಲ್ಲಿರುವ 'ದ್ವಿರದ' ಎಂಬ ಶಬ್ದಕ್ಕೆ ಯೌಗಿಕವಾಗಿ ಕಡಗ-ಗೆಜ್ಜೆ ಎಂಬ ಅರ್ಥವನ್ನು ಹೇಳುವುದರಿಂದ ಆ ಅರ್ಥ, ಶ್ರೀಪಾದರಾಜರ ಕೃತಿಯಲ್ಲಿನ 'ಕಾಲಲಿ ಕಿರಿಗೆಜ್ಜೆ' ಎಂಬ ಹಾಗೂ ರಾಯರ ಮಠದವರೇ ಶ್ರೀಮೂಲರಾಮನ ವಿಷಯದಲ್ಲಿ ಆಧಾರಗಳೆಂದು ತಮ್ಮ ಪುಸ್ತಕಗಳಲ್ಲಿ ಛಾಪಿಸಿರುವ ಆದ್ಯ ಮುದ್ದುವಿಠ್ಠಲದಾಸರ ಕೃತಿಯಲ್ಲಿನ ''ಗೆಜ್ಜೆ ಘಲಿವಾರಂದಿಗೆ'' ಎಂಬ ಉಲ್ಲೇಖಗಳಿಗೆ ಅನುಗುಣವಾಗುವುದು. ಹೀಗೆ ಮಾಡುವುದರಿಂದ ಪ್ರಾಚೀನ ಅರ್ವಾಚೀನ ಕೃತಿಗಳಲ್ಲಿ ಸಾಮರಸ್ಯ ತೋರಿ ಎರಡಕ್ಕೂ ನ್ಯಾಯ ಒದಗಿಸಿದಂತಾಗುವುದು (ಸಂಶೋಧನೆ ದೃಷ್ಟಿಯಲ್ಲಿ).

**ಆನೆ ಎಂಬ ಅರ್ಥ ಏಕೆ ಸರಿ ಅಲ್ಲ ?**

ಇದನ್ನು ಬಿಟ್ಟು 'ದ್ವಿರದ' ಎಂಬ ಪದಕ್ಕೆ ಪ್ರಸಿದ್ಧವಾದ ಆನೆ ಎಂಬ ಅರ್ಥವಿಟ್ಟುಕೊಂಡರೆ ಅದು ಉಭಯಪಕ್ಷದವರಿಗೂ ಸಮಸ್ಯೆಯಾಗುತ್ತದೆ. ಅಲ್ಲದೇ ದ್ವಿರದ ಎಂಬ ಪದಕ್ಕೆ ಆನೆ ಎಂಬ ಅರ್ಥ ಮಾಡಿದರೆ ರಾಯರಮಠದವರಿಗೆ ಹೇಗೆ ದೊಡ್ಡ ಭಾಧಕವಾಗುತ್ತದೆ ಎನ್ನುವುದನ್ನು ವಿಸ್ತಾರವಾಗಿ ಈ ಹಿಂದೆಯೇ ತಿಳಿಸಿದ್ದೇವೆ. ಪ್ರತಿಮೆಯ ಲಕ್ಷಣ ತಿಳಿಸುವ ಉಭಯ ಪಕ್ಷದ ಇತರ ಯಾವ ಕೃತಿಗಳಲ್ಲಿಯೂ ಈ ಆನೆಯ ಬಗ್ಗೆ ಪ್ರಸ್ತಾಪವಿಲ್ಲ. ರಾಯರ ಮಠದ ಪ್ರತಿಮೆಯ ಲಕ್ಷಣವನ್ನು ಉಲ್ಲೇಖಿಸಿದ ಅರ್ಚಾಗತಿಕ್ರಮದಲ್ಲಿಯೂ ಆನೆಯ ಪ್ರಸ್ತಾಪ ಬಂದಿಲ್ಲ ಎಂಬುದು ಗಮನಾರ್ಹ. ಅಲ್ಲದೇ ನಂತರದ ಇತರ ಕೃತಿಗಳಲ್ಲೂ ಆನೆಯ ಉಲ್ಲೇಖ ಇಲ್ಲ.

ಶ್ರೀರಾಯರ ಮಠದವರು ಶ್ರೀವಾದೀಂದ್ರರದ್ದೆಂದು ಹೇಳಿಕೊಳ್ಳುವ ಅರ್ಚಾಗತಿಕ್ರಮದ ಆಧಾರದ ಮೇಲೆ ಶ್ರೀಮೂಲಸೀತಾರಾಮರ ಪ್ರತಿಮೆಗಳಿಗೆ ವರ್ಣ, ಪೀಠ, ಪರಿಮಾಣದಲ್ಲಿ ಸಾಮ್ಯವನ್ನು ಹೇಳುತ್ತಾರೆ. (ಯದ್ಯಪಿ ವಾಸಿಷ್ಠರಾಮಾಯಣ ಸಾಮ್ಯವನ್ನು ಹೇಳಿಲ್ಲ. ಅದರಂತೆ ಅವರೇ ಛಾಪಿಸಿರುವ ವಾಸಿಷ್ಠೋತ್ತರರಾಮಾಯಣದ ಪ್ರತಿಯಲ್ಲೂ 'ವರ್ಣತಃ ಪೀಠತಃ...'ಎಂಬ ಸಾಮ್ಯ ಹೇಳುವ ಶ್ಲೋಕ ಇಲ್ಲ.) ಅವರ ನಂಬಿಕೆಯಂತೆ ಇಟ್ಟುಕೊಂಡರೂ ಕೂಡ ಅವರೇ ಪರಂಪರಾಗತವಾಗಿ ಶ್ರೀಉತ್ತರಾದಿಮಠದಲ್ಲಿಯೇ ಮೂಲಸೀತೆಯಪ್ರತಿಮೆ ಇದೆ ಎಂದೂ ಅಂಗೀಕರಿಸಿದ್ದಾರೆ. ಹಾಗಿದ್ದ ಮೇಲೆ ಎರಡೂ ಪ್ರತಿಮೆಗಳ ಪೀಠದಲ್ಲಿ ಸಾಮ್ಯವನ್ನು ಒಪ್ಪಿರುವ ಶ್ರೀರಾಯರ ಮಠದವರ ಪ್ರಕಾರ ಉತ್ತರಾದಿಮಠದ ಮೂಲಸೀತಾಪ್ರತಿಮೆಯ ಪೀಠದಲ್ಲೂ ಆನೆಯ ಚಿತ್ರಗಳಿರಬೇಕಿತ್ತು . ಆಗ ದ್ವಿರದ ಶಬ್ದಕ್ಕೆ ಆನೆ ಎಂಬ ಪ್ರಸಿದ್ಧ ಅರ್ಥವನ್ನು ಕೂಡಿಸಬಹುದಿತ್ತು. ಆದರೆ ಉತ್ತರಾದಿಮಠದಲ್ಲಿರುವ ಶ್ರೀಮೂಲಸೀತಾದೇವಿಯ ಪೀಠದಲ್ಲಿ ಆನೆಗಳ ಚಿತ್ರಗಳಿಲ್ಲ ಎನ್ನುವುದು ಅತ್ಯಂತ ಸ್ಪಷ್ಟ. ಆದ್ದರಿಂದಲೂ ಪಾದೇ ದ್ವಿರದಸಂಯುತಾ ಎಂಬುದಕ್ಕೆ ಆನೆ ಎಂಬ ಅರ್ಥ ರಾಯರಮಠದವರಿಗೂ ಬಾಧಕವಾಗಿದೆ.

ಅಂದಮೇಲೆ ಈ ಹಿಂದೆ ತಿಳಿಸಿದ ಹಾಗೂ ಮೇಲೆ ಹೇಳಲಾದ ಕಾರಣಗಳಿಂದಾಗಿ ದ್ವಿರದ ಶಬ್ದಕ್ಕೆ ಆನೆ ಎಂಬ ಅರ್ಥ ರಾಯರಮಠದ ಪರಂಪರೆಯ ಪ್ರಕಾರವೇ ಕೂಡುವುದಿಲ್ಲ.

ಆದ್ದರಿಂದ ದ್ವಿರದ ಎಂಬ ಶಬ್ದಕ್ಕೆ ಆನೆ ಎಂಬ ಅರ್ಥ ಪ್ರಸ್ತುತ ಪ್ರಸಕ್ತವಾಗುವುದಿಲ್ಲ. ಕಾರಣ ವಾಸಿಷ್ಠರಾಮಾಯಣದ ಶ್ಲೋಕಕ್ಕೆ ಅನುಗುಣವಾಗಿ ಉಲ್ಲೇಖಿಸಿದ, ಶ್ರೀವಾದೀಂದ್ರರಿಗಿಂತಲೂ ಪ್ರಾಚೀನರಾದ, ಶ್ರೀಶ್ರೀಪಾದರಾಜರ ಹಾಗೂ ಆದ್ಯರ ಮುದ್ದುವಿಠ್ಠಲರ ಕೃತಿಗಳ ಹಿನ್ನೆಲೆಯಲ್ಲಿ ಮತ್ತು ಇನ್ನಿತರ ವಾಕ್ಯಗಳಿಗೆ ಅನುಗುಣವಾಗಿ ವಾಸಿಷ್ಠರಾಮಾಯಣದ ದ್ವಿರದ ಶಬ್ದಕ್ಕೆ ಯೌಗಿಕವಾಗಿ 'ಗೆಜ್ಜೆ' 'ಕಡಗ' ಎಂದು ಅರ್ಥೈಸುವುದೇ ಸಾಧು ಹಾಗೂ ಸೂಕ್ತ.

**ದ್ವಿರದ ಸರಿ, ಬಿರದ ಏನು?**

'ಪಾದೇ ದ್ವಿರದ ಸಂಯುತಾ' ಎಂಬ ಶ್ಲೋಕದಲ್ಲಿ ಪಾಠಭೇಧಗಳೂ ಇವೆ. ಕೆಲವು ಹಸ್ತಪ್ರತಿಗಳಲ್ಲಿ 'ದ್ವಿರದ' ಎಂದು, ಕೆಲವು ಹಸ್ತಪ್ರತಿಗಳಲ್ಲಿ 'ಬಿರದ' 'ಬಿರುದ' ಎಂಬುದಾಗಿ ಇವೆ. ಹಿರಿಯ ವಿದ್ವಾಂಸರ ಮೌಖಿಕ ಪಾಠಗಳಲ್ಲೂ ಈ ವ್ಯತ್ಯಾಸಗಳನ್ನು ಗಮನಿಸಿದ್ದೇವೆ. ಸ.ಸೀ.ಮೂ ಕೃತಿಕಾರರು ದ್ವಿರದ ಎಂಬ ಪಾಠವನ್ನು ಇಟ್ಟುಕೊಂಡು ಯೌಗಿಕ ಅರ್ಥವನ್ನು ಮಾಡಿ ಲಕ್ಷಣವನ್ನು ಹೊಂದಿಸಿದ್ದಾರೆ. ಅದು ಯೋಗ್ಯವೂ

ಆಗಿದೆ. ಆದರೆ ಬಿರದ ಅಥವಾ ಬಿರುದ ಎಂಬ ಪಾಠವನ್ನು ಇಟ್ಟುಕೊಂಡಾಗಲೂ ಅರ್ಥವನ್ನು ಸುಲಭವಾಗಿ ಹೊಂದಿಸಬಹುದು. ಉತ್ತರಾದಿಮಠದವರಿಗೆ 'ಬಿರದ' ಎಂಬ ಪಾಠವೂ ಸಾಧಕವೇ ಆಗುತ್ತದೆ.

ಬಿರದ, ಬಿರುದ ಎಂಬ ಶಬ್ದಕ್ಕೆ ಕಡಗ ಅಥವಾ ವೀರಕಂಕಣ ಎಂಬ ಅರ್ಥವನ್ನು ಹೇಳಬಹುದು.

ಬಿರುದ ಎಂಬ ಶಬ್ದಕ್ಕೆ ವಿ.ಎಸ್.ಆಪ್ಟೆ ಅವರ ಸಂಸ್ಕೃತ-ಆಂಗ್ಲ ಕೋಶದಲ್ಲಿ ಶಿವಪುರಾಣದ ಆಧಾರವನ್ನು ನೀಡಿ ಈ ಕೆಳಗಿನ ಅರ್ಥವನ್ನು ನೀಡಿದ್ದಾರೆ.

A token worn on the arm and hand etc. indicating excellence.

ಅಂದರೆ ಮುಂಗೈ, ಕೈ ಮೊದಲಾದ ಕಡೆ ಧರಿಸಿದ, ಉತ್ಕೃಷ್ಟತೆಯನ್ನು ಸೂಚಿಸುವ ಚಿಹ್ನೆ, ಕುರುಹು ಇತ್ಯಾದಿ.

Digital Dictionaries of South Asia

Vaman Shivaram Apte (1858-1892)

THE PRACTICAL SANSKRIT-ENGLISH DICTIONARY

Revised and Enlarged Edition of Prin. V. S. Apte's

Searching the **entire dictionary** for **बिरुदः**. Your search located 2 occurrences.

Click here for a key-word-in-context display.

---

1. बिरुदः birudh : (page 1167)

contemporary of **गौतमबुद्ध**.

**बिम्बुः**: bimbuḥबिम्बुः The betel-nut tree.

**बिरुदः**: birudhबिरुदः 1 A token worn on the arm or hand etc. indicating excellence: बिरुदैश्च ध्वजैरुच्चैः कोषेणापि च भूयसा Śiva. B.1.26.-2 A panegyric: पेठुश्च

ಈ ಅರ್ಥ ಗುರುವಂಶಕಥಾಕಲ್ಪತರುವಿನಲ್ಲಿ ಹೇಳಲ್ಪಟ್ಟ 'ವಾಮಜಂಘಾಲಸದ್ವೀರಕಂಕಣ' 'ಎಡಜಂಘೆಯಲ್ಲಿ ಶೋಭಿಸುವ ವೀರಕಂಕಣ' ಎಂಬ ಉಕ್ತಿಗೂ ಹೊಂದಿಕೆಯಾಗುತ್ತದೆ. ಪ್ರತ್ಯಕ್ಷವಾಗಿಯೂ ಉತ್ತರಾದಿಮಠದ ಮೂಲರಾಮ ಪ್ರತಿಮೆಯ ಕಾಲಿನಲ್ಲಿ ಈ ಒಂದು ವೀರಕಂಕಣವನ್ನು ಕಾಣಬಹುದು.

(ಶ್ರೀರಾಯರಮಠದವರೂ ಶ್ರೀಮೂಲರಾಮ ಎಂಬ ಪುಸ್ತಕದಲ್ಲಿ ಶ್ರೀಮೂಲರಾಮ ಪ್ರತಿಮೆಯ ಲಕ್ಷಣವನ್ನು ತಿಳಿಸುತ್ತಾ '' ಕಾಲುಗಳಲ್ಲಿ ಕಂಕಣಗಳನ್ನು ಧರಿಸಿರುವ'' ಎಂಬುದಾಗಿ ತಿಳಿಸಿದ್ದಾರೆ. ಆದರೆ ಶ್ರೀರಾಯರಮಠದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀರಾಮನ ಪ್ರತಿಮೆಯ ಕಾಲುಗಳಲ್ಲಿ ಕಂಕಣ ಮೊದಲಾದ ಯಾವ ಆಭರಣಗಳೂ ಕಂಡುಬರದಿರುವುದು ಗಮನಾರ್ಹ.)

ಆದ್ದರಿಂದ ಉತ್ತರಾದಿಮಠದವರು ದ್ವಿರದ ಎಂಬ ಒಂದೇ ಪಾಠವನ್ನು ಅನುಸರಿಸಿ ಅದಕ್ಕೆ ಯೌಗಿಕ ಅರ್ಥವನ್ನು ಮಾಡುವ ಬದಲು, ಬಿರದ ಅಥವಾ ಬಿರುದ ಎಂಬ ಪಾಠವನ್ನೂ ಗ್ರಹಿಸುವುದು ಹೆಚ್ಚು ಸೂಕ್ತ ಎಂದು ನಮ್ಮ ಅಭಿಪ್ರಾಯ. ಹೆಚ್ಚಿನ ವಿಮರ್ಶೆ ಆಗಲಿ.

ಅಂತೂ ದ್ವಿರದ ಹಾಗೂ ಬಿರದ ಎರಡು ಪಾಠಗಳೂ ಉತ್ತರಾದಿಮಠಕ್ಕೆ ಸಾಧಕವಾಗಿವೆ. ರಾಯರಮಠದವರಿಗೆ ಸಾಧಕವಾಗಿಲ್ಲ. ಅವರು ಆಧಾರವೆಂದು ಛಾಪಿಸಿರುವ ವಾಸಿಷ್ಠೋತ್ತರರಾಮಾಯಣದ ಪ್ರಾಚೀನ ಹಸ್ತಪ್ರತಿಯಲ್ಲಿ

'ಬಿರದ' ಎಂಬ ಪಾಠವಿದೆ. ಅದಕ್ಕೆ ಅವರು ಅರ್ಥವನ್ನು ಹೇಳಿಲ್ಲ. ವೀರಕಂಕಣ ಎಂಬ ಅರ್ಥವನ್ನು ಮಾಡಿದರೆ ಆ ತರಹದ ಯಾವುದೇ ಚಿಹ್ನೆ ರಾಯರಮಠದ ರಾಮಪ್ರತಿಮೆಯಲ್ಲಿ ಕಂಡು ಬರುವುದಿಲ್ಲ.

ಇನ್ನು ದ್ವಿರದ ಎಂಬ ಶಬ್ದಕ್ಕೆ ಆನೆ ಎಂಬ ಅರ್ಥವನ್ನು ಇಟ್ಟುಕೊಂಡು ಮೂ.ಮಠೇ ಲೇಖಕರು ರಾಯರಮಠದ ಶ್ರೀರಾಮನಪ್ರತಿಮೆಯ ಪಾದಪೀಠದಲ್ಲಿ ಆನೆಯ ಚಿತ್ರಗಳಿವೆ ಎಂದು ಅಭಿಪ್ರಾಯಪಡುತ್ತಿರುವುದು ಕೇವಲ ಹೊಸಕಲ್ಪನೆ ಮಾತ್ರ. ರಾಯರಮಠದ ಸಂಪ್ರದಾಯದಲ್ಲಾಗಲೀ, ಪ್ರಾಚೀನಕೃತಿಗಳಲ್ಲಾಗಲೀ ಈ ಆನೆಯ ಚಿತ್ರದ ಉಲ್ಲೇಖ ಇಲ್ಲ. ಪ್ರತ್ಯಕ್ಷವಾಗಿಯೂ ರಾಯರಮಠದ ರಾಮನ ಪ್ರತಿಮೆಯಲ್ಲಿ ಆನೆಯ ಚಿತ್ರ ಕಂಡು ಬರುವುದಿಲ್ಲ. (ಇನ್ನು ಮೇಲೆ ಅನೆ ಇದೆ ಎಂದು ಸಮರ್ಥಿಸುವ ಹೊಸ ದಾಖಲೆಗಳು, ಹೇಳಿಕೆಗಳು ಸೃಷ್ಟಿಯಾದರೆ ಆಶ್ಚರ್ಯವಿಲ್ಲ ಬಿಡಿ...)

**ಒಟ್ಟಿನಲ್ಲಿ 'ದ್ವಿರದ' (ಗೆಜ್ಜೆ) 'ಬಿರದ' (ವೀರಕಂಕಣ) ಎಂಬ ಎರಡೂ ಪಾಠಗಳಿಗೆ ಅನುಗುಣವಾದ ಲಕ್ಷಣಗಳು ಶ್ರೀಮದುತ್ತರಾದಿಮಠದಲ್ಲಿರುವ ಶ್ರೀರಾಮನ ಪ್ರತಿಮೆಯಲ್ಲಿ ಕಂಡು ಬಂದಿರುವುದರಿಂದ ಉತ್ತರಾದಿಮಠದಲ್ಲೇ ಶ್ರೀಮೂಲರಾಮನ ಪ್ರತಿಮೆ ಇದೆ ಎಂದು ಸಿದ್ಧವಾಗುತ್ತಿದೆ.**

* * * *

# ಅಪಹರಣದ ಹಗರಣ

ಚತುರ್ಯುಗಮೂರ್ತಿಗಳಾದ ಚತುರ್ಮುಖಬ್ರಹ್ಮಕರಾರ್ಚಿತ ಶ್ರೀಮೂಲರಾಮ, ಮೂಲಸೀತಾ ಪ್ರತಿಮೆಗಳನ್ನು ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಕಳಿಂಗದೇಶದ ಗಜಪತಿರಾಜನ ಆಸ್ಥಾನದಿಂದ ಶ್ರೀನರಹರಿತೀರ್ಥರ ಮೂಲಕ ತರಿಸಿ ಪೂಜಿಸಿ ನಂತರ ತಮ್ಮ ಉತ್ತರಾಧಿಕಾರಿಗಳಾದ ಶ್ರೀಪದ್ಮನಾಭತೀರ್ಥರಿಗೆ ಕೊಟ್ಟದ್ದು ಸರ್ವವಿದಿತ. ಶ್ರೀಪದ್ಮನಾಭತೀರ್ಥರಿಂದ ಮುಂದುವರೆದ ಶ್ರೀಮದುತ್ತರಾದಿಮಠದ ಪರಂಪರೆಯಲ್ಲಿ ಬಂದ ಎಲ್ಲ ಪೀಠಾಧಿಪತಿಗಳು ಆ ದಿವ್ಯ ಮೂರ್ತಿಗಳನ್ನು ಪೂಜಿಸುತ್ತಾ ಬಂದಿರುತ್ತಾರೆ ಎಂಬ ವಿಷಯ ಅನೇಕ ಸಮಕಾಲೀನ ಆಧಾರಗಳಿಂದ ತಿಳಿದು ಬರುತ್ತದೆ. ಅದ್ಯಾಪಿ ಪ್ರಸ್ತುತ ಪೀಠಾಧಿಪತಿಗಳಾದ ಶ್ರೀ ಶ್ರೀಸತ್ಯಾತ್ಮತೀರ್ಥರಿಂದ ಮೂಲಸೀತಾಸಮೇತ ಶ್ರೀಮೂಲರಾಮದೇವರು, ದಿಗ್ವಿಜಯರಾಮದೇವರು ಇನ್ನಿತರ ಪ್ರತಿಮೆಗಳ ಸಹಿತ ಪೂಜೆಗೊಳ್ಳುತ್ತಲಿದ್ದಾರೆ.

ಶ್ರೀರಾಯರ ಮಠದ ಅಧಿಕೃತಲೇಖಕರು ತಮ್ಮ ಅಧಿಕೃತ ಪ್ರಕಟಣೆಗಳಲ್ಲಿ ಶ್ರೀಉತ್ತರಾದಿಮಠದಲ್ಲಿದ್ದ ಶ್ರೀಮೂಲರಾಮನನ್ನು ಕಳವು ಮಾಡಿ ತಮ್ಮ ಮಠಕ್ಕೆ ತೆಗೆದುಕೊಂಡು ಹೋಗಿದ್ದಾರೆಂದು ಬರೆಯುತ್ತ ಇಂದಿಗೂ ಅನೇಕ ರೀತಿ ಪ್ರಚಾರ ಮಾಡುತ್ತಲಿದ್ದಾರೆ. ಈ ಕಳುವಿನ ಪ್ರಕರಣ ನಡೆದದ್ದು ಶ್ರೀರಾಯರ ಮಠದ ಪರಂಪರೆಯಲ್ಲಿ ವಿರಾಜಮಾನರಾದ ಶ್ರೀಜಿತಾಮಿತ್ರತೀರ್ಥರ ಶಿಷ್ಯರಾದ ಶ್ರೀರಘುನಂದನತೀರ್ಥರ ಕಾಲದಲ್ಲಿ ಎಂದು ಹೇಳಿಕೊಳ್ಳುತ್ತಾರೆ. ಅದಕ್ಕೆ ತಕ್ಕಂತೆ ಶ್ರೀರಘುನಂದನರ ಚರಮಶ್ಲೋಕವನ್ನೂ ಹೇಳಿಕೊಳ್ಳುತ್ತಾರೆ. ಕಳುವಿನ ಪ್ರಕರಣಕ್ಕೆ ಪೋಷಕವಾಗುವಂತೆ ಕೆಲ ಆಧಾರಗಳನ್ನು ಮುಂದಿಡುತ್ತಾರೆ.

ಶ್ರೀಮೂಲರಾಮಪ್ರತಿಮೆಯ ಅಪಹರಣದ ಬಗ್ಗೆ ಶ್ರೀರಾಯರ ಮಠದವರು ಹೇಳಿಕೊಳ್ಳುವ ಕಥೆ ಹಾಗೂ ಅದಕ್ಕೆ ಪೋಷಕವಾಗುವಂತೆ ಅವರೇ ಮುಂದಿಟ್ಟಿರುವ ಆಧಾರಗಳು ಹೇಗೆ ಪರಸ್ಪರ ವಿರುದ್ಧವಾಗಿವೆ, ಕೃತ್ರಿಮವಾಗಿವೆ ಹಾಗೂ ಅಪ್ರಾಮಾಣಿಕವಾಗಿವೆ ಎಂಬುದನ್ನು ಈ ಭಾಗದಲ್ಲಿ ತೋರಿಸಿಕೊಡಲಾಗುತ್ತದೆ.

ಶ್ರೀರಾಯರ ಮಠದವರು ಹೇಳಿಕೊಳ್ಳುವ ಶ್ರೀಮೂಲರಾಮನ ಪ್ರತಿಮೆಯ ಅಪಹರಣದ ಕಥೆಯ ಸ್ಥೂಲ ಪರಿಚಯ ಹೀಗಿದೆ-

ಶ್ರೀರಾಮಚಂದ್ರತೀರ್ಥರು ಶ್ರೀವಿಬುಧೇಂದ್ರತೀರ್ಥರಿಗೆ ಆಶ್ರಮವನ್ನು ನೀಡಿ ದೇಶದಿಗ್ವಿಜಯಕ್ಕಾಗಿ ಉತ್ತರಭಾರತಕ್ಕೆ ಕಳಿಹಿಸುತ್ತಾರೆ. ಇತ್ತ ಶ್ರೀರಾಮಚಂದ್ರತೀರ್ಥರು ಮಳಖೇಡದ ಹತ್ತಿರ ಇರುವ ಯರಗೋಳಕ್ಕೆ ಬರುತ್ತಾರೆ. ಅಲ್ಲಿ ಅವರ ಅವಸಾನ ಕಾಲ ಸಮೀಪಿಸುತ್ತದೆ. ಅಲ್ಲಿಯ ಪ್ರಮುಖರನ್ನೆಲ್ಲ ಕರೆಸಿ ಸಂಸ್ಥಾನಪ್ರತಿಮಾ ಹಾಗೂ ಮತ್ತಿತರ ಅಮೂಲ್ಯಪದಾರ್ಥಗಳನ್ನು ಅವರಿಗೆ ಒಪ್ಪಿಸಿ ''ನಮ್ಮ ಶಿಷ್ಯರಾದ ವಿಭುದೇಂದ್ರರು ಇನ್ನೂ ಕಾಶಿಯಿಂದ ಮರಳಿ ಬಂದಿಲ್ಲ. ಅವರು ಬಂದಮೇಲೆ ಅವುಗಳನ್ನು ಅವರಿಗೆ ಒಪ್ಪಿಸಬೇಕೆಂದು ಹೇಳಿ ವೃಂದಾವನಸ್ಥರಾಗುತ್ತಾರೆ.

ಶ್ರೀರಾಮಚಂದ್ರತೀರ್ಥರಿಗೆ ವಿದ್ಯಾನಿಧಿಗಳೆಂಬ ಶಿಷ್ಯರೇ ಇರಲಿಲ್ಲ. ಉತ್ತರಭಾರತದ ಸಂಚಾರದಲ್ಲಿದ್ದ ಶ್ರೀವಿಬುಧೇಂದ್ರತೀರ್ಥರು ಮರಳಿ ಬಂದು ಸಂಸ್ಥಾನ ಸ್ವೀಕರಿಸುವುದರೊಳಗೆ ಉಡುಪಿಯ ಅಷ್ಟಮಠಗಳಲ್ಲೊಂದಾದ ಶಿರೂರು ಮಠದ ಸನ್ಯಾಸಿಗಳಾದ ವಿದ್ಯಾನಿಧಿಗಳು ಎಂಬುವರು ಯರಗೋಳಕ್ಕೆ ಸಂಚಾರತ್ವೇನ ಬಂದರು. ಅಲ್ಲಿ ಮಹಾಸಂಸ್ಥಾನದ ಶ್ರೀಮೂಲಸೀತಾರಾಮಪ್ರತಿಮೆಗಳು ಇರುವುದನ್ನು ತಿಳಿದುಕೊಂಡು ಅವುಗಳನ್ನು ಕೆಲಕಾಲ ಪೂಜೆ ಮಾಡಬೇಕೆಂಬ ಆಸೆಯಿಂದ ಯರೋಗಳದ ಪ್ರಮುಖರನ್ನು ಜನರ ಮೂಲಕ ಕೇಳಿಸಿದರು. ಆ ಪುರಪ್ರಮುಖರ ಮನವೊಲಿಸಿ ಆ ಪ್ರತಿಮೆಗಳನ್ನು ತೆಗೆದುಕೊಂಡು ಕೆಲಕಾಲ ಅವುಗಳನ್ನು ಪೂಜಿಸಿದರು.

ನಂತರ ಆ ಉತ್ತಮಪ್ರತಿಮೆಗಳನ್ನು ಸುಲಭವಾಗಿ ಯಾರು ತಾನೇ ಬಿಟ್ಟು ಕೊಡುತ್ತಾರೆ? ಆದ್ದರಿಂದ ರಾಮಚಂದ್ರತೀರ್ಥರ ಪರಿವಾರದಲ್ಲಿದ್ದ 63 ಜನ ನೌಕರರನ್ನು ಆಶ್ರಯಿಸಿ ಅವರಿಗೆ ಹಣದ ಲೋಭವನ್ನು ತೋರಿಸಿ ಪ್ರತಿಮೆಗಳನ್ನು ತೆಗೆದುಕೊಂಡು ಹೋಗಿಬಿಟ್ಟರು. (ಗುರುಚರಿತೆ)

**ವಿಜಯೀಂದ್ರವಿಜಯದ ಪ್ರಕಾರ** - ಶ್ರೀವಿಬುಧೇಂದ್ರರು ದಿಗ್ವಿಜಯಕ್ಕೆ ಹೋಗಿ ಬಹಳದಿನಗಳಾಗುತ್ತಿರಲು ಶ್ರೀರಾಮಚಂದ್ರತೀರ್ಥರು ಅವರಿಗೆ ಪತ್ರಿಕೆಯನ್ನು ಬರೆದು ಕಳಿಸಿ ಪ್ರತಿಮೆಗಳನ್ನು ಯರಗೋಳದ ಪ್ರಮುಖನ ಮನೆಯಲ್ಲಿಟ್ಟು ವಿಬುಧೇಂದ್ರರಿಗೆ ನೀಡಲು ತಿಳಿಸಿ ವೃಂದಾವನಸ್ಥರಾಗುತ್ತಾರೆ. ಶ್ರೀರಾಮಚಂದ್ರತೀರ್ಥರ ನಿರ್ಯಾಣವಾದ ಮೇಲೂ ಶ್ರೀವಿಬುಧೇಂದ್ರತೀರ್ಥರು ಕಾಶಿವಾಸದ ಉತ್ಸಾಹದಿಂದ ಮರಳಿ ಬರಲಿಲ್ಲ. ಈ ಪ್ರಸಂಗದಲ್ಲಿ ತುಳುದೇಶದ ಕೃಷ್ಣ ಎಂಬ ಬ್ರಾಹ್ಮಣ ಗಂಗಾಯಾತ್ರೆಗೆ ಹೋಗುತ್ತಾ ಮಾರ್ಗಮಧ್ಯದಲ್ಲಿ ಯರಗೋಳಕ್ಕೆ ಬರುತ್ತಾನೆ. ಶ್ರೀರಾಮಚಂದ್ರತೀರ್ಥರ ಶಿಷ್ಯರಾದ ಕ್ರೂರಿಗಳಾದ, ದುಷ್ಟರಾದ, ಕೃತಘ್ನರಾದ, ನಿಷ್ಠುರರಾದ, ಮಂತ್ರ-ತಂತ್ರಕೋವಿದರಾದ, ಕ್ರೂರಿಗಳಾದ ಜನರು ಸೇರಿ ಆ ಬ್ರಾಹ್ಮಣನಿಗೆ ಸನ್ನ್ಯಾಸಕೊಟ್ಟು ಸಂಸ್ಥಾನ ಪೆಟ್ಟಿಗೆ ಕೊಟ್ಟುಬಿಟ್ಟರು. ಮಠದ 63ಜನ ಕಾರ್ಮಿಕರ ಜೊತೆ ರಾಜಿಮಾಡಿಕೊಂಡು ಪಿತೂರಿಮಾಡಿ ಮೂಲರಾಮ-ಸೀತೆ ಹಾಗೂ ಇನ್ನಿತರ ಮಹಾಸಂಸ್ಥಾನದ್ಯೋತಕ ಪೆಟ್ಟಿಗೆಯನ್ನು ತೆಗೆದು ಕೊಂಡು ಶ್ರೀವಿದ್ಯಾನಿಧಿಗಳು ಹೊರಟುಬಿಟ್ಟರು.

ಶ್ರೀವಿಬುಧೇಂದ್ರತೀರ್ಥರು ಯರಗೋಳಕ್ಕೆ ಮರಳಿ ಬಂದಮೇಲೆ ಅವರಿಗೆ ನಡೆದ ವಿಷಯವೆಲ್ಲಾ ತಿಳಿಯಿತು. ತಮಗೆ ಮೂಲರಾಮನ ಪೂಜೆ ಮಾಡುವ ಸುಯೋಗವಿಲ್ಲವೆಂದು ಅವರು ದುಃಖಪಟ್ಟರು. ಇದರಿಂದ ಶ್ರೀವಿಬುಧೇಂದ್ರರಿಗೆ ಶ್ರೀಮೂಲರಾಮನ ಪೂಜೆಯ ಭಾಗ್ಯ ತಪ್ಪಿ ಹೋಯಿತು. ಆ ಪವಿತ್ರಪ್ರತಿಮೆಗಳನ್ನು ಪೂಜೆಮಾಡಲು ತಮಗೆ ಅವಕಾಶ ಸಿಗದಿದ್ದರಿಂದ ತಾವಿನ್ನೊಮ್ಮೆ ಅವತರಿಸಬೇಕಾಗುವುದೇನೋ ಎಂದು ಅವರು ಚಿಂತಿಸಿದರು. ಅದಕ್ಕೆ ಸರಿಯಾಗಿ ತಮ್ಮ ಪರಮಶಿಷ್ಯನಿಗೆ ಆ ಪ್ರತಿಮೆಗಳು ಲಭ್ಯವಾಗುತ್ತದೆಂದು ಸೂಚನೆಯಾಯಿತು.

ಶ್ರೀವಿಬುಧೇಂದ್ರತೀರ್ಥರು ಶ್ರೀಜಿತಾಮಿತ್ರರಿಗೆ, ಶ್ರೀಜಿತಾಮಿತ್ರರು ಶ್ರೀರಘುನಂದನರಿಗೆ ಆಶ್ರಮ ಕೊಟ್ಟು ಶ್ರೀಮೂಲರಾಮದೇವರ ಪ್ರತಿಮೆಯನ್ನು ಮರಳಿ ತರಲು ಆಜ್ಞಾಪಿಸುತ್ತಾರೆ. ಅದೇ ರೀತಿಯಾಗಿ ಗುರುಗಳು ಶ್ರೀರಘುನಂದನರ ಸ್ವಪ್ನದಲ್ಲಿ ಬಂದು ಶ್ರೀಮೂಲಸೀತಾರಾಮರ ಪ್ರತಿಮೆಗಳು ನಿಮಗೆ ಲಬ್ಧವಾಗುತ್ತವೆ ಎಂದೂ ಸೂಚಿಸುತ್ತಾರೆ. ಗುರುಗಳ ಆಜ್ಞೆಯಂತೆ ಶ್ರೀರಘುನಂದನತೀರ್ಥರು ಪ್ರತಿಮೆಯನ್ನು ಮರಳಿ ಪಡೆಯಲು ನಿರ್ಧರಿಸಿದರು. ನಂತರ ನ್ಯಾಯವಾದ ಮಾರ್ಗದಲ್ಲಿ ಪ್ರತಿಮೆಗಳನ್ನು ಪಡೆಯುವುದು ಅಸಾಧ್ಯವೆಂದು ನಿಶ್ಚಯಿಸಿ ಆಪ್ತರೊಡನೆ ಸಮಾಲೋಚನೆ ಮಾಡಿ ಅನ್ಯಾಯವಾದ ಮಾರ್ಗದಿಂದ ಉಪಾಯಾದಿಗಳನ್ನು ಮಾಡಿ(ಗು.ಚ. ಪು.128), ಚಾಣಾಕ್ಷತನದಿಂದ ತಮ್ಮ ಶಿಷ್ಯನಾದ ಬಾಡದ ಚಂದ್ರಭಟ್ಟನಿಗೆ ಸಂಪತ್ತನ್ನು ನೀಡುವ ಮೂಲಕ ಮೂಲರಾಮಸೀತೆಯ (ಮೂ.ಮಠೇ ಪು.16)ಪ್ರತಿಮೆಗಳನ್ನು ಹೇಗಾದರೂ ಮಾಡಿ ಕಳವು ಮಾಡಿಕೊಂಡು ಬಾ ಎಂದು ಆಜ್ಞಾಪಿಸಿದರು.

ಆ ಚಂದ್ರಭಟ್ಟನು ಉತ್ತರಾದಿಮಠಕ್ಕೆ ಬಂದು ಆಗಿನ ಶ್ರೀಗಳವರಲ್ಲಿ ಎಡಬಲಸೇವೆಗಾಗಿ ಸೇರಿಕೊಂಡು ಶ್ರೀಪಾದಂಗಳವರ ವಿಶ್ವಾಸವನ್ನು ಪಡೆದುಕೊಂಡನು. ಒಂದಾನೊಂದು ದಿನ ಏಕಾದಶೀ (ಉತ್ಥಾನದ್ವಾದಶೀ?) ದೇವರನ್ನು ಭುಜಂಗಿಸದೇ ಇದ್ದಾಗ ರಾತ್ರೋರಾತ್ರಿ ಶ್ರೀಮೂಲರಾಮ ಪ್ರತಿಮೆಯನ್ನು ಮಾತ್ರ ಕಳ್ಳತನ ಮಾಡಿಕೊಂಡು ಹೋಗಿ ಶ್ರೀರಘುನಂದನರಿಗೆ ಒಪ್ಪಿಸಿದನು.

ಶ್ರೀರಘುನಂದನರು ಅವನ ಕಳ್ಳತನಕ್ಕೆ ಮೆಚ್ಚಿ ಸನ್ಮಾನ, ಹುದ್ದೆ, ಗೌರವಾದಿಗಳನ್ನು ಕೊಟ್ಟು ಸನ್ಮಾನಿಸಲು ತಮ್ಮ ಶಿಷ್ಯರಿಗೆ ಆಜ್ಞೆ ಮಾಡಿ ತಾವೂ ಆ ಕಳ್ಳತನವನ್ನು ಶ್ಲಾಘಿಸಿದರು. ಶ್ರೀರಘುನಂದನರ ಶಿಷ್ಯರಾದ ಶ್ರೀಸುರೇಂದ್ರತೀರ್ಥರು ಆ ಬಾಡದ ಚಂದ್ರಭಟ್ಟನಿಗೆ ಉನ್ನತಹುದ್ದೆ (ಪಾರುಪತ್ತೇದಾರ) ಗೌರವಾದಿಗಳನ್ನು ನೀಡಿ ಅದು ಆಚಂದ್ರಾರ್ಕವಾಗಿ ನಡೆಯುವಂತೆ ಒಂದು ತಾಮ್ರಪತ್ರವನ್ನು ಕೊಟ್ಟರು.

ಈ ಘಟನೆಗಳಿಗೆ ಅವರು ಕೊಡುವ ಆಧಾರಗಳೆಂದರೆ ವಿಜಯೀಂದ್ರವಿಜಯ ಕಾವ್ಯ , ತಾಮ್ರಪತ್ರ , ಪ್ರಾಚೀನತಮಕಲ್ಲಚ್ಚಿನಲ್ಲಿರುವ ಶ್ರೀರಘುನಂದನರ ಚರಮಶ್ಲೋಕ, ಅರ್ಚಾಗತಿಕ್ರಮ.

ಮೂ.ಮಠೇ ಲೇಖಕರು ಇವುಗಳನ್ನು ತಮ್ಮ ಪುಸ್ತಕದಲ್ಲಿ ಛಾಪಿಸಿದ್ದಾರೆ. ಈಗಾಗಲೇ ಈ ನಾಲ್ಕು ಆಧಾರಗಳ ಬಗ್ಗೆ, ಅವುಗಳ ಅಪ್ರಾಮಾಣಿಕತೆಯ ಬಗ್ಗೆ ವಿಸ್ತಾರವಾಗಿ ಹಿಂದಿನ ಭಾಗದಲ್ಲಿ ಚರ್ಚೆ ಮಾಡಲಾಗಿದೆ.

**ಪ್ರತಿಮೆಯ ಅಪಹರಣದ ಘಟನೆ ನಡೆದದ್ದು ಶ್ರೀರಘುನಂದನರ ಆಳ್ವಿಕೆಯ ಕೊನೆಯ ಭಾಗದಲ್ಲಿ ಎಂಬುದಾಗಿ ರಾಯರ ಮಠದ ಎಲ್ಲ ಅಧಿಕೃತ ಲೇಖಕರು ಒಮ್ಮತದಿಂದ ಒಪ್ಪಿಕೊಂಡಿದ್ದಾರೆ.** ಪ್ರತಿಮೆಯ ಅಪಹರಣ ನಡೆದದ್ದು ಆನಂದನಾಮಸಂವತ್ಸರದಲ್ಲಿ ಎಂದೂ ಒಪ್ಪುತ್ತಾರೆ.

ಈ ಹಿನ್ನೆಲೆಯಲ್ಲಿ ರಾಯರ ಮಠದವರೇ ಛಾಪಿಸಿರುವ ಆಧಾರಗಳ ಪ್ರಕಾರ ಶ್ರೀರಘುನಂದನರ ಆಳ್ವಿಕೆಯ ಕಾಲ ಯಾವುದು? ಹಾಗೂ ಪ್ರತಿಮೆ ಅಪಹರಣದ ಕಾಲ ಯಾವುದು? ಎನ್ನುವುದನ್ನು ನೋಡೋಣ. ನಂತರ ಅವೆರಡರಕ್ಕೂ ಹೊಂದಾಣಿಕೆ ಇದೆಯೋ ಇಲ್ಲವೋ ಸ್ವಲ್ಪ ವಿಮರ್ಶೆ ಮಾಡೋಣ.

## ಮೂಲರಾಮಪ್ರತಿಮೆ ಅಪಹರಣದ ಕಾಲ

- **ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶೀ (ಮೂ.ಮಠೇ ಪುಸ್ತಕದಲ್ಲಿ ಮುದ್ರಿಸಿದ ತಾಮ್ರಪತ್ರ)**
- **ಕ್ರಿ.ಶ. 1493 ಕಾರ್ತಿಕ ಶುದ್ಧ ದ್ವಾದಶಿಯ (ಉತ್ಥಾನದ್ವಾದಶೀ) ದಿನ ಬೆಳಿಗ್ಗೆ (ಮೂ.ಮಠೇ ಪುಸ್ತಕದ ಪುಟ** viii, xi, **16, 126)**
- **ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ಏಕಾದಶಿ ರಾತ್ರಿ** - (ಗುರುಚರಿತೆ ಪುಟ-128, 1949) (ಏಕಾದಶಿಯೋ? ದ್ವಾದಶಿಯೋ? ಎಂಬುದರ ಬಗ್ಗೆ ಅವರಿಗೇ ನಿಖರತೆ ಇಲ್ಲ ಎಂಬುದು ಗಮನಾರ್ಹ.)

## ಶ್ರೀ ರಘುನಂದನತೀರ್ಥರ ಕಾಲ

- ಶಾ.ಶ. 1368 ರಿಂದ 1395 ಅಂದರೆ, ಕ್ರಿ.ಶ. 1447ರಿಂದ ಕ್ರಿ.ಶ. 1474 (ಮೂ.ಮಠೇ ಪುಸ್ತಕದಲ್ಲಿ ಛಾಪಿಸಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚು ಪುಟ 133)
- ಕ್ರಿ.ಶ. 1497 ಶ್ರೀ ಜಿತಾಮಿತ್ರರ ಅವಸಾನ ಕಾಲ. (''ಶ್ರೀ ಜಿತಾಮಿತ್ರತೀರ್ಥರು'' ಪುಟ 45, 2003) ಅಂದರೆ ಈ ಲೇಖಕರ ಪ್ರಕಾರ ಶ್ರೀ ರಘುನಂದನರ ಆಳ್ವಿಕೆಯ ಆರಂಭದ ಕಾಲ ಕ್ರಿ.ಶ. 1497.
- ಕ್ರಿ.ಶ. 1492 ರಿಂದ 1504 (ಗುರುಚರಿತೆ 1949, ಪುಟ 127)
- ಕ್ರಿ.ಶ. 1475ರಿಂದ ಕ್ರಿ.ಶ. 1504 (ಮೂ.ಮಠೇ ಪುಟ 91)
- ಶ್ರೀ ಜಿತಾಮಿತ್ರರ ಅವಸಾನ ಕಾಲ ಕೀಲಕ ಸಂವತ್ಸರ, ಅಂದರೆ ಕ್ರಿ.ಶ. 1488-89. ಅಂದರೆ

ಶ್ರೀ ರಘುನಂದನರ ಆಳ್ವಿಕೆಯ ಆರಂಭದ ಕಾಲ ಕ್ರಿ.ಶ. 1488-89. (ವಿಜಯೀಂದ್ರವಿಜಯ)

ಈ ಅಪಹರಣದ ಹುಯಿಲನ್ನು ಮೊಟ್ಟಮೊದಲ ಬಾರಿಗೆ ಎಬ್ಬಿಸಿದ ಮಹಾರಾಯರು ವಿಜಯೀಂದ್ರ-ವಿಜಯಕಾರರಾದ ಮಧ್ವಕವಿಗಳು. ಮುಖ್ಯವಾದ ಶ್ರೀವಿಜಯೀಂದ್ರರ ವಿಷಯ ಬಿಟ್ಟು ತಮ್ಮ ಈ ಕೃತಿಯನ್ನು ಪ್ರತಿಮೆಯ ಅಪಹರಣದ ವಿಷಯಕ್ಕೇ ಮೀಸಲಿಟ್ಟ ಮಧ್ವಕವಿಗಳು ಶ್ರೀ ರಘುನಂದನರ ಕಾಲದ ಬಗ್ಗೆ ಮೌನ ವಹಿಸಿರುವುದು ಅತ್ಯಂತ ಗಮನಾರ್ಹವಾದ ವಿಷಯ. ಆದರೆ ಶ್ರೀ ಜಿತಾಮಿತ್ರರ ನಿರ್ಯಾಣ ಕಾಲವನ್ನು ಅಶ್ವಯುಜ ಕೃಷ್ಣ ಅಷ್ಟಮೀ ಕೀಲಕ ಸಂವತ್ಸರ ಎಂದಿದ್ದಾರೆ. ಹೀಗಾಗಿ ಈ ತಿಥಿಯನ್ನೇ ಶ್ರೀರಘುನಂದನರ ಆಳ್ವಿಕೆಯ ಆರಂಭವೆಂದಿಟ್ಟುಕೊಂಡರೆ ಕ್ರಿ.ಶ. 1489 ಎಂದಾಗುತ್ತದೆ.

**ವಾಚಕರೇ ಗಮನಿಸಿ!** ಶ್ರೀ ರಾಯರ ಮಠದ ಅಧಿಕೃತ ಲೇಖಕರಲ್ಲೇ ಶ್ರೀ ರಘುನಂದನರ ಆಳ್ವಿಕೆಯ ಕಾಲದ ಬಗ್ಗೆ ನಿಶ್ಚಿತ ನಿಲುವಿಲ್ಲ. ಯಾರ ಮಾತನ್ನು ನಂಬಬೇಕು? ಯಾವ ಆಧಾರದ ಮೇಲೆ ನಂಬಬೇಕು?

**ಇಸ್ವಿಗಳ ಇಕ್ಕಟ್ಟು**

- ಮೂ.ಮಠೇ ಪುಸ್ತಕದಲ್ಲಿ ಛಾಪಿಸಿರುವ ಪ್ರಾಚೀನತಮ ಕಲ್ಲಚ್ಚಿನ ಪ್ರಕಾರ ಶ್ರೀ ರಘುನಂದನರ ನಿರ್ಯಾಣ ಕಾಲ ಶಾ.ಶ. 1395 (ಕ್ರಿ.ಶ. 1474). ಪ್ರತಿಮೆ ಅಪಹರಣವಾದದ್ದು ಕ್ರಿ. ಶ. 1493ರಲ್ಲಿ (ಮೂ.ಮಠೇ). ಅಂದರೆ 1493ರಲ್ಲಿ ಶ್ರೀ ರಘುನಂದನರು ಇರಲೇ ಇಲ್ಲ. ಅರ್ಥಾತ್ ಅಪಹರಣದ ಕತೆ ಶುದ್ಧ ಸುಳ್ಳು.
- ಶ್ರೀ ಜಿತಾಮಿತ್ರತೀರ್ಥರು ಎಂಬ ಪುಸ್ತಕದ ಪ್ರಕಾರ ಶ್ರೀರಘುನಂದನರ ಆಳ್ವಿಕೆಯ ಕಾಲ ಆರಂಭವಾದದ್ದು ಕ್ರಿ.ಶ.1497. ಆದರೆ ಪ್ರತಿಮೆ ಅಪಹರಣವಾದದ್ದು ಕ್ರಿ.ಶ.1493 (ಮೂ.ಮಠೇ). ಅಂದರೆ ಶ್ರೀರಘುನಂದನರು ಇನ್ನೂ ಪೀಠಕ್ಕೆ ಬಂದೇ ಇಲ್ಲ. ಹೀಗಾಗಿ ಅಪಹರಣದ ಕಥೆ ಸುಳ್ಳೆಂದಾಯಿತು.
- ಗುರುಚರಿತೆಕಾರರು ಅಪಹರಣದ ಕಾಲವನ್ನು ಹೊಂದಿಸಲು ತಮ್ಮ ಪುಸ್ತಕದಲ್ಲಿ ಶ್ರೀ ರಘುನಂದನರ ಕಾಲದ ಬಗ್ಗೆ ಸಂವತ್ಸರಗಳ ಹೆಸರುಗಳನ್ನು ಛಾಪಿಸದೇ ಕೇವಲ ಇಸವಿಗಳನ್ನು ಮಾತ್ರ ಛಾಪಿಸಿ ವಂಚನೆ ಮಾಡಿದ್ದಾರೆ. ಗುರುಚರಿತೆಕಾರರು ಕ್ರಿ.ಶ. 1492 ರಲ್ಲಿ ಶ್ರೀ ರಘುನಂದನರ ಆಳ್ವಿಕೆಯ ಆರಂಭ ಎಂದು ಛಾಪಿಸಲು ಆಧಾರವೇನು?. ಅವರೇ ಹೇಳಿಕೊಂಡಂತೆ ಅವರ ಮಠದ ಪ್ರಾಚೀನ ದಾಖಲೆಗಳನ್ನೆಲ್ಲಾ ಪರಿಶೀಲಿಸಿ ಬರೆದದ್ದೆಂದ ಮೇಲೆ ಕ್ರಿ.ಶ 1488 ಎಂದು ಸೂಚಿಸುವ ವಿಜಯೀಂದ್ರವಿಜಯ ಕಾವ್ಯಕ್ಕೆ ಹಾಗೂ ಕ್ರಿ.ಶ. 1447 ಎಂದು ಹೇಳುವ ಪ್ರಾಚೀನತಮ ಕಲ್ಲಚ್ಚಿಗೆ ವಿರುದ್ಧವಾಗಿ ಹೇಗೆ ಬರೆದರು?
- ಇನ್ನು ಮೂ.ಮಠೇ ಲೇಖಕರು ಶ್ರೀರಘುನಂದನರ ಕಾಲವನ್ನು ಕ್ರಿ.ಶ. 1475 ರಿಂದ 1504 ಎಂದು ಬರೆದಿದ್ದಾರೆ (ಪುಟ 91) ಈ ಕಾಲಮಾನವು ಅವರ ಮಠದ ಪ್ರಾಚೀನ ದಾಖಲೆಗಳಾದ ಪ್ರಾಚೀನತಮ ಕಲ್ಲಚ್ಚು (ಶ್ರೀಸುಗುಣೇಂದ್ರತೀರ್ಥರ ಕಾಲದ್ದು ಕ್ರಿ.ಶ.1872-1884) ಹಾಗೂ ವಿಜಯೀಂದ್ರವಿಜಯಕ್ಕೆ ಮತ್ತು ಹಿಂದಿನ ಅಧಿಕೃತ ಲೇಖಕರಾದ ಗುರುಚರಿತೆಕಾರರ, ಅಜಯ್ಯ ವಿಜಯೀಂದ್ರಕಾರರ ನಿಲುವಿಗೆ ವಿರುದ್ಧವಾಗಿದೆ. ಈ ಹೊಸಕಾಲಮಾನಕ್ಕೆ ಆಧಾರ ಯಾವುದು? ಪ್ರತಿಮೆಯ ಅಪಹರಣದ ಸುಳ್ಳುಕಥೆಯನ್ನು ಹೊಂದಿಸುವುದಕ್ಕಾಗೆಯೇ ಈ ಹೊಸ ಕಾಲಮಾನವನ್ನು ಕಲ್ಪನೆ ಮಾಡಿದ್ದಾರೆ ಎನ್ನದೇ ವಿಧಿಯಿಲ್ಲ.
- ರಾಯರ ಮಠದ ಎಲ್ಲಾ ದಾಖಲೆಗಳ ಪ್ರಕಾರ ಕ್ರಿ.ಶ. 1475ರಿಂದ ಕ್ರಿ.ಶ. 1490 ಶ್ರೀ ವಿಬುಧೇಂದ್ರರ ಆಳ್ವಿಕೆಯ ಕಾಲವಾಗಿದೆ. (ಗು.ಚ, ಜಿತಾಮಿತ್ರರು). ಮೂ.ಮಠೇ ಲೇಖಕರ ಪ್ರಕಾರ ಶ್ರೀ ರಘುನಂದನರ

ಆಳ್ವಿಕೆಯ ಕಾಲದ ಆರಂಭ ಕ್ರಿ.ಶ. 1475 ಎಂದೇ ಒಪ್ಪಿದರೆ ಶ್ರೀ ವಿಬುಧೇಂದ್ರರ ವಾಸ್ತವಿಕ ಕಾಲ ಯಾವುದು? ಎಂಬ ಪ್ರಶ್ನೆ ಏಳುತ್ತದೆ.

❖ ಅಲ್ಲದೇ, ಗುರುಚರಿತೆಕಾರರು ಹೇಳುವಂತೆ ಕ್ರಿ.ಶ. 1492 ರಿಂದ 1504 ರ ವರೆಗೆ ಶ್ರೀರಘುನಂದನರ ಆಳ್ವಿಕೆ ಅಥವಾ ಮೂ.ಮಠೇ ಹೇಳುವಂತೆ ಕ್ರಿ.ಶ. 1475 ರಿಂದ 1504 ಎಂದು ಒಪ್ಪಿದಲ್ಲಿ ಮತ್ತೊಂದು ಗೊಂದಲ ನಿರ್ಮಾಣವಾಗುತ್ತದೆ. ಕ್ರಿ.ಶ. 1492 ರಲ್ಲಿ ಪೀಠಕ್ಕೆ ಬಂದ (ಪೀಠದಲ್ಲಿ ಇದ್ದ) ಶ್ರೀರಘುನಂದನರು ಕ್ರಿ.ಶ.1493 ರಲ್ಲಿ ಬಾಡದ ಚಂದ್ರಭಟ್ಟ ಮೂಲರಾಮಪ್ರತಿಮೆಯನ್ನು ತಂದು ಕೊಟ್ಟ ಮೇಲೆ ಮುಂದೆ 11 ವರ್ಷ (ಕ್ರಿ.ಶ. 1504 ರ ವರೆಗೆ) ತಾವೇ ಪೀಠದಲ್ಲಿದ್ದರು. ಹೀಗಿದ್ದರೂ ಅಂತಹ ಮಹಾಕಾರ್ಯ ಮಾಡಿದ, ತಮ್ಮ ಆಜ್ಞೆಯನ್ನು ಪಾಲಿಸಿದ ಆ ಚಂದ್ರಭಟ್ಟನಿಗೆ ತಾಮ್ರಪತ್ರವನ್ನು, ಅಧಿಕೋದ್ಯೋಗವನ್ನು ತಾವೇ ನೀಡಬಹುದಿತ್ತಲ್ಲವೇ? ಶಿಷ್ಯರಾದ ಶ್ರೀಸುರೇಂದ್ರರಿಗೆ ಆಜ್ಞೆ ಮಾಡಿ ಹೋಗಲು ಕಾರಣವೇನು?

❖ ತಾಮ್ರಪತ್ರದ ಒಕ್ಕಣಿಕೆಯ ಪ್ರಕಾರ ವಿಚಾರಮಾಡುವುದಾದರೆ ಪ್ರತಿಮೆಯ ಅಪಹರಣದ ಕಾಲದಲ್ಲಿ ಶ್ರೀರಘುನಂದನರು ಮಹಾವೃದ್ಧರಾಗಿದ್ದರು. ನಂತರ ಬಹಳ ಕಾಲ ಇರಲಿಲ್ಲ. ಇದನ್ನೇ ಗುರುಚರಿತೆಯಲ್ಲೂ ''ಅಲ್ಲಿಂದ ದಕ್ಷಿಣದ ಕಡೆಗೆ ಸಂಚಾರ ಹೊರಟರು. ಅಲ್ಲಿಂದ ಕೆಲಕಾಲ ಸಂಚಾರ ಮಾಡುತ್ತಿದ್ದು ಅವರು ವಿಜಯನಗರದ ರಾಜಧಾನಿಯಾದ ಪಂಪಾಕ್ಷೇತ್ರದಲ್ಲಿ ಚಕ್ರತೀರ್ಥದ ಹತ್ತಿರ ಬೃಂದಾವನಸ್ಥರಾದರು'' (ಗು.ಚ. 1949, ಪು. 129) 11 ವರ್ಷದ ದೀರ್ಘ ಅವಧಿಯನ್ನು ಕೆಲಕಾಲ ಎಂದು ಯಾವ ಸಾಮಾನ್ಯ ತಿಳುವಳಿಕೆ ಇರುವವನೂ ಹೇಳಲು ಸಾಧ್ಯ ಇಲ್ಲ. ಇದರಿಂದ ಗುರುಚರಿತೆಕಾರರಿಗೂ ಪ್ರತಿಮೆ ಅಪಹರಣದ ನಂತರ ಶ್ರೀರಘುನಂದನರು ಹೆಚ್ಚು ಕಾಲ ಇರಲಿಲ್ಲ ಎನ್ನುವುದೇ ಸಮ್ಮತ ಎಂದು ಸಿದ್ಧವಾಗುತ್ತದೆ. ಶ್ರೀರಘುನಂದನರು ಸ್ವಯಂ ತಾವೇ ಚಂದ್ರಭಟ್ಟನಿಗೆ ತಾಮ್ರಪತ್ರಾದಿಗಳನ್ನು ನೀಡಿ ಸನ್ಮಾನಿಸಲು ಸಾಧ್ಯವಾಗದ ಕಾರಣ ಶಿಷ್ಯರಾದ ಶ್ರೀಸುರೇಂದ್ರರಿಗೆ ಚಂದ್ರಭಟ್ಟನಿಗೆ ಆಧಿಕೋದ್ಯೋಗಾದಿಗಳನ್ನು ನೀಡುವ ಆದೇಶ ನೀಡಿದರು. ಅದರಂತೆ ಶ್ರೀಸುರೇಂದ್ರರು ತಾಮ್ರಪತ್ರವನ್ನು ನೀಡಿದರು ಇತ್ಯಾದಿ ಅವರ ಹೇಳಿಕೆಗಳು, ಊಹೆಗಳೂ ಹೊಂದಾಣಿಕೆಯಾಗುತ್ತವೆ.

❖ ಗುರುಚರಿತೆ, ಮೂ.ಮಠೇ ಹೇಳುವ ಪ್ರಕಾರ ಕ್ರಿ.ಶ 1504 ಶ್ರೀರಘುನಂದನರ ನಿರ್ಯಾಣ ಎಂದು ತಿಳಿದರೆ ನಿರ್ಯಾಣಕ್ಕಿಂತೂ 11 ವರ್ಷ ಮೊದಲೇ ಕ್ರಿ.ಶ.1493 ರಲ್ಲಿ ಪ್ರತಿಮೆಯ ಅಪಹರಣ ಎನ್ನುವುದು ಮೇಲೆ ಹೇಳಿದ ಕಾರಣಗಳಿಂದ ಅಸಂಗತವಾಗುತ್ತದೆ. ಪ್ರತಿಮೆಯ ಅಪಹರಣ ಕ್ರಿ.ಶ.1493 ಎನ್ನುವುದೇ ದೃಢವಾದರೆ ಶ್ರೀರಘುನಂದನರ ನಿರ್ಯಾಣ ಕ್ರಿ.ಶ.1504 ಎನ್ನುವುದು ಅಸಮಂಜಸವಾಗುತ್ತದೆ. ತಾಮ್ರಪತ್ರದ ಒಕ್ಕಣಿಕೆ, ತಾಮ್ರಪತ್ರಪ್ರದಾನ ಇತ್ಯಾದಿಗಳು ಅಸ್ವರಸವಾಗುತ್ತವೆ.

**ಇನ್ನೂ ಒಂದು ಗೊಂದಲ ಹೇಗಿದೆ ನೋಡಿ.** ಗುರುಚರಿತೆ, ಅಜಯ್ಯವಿಜಯೀಂದ್ರರು ಕೃತಿಗಳ ಪ್ರಕಾರ ಶ್ರೀವಿಬುಧೇಂದ್ರತೀರ್ಥರ ನಿರ್ಯಾಣ ಕಾಲ ಕ್ರಿ.ಶ. 1490 ಸಾಧಾರಣ ಸಂವತ್ಸರ. ವಿಜಯೀಂದ್ರವಿಜಯದ ಪ್ರಕಾರ ಶ್ರೀಜಿತಾಮಿತ್ರರ ನಿರ್ಯಾಣ ಕಾಲ ಕೀಲಕ ಸಂವತ್ಸರ. ಸಂವತ್ಸರಗಳ ಕ್ರಮದಲ್ಲಿ ಪರಾಭವ, ಪ್ಲವಂಗ, ಕೀಲಕ, ಸೌಮ್ಯ , ಸಾಧಾರಣ ಎಂದಿದೆ. ಅಂದರೆ ಗುರುಗಳಾದ ಶ್ರೀವಿಬುಧೇಂದ್ರತೀರ್ಥರ ನಿರ್ಯಾಣಕ್ಕಿಂತಲೂ ಎರಡು ವರ್ಷ ಮೊದಲು ಶ್ರೀಜಿತಾಮಿತ್ರತೀರ್ಥರ ನಿರ್ಯಾಣವಾಗಿಬಿಟ್ಟಿರುತ್ತದೆ. (ಸಾಧಾರಣದ ನಂತರ ಬರುವ ಕೀಲಕ ಸಂವತ್ಸರ ಎಂದರೆ 58 ವರ್ಷ ಮುಂದಿನ ಕೀಲಕ ಸಂವತ್ಸರವನ್ನು ಪರಿಗಣಿಸಬೇಕಾಗುತ್ತದೆ ಅದು ಪ್ರಕೃತದಲ್ಲಿ ಸರ್ವಥಾ ಅಸಂಭಾವಿತವಾದದ್ದು).

ಹಾಗಾದಲ್ಲಿ ಗು.ಚ ಪ್ರಕಾರ ಕ್ರಿ.ಶ. 1492ರಲ್ಲಿ ಪೀಠಕ್ಕೆ ಬಂದ ಶ್ರೀರಘುನಂದನರಿಗೆ ಪೀಠವನ್ನು ನೀಡಿದವರು ಶ್ರೀಜಿತಾಮಿತ್ರರಾಗುವುದಿಲ್ಲ. ಶ್ರೀವಿಬುಧೇಂದ್ರರೇ ಎನ್ನಬೇಕಾಗುತ್ತದೆ. ಶ್ರೀಜಿತಾಮಿತ್ರರನ್ನು ಪರಂಪರೆಯಲ್ಲಿ ಪರಿಗಣಿಸಲಾಗದಿರುವ ಸಮಸ್ಯೆ ಎದುರಾಗುತ್ತದೆ. ಅಂದರೆ ಶ್ರೀಜಿತಾಮಿತ್ರರ ನಂತರ ಶ್ರೀರಘುನಂದನರು ಪೀಠಕ್ಕೆ ಬಂದರು ಎನ್ನುವ ಅವರ ಪರಂಪರೆ ಸುಳ್ಳಾಗುತ್ತದೆ.

ಅಲ್ಲದೇ, ಮೂ.ಮಠೇ ಲೇಖಕರು ಪುಟ 91ರಲ್ಲಿ ಶ್ರೀರಘುನಂದನರ ಕಾಲವನ್ನು ಕ್ರಿ.ಶ. 1475 ರಿಂದ 1504 ಎಂಬುದಾಗಿ ಸಮರ್ಥಿಸಿದ್ದಾರೆ. ಆದರೆ ರಾಯರಮಠದ ಅಧಿಕೃತ ಲೇಖಕರಾದ ದಿ. ಹೆಚ್. ಕೆ. ವೇದವ್ಯಾಸಾಚಾರ್ಯರು ತಮ್ಮ ಗುರುಚರಿತೆಯಲ್ಲಿ ಶ್ರೀಜಿತಾಮಿತ್ರರ ಆಳ್ವಿಕೆಯ ಕಾಲವನ್ನು ಕ್ರಿ.ಶ. 1490 ರಿಂದ 1492 ಎಂದಿದ್ದಾರೆ. ಅದರಂತೆ ಶ್ರೀಜಿತಾಮಿತ್ರತೀರ್ಥರು ಎಂಬ ಮತ್ತೊಂದು ಅಧಿಕೃತ ಪುಸ್ತಕದಲ್ಲಿ ಶ್ರೀರಾಜಾ ಎಸ್. ಪವಮಾನಾಚಾರ್ಯ (ಶ್ರೀಸುಬುಧೇಂದ್ರತೀರ್ಥರು) ಹಾಗೂ ಆ.ರಾ. ಪಂಚಮುಖಿ ಇವರು ಶ್ರೀಜಿತಾಮಿತ್ರರ ಕಾಲವನ್ನು ಕ್ರಿ.ಶ.1490 ರಿಂದ 1497 ಎಂದಿದ್ದಾರೆ. ಈ ಎರಡೂ ಕಾಲಮಾನಗಳು ಮೂ.ಮಠೇ ಲೇಖಕರ ಪ್ರಕಾರ ಶ್ರೀರಘುನಂದನರ ಕಾಲವಾಗುತ್ತದೆ. ಹೀಗಾಗಿ ಶ್ರೀಜಿತಾಮಿತ್ರರ ನಂತರ ಶ್ರೀರಘುನಂದನರು ಪೀಠಕ್ಕೆ ಬಂದರು ಎನ್ನುವ ಅವರ ಪರಂಪರೆಯನ್ನು ಸುಳ್ಳಾಗಿಸಿದ್ದಾರೆ.

ಅಂತೂ ಶ್ರೀರಘುನಂದನರು ಪೀಠಕ್ಕೆ ಬಂದ ಕಾಲ ಶ್ರೀರಾಯರ ಮಠದ ಅನೇಕ ಅಧಿಕೃತ ಕೃತಿಗಳಲ್ಲಿಯೇ ಗೊಂದಲಮಯವಾಗಿದೆ. ಈ ಎಲ್ಲ ಗೊಂದಲಗಳನ್ನು ಪರಿಹಾರ ಮಾಡಿಕೊಳ್ಳಲು ಮತ್ತೆ ಎಂದಿನಂತೆ ಹೊಸ ಕಾಲಮಾನಗಳನ್ನು, ಹೊಸಕಥೆಗಳನ್ನು ಯಾವ ಆಧಾರಗಳಿಲ್ಲದೇ ಸೃಷ್ಟಿಸುತ್ತಲೇ ಹೋಗಬೇಕಾಗುತ್ತದೆ.

ಒಟ್ಟಿನಲ್ಲಿ ಶ್ರೀರಘುನಂದನರ ಕಾಲದ ಬಗ್ಗೆ, ಪ್ರತಿಮೆ ಅಪಹರಣದ ಕಾಲದ ಬಗ್ಗೆ ಅವರಿಗೇ ನಿಶ್ಚಯವಿಲ್ಲದ ಕಾರಣ ವಿರುದ್ಧ ಹೇಳಿಕೆಗಳನ್ನು ಕೊಡುತ್ತಾ ಅಪಹರಣದ ಸುಳ್ಳು ಕಥೆಯನ್ನು ನಿಜವಾಗಿಸಲು ಹೆಣಗುತ್ತಿರುವುದು ಸ್ಪಷ್ಟ.

**ಸಂವತ್ಸರಗಳ ಪಂಜರ**

❖ ಮೂ.ಮಠೇ ಲೇಖಕರ ಪ್ರಕಾರ ಪ್ರತಿಮೆ ಅಪಹರಣವಾದದ್ದು ಕ್ರಿ.ಶ. 1493 ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶೀ (ಪುಟ viii, xi, 16, 126)

**ವಾಚಕರೇ ಗಮನಿಸಿ!**, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟಿತ ಜಂತ್ರಿ, ಶ್ರೀ ಸ್ವಾಮಿ ಕಣ್ಣು ಪಿಳ್ಳೈ ಅವರ Indian chronology ಹಾಗೂ ರಾಬರ್ಟ್ ಸ್ವೆಲ್ ಅವರ The Siddhantas and The Indian Calendar ಈ ಎಲ್ಲ ಕೃತಿಗಳಲ್ಲಿ ಪ್ರಕಟಿತ ಶಾ.ಶಕೆ, ಸಂವತ್ಸರ, ಕ್ರಿ.ಶಕೆ ಇವುಗಳ Conversion table ಗಳ ಪ್ರಕಾರ ಆನಂದನಾಮ ಸಂವತ್ಸರವು ಕ್ರಿ.ಶ. 1494-95ಕ್ಕೆ ಸರಿ ಹೊಂದುತ್ತದೆ. ಹೀಗಾಗಿ ಕ್ರಿ.ಶ.1493ಕ್ಕೆ ಆನಂದನಾಮ ಸಂವತ್ಸರದಲ್ಲಿ ಕಾರ್ತಿಕ ಶುದ್ಧ ದ್ವಾದಶೀ ಅಪಹರಣ ನಡೆಯಿತು ಎಂಬುದು ಕೂಡುವುದಿಲ್ಲ.

❖ ಮೂ.ಮಠೇ ಪುಸ್ತಕದ ಪುಟ 133ರಲ್ಲಿ ಆಧಾರವೆಂದು ಛಾಪಿಸಿರುವ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನಲ್ಲಿ ಶ್ರೀರಘುನಂದನರ ಕಾಲವನ್ನು ಶಾ.ಶ 1368 ಅಕ್ಷಯ ಸಂವತ್ಸರದಿಂದ ಶಾ.ಶಕೆ 1395 ವಿಜಯ ಸಂವತ್ಸರ ಎಂದು ಉಲ್ಲೇಖಿಸಿದ್ದಾರೆ. ಆಶ್ಚರ್ಯವೆಂದರೆ ಈ ಅಕ್ಷಯ ಹಾಗೂ ವಿಜಯ ಈ ಎರಡು ಸಂವತ್ಸರಗಳ ಮಧ್ಯದಲ್ಲಿ ಆನಂದನಾಮ ಸಂವತ್ಸರವೇ ಬರುವುದಿಲ್ಲ!!

ಈ ಕಲ್ಲಚ್ಚನ್ನು ಮಹತ್ವದ ಆಧಾರ, ಪ್ರಾಚೀನಪ್ರಮಾಣ ಎಂದು ಅಂಗೀಕರಿಸಿದ್ದರಿಂದ ಅದಕ್ಕೆ ವಿರುದ್ಧವಾಗಿ ಪ್ರತಿಮೆಯ ಅಪಹರಣದ ಕಾಲವನ್ನು ಆನಂದಸಂವತ್ಸರ ಎಂದು ತಿಳಿಸುವ ತಾಮ್ರಪತ್ರ ಅಪ್ರಮಾಣ-ವಾಗುತ್ತದೆ. ತಾಮ್ರಪತ್ರ ಪ್ರಮಾಣವಾಗುವುದಾದರೆ ಪ್ರಬಲ ಆಧಾರ ಎಂದು ಹೇಳುವ ಕಲ್ಲಚ್ಚಿನಲ್ಲಿ ತಿಳಿಸಿರುವ ಕಾಲಮಾನಗಳ ಗತಿ ಏನು?.

❖ ಮೂ.ಮಠೇ ಲೇಖಕರು ಪ್ರತಿಮೆ ಕಳುವಾದಾಗ ಉತ್ತರಾದಿಮಠದಲ್ಲಿ ವಿರಾಜಮಾನರಾಗಿದ್ದವರು ಶ್ರೀರಘುನಾಥತೀರ್ಥರೆಂದು ಬರೆದಿದ್ದಾರೆ. ಈ ವಿಷಯದ ಬಗ್ಗೆ ಇದೇ ಮೊದಲ ಬಾರಿಗೆ ಇರುವ ಉಲ್ಲೇಖ. ಇದಕ್ಕೆ ಯಾವ ಆಧಾರವನ್ನೂ ಕೊಟ್ಟಿಲ್ಲ. ಅವರ ಮಠದ ಯಾವ ಆಧಾರಗಳಲ್ಲೂ ಪ್ರತಿಮೆ ಕಳುವು ಮಾಡುವಾಗ ಉತ್ತರಾದಿಮಠದಲ್ಲಿ ಯಾವ ಪೀಠಾಧಿಪತಿಗಳಿದ್ದರು ಎಂಬುದರ ಬಗ್ಗೆ ಉಲ್ಲೇಖವಿಲ್ಲದಿರುವುದು ಗಮನಾರ್ಹ.

ವಿಜಯೀಂದ್ರವಿಜಯದ ಕಥಾಸರಣಿಯನ್ನು ಗಮನಿಸಿದರೆ ಪ್ರತಿಮಾ ಅಪಹರಣದ ಘಟನೆ ನಡೆದದ್ದು ಶ್ರೀ ವಿದ್ಯಾನಿಧಿಗಳ ಕಾಲದಲ್ಲಿ ಎಂದು ಸ್ಪಷ್ಟ ತೋರುತ್ತದೆ (ವಿ.ವಿಜಯ ಸರ್ಗ-3). ಮೂ.ಮಠೇ ಲೇಖಕರು ಅದಕ್ಕೆ ವಿರುದ್ಧವಾಗಿ ಶ್ರೀರಘುನಾಥತೀರ್ಥರಿದ್ದರು ಎಂದು ಬರೆಯುತ್ತಾರೆ. ಇನ್ನು ಕೆಲವರು ರಘುವರ್ಯತೀರ್ಥರಿದ್ದರು ಎನ್ನುತ್ತಾರೆ. ಇದ್ಯಾವುದಕ್ಕೂ ಆಧಾರಗಳಿಲ್ಲ. ಕೇವಲ ಊಹೆ ಮಾತ್ರ. ತಾಮ್ರಪತ್ರದಲ್ಲಿ ಇರುವ ಕಳುವಿನ ಕಾಲಮಾನವನ್ನು ಹೊಂದಿಸಲು ನಾನಾ ಕಸರತ್ತುಗಳನ್ನು ಮಾಡುತ್ತಿದ್ದಾರೆ. ಶ್ರೀರಘುನಂದನರ ಕಾಲದ ಬಗ್ಗೆ ಶ್ರೀವಿಜಯೀಂದ್ರವಿಜಯಕಾರರಿಂದ ಹಿಡಿದು ಮೂ.ಮಠೇ ಲೇಖಕರವರೆಗೆ ಯಾರ್‍ಯಾರು ಉಲ್ಲೇಖಿಸಿದ್ದಾರೋ ಅವರೆಲ್ಲರೂ ಬೇರೆ ಬೇರೆ ನಿಲುವನ್ನು ತಾಳಿರುವುದೇ ಇದಕ್ಕೆ ಸಾಕ್ಷಿ.

ಮೂಲರಾಮನ ಪ್ರತಿಮೆಯ ಅಪಹರಣದ ಕಾಲಮಾನವನ್ನು ತಿಳಿಸುವ ತಾಮ್ರಪತ್ರವು ಹೇಗೆ ಪ್ರಾಮಾಣಿಕವಲ್ಲ ಎಂಬುದನ್ನು ಈ ಹಿಂದಿನ ಅಧ್ಯಾಯದಲ್ಲಿ ವಿಮರ್ಶಿಸಿ ತೋರಿಸಲಾಗಿದೆ.

### ಕಳ್ಳತನದ ಬಗ್ಗೆ ಸ್ವಲ್ಪ ವಿಚಾರ ಮಾಡೋಣ:-

❖ ಲೋಕದಲ್ಲಿ ಹಾಗೂ ಶಾಸ್ತ್ರದ ದೃಷ್ಟಿಯಲ್ಲಿ ಕಳ್ಳತನವೆಂಬುದು ಪಾಪದ ಕೆಲಸ. ದೊಡ್ಡ ಅಪರಾಧ.

❖ ಈ ಪಾಪದ ಕೆಲಸಕ್ಕೆ ಶ್ರೀರಘುನಂದನರು ಪೋಷಕರಾಗಿ ನಿಂತು ತಾವೇ ಮಾಡಿಸಿದರೆಂದು ಹೇಳಿಕೊಳ್ಳುವ ಶ್ರೀರಾಯರ ಮಠದವರಿಗೆ ಮಹಾನುಭಾವರಾದ ಶ್ರೀರಘುನಂದನತೀರ್ಥರನ್ನು ಕಳ್ಳರೆಂದು ಚಿತ್ರಿಸುತ್ತಿದ್ದೇವೆ ಎಂಬ ಅರಿವೇ ಇಲ್ಲವೇ?

❖ ಶ್ರೀರಘುನಂದನರಿಗೆ ಅವರ ಗುರುಗಳಾದ ಶ್ರೀಜಿತಾಮಿತ್ರರು ಸ್ವಪ್ನದಲ್ಲಿ ಬಂದು ಮೂಲಸೀತಾರಾಮರ ವಿಗ್ರಹಗಳು ದೊರೆಯುವವು ಎಂದು ಹೇಳಿದರೆಂಬ ಒಂದು ಕಥೆಯನ್ನು ಅಧಿಕೃತ ಲೇಖಕರಾದ ದಿ. ಹೆಚ್.ಕೆ. ವೇದವ್ಯಾಸಾಚಾರ್ಯರು ತಮ್ಮ ಗುರುಚರಿತೆಯಲ್ಲಿ ಹೇಳಿದ್ದಾರೆ. ಶ್ರೀಜಿತಾಮಿತ್ರತೀರ್ಥರು ಎಂಬ ಪುಸ್ತಕದ ಪುಟ 74ರಲ್ಲಿ ಶ್ರೀ ರಾಜಾ.ಎಸ್. ಪವಮಾನಾಚಾರ್ಯರು (ಇಂದಿನ ಶ್ರೀಸುಬುಧೇಂದ್ರತೀರ್ಥರು) ಶ್ರೀರಾಮಚಂದ್ರನೇ ಸ್ವಪ್ನದಲ್ಲಿ ಬಂದು ಆ ಪ್ರತಿಮೆಗಳು (ಮೂಲಸೀತಾರಾಮರ ವಿಗ್ರಹಗಳು) ಪುನ: ಲಬ್ಧವಾಗುವವೆಂದು ಸೂಚಿಸಿದನೆಂಬ ಇನ್ನೊಂದು ಕಥೆ ಹೇಳಿದ್ದಾರೆ. ಆದರೆ ಅವರೇ ಹೇಳಿಕೊಳ್ಳುವಂತೆ ಶ್ರೀರಘುನಂದನರಿಗೆ ದೊರೆತದ್ದು ರಾಮಪ್ರತಿಮೆ ಮಾತ್ರ. ಸೀತೆ ಸಿಗಲಿಲ್ಲ. ಹಾಗಾದರೆ ಗುರುಗಳು ಮತ್ತು ಶ್ರೀರಾಮದೇವರು ಸ್ವಪ್ನದಲ್ಲಿ ಹೇಳಿದ ಮಾತುಗಳು ಅರ್ಧಸತ್ಯವಾಗಲಿಲ್ಲವೇ?

❖ ಶ್ರೀರಾಯರ ಮಠದವರು ಹೇಳಿಕೊಳ್ಳುವಂತೆ ಯಾರೋ ಒಬ್ಬ ತುಳು ಬ್ರಾಹ್ಮಣ (ಧೂರ್ತ ಸನ್ಯಾಸಿ) ಮೂಲರಾಮಾದಿ ಪ್ರತಿಮೆಗಳನ್ನು ವಂಚನೆಯಿಂದ ಅಪಹಾರ ಮಾಡಿದ್ದೇ ಆದರೆ, ಆಗಿನ ಪ್ರಭಾವೀ ರಾಜರುಗಳಿಂದ ಮನ್ನಣೆ ಹೊಂದಿದ್ದ, ಒಂದು ದೊಡ್ಡ ಪರಂಪರೆಯಲ್ಲಿ ಬಂದ ಶ್ರೀವಿಬುಧೇಂದ್ರತೀರ್ಥರು ವಿದ್ಯಾನಿಧಿಗಳನ್ನು ರಾಜರಿಂದ ಶಾಸನ ಮಾಡಿಸಬಹುದಿತ್ತಲ್ಲವೇ?

ರಾಯರ ಮಠದವರು ಹೇಳುವಂತೆ ವಿದ್ಯಾನಿಧಿಗಳು ಅರವತ್ತುಮೂರು ಜನರನ್ನು ವಶಪಡಿಸಿಕೊಂಡಿದ್ದರು ಎಂದಿಟ್ಟುಕೊಂಡರೂ ಉಳಿದ ಅಪಾರ ಶಿಷ್ಯವರ್ಗ ಶ್ರೀವಿಬುಧೇಂದ್ರರ ಅನುಯಾಯಿಗಳೇ ಆಗಿದ್ದರಲ್ಲವೇ? ಅವರೆಲ್ಲರ ಸಹಾಯವನ್ನು ಪಡೆದು ವಿದ್ಯಾನಿಧಿಗಳನ್ನು ನಿಗ್ರಹಿಸಿ ಪ್ರತಿಮೆಯನ್ನು ಮರಳಿ ಪಡೆಯಬಹುದಿತ್ತಲ್ಲವೇ?

ಆದರೆ ಶ್ರೀವಿಬುಧೇಂದ್ರತೀರ್ಥರು ಹಾಗೆ ಮಾಡಲಿಲ್ಲ. ಇದರಿಂದ ಶ್ರೀವಿಬುಧೇಂದ್ರತೀರ್ಥರು ಹಾಗು ಶ್ರೀವಿದ್ಯಾನಿಧಿತೀರ್ಥರು ಗುರುಗಳ ಆದೇಶವನ್ನೇ ಮಾನ್ಯ ಮಾಡಿದ್ದಾರೆ ಎಂಬುದು ಸ್ಪಷ್ಟ. ಕಳ್ಳತನ, ಸುಳ್ಳುತನ ಇತ್ಯಾದಿಗಳು ರಾಯರ ಮಠದವರು ಹುಟ್ಟಿಸಿದ ಹುಚ್ಚು ಕಥೆಗಳು ಮಾತ್ರ .

❖ ಕಳ್ಳತನವೆಂಬ ಕಾರ್ಯವನ್ನು ಅತಿ ದೊಡ್ಡ ಸಾಧನೆ ಎಂದು ಪದೇ ಪದೇ ಹೇಳಿಕೊಳ್ಳುವುದು, ಒಬ್ಬ ಪೀಠಾಧಿಪತಿಗಳು (ಸರ್ವಸಂಗಪರಿತ್ಯಾಗಿಗಳು) ಕಳ್ಳತನ ಮಾಡಿಸುವುದು, ಕಳ್ಳನಿಗೆ ಪ್ರೋತ್ಸಾಹಿಸುವುದು, ತಾಮ್ರಪತ್ರದ ಮೂಲಕ ಆಚಂದ್ರಾರ್ಕವಾಗಿ ಆ ಕಳ್ಳನಿಗೆ ಅವನ ವಂಶದವರಿಗೆ ಅಧಿಕ ಹುದ್ದೆ ಗೌರವಾದಿಗಳು ನಡೆಯುವಂತೆ ಗುರುಸ್ಥಾನದಲ್ಲಿದ್ದವರು ಆಜ್ಞೆ ಹೊರಡಿಸುವುದು ಮುಂತಾದವುಗಳು ಇತಿಹಾಸದಲ್ಲೆಲ್ಲೂ ಕಂಡು ಕೇಳದ ವಿಷಯವಾಗಿದೆ. ಕಳ್ಳತನ ಸುಳ್ಳುತನಗಳಿಂದ ಶತ್ರುಗಳ ರಾಜ್ಯವನ್ನು ಮೋಸ ಮಾಡಿ ಗೆದ್ದ ಹಿಂದಿನ ಕೆಲ ರಾಜರುಗಳು ಕೂಡಾ ಆ ಕೆಲಸಕ್ಕೆ ನೇಮಿಸಿದ ಕಳ್ಳರನ್ನು ಶಾಸನಗಳ ಮೂಲಕ ಗೌರವಿಸಿದ್ದು ಪ್ರಾಯಃ ಇಲ್ಲವೇ ಇಲ್ಲ. ರಾಜಕಾರಣದಲ್ಲೂ ಇಂತಹವುಗಳನ್ನು ಕೂಟನೀತಿ ಎಂದಿದ್ದಾರೆ. ರಾಜನೀತಿ ಎಂದು ಹೇಳಿಲ್ಲ. ಇಂತಹ ಕಳ್ಳತನವೆಂಬ ಹೇಯಕೃತ್ಯವನ್ನು ಅದೂ ಸಹ ಸನ್ಯಾಸಿಗಳು ಮಾಡಿಸಿದ ಕಳ್ಳತನವನ್ನು ಇಷ್ಟು ವೈಭವೀಕರಣಮಾಡಿ ಚಿತ್ರಿಸುತ್ತಾ ಪ್ರಚಾರ ಮಾಡುತ್ತಿರುವುದು ಪ್ರಾಯಃ ಇತಿಹಾಸದಲ್ಲೇ ಮೊಟ್ಟಮೊದಲು. ಶ್ರೀವಿಬುಧೇಂದ್ರರಂತಹ ಪರವಾದಿ ನಿಗ್ರಹಸಮರ್ಥರ, ತಪಸ್ವಿಗಳ ಪರಂಪರೆಯಲ್ಲಿ ಬಂದ ಮಹಾನುಭಾವರಾದ ಶ್ರೀರಘುನಂದನರನ್ನು ಕಳ್ಳರೆಂದು ಚಿತ್ರಿಸುತ್ತಿರುವುದು ಸ್ವೋತ್ತಮದ್ರೋಹವಲ್ಲವೇ? ಇಂತಹ ಸುಳ್ಳು ಕತೆಗಳನ್ನು ಅಪ್ರಾಮಾಣಿಕತಮವಾದ ವಿಜಯೀಂದ್ರವಿಜಯ ಎಂಬ ಕೃತಿಯ ಮೇಲೆ ಭಾರ ಹಾಕಿ ಪ್ರಚಾರ ಮಾಡುವುದರಿಂದ ಮುಂದಿನ ನಮ್ಮ ಯುವ ಪೀಳಿಗೆಯ ಮೇಲೆ ಎಂತಹ ಕೆಟ್ಟ ಪರಿಣಾಮ ಬೀರುವುದೆಂಬ ಅರಿವೂ ಸಹ ಬೇಡವೇ?

❖ ಮೂ.ಮಠೇ ಲೇಖಕರು ತಮ್ಮ ಪುಸ್ತಕದ 133ರಲ್ಲಿ ಪ್ರಾಚೀನತಮ ಎಂದು ಹೇಳಿಕೊಳ್ಳುವ ಕಲ್ಲಚ್ಚಿನಲ್ಲಿರುವ ಶ್ರೀರಘುನಂದನರ ಚರಮಶ್ಲೋಕವನ್ನು ಛಾಪಿಸಿದ್ದಾರೆ. ಇದರ ಉದ್ದೇಶ ಚರಮಶ್ಲೋಕದಲ್ಲಿ ಅಪಹರಣದ ವಿಷಯವು ದಾಖಲಾಗಿದೆ ಎಂದು ತಿಳಿಸುವುದಾಗಿದೆ. ಆದರೆ ಅದೇ ಪ್ರಾಚೀನತಮ ಕಲ್ಲಚ್ಚಿನಲ್ಲಿ ಶ್ರೀ ರಘುನಂದನರ ನಿರ್ಯಾಣ ಕಾಲವು ಶಾಲಿವಾಹನ ಶಕ 1395 ವಿಜಯನಾಮ ಸಂವತ್ಸರ (ಅಂದರೆ ಕ್ರಿ.ಶ.1474) ಎಂದಿದೆ.

ಮೂ.ಮಠೇ ಲೇಖಕರು ಪ್ರತಿಮೆಯ ಅಪಹರಣದ ಕಾಲವನ್ನು ಅವರು ಕೊಟ್ಟಿರುವ ತಾಮ್ರಪತ್ರಕ್ಕೆ ಸರಿಹೊಂದಿಸಲು ಕ್ರಿ.ಶ.1493 ಆನಂದನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶೀ ಎಂದಿದ್ದಾರೆ. (ಪುಟ viii, xi, 16,126)

**ವಾಚಕರೇ ಗಮನಿಸಿ!** ಪ್ರಾಚೀನತಮ ಕಲ್ಲಚ್ಚು ಶ್ರೀ ರಘುನಂದನರು ಕ್ರಿ.ಶ. 1474ರಲ್ಲಿ ಬೃಂದಾವನಸ್ಥರಾಗಿದ್ದಾರೆ ಎಂದು ಹೇಳುತ್ತಾ ಅದೇ ಕಲ್ಲಚ್ಚು ಶ್ರೀ ರಘುನಂದನರ ಚರಮಶ್ಲೋಕದಲ್ಲಿ ಅಪಹರಣಕ್ಕೆ ಕಾರಣರಾದವರೆಂದು ಹೊಗಳುತ್ತದೆ. ಮೂ.ಮಠೇ ಲೇಖಕರು ಪ್ರತಿಮೆ ಕಳುವಾದದ್ದು ಕ್ರಿ.ಶ. 1493 ಎಂದಿದ್ದಾರೆ. ಆದರೆ ಕಲ್ಲಚ್ಚಿನ ಪ್ರಕಾರ ಕ್ರಿ.ಶ.1493ರಲ್ಲಿ ರಘುನಂದನರು ಇರಲೇ ಇಲ್ಲ. ತಾಮ್ರಪತ್ರಕ್ಕೆ ಸರಿ ಹೊಂದುವಂತೆ ಲೇಖಕರು ಕ್ರಿ.ಶ. 1493 ಎಂದು ಬರೆದದ್ದು ಸುಳ್ಳಾಗುತ್ತದೆ. ಲೇಖಕರು ಬರೆದದ್ದು ಸುಳ್ಳಾದರೆ ತಾಮ್ರಪತ್ರ ಸುಳ್ಳೆಂದು ಸಾಬೀತಾಗುತ್ತದೆ.

ಹೀಗಾಗಿ ಪ್ರತಿಮೆಯ ಅಪಹರಣವನ್ನು ಸಾಧಿಸಿಕೊಳ್ಳಲು ಪೋಷಕವಾಗಿ ಅವರೇ ಕೊಟ್ಟಿರುವ ಆಧಾರಗಳು ಪರಸ್ಪರ ವಿರುದ್ಧವಾಗಿ ಕಳ್ಳತನದ ಕಥೆಯನ್ನು ಅಪ್ಪಟ ಸುಳ್ಳೆಂದು ಅವರ ಆಧಾರಗಳೇ ಸಾಬೀತು ಪಡಿಸುತ್ತಿವೆ.

* * * *

# ಹುಯಿಲೆಬ್ಬಿಸುವವರ್ಯಾರು?

ಕಳೆದ 60 ವರ್ಷಗಳಲ್ಲಿ ಸುಮಾರು ಹನ್ನೊಂದು ಪುಸ್ತಕಗಳನ್ನು ಶ್ರೀರಾಯರ ಮಠದವರು ಹೊರಹಾಕಿದ್ದಾರೆ. ಈ ಎಲ್ಲ ಪುಸ್ತಕಗಳಲ್ಲೂ ಶ್ರೀಮದುತ್ತರಾದಿಮಠವನ್ನು, ಅದರ ಪರಂಪರೆಯನ್ನು, ಪೀಠಾಧಿಪತಿಗಳನ್ನು ನಿಂದಿಸುವ ಪ್ರಧಾನ ಅಂಶಗಳಿವೆ. ಈ ಪುಸ್ತಕಗಳಿಗೆ ಆಗೊಮ್ಮೆ ಈಗೊಮ್ಮೆ ಶ್ರೀಉತ್ತರಾದಿ-ಮಠದ ದೀಕ್ಷೆ ಉಳ್ಳ ಕೆಲ ವಿದ್ವಾಂಸರು ಪ್ರತ್ಯುತ್ತರ ಕೊಟ್ಟಿದ್ದರೂ ಉತ್ತರಾದಿಮಠದಿಂದ ಯಾವ ಪ್ರತಿಕ್ರಿಯೆ ಬಂದದ್ದಿಲ್ಲ. ಇದು ಆ ಮಠದ ಪೀಠಾಧಿಪತಿಗಳ ತಾಳುವಿಕೆಗೆ ಹಿಡಿದ ಕನ್ನಡಿ.

ಆದರೆ ಸುಮ್ಮನಿರುವುದೇ ಒಂದು ದೊಡ್ಡ ನ್ಯೂನ್ಯತೆ ಎಂದು ಬಗೆದು ತಲೆಗೆ ಬಂದಿದ್ದೆಲ್ಲವನ್ನೂ ಬರೆಯುತ್ತಾ, ಆಧುನಿಕ ಪ್ರಚಾರಮಾಧ್ಯಮದಲ್ಲಿ ಬಿತ್ತರಿಸುತ್ತಾ ಸಮಾಜದ ಸಾಮಾನ್ಯಮುಗ್ಧರಿಗೂ ಮತ್ತು ಅನೇಕ ವಿದ್ವಾಂಸರಿಗೂ ವಿಪರೀತ ಭಾವನೆಯು ಬರುವಂತೆ ಪ್ರಚಾರ ನಡೆದಾಗ ಸಾಕಷ್ಟು ಆಧಾರಗಳನ್ನು ಕೊಟ್ಟು ಮಠದಲ್ಲಿರುವ ಶ್ರೀಮೂಲರಾಮಾದಿ ಪ್ರತಿಮೆಗಳನ್ನು ಯಾರೂ ಎಂದೂ ಅಪಹರಿಸಿಲ್ಲ ಎಂದು ತಿಳಿಸುತ್ತ, ಅನ್ಯರನ್ನು ದೂಷಿಸದೆ ಒಂದೇ ಒಂದು ''ಸಸೀತಾಮೂಲರಾಮಾರ್ಚಾ'' ಎಂಬ ಪುಸ್ತಕವನ್ನು ಉತ್ತರಾದಿಮಠವು ಪ್ರಕಟಿಸಿದಾಗ ಇದನ್ನು ಹುಯಿಲೆಬ್ಬಿಸುವುದು ಎನ್ನಬಹುದೇ..?

ಯಾವ ಭಿನ್ನಾಭಿಪ್ರಾಯವಿಲ್ಲದಿರುವ ಸಕಲಮಾಧ್ವರಿಗೂ ಹಾಗೂ ಶ್ರೀರಾಯರ ಮಠದ ಅಧಿಕೃತಲೇಖಕರಿಗೂ ಸಮ್ಮತವಾಗಿರುವ –

- ಶತಶತಮಾನಗಳಿಂದ ಲಕ್ಷಾವಧಿಜನರ ಶ್ರದ್ಧೆಯ ಕೇಂದ್ರವಾದ ಶ್ರೀಜಯತೀರ್ಥರ ಮೂಲವೃಂದಾವನ ಮಳಖೇಡದಲ್ಲಿರುವ ವಿಷಯ –ಗುರುಚರಿತೆ, ಪುಟ 106
- ಶ್ರೀರಘುನಾಥತೀರ್ಥರು ಶ್ರೀಪಾದರಾಜರೆಂಬ ಬಿರುದುಕೊಟ್ಟ ಐತಿಹಾಸಿಕ ವಿಷಯ –ಗು.ಚ., ಪುಟ 118
- ಶ್ರೀರಾಯರು ಶ್ರೀಬಿದರಹಳ್ಳಿ ಶ್ರೀನಿವಾಸಾಚಾರ್ಯರಿಗೆ ''ತೀರ್ಥ'' ಎಂಬ ಬಿರುದು ಕೊಟ್ಟ ಪ್ರಾಮಾಣಿಕ ವಿಷಯ –ಗುರುಚರಿತೆ, ಪುಟ 285
- ಶ್ರೀಕೃಷ್ಣದ್ವೈಪಾಯನರು ವೈಕುಂಠಯಾತ್ರೆ ಮಾಡುವಾಗ ಶ್ರೀರಾಯರಿಗೆ ಅವರ ಆಯುಷ್ಯ ಸೂಚಿಸಿದ ವಿಷಯ –ಗುರುಚರಿತೆ, ಪುಟ 299, 300

(ಈ ಎಲ್ಲ ವಿಷಯಗಳನ್ನು ದೇಶ-ಕಾಲಮಾನಗಳನ್ನು ಕೊಟ್ಟು ರಾಯರ ಮಠದ ಅಧಿಕೃತಲೇಖಕರಾದ ದಿ. ಶ್ರೀಹೆಚ್.ಕೆ. ವೇದವ್ಯಾಸಾಚಾರ್ಯರು ಶ್ರೀಸುಯಮೀಂದ್ರತೀರ್ಥರ ಇಚ್ಛೆಯಂತೆ, ಅವರಿಗೆ ಸಮ್ಮತವಾಗುವಂತೆ ಬರೆದದ್ದೆಂದು ಗುರುಚರಿತೆಯಲ್ಲಿ ಸ್ಪಷ್ಟವಾಗಿ ದಾಖಲಿಸಿದ್ದಾರೆ.)

ಇತ್ಯಾದಿಗಳ ಬಗ್ಗೆ ಮನಬಂದಂತೆ ಬರೆದು ಯಾವ ಆಧಾರಗಳನ್ನು ಕೊಡದೆ ಇವುಗಳನ್ನು ಅಲ್ಲಗೆಳೆಯುವ ಸಾಹಸ ಮಾಡಿದಾಗ ಹುಯಿಲೆಬ್ಬಿಸುವುದು ಎಂದೆನಿಸಲಿಲ್ಲವೇ?

ಇದರಂತೆ, ಮಾಧ್ವರಲ್ಲೇ ಹೆಚ್ಚಿನ ಸಂಖ್ಯೆಯ ಶಿಷ್ಯರಿರುವ ಶ್ರೀಮದುತ್ತರಾದಿಮಠದ ಬಗ್ಗೆ, ಅದರ ಅಸ್ತಿತ್ವದ ಬಗ್ಗೆ, ಆ ಪೀಠದಲ್ಲಿ ಬಂದ ಯತಿಗಳ ಬಗ್ಗೆ, ಶ್ರೀಮೂಲರಾಮಾದಿ ಪ್ರತಿಮೆಗಳ ಬಗ್ಗೆ ವಿಪರೀತಭಾವನೆ ಬರುವಂತೆ ಶ್ರೀರಾಯರ ಮಠದಿಂದ ಅಧಿಕೃತವಾಗಿ ಹತ್ತು ಪುಸ್ತಕಗಳನ್ನು ಕಳೆದ ದಶಕಗಳಲ್ಲಿ ಪ್ರಕಟಿಸಿದಾಗ,

ಪ್ರಸಂಗ ಇರಲೀ ಬಿಡಲೀ, ಬೇರೆ ಬೇರೆ ಲೇಖನಗಳಲ್ಲಿ, ಮಾಸಪತ್ರಿಕೆಗಳಲ್ಲಿ, ವಿವಿಧಪ್ರಚಾರ ಮಾಧ್ಯಮಗಳಲ್ಲಿ ಇಂದಿಗೂ ಅದನ್ನೇ ಮುಂದುವರೆಸುತ್ತಿರುವಾಗ ಹುಯಿಲೆಬ್ಬಿಸುವುದು ಎಂದೆನಿಸುವುದಿಲ್ಲವೇ?

ಆದರೆ, ಆರುದಶಕಗಳ ನಂತರ ಉತ್ತರಾದಿಮಠದಿಂದ, ಪ್ರಾಮಾಣಿಕವಾಗಿ ಒಮ್ಮೆ ''ಸಸೀತಾ-ಮೂಲರಾಮಾರ್ಚಾ'' ಎಂಬ ಪುಸ್ತಕ ಹೊರ ಬಂದಾಗ ''ಉತ್ತರಾದಿಮಠದವರು ಹುಯಿಲೆಬ್ಬಿಸುವವರು, ಸಮಾಜದಲ್ಲಿ ದ್ವೇಷಬೀಜವನ್ನು ಬಿತ್ತುವವರು, ಹರಿದಾಸಸಾಹಿತ್ಯವನ್ನು ಹದಗೆಡಿಸುವವರು'' ಎಂಬ ಆರೋಪಣೆಯನ್ನು ಮಾಡಲಾಗುತ್ತಿದೆ. ಇದು ಸರಿಯೇ?

''ಇಂತಹ ವಿಷಯಗಳ ಬಗ್ಗೆ ಪುಸ್ತಕ ಬರೆಯಬಾರದು. ಇದರಿಂದ ಯಾರಿಗೂ ಲಾಭವಿಲ್ಲ. ಇದೇ ಸಮಯವನ್ನು ತತ್ವಜ್ಞಾನಪ್ರಸಾರಕ್ಕಾಗಿ ಮೀಸಲಿಡುವುದು ಉಚಿತ. ಈ ಕೆಲಸಕ್ಕೆ ಸಮಯ ವೆಚ್ಚ ಮಾಡುವುದು ಒಳಿತಲ್ಲ'' ಎಂಬ ಬೋಧನೆಯನ್ನು ಮಾಡುವವರೂ ಕಡಿಮೆಯೇನಿಲ್ಲ. ಈ ಎಲ್ಲ ಬೋಧನೆಯನ್ನು ಉತ್ತರಾದಿಮಠದವರಿಗೆ ಮಾಡುವ ಬದಲು ಈ ವಿಷಯದಲ್ಲಿ ನಿರಂತರ ಪ್ರವೃತ್ತಿಯುಳ್ಳ ಅನ್ಯರಿಗೆ ಉಪದೇಶ ಮಾಡುವುದು ಉಚಿತ. ಶ್ರೀಮದುತ್ತರಾದಿಮಠದ ಪರಂಪರೆಯಲ್ಲಿ ಇಂದಿಗೂ ನಿರಂತರ ಪಾಠ-ಪ್ರವಚನ, ಗ್ರಂಥನಿರ್ಮಾಣ, ವಾದಿನಿಗ್ರಹ, ವಿದ್ವಾಂಸರನ್ನು ತಯಾರಿಸಿ ಸಮಾಜಕ್ಕೆ ನೀಡುವುದು, ಧರ್ಮಾಚರಣೆಯನ್ನು ಉಳಿಸುವುದು, ತತ್ತ್ವಜ್ಞಾನಪ್ರಚಾರ ಮಾಡುವುದು ಮೊದಲಾದ ಅವಶ್ಯ ನಿರ್ವಹಿಸಲೇಬೇಕಾದ ಕರ್ತವ್ಯಗಳನ್ನು ವ್ಯಾಪಕವಾಗಿ ಮಾಡುತ್ತಿರುವುದು ಜಗಜ್ಜನಿತ. ಇದು ಎಲ್ಲ ಮಾಧ್ವರೂ ಹೆಮ್ಮೆ ಪಡಬಹುದಾದ ವಿಷಯ. ಇಂತಹ ಉತ್ತರಾದಿಮಠಕ್ಕೆ ಈ ರೀತಿಯ ಉಪದೇಶಗಳು ಸಾಧುವಲ್ಲ. ಮಠದ ಅಸ್ತಿತ್ವವನ್ನೇ ಪ್ರಶ್ನಿಸುತ್ತಾ ಇಲ್ಲ ಸಲ್ಲದ ಆರೋಪಗಳನ್ನು ಇತರರು ಮಾಡಿದಾಗ ಸತ್ಯದ ಹುಡುಕಾಟದಲ್ಲಿ ಮುಳುಗಿರುವ ಪ್ರತಿಯೊಬ್ಬ ಜಿಜ್ಞಾಸುಗಳಿಗೆ ಅವರ ಅಪೇಕ್ಷೆಯಂತೆ ಅನೇಕ ವಾಸ್ತವಿಕ ಮಾಹಿತಿಗಳನ್ನು ಒದಗಿಸುವ ಕೆಲಸವನ್ನು ಹುಯಿಲೆಬ್ಬಿಸುವುದು ಎನ್ನಲಾಗದು.

ಯಾರೇ ಆಗಲಿ ಈ ರೀತಿ ಆರೋಪಿಸುವವರು ಇನ್ನು ಮುಂದಾದರೂ ಸ್ವಲ್ಪ ಯೋಚಿಸಿ ಆರೋಪಿಸುವುದು ಒಳಿತೆಂಬ ಕಿವಿಮಾತನ್ನು ಹೇಳಬಯಸುತ್ತೇವೆ.

ಉತ್ತರಾದಿಮಠ ಮಠವೇ ಅಲ್ಲ ಅಂದಾಗ ಸುಮ್ಮನಿರಬೇಕಿತ್ತೇ? ಶ್ರೀವಿದ್ಯಾನಿಧಿಗಳು ಕಪಟ ಸನ್ಯಾಸಿ ಎಂದಾಗ ಕೇಳಿ ಆನಂದಿಸಬೇಕಿತ್ತೇ? ಶ್ರೀರಘುನಾಥತೀರ್ಥರಿಗೆ ವ್ಯಕ್ತಿತ್ವವೇ ಇರಲಿಲ್ಲ ಎಂದು ಬರೆದಾಗ ಚಪ್ಪಾಳೆ ತಟ್ಟಬೇಕಿತ್ತೇ? ಶ್ರೀರಘೂತ್ತಮರು, ಶ್ರೀಸತ್ಯನಾಥರು, ಶ್ರೀಸತ್ಯಬೋಧರು ಮೊದಲಾದವರೆಲ್ಲಾ ಪೀಠಾಧಿಪತಿಗಳೇ ಅಲ್ಲ, ಶಕಪುರುಷರೇ ಅಲ್ಲ ಎಂದಾಗ ಅಂಜಿ ಉದಾಸೀನ ಮಾಡಬೇಕಿತ್ತೇ?

ನಿಜ ಹೇಳಬೇಕೆಂದರೆ ಇಷ್ಟೆಲ್ಲಾ ವಿಷಯಗಳನ್ನು ಇತರರು ಬರೆದಾಗ ಶ್ರೀಉತ್ತರಾದಿಮಠ ಔದಾಸೀನ್ಯವನ್ನೇ ತಾಳಿದೆ. ಆದರೆ, ಎಂದೋ ಮುಗಿದ ವಿಷಯಗಳನ್ನು ಮತ್ತೆ ಮತ್ತೆ ಕೆದಕಿ ಸಮಾಜದಲ್ಲಿ ವಿಷಬೀಜ ಬಿತ್ತಲು ಪ್ರಯತ್ನಿಸಲಾಗುತ್ತಿದೆ. ದಶಕಗಳ ಹಿಂದೆ ಮುದ್ರಣಗೊಂಡು ಮುಗಿದು ಹೋದ ಕಥೆಯಾಗಿದ್ದ ಉತ್ತರಾದಿಮಠದ ಅವಹೇಳನವೇ ಮುಖ್ಯವಿಷಯವಾದ ''ಸತ್ಯಮೇವ ಜಯತೇ'' ಆಂಗ್ಲಪುಸ್ತಕದ ಕನ್ನಡಾನುವಾದನ್ನು ಮಾಡಿಸಿ ಮನೆ, ಮನೆಗೆ ಉಚಿತವಾಗಿ ಹಂಚಲಾಗುತ್ತಿದೆ. ಸ್ತೋತ್ರಗಳ ಪುಸ್ತಕದಲ್ಲಿ (ಸ್ತೋತ್ರಮುಕ್ತಾವಲೀ) ಶ್ರದ್ಧಾವಿಷಯಗಳನ್ನು ಅವಹೇಳನ ಮಾಡಲಾಗುತ್ತಿದೆ. ಇಷ್ಟಾದಾಗಲೂ ಉತ್ತರ ಕೊಡದೆ ಸುಮ್ಮನಿದ್ದರೆ ಅದು ಹಿರಿಯರಿಗೆ, ಪರಂಪರೆಗೆ ಬಗೆದ ದ್ರೋಹವಾಗುವುದಿಲ್ಲವೇ. ಸತ್ಯಕ್ಕೆ ಮಾಡಿದ ಅಪಚಾರವಾಗುವುದಿಲ್ಲವೇ? ಇತಿಹಾಸದ ವಾಸ್ತವಿಕ ಸಂಗತಿಗಳನ್ನು, ಪ್ರಮಾಣಗಳ ಆಧಾರದ ಮೇಲೆ ಸಜ್ಜನರ ಮುಂದಿಡುವುದು ಕರ್ತವ್ಯವಲ್ಲವೇ?

ಪ್ರಾಯಃ ಈ ಹಿನ್ನೆಲೆಯಲ್ಲಿಯೇ ''ಸಸೀತಾಮೂಲರಾಮಾರ್ಚಾ'' ಹೊರಬಂದದ್ದೆಂದು ಕಾಣುತ್ತದೆ. ಅದರಲ್ಲಿ ಇತರರನ್ನು ಅವಹೇಳನ ಮಾಡುವ ಒಂದು ಶಬ್ದವೂ ಇಲ್ಲ. ಸಮಾಜದಲ್ಲಿ ದ್ವೇಷಬಿತ್ತುವ ಯಾವ ವಾಕ್ಯವೂ ಇಲ್ಲ. ಆ ಉದ್ದೇಶ್ಯವೂ ಕಾಣುವುದಿಲ್ಲ. ಹೀಗಾಗಿ ಹುಯಿಲೆಬ್ಬಿಸುವವರು ಎಂಬ ಹಣೆಪಟ್ಟಿಯು ಉತ್ತರಾದಿಮಠದವರಿಗೆ ಸರ್ವಥಾ ಸಲ್ಲದು. ಈ ರೀತಿ ಆರೋಪಿಸುವವರೇ ಹುಯಿಲೆಬ್ಬಿಸುತ್ತಿದ್ದಾರೆ ಎಂಬುದನ್ನು ಗಮನಿಸಬಹುದು.

* * * *

# ಬಣ್ಣ ಚಿತ್ರಗಳ ಬಯಲಾಟ

ಶ್ರೀಮೂಲಸೀತಾರಾಮರ ಪ್ರತಿಮೆಗಳಿಗೆ ವರ್ಣತಃ ಪೀಠತಃ ಪರಿಮಾಣತಃ ಸಾಮ್ಯವನ್ನು ಒಪ್ಪುವ ಮೂ. ಮಠೇ (2009)ಲೇಖಕರು ಪುಟ 61ರಲ್ಲಿ ''ಸೀತಾಪ್ರತಿಮೆಯ ಲಕ್ಷಣ'' ಎಂಬ ಶೀರ್ಷಿಕೆಯಡಿಯಲ್ಲಿ ಹಾಗೂ ಪುಟ 64 ರಿಂದ 68ರವರೆಗೆ ವಿವಿಧಪ್ರತಿಮೆಗಳ ಬಣ್ಣದ ಚಿತ್ರಗಳನ್ನು ಮುದ್ರಿಸಿ ಶ್ರೀಮೂಲಸೀತಾರಾಮರ ಪ್ರತಿಮೆಗಳ ಬಣ್ಣ (ಲೋಹ), ಪರಿಮಾಣ, ಪೀಠದ ಬಣ್ಣ (ಲೋಹ) ಗಳಲ್ಲಿ ವ್ಯತ್ಯಾಸವಿರುವುದು ಶಿಲ್ಪಶಾಸ್ತ್ರಕ್ಕೆ ವಿರುದ್ಧವೆಂದು ವಾದಿಸುತ್ತಾ ಉತ್ತರಾದಿಮಠದಲ್ಲಿ ಇರುವ ಪ್ರತಿಮೆಗಳು ಮೂಲವಲ್ಲವೆಂದು ಸಾಧಿಸಲು ಬಹು ಶ್ರಮ ಪಟ್ಟಿದ್ದಾರೆ.

ಅದಕ್ಕೆ ಉತ್ತರವಾಗಿ ಈ ಭಾಗದಲ್ಲಿ ಶಿಲ್ಪಶಾಸ್ತ್ರದ ಪ್ರಕಾರ ವರ್ಣತಃ, ಪೀಠತಃ, ಪರಿಮಾಣತಃ ಸಾಮ್ಯವಿರಬೇಕೆಂಬ ನಿಯಮವಿಲ್ಲ ಎಂಬುದನ್ನು ಅನೇಕ ಆಧಾರಗಳ ಹಾಗೂ ವರ್ಣಚಿತ್ರಗಳ ಸಮೇತ ಸಾಬೀತು ಪಡಿಸಿ ಅವರ ಬಣ್ಣಚಿತ್ರಗಳ ಬಯಲಾಟವನ್ನು ಬಯಲು ಮಾಡಲಾಗಿದೆ.

ಇದಲ್ಲದೇ ಅವರು ಮೂಲಸೀತಾರಾಮರ ಪ್ರತಿಮೆಗಳ ಲಕ್ಷಣಗಳ ಕುರಿತಾಗಿ ಮಾಡಿರುವ ಇನ್ನು ಕೆಲವು ಆಕ್ಷೇಪಗಳಿಗೂ ಈ ಪ್ರಕರಣದಲ್ಲಿ ಸಮಾಧಾನವನ್ನು ನೀಡಲಾಗಿದೆ.

ಮೂ.ಮಠೇ ಪುಸ್ತಕದ ಪುಟ 69ರಲ್ಲಿ-

- ವಿವಿಧ ಮಾಧ್ವಮಠಗಳಲ್ಲಿರುವ ಶ್ರೀಮದಾಚಾರ್ಯಪ್ರದತ್ತವಾದ ಎಲ್ಲ ಸೀತಾಪ್ರತಿಮೆಗಳಿಗೆ ಕಿರೀಟವಿರುವಾಗ ಮೂಲರಾಮಪ್ರತಿಮೆಗೂ ಕಿರೀಟವಿರುವಾಗ ಜೋಡಿ ಪ್ರತಿಮೆಯಾದ ಮೂಲಸೀತಾಪ್ರತಿಮೆಗೆ ಕಿರೀಟವೇಕಿಲ್ಲ?
- ವಿವಿಧ ಮಾಧ್ವಮಠಗಳಲ್ಲಿರುವ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ಸೀತಾರಾಮ ಪ್ರತಿಮೆಗಳು ಸಮಾನಲೋಹದಲ್ಲಿ ರಚಿತವಾಗಿರುವಾಗ ಮೂಲರಾಮಪ್ರತಿಮೆಗೂ ಮೂಲಸೀತಾ ಪ್ರತಿಮೆಗೂ ಲೋಹಸಾಮ್ಯ ಏಕಿಲ್ಲ?

ಹೀಗೆ ಅವರು ಆಕ್ಷೇಪಗಳನ್ನು ಮಾಡಿದ್ದಾರೆ. ಇವುಗಳಿಗೆ ಕ್ರಮವಾಗಿ ಸಮಾಧಾನವನ್ನು ತಿಳಿಯೋಣ.

ಉತ್ತರಾದಿಮಠದಲ್ಲಿರುವ ಮೂಲಸೀತಾರಾಮಪ್ರತಿಮೆಗಳು ಶಿಲ್ಪಶಾಸ್ತ್ರಕ್ಕೆ ವಿರುದ್ಧವಾಗಿವೆ ಎಂಬ ಆಕ್ಷೇಪಕ್ಕೆ ಮೊದಲು ಸಮಾಧಾನವನ್ನು ತಿಳಿಯೋಣ.

ಈ ಆಕ್ಷೇಪಕ್ಕೆ ಉತ್ತರ ತಿಳಿಯುವ ಮೊದಲು ಒಂದೆರಡು ಮಾತು.

''ಪ್ರಾಚೀನವಾದ ಶಿಲ್ಪಶಾಸ್ತ್ರ, ಪ್ರತಿಮಾಲಕ್ಷಣ ಶಾಸ್ತ್ರಗಳು ನೂರಾರು ಇವೆ'' ಎಂಬ ಉಲ್ಲೇಖಗಳು ಅನೇಕ ಕಡೆ ಸಿಗುತ್ತವೆ. ಅವುಗಳಲ್ಲಿ ಇಂದು ಅನೇಕ ಗ್ರಂಥಗಳು ಉಪಲಬ್ಧವೂ ಇಲ್ಲ. ಉಪಲಬ್ಧವಾದ ಗ್ರಂಥಗಳಲ್ಲೂ ಏಕರೂಪತೆ ಇಲ್ಲ. ಮೂ.ಮಠೇ ಲೇಖಕರು ಇಂದು ಉಪಲಬ್ಧವಿರುವ ತಾವು ಓದಿದ, ಕೇಳಿದ ಒಂದೆರಡು ಶಿಲ್ಪಶಾಸ್ತ್ರಗ್ರಂಥಗಳ ಆಧಾರದ ಮೇಲೆ ಲೋಕವಿಲಕ್ಷಣವಾದ ಬ್ರಹ್ಮಕರಾರ್ಚಿತವಾದ ಮೂಲಸೀತಾರಾಮ ಮೂರ್ತಿಗಳ ಲಕ್ಷಣಗಳಿರಬೇಕೆಂದು ವಾದಿಸುವುದು ಸಮಂಜಸವೇ ಅಲ್ಲ. ಹಾಗೆ ವಾದಿಸುವುದಾದರೆ ಜಗತ್ತಿನಲ್ಲಿರುವ ಎಲ್ಲಾ ಸೀತಾರಾಮರ ಪ್ರತಿಮೆಗಳು, ಕೃಷ್ಣ , ನರಸಿಂಹ ಮೊದಲಾದ ಎಲ್ಲಾ ಪ್ರತಿಮೆಗಳಲ್ಲೂ

ಏಕರೂಪತೆ ಇರಬೇಕಿತ್ತು. ವೈವಿಧ್ಯಕ್ಕೆ ಅವಕಾಶವೇ ಇರಲಿಲ್ಲ. ಬೇರೆ ಬೇರೆ ಶಾಸ್ತ್ರಗಳಲ್ಲಿ ಉಕ್ತವಾದ ವಿವಿಧ ಲಕ್ಷಣಗಳಿಗೆ ಅನುಸಾರವಾಗಿ ಆ ಆ ಪ್ರತಿಮೆಗಳು ಇರುವುದು ಸಹಜ.

ಇಂದು ಉಪಲಬ್ಧವಾದ ಯಾವುದೋ ಒಂದೆರಡು ಶಿಲ್ಪಶಾಸ್ತ್ರಗ್ರಂಥಗಳಲ್ಲಿ ಹೇಳಲ್ಪಟ್ಟ ಶ್ರೀಕೃಷ್ಣಪ್ರತಿಮಾ ಲಕ್ಷಣಗಳು ಉಡುಪಿಯ ಶ್ರೀಕೃಷ್ಣಪ್ರತಿಮೆಯಲ್ಲಿ ಇಲ್ಲ. ಆದ ಕಾರಣ ಉಡುಪಿಯಲ್ಲಿ ಶ್ರೀಮದಾಚಾರ್ಯರಿಂದ ಪ್ರತಿಷ್ಠಾಪಿತವಾದ ಶ್ರೀಕೃಷ್ಣಪ್ರತಿಮೆ ಶ್ರೀಕೃಷ್ಣನ ಪ್ರತಿಮೆಯೇ ಅಲ್ಲ. ಅದು ಸ್ಕಂದನ (ಸುಬ್ರಹ್ಮಣ್ಯ, ಕುಮಾರನ) ಪ್ರತಿಮೆ ಎಂಬ ಕೆಲವರ ಮೊಂಡುವಾದಕ್ಕೂ ಮೂ.ಮತೇ ಲೇಖಕರ ಈ ವಾದಕ್ಕೂ ವ್ಯತ್ಯಾಸವಿಲ್ಲ.!!

ಯಾವ ರೀತಿಯಾಗಿ ವೇದ ಹಾಗೂ ಪುರಾಣಗಳಲ್ಲಿ ಬರುವ ವಾಕ್ಯಪ್ರಯೋಗಗಳನ್ನು ಅರ್ವಾಚೀನವಾದ ಪಾಣಿನೀಯ ವ್ಯಾಕರಣದ ದೃಷ್ಟಿಯಿಂದ ಅಳೆದು ಅವುಗಳು ಸಾಧು ಅಲ್ಲ ಎಂದು ಅಲ್ಲಗಳೆಯುವುದು ಸಾಹಸವೋ ಹಾಗೆಯೇ ಪ್ರಾಚೀನಪ್ರತಿಮೆಗಳನ್ನು ಅರ್ವಾಚೀನ ಲಕ್ಷಣಶಾಸ್ತ್ರದ ಆಧಾರದಿಂದ ಅಳೆಯುವುದು ಸರ್ವಥಾ ಉಚಿತವಲ್ಲ.

ಆದ್ದರಿಂದ ಮೂ.ಮತೇ. ಲೇಖಕರು ಮಾಡಿರುವ ಈ ಆಕ್ಷೇಪಗಳಿಗೆ ಇಂದು ಉಪಲಬ್ಧವಿರುವ ಶಿಲ್ಪಶಾಸ್ತ್ರಗ್ರಂಥಗಳ ಹಿನ್ನೆಲೆಯಲ್ಲಿ ಉತ್ತರ ಕೊಡುವ ಅಗತ್ಯವೂ ಇಲ್ಲ.

ಆದರೂ ಇಂದು ಉಪಲಬ್ಧವಿರುವ ಶಿಲ್ಪಶಾಸ್ತ್ರಗ್ರಂಥಗಳಲ್ಲೂ ದೊರೆಯುವ ಅನೇಕ ಆಧಾರಗಳು ಮೂ. ಮತೇ ಲೇಖಕರು ಮಾಡಿರುವ ಆಕ್ಷೇಪಗಳಿಗೆ ಹೇಗೆ ಉತ್ತರಿಸುತ್ತಿವೆ ಎಂಬುದನ್ನು ತೋರಿಸಲು ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ.

## ಸೀತಾರಾಮಪ್ರತಿಮೆಗಳ ಕಿರೀಟಗಳಲ್ಲಿ ವೈಷಮ್ಯ

❖ ಎಲ್ಲೆಲ್ಲಿ ಸೀತಾರಾಮಪ್ರತಿಮೆಗಳಿವೆಯೋ ಅಲ್ಲೆಲ್ಲಾ ಎರಡೂ ಪ್ರತಿಮೆಗಳಿಗೆ ಕಿರೀಟವಿರಲೇಬೇಕು ಎಂದಾಗಲೀ, ಆ ಕಿರೀಟಗಳು ಒಂದೇ ರೀತಿ ಇರಲೇ ಬೇಕು ಎಂದಾಗಲೀ ನಿಯಮಗಳು ಇಲ್ಲ.

ಪ್ರತಿಮೆಗಳ ಲಕ್ಷಣಗಳನ್ನು ತಿಳಿಸಹೊರಟ ಅನೇಕ ಗ್ರಂಥಗಳಲ್ಲಿ ಶ್ರೀರಾಮಪ್ರತಿಮೆಗೆ ಕಿರೀಟ ತಿಳಿಸಿ ಅದರ ಜೋಡಿ ಪ್ರತಿಮೆಯಾದ ಸೀತಾದೇವಿಯ ಪ್ರತಿಮೆಗೆ ಕಿರೀಟವನ್ನು ಉಲ್ಲೇಖಿಸದೇ ಇದ್ದದ್ದನ್ನು ಕಾಣಬಹುದಾಗಿದೆ –

**ಸಾರ್ಧಾಷ್ಟತಾಲಮಾನೇನ ರಘುರಾಮಂ ಪ್ರಕಲ್ಪಯೇತ್ ।**
**ದ್ವಿಭುಜಂ ಶ್ಯಾಮವರ್ಣಂ ಚ ತ್ರಿಭಂಗೇನ ಚ ಸುಸ್ಥಿತಮ್ ॥**
**ಶರಂ ದಕ್ಷಿಣಹಸ್ತೇನ ಚಾಪಂ ವಾಮೇನ ಧಾರಿಣಮ್ ।**
**ಸರ್ವಾಭರಣಸಂಯುಕ್ತಂ ಕಿರೀಟಮಕುಟಾನ್ವಿತಮ್ ॥**
**ಪೀತವರ್ಣಾಂ ತಥಾ ಚೈವ ಸರ್ವಾಭರಣಭೂಷಿತಾಮ್ ।**
**ಪದ್ಮಂ ವಾಮೇನ ಹಸ್ತೇನ ಗೃಹೀತ್ವಾ ದಕ್ಷಿಣಂ ಕರಮ್ ॥**
**ಪ್ರಸಾರ್ಯೈವ ಸ್ಥಿತಾಂ ದೇವೀಂ ಸೀತಾಂ ದಕ್ಷಿಣತಸ್ತಥಾ ।**

–ಅತ್ರಿಪ್ರೋಕ್ತ ಸಮೂರ್ತಾರ್ಚನಾಧಿಕರಣ 60 ಅಧ್ಯಾಯ17-19)
ಪ್ರಕಟಣೆ: ತಿರುಮಲ ತಿರುಪತಿ ದೇವಸ್ಥಾನ ತಿರುಪತಿ, 2ನೇ ಮುದ್ರಣ 2000

**ಆಚರೇತ್ ದ್ವಿಭುಜಂ ದೇವಂ ಧನುರ್ಹಸ್ತಂ ತ್ರಿಭಿರ್ನತಮ್ ।**
**ಶ್ಯಾಮವರ್ಣಂ ಮುಕುಟಿನಂ ಸರ್ವಾಭರಣಭೂಷಿತಮ್ ॥**

**ಶ್ರೀವತ್ಸವಕ್ಷಸಂ ಕುರ್ಯಾತ್ಪೀತಾಂಬರಸುಶೋಭಿತಮ್ ।**
**ರಾಮಃ ಕಮಲಪತ್ರಾಕ್ಷಸ್ಸರ್ವಸತ್ವಮನೋಹರಃ ॥**

**ವಾಮಭಾಗೇ ಚ ಸೌಮಿತ್ರಿಂ ದಕ್ಷಿಣೇ ಜನಕಾತ್ಮಜಾಮ್ ।**
**ರಾಮಬಾಹುಸಮೌ ತತ್ರ ಕಾರಯೇದ್ವಿಧಿಕೋವಿದಃ ॥**

**ಹೇಮವರ್ಣಾಂ ಪದ್ಮನೇತ್ರಾಂ ಶುಕಪಿಚ್ಛನಿಭಾಂಬರಾಮ್ ।**
**ಸೀತಾಂ ಪದ್ಮಕರಾಂ ಕುರ್ಯಾತ್ .......**

-ಶ್ರೀವೈಖಾನಸಭಗವಚ್ಛಾಸ್ತ್ರೇ ಭೃಗುಪ್ರೋಕ್ತಃ ಖಿಲಾಧಿಕಾರಃ, ಅಧ್ಯಾಯ 19 ಶ್ಲೋಕ 88-90

ಮೇಲಿನ ಎರಡೂ ಪ್ರಮಾಣಗಳಲ್ಲಿ ಶ್ರೀರಾಮದೇವರ ಪ್ರತಿಮೆಯ ಲಕ್ಷಣಗಳನ್ನು ಹೇಳುವಾಗ ''**ಕಿರೀಟಮುಕುಟಾನ್ವಿತಂ**'' ''**ಮುಕುಟಿನಂ**'' ಎಂಬುದಾಗಿ ಶ್ರೀರಾಮನ ಪ್ರತಿಮೆಗೆ ಕಿರೀಟವನ್ನು ಹೇಳಿ ಸೀತಾಪ್ರತಿಮೆಗೆ ಕಿರೀಟವನ್ನು ಹೇಳಿಲ್ಲ ಎಂಬುದನ್ನು ಗಮನಿಸಬಹುದು.

❖ ಜೋಡಿ ಪ್ರತಿಮೆಗಳಾದ ಶ್ರೀರಾಮ ಹಾಗೂ ಸೀತಾದೇವಿಯ ಪ್ರತಿಮೆಗಳಲ್ಲಿ ಕಿರೀಟದ ಲಕ್ಷಣ ತಿಳಿಸುವಾಗಲೂ ಒಂದೇ ರೀತಿಯ ಕಿರೀಟ ಇರಬೇಕೆಂಬ ನಿಯಮವೂ ಅನೇಕ ಗ್ರಂಥಗಳಲ್ಲಿ ಇಲ್ಲ -

''**ರಾಘವಂ ರಾಮಂ...ದ್ವಿಭುಜಂ.....ಶ್ಯಾಮಾಭಂ.......ಕಿರೀಟಾದ್ಯಾಭರಣಾನ್ವಿತಂ ಕಾರಯೇತ್...**''

''ಸೀತಾಂ ದೇವಸ್ಯ ಬಾಹುಸಮಾಂ ..... ಸರ್ವಾಭರಣಭೂಷಿತಾಂ **ಧಮ್ಮಿಲ್ಲಬಂಧಾಯುತಾಂ ಕರಂಟಿಕಾಮುಕುಟಯುತಾಂ**'' .... ಪಟಲ 58 ಮರೀಚಿಮಹರ್ಷಿಪ್ರಣೀತ ''ವಿಮಾನಾರ್ಚನಕಲ್ಪ''

''**ರಾಮುನಿ ತಲಮೀದ ಕಿರೀಟಮುಕುಟಂ, ಸೀತಾತಲಮೀದ ಕರಂಡಮುಕುಟಂ ಉಂಡಾಲಿ**'' ಎಂಬ ಉಲ್ಲೇಖ ''ಪ್ರತಿಮಾಲಕ್ಷಣಶಾಸ್ತ್ರಮ್'' ಎಂಬ ಪುಸ್ತಕದ ಪುಟ 28ರಲ್ಲಿ ಉಂಟು. (ಪ್ರತಿಮಾಲಕ್ಷಣಶಾಸ್ತ್ರಮ್; ರಚಯಿತಾ: ಡಾ॥ ಕೆ ಸತ್ಯಮೂರ್ತಿ. ಸಂಪಾದಕುಡು: ಆಚಾರ್ಯ ಎಸ್.ಎಸ್.ರಾಮಚಂದ್ರಮೂರ್ತಿ ಶಾಖಾಧಿಪತಿ, ಭಾರತೀಯಸಂಸ್ಕೃತಿ, ಶ್ರೀವೇಂಕಟೇಶ್ವರ ವಿಶ್ವವಿದ್ಯಾಲಯಂ, ತಿರುಪತಿ) ಈ ಪ್ರಮಾಣಗಳಲ್ಲಿ ಸ್ಪಷ್ಟವಾಗಿ ಶ್ರೀರಾಮಪ್ರತಿಮೆಗೆ **ಕಿರೀಟ ಮುಕುಟ**ವನ್ನು ಹೇಳಿ ಸೀತಾಪ್ರತಿಮೆಗೆ **ಕರಂಟಿಕಾ ಮುಕುಟ**, ಧಮ್ಮಿಲ್ಲ ಬಂಧ ಇತ್ಯಾದಿಗಳನ್ನು ಹೇಳಿದ್ದಾರೆ. ಅಂದರೆ ಕಿರೀಟಗಳಲ್ಲಿ ವ್ಯತ್ಯಾಸ ಇರಬಹುದೆಂದಾಯಿತು.

ಇದಲ್ಲದೇ, ದಕ್ಷಿಣಭಾರತದ ಅನೇಕ ಪ್ರಾಚೀನ ದೇವಸ್ಥಾನಗಳಲ್ಲಿರುವ ಪ್ರಾಚೀನವಾದ ಸೀತಾರಾಮಪ್ರತಿಮೆಗಳಲ್ಲಿ ಸೀತೆಯ ಪ್ರತಿಮೆಗೆ ಕಿರೀಟ ಇಲ್ಲದಿರುವುದನ್ನು ಮತ್ತು ಕಿರೀಟಗಳಲ್ಲಿ ವ್ಯತ್ಯಾಸವಿರುವುದನ್ನು ಸ್ಪಷ್ಟ ಗಮನಿಸಿಬಹುದು. **ನೋಡಿರಿ ಪ್ರತಿಮಾದರ್ಶನ ಚಿತ್ರ-1ರಿಂದ 5.**

## ಪತಿ-ಪತ್ನಿಯರ ಜೋಡಿಪ್ರತಿಮೆಗಳಲ್ಲಿ ಲೋಹ ವೈಷಮ್ಯ

ಭವಿಷ್ಯೋತ್ತರಪುರಾಣಾಂತರ್ಗತ ಆಶ್ವೀನಮಾಸಮಾಹಾತ್ಮ್ಯದಲ್ಲಿ 25 ನೇ ಅಧ್ಯಾಯದಲ್ಲಿ ದಶಾಂಗಲಲಿತಾವ್ರತದ ಬಗ್ಗೆ ವಿವರಣೆ ಇದೆ. ಆ ವ್ರತದ ಉದ್ಯಾಪನವನ್ನು ಹೇಳುವ ಸಂದರ್ಭದಲ್ಲಿ ಚಂದ್ರ ಹಾಗೂ ರೋಹಿಣಿಯ ಜೋಡಿ ಪ್ರತಿಮೆಯನ್ನು ಮಾಡಿಸಿ ಪೂಜಿಸಬೇಕೆಂದು ಹೇಳುವಾಗ ಚಂದ್ರನ ಪ್ರತಿಮೆ ಬೆಳ್ಳಿಯ ಲೋಹದ್ದಾಗಿರಬೇಕೆಂದು ಮತ್ತು ಜೋಡಿ ಪ್ರತಿಮೆಯಾದ ರೋಹಿಣಿಯ ಪ್ರತಿಮೆ ಬಂಗಾರದ್ದಾಗಿರಬೇಕೆಂದು ಸ್ಪಷ್ಟ ಉಲ್ಲೇಖವಿದೆ –

**ಸೌವರ್ಣೀ ರೋಹಿಣೀ ಕಾರ್ಯಾ ಚಂದ್ರಸ್ತು ರಜತಸ್ಯ ಚ ॥** -ಅ. 25, ಶ್ಲೋ. 23

**ಅನು:** ರೋಹಿಣೀ ದೇವಿಯ ಪ್ರತಿಮೆಯನ್ನು ಬಂಗಾರದಿಂದಲೂ ಚಂದ್ರನ ಪ್ರತಿಮೆಯನ್ನು ಬೆಳ್ಳಿಯಿಂದಲೂ ನಿರ್ಮಿಸಬೇಕು.

ಆಶ್ವೀನಮಾಸಮಾಹಾತ್ಮ್ಯ; ಅನುವಾದಕರು: ಆ. ರಾ. ಪಂಚಮುಖೀ;
ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥಪ್ರತಿಷ್ಠಾನಂ, ಧಾರವಾಡ

ಇದರಿಂದ ಜೋಡಿಪ್ರತಿಮೆಗಳು ನಿಯಮೇನ ಸಮಾನಲೋಹದ್ದಾಗಿರಬೇಕೆಂಬ ಶಿಲ್ಪಶಾಸ್ತ್ರದ ನಿರ್ಬಂಧವಿಲ್ಲ-ವೆಂಬುದು ಸ್ಪಷ್ಟ.

ಈ ಶ್ಲೋಕವು ಪುರಾಣವಾಕ್ಯವಾದ ಕಾರಣ ವೇದವ್ಯಾಸರಿಗೆ ಸಮ್ಮತವಾದದ್ದು ಎಂಬುದು ಗಮನಾರ್ಹ.

ಕಾರಣ ಎಲ್ಲ ಜೋಡಿ ಪ್ರತಿಮೆಗಳಲ್ಲಿ ವರ್ಣತಃ ಸಾಮ್ಯವನ್ನು ಬಯಸುವ ಮೂ.ಮಠೇ.ಲೇಖಕರಿಗೆ ಶ್ರೀವೇದವ್ಯಾಸದೇವರ ಪುರಾಣವಾಕ್ಯದ ವಿರೋಧ ಸಂಭವಿಸುತ್ತದೆ.

❖ ಮಹಾಜ್ಞಾನಿಗಳಾದ, ತಪಸ್ವಿವರೇಣ್ಯರಾದ ಆರಣ್ಯಕಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀವಿಷ್ಣುತೀರ್ಥರು ನಿತ್ಯ ಪೂಜಿಸಿತ್ತಿದ್ದ ರುಕ್ಮಿಣೀಸತ್ಯಭಾಮಾಸಮೇತ ಗೋಪಾಲಕೃಷ್ಣಪ್ರತಿಮೆಗಳನ್ನು ಮತ್ತು ಉಡುಪಿಯ ಪ್ರಸಿದ್ಧ ವಿದ್ವಾಂಸರ ಮನೆಯಲ್ಲಿ ಪೂಜೆಗೊಳ್ಳುತ್ತಿರುವ ಪ್ರಾಚೀನವಾದ ರುಕ್ಮಿಣೀ-ಸತ್ಯಭಾಮಾಸಮೇತ ವಿಟ್ಠಲದೇವರ ಪ್ರತಿಮೆಗಳನ್ನು ಗಮನಿಸಿ. ಪತಿಪತ್ನಿಯರ ಜೋಡಿಪ್ರತಿಮೆಗಳಲ್ಲಿ ಲೋಹವ್ಯತ್ಯಾಸವಿದೆ. **ಪ್ರತಿಮಾದರ್ಶನ ಚಿತ್ರ 6 ಮತ್ತು 7.**

❖ ಸೀತಾರಾಮಪ್ರತಿಮೆಗಳಲ್ಲಿ ವರ್ಣತಃ ಸಾಮ್ಯ ಇರಬೇಕು ಎಂಬ ನಿಯಮವೂ ಇಲ್ಲ. (...ವರ್ಣತಃ ಪರಿಮಾಣತಃ । ಸೀತಾರಾಮಾರ್ಚಯೋಃ ಸಾಮ್ಯಂ...)

**...............ರಘುರಾಮಂ ಪ್ರಕಲ್ಪಯೇತ್ ।**

**ದ್ವಿಭುಜಂ ಶ್ಯಾಮವರ್ಣಂ ........**

**ಪೀತವರ್ಣಾಂ ........ ಸೀತಾಂ ದಕ್ಷಿಣತಸ್ತಥಾ ।**

-ಅತ್ರಿಪ್ರೋಕ್ತ ಸಮೂರ್ತಾರ್ಚನಾಧಿಕರಣ 60ನೇ ಅಧ್ಯಾಯ ಶ್ಲೋಕ 17-19;
ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ; 2ನೇ ಮುದ್ರಣ 2000)

**ಆಚರೇತ್ ದ್ವಿಭುಜಂ ದೇವಂ ಧನುರ್ಹಸ್ತಂ ತ್ರಿಭಿರ್ನತಮ್ ।**

**ಶ್ಯಾಮವರ್ಣಂ ಮುಕುಟಿನಂ ಸರ್ವಾಭರಣಭೂಷಿತಮ್ ॥**

**ಶ್ರೀವತ್ಸವಕ್ಷಸಂ ಕುರ್ಯಾತ್ಪೀತಾಂಬರಸುಶೋಭಿತಮ್ ।**

**ರಾಮಃ ಕಮಲಪತ್ರಾಕ್ಷಸ್ಸರ್ವಸತ್ವಮನೋಹರಃ ॥**

......

**ಹೇಮವರ್ಣಾಂ ಪದ್ಮನೇತ್ರಾಂ ಶುಕಪಿಚ್ಛನಿಭಾಂಬರಾಮ್ ।**

**ಸೀತಾಂ ಪದ್ಮಕರಾಂ ಕುರ್ಯಾತ್ .......**

-ಶ್ರೀವೈಖಾನಸಭಗವಚ್ಛಾಸ್ತ್ರೇ ಭೃಗುಪ್ರೋಕ್ತಃ ಖಿಲಾಧಿಕಾರಃ, 19ನೇ ಅಧ್ಯಾಯ, ಶ್ಲೋಕ 88-90;
ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ; 2ನೇ ಮುದ್ರಣ 2000

**''ರಾಘವಂ ರಾಮಂ...ದ್ವಿಭುಜಂ..... ಶ್ಯಾಮಾಭಂ.... ಕಿರೀಟಾದ್ಯಾಭರಣಾನ್ವಿತಂ ಕಾರಯೇತ್....**

**''ಸೀತಾಂ ದೇವಸ್ಯ ಬಾಹುಸಮಾಂ..... ರುಕ್ಮಾಭಾಂ..... ಸರ್ವಾಭರಣಭೂಷಿತಾಂ ಧಮ್ಮಿಲ್ಲಬಂಧಾ-ಯತಾಂ ಕರಂಟಿಕಾಮುಕುಟಯುತಾಂ ....**

-ಮರೀಚಿಮಹರ್ಷಿಪ್ರಣೀತ ವಿಮಾನಾರ್ಚನಕಲ್ಪ, ಪಟಲ 58; ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ; 2000)

ಮೇಲೆ ಉದಾಹರಿಸಿದ ಪ್ರತಿಮಾಲಕ್ಷಣಶಾಸ್ತ್ರಮ್ ಎಂಬ ಪುಸ್ತಕದ ಪುಟ 28ರಲ್ಲಿ ಶ್ರೀರಾಮನ ಮೂರ್ತಿಯು

**''ಎರ್ರನಿ ವಸ್ತ್ರಾಲಲೋ ನಲ್ಲನಿ ರೂಪಂಗಲ ಮೂರ್ತಿ.**

ಸೀತಾಪ್ರತಿಮೆಯು,

**''ಆ (ಸೀತಾ) ಪ್ರತಿಮಾ ಬಂಗಾರು ರಂಗುಲೋ ಚಿಲುಕಾಕುಪಚ್ಚವಸ್ತ್ರಾಲಲೋ ಕಲಗಿ ಉಂಡಾಲಿ''**

ಎಂಬ ಉಲ್ಲೇಖ ಉಂಟು. ಈ ಪ್ರಮಾಣಗಳಲ್ಲಿ ರಾಮಪ್ರತಿಮೆ ಶ್ಯಾಮವರ್ಣ, ಸೀತಾಪ್ರತಿಮೆ ಪೀತವರ್ಣ, ಹೇಮವರ್ಣ, ರುಕ್ಮವರ್ಣ ಎಂದು ಸ್ಪಷ್ಟವಾಗಿ ಇದೆ. ರಾಮನ ವಸ್ತ್ರ ಮತ್ತು ಮೂರ್ತಿಯ ಬಣ್ಣಕ್ಕೂ ಸೀತಾದೇವಿಯ ವಸ್ತ್ರ ಮತ್ತು ಮೂರ್ತಿಯ ಬಣ್ಣಕ್ಕೂ ವ್ಯತ್ಯಾಸ ಇರಬಹುದೆಂದು ಇದರಿಂದ ತಿಳಿದು ಬರುತ್ತದೆ.

ಮೂ.ಮಠೇ ಲೇಖಕರು ಪುಟ 63ರಲ್ಲಿ ಶ್ರೀವಾದೀಂದ್ರತೀರ್ಥರಿಂದ ರಚಿತವಾದದ್ದೆಂದು ಹೇಳಿಕೊಳ್ಳುತ್ತ ''ಕರ್ಣತೋ ವರ್ಣತಶ್ಚೈವ....'' ಎಂಬ ಶ್ಲೋಕವನ್ನು ಕೊಟ್ಟು ಅದರಲ್ಲಿರುವ ಲಕ್ಷಣಗಳು ಪ್ರತಿಮಾಲಕ್ಷಣ ಶಾಸ್ತ್ರಸಮ್ಮತಸೂತ್ರ ಎಂದು ಬರೆದಿದ್ದಾರೆ. ಆದರೆ ಅನೇಕ ಶಿಲ್ಪಶಾಸ್ತ್ರಗ್ರಂಥಗಳಲ್ಲೂ ಹಾಗೂ ಪ್ರತ್ಯಕ್ಷ ಕಂಡು ಬರುವ ಪ್ರಾಚೀನ ಪ್ರತಿಮೆಗಳಲ್ಲೂ ಈ ಲಕ್ಷಣಗಳು ಕಾಣಬರುವದಿಲ್ಲವಾದ ಕಾರಣ ಅರ್ಚಾಗತಿಕ್ರಮದಲ್ಲಿ ಹೇಳಿದ ಪ್ರತಿಮೆಯ ಲಕ್ಷಣಗಳೇ ''ಲಕ್ಷಣಶಾಸ್ತ್ರಸೂತ್ರಸಮ್ಮತ'' ಎಂದು ಬೀಗಿದ್ದು ಸರಿಯಲ್ಲ.

ಇನ್ನು, ಲಕ್ಷಣಶಾಸ್ತ್ರಗಳು ಏನೇ ಹೇಳಲಿ. ಬೇರೆ ಬೇರೆ ಕಡೆ ಇರುವ ಸೀತಾರಾಮಪ್ರತಿಮೆಗಳು ಹೇಗೇ ಇರಲಿ. ಅದು ನಮಗೆ ಅಪ್ರಸ್ತುತ. ಶ್ರೀಮದಾಚಾರ್ಯಪ್ರದತ್ತವಾದ ಇತರ ಎಲ್ಲ ಸೀತಾರಾಮ ಪ್ರತಿಮೆಗಳಂತೆ ಉತ್ತರಾದಿಮಠದಲ್ಲಿರುವ ಮೂಲಸೀತಾರಾಮಪ್ರತಿಮೆಗಳೂ ಇರಬೇಕಿತ್ತು. ಆದರೆ ಇವುಗಳು ಹಾಗೆ ಇಲ್ಲ. ಅದ್ದರಿಂದ ಇವುಗಳು ಮೂಲಸೀತಾ-ಮೂಲರಾಮಪ್ರತಿಮೆಗಳಲ್ಲ ಎಂದು ವಾದಿಸುವುದಾದರೆ ಅದಕ್ಕೆ ಸಮಾಧಾನ-

ಮೂಲಸೀತಾರಾಮಪ್ರತಿಮೆಗಳು ಶ್ರೀಮದಾಚಾರ್ಯರ ಕಾಲದಿಂದ ಬಂದದ್ದಲ್ಲ. ಅವುಗಳು ಬ್ರಹ್ಮಕರಾರ್ಚಿತ ಚತುರ್ಯುಗ ಮೂರ್ತಿಗಳು. ಆದ್ದರಿಂದ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಇತರ ಪ್ರತಿಮೆಗಳಂತೆ ಈ ಪ್ರತಿಮೆಗಳ ಲಕ್ಷಣಗಳೂ ಇರಲೇ ಬೇಕು ಎಂದು ಆಗ್ರಹ ಮಾಡುವುದು ಸರ್ವಥಾ ಸರಿಯಲ್ಲ.

ಅಲ್ಲದೇ, ಶ್ರೀಮದಾಚಾರ್ಯಪ್ರದತ್ತವಾದ ಎಲ್ಲಾ ಪ್ರತಿಮೆಗಳಲ್ಲಿ ಎಲ್ಲವೂ ಸಾಮ್ಯವಿದೆ ಎಂಬುದೂ ಸರಿಯಲ್ಲ. ಪರಸ್ಪರ ಪ್ರತಿಮೆಗಳಲ್ಲಿ ಅನೇಕ ವೈಲಕ್ಷಣ್ಯಗಳು ವಿಶೇಷತೆಗಳು ಪ್ರತ್ಯಕ್ಷ ಕಂಡು ಬರುತ್ತವೆ. ಆದ್ದರಿಂದ ಮೂ.ಮಠೇ ಲೇಖಕರ ಈ ಆಕ್ಷೇಪಗಳು ಕೇವಲ ಅಬ್ಬರ ಮಾತ್ರ. ಅದರಲ್ಲಿ ಹುರುಳಿಲ್ಲ.

ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ಮೂ.ಮಠೇ ಲೇಖಕರು ಮಾಡಿರುವ ಇನ್ನೆರಡು ಆಕ್ಷೇಪಗಳು ಹೀಗಿವೆ-

❖ ವಿವಿಧ ಮಾಧ್ವಮಠಗಳಲ್ಲಿರುವ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ಸೀತಾರಾಮಪ್ರತಿಮೆಗಳ ಪೀಠದಲ್ಲಿ ಹೋಲಿಕೆ ನಿಯತವಾಗಿ ಕಂಡುಬರುತ್ತಿರುವಾಗ ಮೂಲರಾಮಪ್ರತಿಮೆಗೂ ಮೂಲಸೀತಾಪ್ರತಿಮೆಗೂ ಪೀಠಸಾಮ್ಯ ಏಕಿಲ್ಲ?

- ❖ ವಿವಿಧ ಮಾಧ್ವಮಠಗಳಲ್ಲಿರುವ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ಸೀತಾಪ್ರತಿಮೆಗಳು ಕಿರೀಟದ ಅಳತೆಯನ್ನು ಬಿಟ್ಟರೆ ರಾಮಪ್ರತಿಮೆಯ ಭುಜದ ಮಟ್ಟಕ್ಕೂ, ಕಿರೀಟದ ಅಳತೆಯನ್ನು ಸೇರಿಸಿದರೆ ರಾಮಪ್ರತಿಮೆಗಳ ಕಿವಿಯ ಮಟ್ಟಕ್ಕೂ ಹೊಂದಿಕೆಯಾಗುತ್ತಿರುವಾಗ ಮೂಲರಾಮಪ್ರತಿಮೆಗೂ ಮೂಲಸೀತಾಪ್ರತಿಮೆಗೂ ಪರಿಮಾಣಸಾಮ್ಯ ಏಕಿಲ್ಲ?

ಮೇಲಿನ ಎರಡು ಆಕ್ಷೇಪಗಳಿಗೆ ''ಮೂಲಸೀತಾರಾಮಪ್ರತಿಮೆಗಳು ಆಚಾರ್ಯರ ಕಾಲದಿಂದ ಬಂದದ್ದಲ್ಲ. ಅವುಗಳು ಬ್ರಹ್ಮಕರಾರ್ಚಿತ ಚತುರ್ಯುಗ ಮೂರ್ತಿಗಳು. ಆದ್ದರಿಂದ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಇತರ ಪ್ರತಿಮೆಗಳಂತೆ ಈ ಪ್ರತಿಮೆಗಳ ಲಕ್ಷಣಗಳೂ ಇರಲೇ ಬೇಕು ಎಂದು ಆಗ್ರಹ ಮಾಡುವುದು ಸರ್ವಥಾ ಸರಿಯಲ್ಲ'' ಎಂಬುದೇ ಪ್ರಧಾನ ಉತ್ತರ.

ಆದರೂ ಈ ಆಕ್ಷೇಪಗಳಿಗೆ ಇನ್ನೂ ಕೆಲವು ಸಮಾಧಾನಗಳನ್ನು ಹೀಗೆ ತಿಳಿಯಬಹುದು-

ಶ್ರೀಮದಾಚಾರ್ಯಪ್ರದತ್ತವಾದ ಜೋಡಿ ಪ್ರತಿಮೆಗಳಲ್ಲಿ ಪೀಠಸಾಮ್ಯ ಇರಲೇಬೇಕೆಂಬ ನಿಯಮವಿಲ್ಲ.

- ❖ ಮೂ.ಮಠೇ ಪುಸ್ತಕದ ಪುಟ 65ರಲ್ಲಿ ಅವರೇ ಮುದ್ರಿಸಿರುವ ''ಶ್ರೀಸತ್ಯತೀರ್ಥರಿಗೆ ಶ್ರೀಮನ್ ಮಧ್ವಾಚಾರ್ಯರು ದಯಪಾಲಿಸಿರುವ ಸನಕಾದಿ ಮುನಿಪೂಜಿತ ಲಕ್ಷ್ಮಣಸಮೇತ ಶ್ರೀಸೀತಾರಾಮಚಂದ್ರದೇವರ'' ಪ್ರತಿಮೆಯನ್ನು ಗಮನಿಸಿ... ಇಲ್ಲಿಯೂ ಸೀತಾಪ್ರತಿಮೆಯ ಪೀಠ ಹಾಗೂ ರಾಮಪ್ರತಿಮೆಯ ಪೀಠಗಳಲ್ಲಿ ಸಾಮ್ಯ ಇಲ್ಲದೇ ಇರುವುದನ್ನು ಸ್ಪಷ್ಟವಾಗಿ ಕಾಣಬಹುದು. **ಪ್ರತಿಮಾದರ್ಶನ ಚಿತ್ರ 8.**

## ಜೋಡಿ ಪ್ರತಿಮೆಗಳಲ್ಲಿ ಪರಿಮಾಣ ವೈಷಮ್ಯ

ಎಲ್ಲಾ ಜೋಡಿ ಪ್ರತಿಮೆಗಳಲ್ಲಿ ಸ್ತ್ರೀಪ್ರತಿಮೆಯು ಪುರುಷಪ್ರತಿಮೆಯ ಭುಜದ ಮಟ್ಟಕ್ಕೆ ಇರಬೇಕೆಂಬ ನಿಯಮವಾಗಲಿ, ಸೀತಾರಾಮ ಪ್ರತಿಮೆಗಳಲ್ಲಿ ಸೀತಾಪ್ರತಿಮೆಯು ರಾಮಪ್ರತಿಮೆಯ ಭುಜದ ಮಟ್ಟಕ್ಕೆ ಇರಬೇಕೆಂಬ ನಿಯಮವಾಗಲಿ ಇಲ್ಲ. ಈ ವಿಷಯದಲ್ಲಿ ಆಗಮ ಹಾಗೂ ಪ್ರತ್ಯಕ್ಷಪ್ರಮಾಣಗಳನ್ನು ಈ ಕೆಳಗೆ ನೀಡಲಾಗಿದೆ.

- ❖ ಶ್ರೀಪೇಜಾವರ ಅಧೋಕ್ಷಜಮಠದಲ್ಲಿ ಇಂದಿಗೂ ಪೂಜಿತವಾಗುತ್ತಿರುವ ಶ್ರೀಮದಾಚಾರ್ಯ-ಕರಾರ್ಚಿತ ಶ್ರೀಸೀತಾರಾಮಲಕ್ಷ್ಮಣಪ್ರತಿಮೆಗಳು ಮೂ.ಮಠೇ.ಲೇಖಕರ ದೃಷ್ಟಿಗೆ ಬಿದ್ದಿಲ್ಲವೋ? ಅಥವಾ ಎಂದಿನಂತೆ ನೋಡಿದ್ದರೂ ತಮಗೆ ಬಾಧಕವೆಂದು ಕೈಬಿಡಲಾಗಿದೆಯೋ?

ಶ್ರೀಪೇಜಾವರ ಅಧೋಕ್ಷಜಮಠದಲ್ಲಿ ಪೂಜಾಮಂಟಪದ ಮೇಲ್ಭಾಗದಲ್ಲಿ ಇಟ್ಟು ಪೂಜಿಸುತ್ತಿರುವ ''ಕಣ್ವಪೂಜಿತ ಶ್ರೀಮದಾಚಾರ್ಯಕರಾರ್ಚಿತ'' ಎಂದು ದರ್ಶನಮಾಡಿಸುವ ಸೀತಾರಾಮ ಪ್ರತಿಮೆಗಳಲ್ಲಿ ಸೀತಾಪ್ರತಿಮೆಯು ರಾಮಪ್ರತಿಮೆಯ ಅರ್ದಭಾಗದವರೆಗೆ ಮಾತ್ರ ಇರುವುದು ಗಮನಾರ್ಹ. **ಪ್ರತಿಮಾದರ್ಶನ ಚಿತ್ರ 9 ಮತ್ತು 10.**

- ❖ ಭವಿಷ್ಯೋತ್ತರಪುರಾಣಾಂತರ್ಗತ ಆಶ್ವೀನಮಾಸಮಾಹಾತ್ಮ್ಯದಲ್ಲಿ 25 ನೇ ಅಧ್ಯಾಯದಲ್ಲಿ ದಶಾಂಗಲಲಿತಾವ್ರತದ ಬಗ್ಗೆ ವಿವರಣೆ ಇದೆ. ಆ ವ್ರತದ ಉದ್ಯಾಪನವನ್ನು ಹೇಳುವ ಸಂದರ್ಭದಲ್ಲಿ ಚಂದ್ರ ಹಾಗೂ ರೋಹಿಣಿಯ ಜೋಡಿಪ್ರತಿಮೆಯನ್ನು ಮಾಡಿಸಿ ಪೂಜಿಸಬೇಕೆಂದು ಹೇಳುವಾಗ ಚಂದ್ರನ ಪ್ರತಿಮೆ 8 ಅಂಗುಲದ್ದಾದರೆ ರೋಹಿಣಿಯ ಪ್ರತಿಮೆ 4 ಅಂಗುಲದ್ದಾಗಿರಬೇಕೆಂದು ತಿಳಿಸಲಾಗಿದೆ. ಸರಿಯಾಗಿ ಅರ್ಧಪರಿಮಾಣ ವಾಯಿತು. ಅಂದರೆ ನಾಭಿಪರ್ಯಂತ (ಕಟಿಪ್ರದೇಶ) ಎಂದಾಯಿತು.

**ಅಷ್ಟಾಂಗುಲಃ ಶಶೀ ಪ್ರೋಕ್ತೋ ರೋಹಿಣೀ ಚತುರಂಗುಲಾ ||** (ಅ.25 ಶ್ಲೋ.23)

**ಅನು:** ಚಂದ್ರನ ಪ್ರತಿಮೆ ಎಂಟು ಅಂಗುಲ ಪ್ರಮಾಣದ್ದು ರೋಹಿಣೀ ಪ್ರತಿಮೆಯು ನಾಲ್ಕು ಅಂಗುಲ ಪ್ರಮಾಣದ್ದು ಆಗಿರಬೇಕು.

ಆಶ್ವೀನಮಾಸಮಾಹಾತ್ಮ್ಯಮ್; ಅನುವಾದಕರು: ಆ. ರಾ. ಪಂಚಮುಖೀ;
ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥಪ್ರತಿಷ್ಠಾನಂ, ಧಾರವಾಡ

ಜೋಡಿಪ್ರತಿಮೆಗಳಲ್ಲಿ, ಸೀತಾರಾಮಪ್ರತಿಮೆಗಳಲ್ಲಿ ಪರಿಮಾಣತಃ ಸಾಮ್ಯವಿಲ್ಲದಿರುವುದನ್ನು ಸೀತಾಪ್ರತಿಮೆಗಳು ಕಿರೀಟದ ಅಳತೆಯನ್ನು ಬಿಟ್ಟರೆ ರಾಮಪ್ರತಿಮೆಯ ಭುಜದ ಮಟ್ಟಕ್ಕೂ, ಕಿರೀಟದ ಅಳತೆಯನ್ನು ಸೇರಿಸಿದರೆ ರಾಮಪ್ರತಿಮೆಗಳ ಕಿವಿಯ ಮಟ್ಟಕ್ಕೂ ಹೊಂದಿಕೆ ಆಗಿರಬೇಕೆಂಬ ನಿಯಮವಿಲ್ಲ ಎಂಬುದನ್ನು ಪ್ರತ್ಯಕ್ಷ ಕಾಣಬಹುದಾಗಿದೆ. **ಪ್ರತಿಮಾದರ್ಶನ ಚಿತ್ರ 1, 9ರಿಂದ 15, 21 ಮತ್ತು 27.**

### ಬಲಗೈಯನ್ನು ಇಳಿಬಿಟ್ಟು, ಎಡಗೈಯಲ್ಲಿ ಕಮಲ ಧರಿಸಿದ ಶ್ರೀಪ್ರತಿಮೆಗಳು

**ಮೂ.ಮತೇ. ಲೇಖಕರ ಮತ್ತೊಂದು ಆಕ್ಷೇಪ:** ವಿವಿಧ ಮಾಧ್ವಮಠಗಳಲ್ಲಿರುವ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ಸೀತಾಪ್ರತಿಮೆಗಳು ಬಲಗೈಯಲ್ಲಿ ಕಮಲವನ್ನು ಧರಿಸಿ ಎಡಗೈಯನ್ನು ನೀಳವಾಗಿ ಇಳಿಬಿಟ್ಟಿರುವ ಒಂದೇ ಭಂಗಿಯಲ್ಲಿ ಕಂಡುಬರುವಾಗ ಸ.ಸೀ.ಮೂ. ಗ್ರಂಥೋಕ್ತ ''ಕರದಿ ಕಮಲ ಅಮೃತಕಲಶವಾ ಪಿಡಿದಿಹಳು'' ಎಂಬ ಸುಳಾದಿಯ ವಾಕ್ಯವನ್ನು ಮೂಲಸೀತಾಲಕ್ಷಣವೆಂದು ಒಪ್ಪಬೇಕಾದ ಅನಿವಾರ್ಯತೆ ಏನು?

- ಮೂ.ಮತೇ ಪುಸ್ತಕದ ಪುಟ 64 ರಲ್ಲಿ ಶ್ರೀಭೀಮಸೇತು ಮುನಿವೃಂದ ಮಠದಲ್ಲಿ ಪೂಜೆಗೊಳ್ಳುತ್ತಿರುವ ಪ್ರತಿಮೆಗಳ ವರ್ಣಚಿತ್ರವನ್ನು ಛಾಪಿಸಿದ್ದಾರೆ. ಈ ಪ್ರತಿಮೆಗಳು ಆ ಮಠದ ಮೂಲಪುರುಷರಾದ ಶ್ರೀಸತ್ಯತೀರ್ಥರಿಗೆ ಶ್ರೀಮನ್ಮಧ್ವಾಚಾರ್ಯರು ದಯಪಾಲಿಸಿದ್ದೆಂದು ಬರೆದಿದ್ದಾರೆ. ಈ ಚಿತ್ರದಲ್ಲಿ ಶ್ರೀಸೀತಾದೇವಿಯವರು ಎಡಗೈಯಲ್ಲಿ ಕಮಲವನ್ನು ಧರಿಸಿ ಬಲಗೈಯನ್ನು ನೀಳವಾಗಿ ಇಳಿಬಿಟ್ಟಿರು-ವುದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ಹೀಗಾಗಿ ''ಶ್ರೀಮದಾಚಾರ್ಯಪ್ರದತ್ತವಾದ ಎಲ್ಲಾ ಸೀತಾ-ಪ್ರತಿಮೆಗಳು ಬಲಗೈಯಲ್ಲಿ ಕಮಲವನ್ನು ಧರಿಸಿ ಎಡಗೈಯನ್ನು ನೀಳವಾಗಿ ಇಳಿಬಿಟ್ಟಿರುವ ಒಂದೇ ಭಂಗಿಯಲ್ಲಿ ಕಂಡುಬರುತ್ತವೆ'' ಎಂಬ ಇವರ ಆಕ್ಷೇಪವನ್ನು ಅವರ ಪುಸ್ತಕವೇ ತಳ್ಳಿಹಾಕುತ್ತಿದೆ. **ಪ್ರತಿಮಾದರ್ಶನ ಚಿತ್ರ 16.**
- ಅಲ್ಲದೇ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿಯೂ ಸೀತಾಪ್ರತಿಮೆ ಇರಬಹುದೆಂಬುದಕ್ಕೆ ಪ್ರಮಾಣಗಳು ಹೀಗಿವೆ-

**''ತದ್ದಕ್ಷಿಣೇ ಸೀತಾ ಹೇಮಾಭಾ ಶುಕ್ಲಾಂಬರಧರಾ ಧೃತಪದ್ಮವಾಮಹಸ್ತಾ ಪ್ರಸಾರಿತ ದಕ್ಷಿಣಕರಾ.....''**

ಮರೀಚಿಮಹರ್ಷಿಪ್ರಣೀತ ವಿಮಾನಾರ್ಚನಕಲ್ಪ ಪಟಲ 21; ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ

**''ಸೀತಾಂ ದೇವಸ್ಯ ಬಾಹುಸಮಾಂ ..... ಸರ್ವಾಭರಣಭೂಷಿತಾಂ ಧಮ್ಮಿಲ್ಲಬಂಧಾಯತಾಂ ಕರಂಟಿಕಾಮುಕುಟಯುತಾಂ ವಾಮಹಸ್ತೇನ ಉತ್ಫುಲ್ಲಪದ್ಮಧರಾಂ ಪ್ರಸಾರಿತ ದಕ್ಷಿಣಹಸ್ತಾಂ .....''**

ಕಾಶ್ಯಪಸಂಹಿತಾ ಅಥವಾ ಕಾಶ್ಯಪಜ್ಞಾನಕಾಂಡ ಪಟಲ 58; ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ

**''ಸೀತಾಂ ದಕ್ಷಿಣೇ ಅಷ್ಟತಾಲಮಾನೇನ ದೇವೀಂ ದ್ವಿಭುಜಾಂ ವಾಮೇನ ಪದ್ಮಧರಾಂ ದಕ್ಷಿಣಮಧಃ ಪ್ರಸಾರ್ಯ ತಥೈವ ಸ್ಥಿತಾಂ ....''**

ವೈಖಾನಸೀಯ ಕ್ರಿಯಾಧಿಕಾರಃ (ಭೃಗುಸಂಹಿತಾ), ಅಧ್ಯಾಯ 83; ತಿರುಮಲ ತಿರುಪತಿ ದೇವಸ್ಥಾನಂ, ತಿರುಪತಿ

**ಸೀತಾಂ ಚ ದಕ್ಷಿಣೇ ಪಾರ್ಶ್ವೇ ಪೀತವರ್ಣಾಂ ಪ್ರಕಲ್ಪಯೇತ್ ॥**

**ಸಪದ್ಮವಾಮಹಸ್ತಾಂ ಚ ಸಂಪ್ರಸಾರಿತದಕ್ಷಿಣಾಮ್ ।** – ಅಧ್ಯಾಯ 11 ಶ್ಲೋಕ 89-90

ಈ ಪ್ರಮಾಣಗಳಲ್ಲಿ ''ಸೀತಾಪ್ರತಿಮೆಯು ಎಡಗೈಯಲ್ಲಿ ಕಮಲವನ್ನು ಧರಿಸಿ ಬಲಗೈಯನ್ನು ಇಳಿಬಿಟ್ಟಿರಬೇಕು'' ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಇದಕ್ಕೆ ಪ್ರತ್ಯಕ್ಷ ನಿದರ್ಶನಗಳೂ ಉಂಟು. **ಪ್ರತಿಮಾದರ್ಶನ ಚಿತ್ರ 1ರಿಂದ 5, 16ರಿಂದ 26.**

(ಈ ಮೇಲಿನ ಪ್ರಮಾಣಗಳನ್ನು ಸೀತಾಪ್ರತಿಮೆಯು ಬಲಗೈಯಲ್ಲಿ ಕಮಲವನ್ನು ಧರಿಸಿರಲೇ ಬೇಕು ಎಂಬ ನಿಯಮಕ್ಕೆ ಅಪವಾದವನ್ನಾಗಿ ನೀಡಲಾಗಿದೆ. ಹೊರತು, ಮೂಲಸೀತಾಪ್ರತಿಮೆಯಲ್ಲಿ ಮೇಲಿನ ಪ್ರಮಾಣಗಳಲ್ಲಿ ಹೇಳಿದ ಎಲ್ಲ ಲಕ್ಷಣಗಳು ಇವೆ ಎನ್ನುವುದಕ್ಕಾಗಿ ನೀಡಿದ್ದಲ್ಲ.)

ಮೇಲಿನ ಪ್ರಮಾಣಗಳನ್ನು ಗಮನಿಸಿದಾಗ ಓದುಗರಿಗೆ ಹೀಗೊಂದು ಜಿಜ್ಞಾಸೆ ಬರಬಹುದು. ಸೀತಾಪ್ರತಿಮೆ ಎಡಗೈಯಲ್ಲಿ ಕಮಲವನ್ನು ಧರಿಸಿ ಬಲಗೈಯನ್ನು ಇಳಿ ಬಿಟ್ಟಿರಬೇಕು ಎಂದು ಹೇಳುವ ಮೇಲಿನ ಪ್ರಮಾಣಗಳಲ್ಲಿ ಸೀತಾಪ್ರತಿಮೆ ಶ್ರೀರಾಮನ ಬಲಭಾಗದಲ್ಲಿರಬೇಕೆಂದು ವರ್ಣಿಸಿದ್ದಾರೆ. ಅಂದರೆ ಕಮಲವನ್ನು ಧರಿಸಿದ ಸೀತಾದೇವಿಯ ಎಡಗೈ ರಾಮನ ಕಡೆ ಇರುತ್ತದೆ. ಶ್ರೀರಾಮನ ಸೇವೆಗೆ ಸೀತಾದೇವಿಯು ಕಮಲವನ್ನು ಸಮರ್ಪಿಸುವ ಈ ಭಂಗಿ ಚಿಂತನೆಗೆ ಸರಿಹೊಂದುತ್ತದೆ. ಆದರೆ ಉತ್ತರಾದಿಮಠದಲ್ಲಿ ಸೀತಾಪ್ರತಿಮೆ ರಾಮಪ್ರತಿಮೆಯ ಎಡಭಾಗದಲ್ಲಿದೆ. ಎಡಭಾಗದಲ್ಲಿರುವ ಸೀತಾದೇವಿಯ ಎಡದ ಕೈಯಲ್ಲಿ ಕಮಲ ಇದ್ದರೆ ಅದು ಶ್ರೀರಾಮನಿಗೆ ಸಮರ್ಪಿತವಾದಂತೆ ಆಗುವುದಿಲ್ಲವಲ್ಲಾ?

ಇದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬಹುದು.

ಎಲ್ಲ ನಿಯಮಗಳಿಗೂ ಅಪವಾದ ಇದ್ದಂತೆ ಈ ನಿಯಮಕ್ಕೂ ಅಪವಾದಗಳುಂಟು. (**ಪ್ರತಿಮಾದರ್ಶನ ಚಿತ್ರ 27,28 ನೋಡಿ**) - ಈ ಪ್ರಾಚೀನ ದೇವಸ್ಥಾನದಲ್ಲಿ ಸೀತಾದೇವಿಯು ರಾಮನ ಬಲಭಾಗದಲ್ಲಿದ್ದಾಳೆ. ಆದರೆ ಕಮಲ ಹಿಡಿದ ಕೈ ರಾಮನ ಕಡೆ ಇಲ್ಲ. ರಾಮನ ಕಡೆ ಇಳಿ ಬಿಟ್ಟ ಕೈ ಇದೆ.

ಶ್ರೀ-ಭೂಸಮೇತವಾದ ಶ್ರೀನಿವಾಸ, ವರದರಾಜರ ಪ್ರತಿಮೆಗಳಲ್ಲಿಯೂ ಕಮಲವು ದೇವರ ಕಡೆ ಇಲ್ಲದಿರುವ ಈ ತರಹದ ವೈಚಿತ್ರ್ಯವನ್ನು ಕಾಣಬಹುದು. (**ಪ್ರತಿಮಾದರ್ಶನ ಚಿತ್ರ 19 ನೋಡಿ**)

ಬಹುಶಃ ಆ ಇಳಿ ಬಿಟ್ಟಿರುವ ಲಕ್ಷ್ಮೀದೇವಿಯ ಕೈಯನ್ನು ತನ್ನ ಸ್ವಾಮಿಯನ್ನು ಆಲಿಂಗಿಸುವ ಅಥವಾ ತನ್ನ ಒಡೆಯನ ಕರಾವಲಂಬನ ಮಾಡಿರುವ ಚಿಂತನೆಯ ಹಿನ್ನಲೆಯಲ್ಲಿ ನಾವು ಕಾಣಬಹುದಾಗಿದೆ.

ಪ್ರಕೃತ, ಉತ್ತರಾದಿಮಠದಲ್ಲಿರುವ ಶ್ರೀಮೂಲಸೀತಾಪ್ರತಿಮೆ ಶ್ರೀಮೂಲರಾಮಪ್ರತಿಮೆಯ ಎಡಭಾಗದಲ್ಲಿದೆ. ಎಡಗೈಯಲ್ಲಿ ಕಮಲವಿದೆ. ಬಲಗೈಯಲ್ಲಿ ಅಮೃತಕಲಶವಿದೆ. ಆ ಅಮೃತಕಲಶವನ್ನು ನಿತ್ಯಾಮೃತನಾದ ಶ್ರೀರಾಮನಿಗೆ ಸಮರ್ಪಣೆ ಮಾಡುವ ವಿಶೇಷಸೇವೆಯನ್ನು ಮಾಡುವ ಭಂಗಿಯಲ್ಲಿ ಮೂಲಸೀತಾಪ್ರತಿಮೆ ಇದೆ ಎನ್ನುವ ಚಿಂತನೆಯನ್ನು ನಾವು ಮಾಡಬಹುದಾಗಿದೆ. ಬಲದ ಕೈ ಇಂದ ಅಮೃತಸಮರ್ಪಣೆಯ ವಿಶೇಷ ಸೇವೆಯನ್ನು ಮಾಡುತ್ತಿರುವುದರಿಂದ ಕಮಲ ಧರಿಸಿದ ಎಡಗೈ ರಾಮನ ಕಡೆ ಇಲ್ಲದಿರುವುದು ದೋಷವಲ್ಲ.

ಶ್ರೀಮುದ್ದುವಿಠ್ಠಲದಾಸರ ಸುಳಾದಿಯಲ್ಲಿ ''**ತನ್ನ ಪತಿ ಆನಾಭಿಪ್ರಮಾಣಳಾಗಿ**'' ''**ಕರದಿ ಕಮಲಾ ಅಮೃತಕಲಶವಾ ಪಿಡಿದಿಹಳು**'' ಎಂದಿರುವ ಉಲ್ಲೇಖ ಮೇಲಿನ ಆಧಾರಗಳಿಗೆ ಅನುಗುಣವಾಗಿ ಹಾಗೂ ಪ್ರತ್ಯಕ್ಷಕ್ಕೂ ಸಮ್ಮತವಾಗಿಯೇ ಇರುವುದು ಗಮನಾರ್ಹ.

**ಮುದ್ದುವಿಠ್ಠಲರ ಸ್ಪಷ್ಟ ನುಡಿ**

ಆಶ್ಚರ್ಯವೆಂದರೆ, ಶ್ರೀಮುದ್ದುವಿಠ್ಠಲರ ಸುಳಾದಿಯನ್ನು ಮೊದಲಿಗೆ ಉದಾಹರಿಸಿರುವವರು ಶ್ರೀರಾಯರ ಮಠದ ಅಧಿಕೃತ ಲೇಖಕರಾದ ಶ್ರೀರಾಜಾ.ಎಸ್. ಗುರುರಾಜಾಚಾರ್ಯರು. ಈ ಸುಳಾದಿಯನ್ನು ''ಶ್ರೀಮೂಲರಾಮ'' ಎಂಬ ಪುಸ್ತಕದಲ್ಲಿ (ಶ್ರೀರಘುನಂದನರಾಘವೇಂದ್ರಮಾಲಾ-39 ಶ್ರೀಮೂಲರಾಮ - ರಚನೆ: ಶ್ರೀರಾಜಾ. ಶ್ರೀಗುರುರಾಜಾಚಾರ್ಯ, ಪ್ರಧಾನಸಂಪಾದಕರು: ಶ್ರೀರಾಜಾ.ಎಸ್. ರಾಜಗೋಪಾಲಾಚಾರ್ಯ, ಪ್ರಕಾಶಕರು: ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ-2004) ಅಧಿಕೃತವಾಗಿ ಯಾವ ಧೈರ್ಯದಿಂದ ಉಲ್ಲೇಖಿಸಿದರು ಎಂಬುದನ್ನು ವಾಚಕರೇ ತೀರ್ಮಾನಿಸಬೇಕು. ಅಲ್ಲದೇ 9 ನುಡಿಗಳಿರುವ (9 ತಾಳಗಳಿರುವ) ಈ ಸುಳಾದಿಯಲ್ಲಿ ತಮಗೆ ಬೇಕಾದ ನಾಲ್ಕೇ ನುಡಿಗಳನ್ನು ಉದ್ಧರಿಸಿ ಉಳಿದ ಐದು ನುಡಿಗಳನ್ನು ಮುಚ್ಚಿಟ್ಟಿದ್ದೇಕೆ? ಇದು ಮೋಸವಲ್ಲವೇ?

**ಮುದ್ದುವಿಠ್ಠಲರ ಪ್ರಾಚೀನತೆ**

ಈ ಮುದ್ದುವಿಠ್ಠಲರು ಶ್ರೀಮದಕ್ಷೋಭ್ಯತೀರ್ಥರಿಂದ ಉಪದೇಶ ಪಡೆದವರೆಂದು ಅವರೇ ಕೊನೆಯ ಪದ್ಯದಲ್ಲಿ ಸ್ಪಷ್ಟ ಹೇಳಿಕೊಂಡಿದ್ದಾರೆ-

**ಅಕ್ಷೋಭ್ಯತೀರ್ಥರಿಂದ ಉಪದೇಶ । ಎನಗ ಕರುಣಾಕಟಾಕ್ಷದಿಂದ ಪೇಳಿದ ವಾಕ್ಯಗಳು.......**

ಅಲ್ಲದೇ ಈ ಮುದ್ದುವಿಠ್ಠಲದಾಸರ ಬಗ್ಗೆ (ಆದ್ಯರ ಬಗ್ಗೆ) ಶ್ರೀವಿಜಯದಾಸರು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

ದಾಸಸಾಹಿತ್ಯದಲ್ಲಿ ವಿಶೇಷ ಕೃಷಿಮಾಡಿದ ಶ್ರೀಗೋರೆಬಾಳ ಹನುಮಂತರಾಯರ ಮಾತುಗಳನ್ನು ಗಮನಿಸಿ:

''...ಆದರೆ ಶ್ರೀ ವಿಜಯದಾಸರು ಅವರ ತಮ್ಮಂದಿರು, ''**ನರಸಿಂಹ ವೈಕುಂಠವರ ಅಚಲಾನಂದ**'' ಇತ್ಯಾದಿ 60 ಜನರ ಹೆಸರು ಶ್ರೀಪುರಂದರದಾಸರಕ್ಕಿಂತಲೂ ಪೂರ್ವಜರೆಂದು ಒಂದು ಸುಳಾದಿಯಲ್ಲಿ ಹೇಳಿದ್ದಾರೆ. ಆದರೆ ಅವರ ಕಾಲ ಯಾವುದೆಂಬುದು ಹೇಳಿಲ್ಲ. ಆದರೂ ಆ 60 ಜನ ಆದ್ಯರ ಪೈಕಿ ಮುದ್ದುವಿಠ್ಠಲರು ಶ್ರೀಮನ್ನರಹರಿತೀರ್ಥರ, ಮೂಲಸೀತಾರಾಮರ ಮಹಿಮೆ ಸುಳಾದಿ (ಇದೇ ಸಂಚಿಕೆಯಲ್ಲಿದೆ) ಧ್ರುವತಾಳದಲ್ಲಿ ''**ಅದೇ ಯುವರಾಜ ವಾಯುವೆ ಮಧ್ವ ಮುನಿಯಾದ । ಇದೇ ಆನಂದತೀರ್ಥರು ವೇದಾರ್ಥ ಬಲ್ಲರು**'' ಎಂದು ''ಇದೇ ಆನಂದತೀರ್ಥ''ರೆಂದು ಸಂಬೋಧಿಸಿರುತ್ತಾರೆ. ಸಾಕ್ಷಾತ್ ಆನಂದತೀರ್ಥರನ್ನು ನೋಡಿ ಆ ಕಾಲದಲ್ಲೇ ''ಇದೇ'' ''ಇವರೇ'' ಎಂಬುದುದರಿಂದ ಶ್ರೀಮಧ್ವಾಚಾರ್ಯರ ಕಾಲದಲ್ಲಿ ಇದ್ದರೆಂದು ನಿರ್ಣಯ. ಮತ್ತು ಮುಂದೆ ಏಕತಾಳದಲ್ಲಿ ಇದೇ ಮುದ್ದುವಿಠಲರೇ- ''**ಅಕ್ಷೋಭ್ಯತೀರ್ಥರಿಂದ ಉಪದೇಶ ಎನಗೆ ಕರುಣಾಕ । ಟಾಕ್ಷದಿಂದ ಪೇಳಿದ ವಾಕ್ಯಗಳು ಎನಗಿಂದೊಂದೆರಡು ಗುಣದಿಂದುತ್ತಮರಿಂದ**'' ಎಂದು ಆದ್ಯರು ಶ್ರೀಅಕ್ಷೋಭ್ಯತೀರ್ಥರಿಂದ ಉಪದೇಶಕೊಂಡ(ವರೆಂದಮೇಲೆ) ಮೇಲೆ ಶ್ರೀಮಧ್ವಾಚಾರ್ಯರ, ಶ್ರೀಪದ್ಮನಾಭತೀರ್ಥರ, ಶ್ರೀನರಹರಿತೀರ್ಥರ, ಶ್ರೀಮಾಧವತೀರ್ಥರ, ಶ್ರೀಅಕ್ಷೋಭ್ಯತೀರ್ಥರ ಕಾಲದವರೆಂದು ಸಿದ್ಧವಾಗುತ್ತದೆ. 13ನೇ ಶತಮಾನದಲ್ಲಿ ಆದ್ಯರಾದ ಹರಿದಾಸರಿದ್ದರೆಂತ ಸಿದ್ಧ. ಕೆಲವರು ಪುರಂದರದಾಸರ ಕಾಲದಲ್ಲಿ ಆದ್ಯರು ಇದ್ದರೆಂದು ಬರೆದಿರುವರು. ಇದು ಸಮ್ಮತವಲ್ಲ. ಈ ಪ್ರಮಾಣಕ್ಕೆ ವಿರೋಧವಾದುದು.'' (ಕರ್ನಾಟಕದಾಸರ ಉಗಮ ಮತ್ತು ಪುರಂದರದಾಸರ ಸುಳಾದಿಗಳು, ಸಂಪುಟ 2, ಸಂಚಿಕೆ 1; ಸಂಪಾದಕ-ಸಂಚಾಲಕ: ಶ್ರೀಹನುಂತರಾವ ಗೊರೆಬಾಳ; ಶ್ರೀವರದೇಂದ್ರಹರಿದಾಸಸಾಹಿತ್ಯಮಂಡಲ, ಲಿಂಗಸೂಗೂರು; ಮಾಘ-ಫಾಲ್ಗುಣ ಶಕೆ 1879)

ಇದಲ್ಲದೇ ಶ್ರೀಯುತ ಎಂ.ಟಿ. ಪ್ರಹ್ಲಾದರಾಯರು ತಮ್ಮ ಪ್ರಕಟಣೆಗಳಲ್ಲಿ ಈ ಮುದ್ದುವಿಠ್ಠಲದಾಸರ ಬಗ್ಗೆ ಸಪ್ರಮಾಣವಾಗಿ ಉಲ್ಲೇಖಿಸಿರುವುದು ಗಮನಾರ್ಹ. ''ಪ್ರಾಚೀನ ಹಸ್ತಪ್ರತಿಗಳಲ್ಲಿ ಹರಿದಾಸರ ಕೀರ್ತನೆಗಳು'' ಎಂಬ ಅವರ ಕೃತಿಯನ್ನು ನೋಡುವುದು.

ಈ ಸುಳಾದಿಯ ಐದನೇ ನುಡಿಯಲ್ಲಿ ಶ್ರೀಮೂಲಸೀತಾದೇವಿಯರ ಪ್ರತಿಮೆಯ ವರ್ಣನೆ ಮಾಡಲಾಗಿದೆ -

**ಕಾಲಾಂತರದಲ್ಲಿ ಭೂಸುರನು ತೀರ್ಥಯಾತ್ರೆ... ... ... ಬಟುವಾದ ತಾಂಬ್ರಗದ್ದುಗೆಯಲ್ಲಿ । ನಿಂದಿದ್ದ ತನ್ನ ಪತಿ ಆನಾಭಿಪ್ರಮಾಣಳಾಗಿ ಕರದಿ ಕಮಲಾ ಅಮೃತ । ಕಲಶವಾ ಪಿಡಿದಿಹಳು ಪುಥ್ಥಳಿಂದದಲಿಹ ಸೀತಾಸಹಿತ ಮೂಲರಾಮನ ತಂದರ್ಚಿಸಿ ಕೋಶದೊಳಿಟ್ಟಿದ್ದ । ಅನಿಮಿಷವಂದ್ಯನಾದ ಚತುರ್ಮುಖಿ-ನೊಂದು ರೂಪದಿ ಬಂದು ಪೂಜಿಸುವ । ಮೂಲಸೀತಾರಾಮ ಮುದ್ದುವಿಠ್ಠಲನ್ನ ।। 5 ।।**

ಇಲ್ಲಿ ''ತಾಂಬ್ರಗದ್ದುಗೆಯಲ್ಲಿ ನಿಂತಿದ್ದ'' ಎಂದು ಪ್ರತ್ಯೇಕವಾಗಿ ಗದ್ದುಗೆಯನ್ನಷ್ಟೇ ತಾಮ್ರ ಎಂದು ಹೇಳಿದ್ದರಿಂದ ಪ್ರತಿಮೆ ತಾಮ್ರದ್ದಲ್ಲವೆಂದು ಸಿದ್ಧವಾಗುತ್ತದೆ.

**ಶ್ರೀರಾಯರ ಮಠದವರು ತಾವೇ ತಮ್ಮ ಅಧಿಕೃತ ಪುಸ್ತಕಗಳಲ್ಲಿ ಇದುವರೆಗೆ ಉಲ್ಲೇಖಿಸಿರುವ ಅನೇಕ ಆಧಾರಗಳಲ್ಲಿರುವ ಮೂಲಸೀತಾರಾಮರ ಪ್ರತಿಮೆಗಳ ಲಕ್ಷಣಗಳು ಇಂದಿಗೂ ಉತ್ತರಾದಿಮಠದಲ್ಲಿರುವ ಶ್ರೀಮೂಲಸೀತಾರಾಮರ ಪ್ರತಿಮೆಗಳಲ್ಲಿ ಸ್ಪಷ್ಟ ಕಾಣುತ್ತಿರುವುದರಿಂದ ಅವರು ಕೊಟ್ಟ ಆಧಾರಗಳು ಅವರಿಗೇ ಬಾಧಕಗಳಾಗಿವೆ, ಉತ್ತರಾದಿಮಠಕ್ಕೆ ಪೋಷಕವಾಗಿವೆ ಎಂಬುದು ಗಮನಾರ್ಹ.**

ಹಿಂದೆ ಅವರೇ ಬರೆದ ಪುಸ್ತಕಗಳಲ್ಲಿ ಅವರೇ ಆಧಾರವಾಗಿ ಕೊಟ್ಟಿರುವ ಅನೇಕ ಆಧಾರಗಳನ್ನು ಸಸೀತಾಮೂಲರಾಮಾರ್ಚಾದಲ್ಲಿ ಉದ್ಧರಿಸಿದಾಗ ಅವುಗಳನ್ನೇ ಅಲ್ಲಗಳೆಯುತ್ತಾ ಬಣ್ಣಬಣ್ಣದ ಚಿತ್ರಗಳನ್ನು ಛಾಪಿಸಿ ಬಣ್ಣಬಣ್ಣದ ಬರವಣಿಗೆಯ ಮೂಲಕ ಜನರಿಗೆ ವಂಚನೆ ಮಾಡುತ್ತಾ ತಪ್ಪು ಗ್ರಹಿಕೆಯಾಗುವಂತೆ ಚಿತ್ರಿಸುತ್ತಿರುವ ಇವರ ಬಣ್ಣದ ಬಯಲಾಟದ ವೈಖರಿಗೆ ಏನೆನ್ನಬೇಕು?

❖ ಮೂ.ಮಠೇ.ಲೇಖಕರು ಪುಟ 64ರಿಂದ 68ರ ವರೆಗೆ ಬಣ್ಣದ ಚಿತ್ರಗಳನ್ನು (colour photos) ಛಾಪಿಸಿದ್ದಾರೆ. ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ಮೂಲಸೀತಾದೇವಿಯ ಪ್ರತಿಮೆಯ ಪೀಠವನ್ನು ಗಣಕಯಂತ್ರದ (computer)ಸಹಾಯದಿಂದ ತೆಗೆದು ಹಾಕಿ ಆ ಚಿತ್ರವನ್ನು ಉತ್ತರಾದಿಮಠದಲ್ಲಿರುವ ಮೂಲರಾಮನ ಪ್ರತಿಮೆಯ ಪಕ್ಕದಲ್ಲಿ ಹಾಗೂ ಶ್ರೀರಾಯರ ಮಠದಲ್ಲಿರುವ ಶ್ರೀರಾಮನ ಪ್ರತಿಮೆಯ ಪಕ್ಕದಲ್ಲಿ ಬರುವಂತೆ ಜೋಡಿಸಿ ಮೂಲಸೀತಾದೇವೀ ಪ್ರತಿಮೆಯ ಪರಿಮಾಣ (ಎತ್ತರ) ಶಿಲ್ಪಶಾಸ್ತ್ರದಂತೆ ಶ್ರೀರಾಯರ ಮಠದ ಶ್ರೀರಾಮಪ್ರತಿಮೆಯ ಭುಜಕ್ಕೆ ಸರಿ ಬರುತ್ತದೆ ಎಂದು ತೋರಿಸಿದ್ದಾರೆ. ಪರಿಮಾಣತಃ ಸಾಮ್ಯ ಇದೆ ಆದ್ದರಿಂದ ಮೂಲರಾಮ ಪ್ರತಿಮೆ ರಾಯರ ಮಠದಲ್ಲಿದೆ ಎಂದು ಗ್ರಾಫಿಕ್ಸ್‌ನ ಸಹಾಯದಿಂದ ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಆದರೆ ಮೂ.ಮಠೇ ಪುಸ್ತಕದ ಪುಟ viii ಮುಂತಾದ ಕಡೆಯಲ್ಲಿ ಉತ್ತರಾದಿಮಠದಲ್ಲಿರುವ ಸೀತಾಪ್ರತಿಮೆ ಮೂಲಸೀತಾಪ್ರತಿಮೆ ಅಲ್ಲವೆಂದು, ಕೃತ್ರಿಮವೆಂದು ಹೇಳಿ ಅದೇ ಸೀತಾಪ್ರತಿಮೆಯನ್ನು ತಮ್ಮ ಮಠದ ಶ್ರೀರಾಮಪ್ರತಿಮೆಯ ಪಕ್ಕದಲ್ಲಿ ಜೋಡಿಸಿ (ಮೂ.ಮಠೇ ಪ್ರತಿಮಾದರ್ಶನ 5) ಅದಕ್ಕೆ ಸರಿಹೊಂದುತ್ತದೆ ಎಂದು ತೋರಿಸಿರುವುದು ನಿಜಕ್ಕೂ ಆಶ್ಚರ್ಯ.! ಮಾತ್ರವಲ್ಲದೇ ಮೋಸ ಹಾಗೂ ವ್ಯಾಹತ. ಇದರಿಂದ ಮೂಲಸೀತಾ ಪ್ರತಿಮೆಯಂತೂ ಉತ್ತರಾದಿಮಠದಲ್ಲಿಯೇ ಇದೆ ಎಂಬ ಭಾವನೆ ಅವರಿಗೂ ಮನದಾಳದಲ್ಲಿ ಭದ್ರವಾಗಿ ನೆಲೆ ನಿಂತಿದೆ ಎಂಬುದು ತಿಳಿದು ಬರುತ್ತದೆ.

❖ ಮೂ.ಮತೇ ಲೇಖಕರು ಅದೇ ಪುಟ 68ರಲ್ಲಿ ಮೂಲಸೀತಾ ದೇವಿಯರ ಚಿತ್ರ ಛಾಪಿಸಿ (ಮೂ. ಮತೇ ಪ್ರತಿಮಾದರ್ಶನ 6) ''ದೇವಾಲಯದ ಉತ್ಸವಮೂರ್ತಿಗಳನ್ನು ರಚಿಸುವ ಪದ್ಧತಿಯಲ್ಲಿ ಬೇರೆ ಬೇರೆ ಲೋಹಗಳ ಮಿಶ್ರಣದ ಪೀಠ ಮತ್ತು ಮೂರ್ತಿಗಳನ್ನು ನಿರ್ಮಿಸುತ್ತಾರೆ. ಈ ಪದ್ಧತಿಗೆ ಜಡಬಂಧನಮೂರ್ತಿಗಳೆನ್ನುವರು. ಸಣ್ಣತಾಳ ಪ್ರಮಾಣದ ಅರ್ಚಾಮೂರ್ತಿಗಳ ನಿರ್ಮಾಣದಲ್ಲಿ ಪೀಠ ಹಾಗೂ ಮೂರ್ತಿಯ ಲೋಹ ಒಂದೇ ಆಗಿರಬೇಕೆಂದು ಶಿಲ್ಪಶಾಸ್ತ್ರದ ನಿಯಮ. ಎಂದಿಗೂ ಪೀಠ ಹಾಗೂ ಮೂರ್ತಿಗಳು ಭಿನ್ನಲೋಹವಾಗಬಾರದೆಂಬ ಸ್ಥಿರನಿಯಮವಿದೆ. ಇಂತಹ ಮೂರ್ತಿಗಳಿಗೆ ಏಕಬಂಧನ ಮೂರ್ತಿಗಳೆನ್ನುವರು'' ಎಂದು ಬರೆದಿದ್ದಾರೆ.

ಲೇಖಕರು ತಾವು ಯಾವ ಶಿಲ್ಪಶಾಸ್ತ್ರಗ್ರಂಥವನ್ನು ಆಧರಿಸಿ ಈ ರೀತಿ ಬರೆದಿದ್ದಾರೆ ಎಂಬುದರ ಉಲ್ಲೇಖವನ್ನು ಮಾಡಿಲ್ಲ. ಲಕ್ಷಣಶಾಸ್ತ್ರಗಳಲ್ಲಿ ಪ್ರತಿಮೆ ಹಾಗೂ ಪೀಠ ಒಂದೇ ಲೋಹದ್ದಾಗಿರಬೇಕೆಂದು ಹೇಳಲಾಗಿದೆ. ಇದು ವಾಸ್ತವ. ಆದರೆ ಅದಕ್ಕೆ ಅಪವಾದಗಳೂ ಉಂಟು.

ಸಣ್ಣಪ್ರಮಾಣದ ಅರ್ಚಾಪ್ರತಿಮೆಗಳಲ್ಲೂ ಪೀಠ ಹಾಗೂ ಮೂರ್ತಿಯ ಲೋಹಗಳು ಬೇರೆ ಬೇರೆಯಾಗಿರುವುದು ಪ್ರತ್ಯಕ್ಷ ಹಾಗೂ ಆಗಮಗಳಲ್ಲಿ ಅನೇಕ ಕಡೆ ಕಂಡಿವೆ.

**ಈ ವಿಷಯವನ್ನು ಪುಷ್ಟೀಕರಿಸುವ ಆಗಮಪ್ರಮಾಣ ಹೀಗಿದೆ-**

**ಪ್ರತಿಮಾ ಯನ್ಮಯೀ ಕ್ಲೃಪ್ತಾ ಪ್ರಭಾಪೀಠಾದಿ ತನ್ಮಯಮ್ ।**
**ಯದ್ವಾ ಸೌವರ್ಣಬಿಂಬಸ್ಯ ರಾಜತಂ ತಾಮ್ರಮೇವ ವಾ ॥**

**ಲೋಹೇನ ಚೇದುತ್ತಮೇನ ಪ್ರತಿಮಾ ನಿರ್ಮಿತಾ ಭವೇತ್ ।**
**ತದನಂತರಲೋಹೇನ ಪ್ರಭಾಪೀಠಾದಿ ಕಲ್ಪಯೇತ್ ॥**

ತಂತ್ರಸಾರಸಂಗ್ರಹವ್ಯಾಖ್ಯಾನ ತತ್ವಕಣಿಕಾ; ಸಂಪಾದಕರು: ಡಿ. ಪ್ರಹ್ಲಾದಾಚಾರ್ಯ;
ಶ್ರೀವಿದ್ಯಾಪಯೋನಿಧಿಪ್ರಕಾಶನಮ್, ಶ್ರೀವ್ಯಾಸರಾಮಠ, ಬೆಂಗಳೂರು; ಪುಟ 222

(ಈ ತತ್ವಕಣಿಕಾ ಗ್ರಂಥವನ್ನು ರಚಿಸಿದವರು ಮಹಾನುಭಾವರಾದ ಶ್ರೀವ್ಯಾಸರಾಜಮಠಾಧೀಶರಾದ ಶ್ರೀರಘುನಾಥಯತಿಗಳು.)

ಮೇಲಿನ ಪ್ರಮಾಣದಲ್ಲಿ ಪ್ರತಿಮೆ ಯಾವ ಲೋಹದ್ದಾಗಿರುತ್ತದೋ ಅದೇ ಲೋಹದ ಪೀಠ ಮತ್ತು ಪ್ರಭಾವಳಿಗಳನ್ನು ನಿರ್ಮಿಸಬೇಕೆಂದು ತಿಳಿಸುತ್ತಾ ಅದಕ್ಕೆ ಅಪವಾದವನ್ನೂ ತಿಳಿಸಿದ್ದಾರೆ. ಪ್ರತಿಮೆ ಸುವರ್ಣ ಮೊದಲಾದ ಉತ್ತಮಲೋಹದ್ದಾಗಿದ್ದು ಪೀಠ ರಜತಾದಿ ಅಧಮ ಲೋಹದ್ದಾಗಿರಬಹುದು ಎಂದು ತಿಳಿಸುತ್ತಾರೆ. ಇದರಿಂದ ಪ್ರತಿಮೆ ಹಾಗೂ ಪೀಠಗಳಲ್ಲಿ ಲೋಹದ ವ್ಯತ್ಯಾಸವಿರಬಹುದೆಂದು ಸ್ಪಷ್ಟ ತಿಳಿದು ಬರುತ್ತದೆ. ಈ ಅಪವಾದ ಸಣ್ಣತಾಳಪ್ರಮಾಣದ ಅರ್ಚಾಮೂರ್ತಿಗಳ ಬಗ್ಗೆ ತಿಳಿಸುವಾಗ ಉದ್ಧರಿಸಿದ್ದು ಎಂಬುದು ಗಮನಾರ್ಹ.

ಹೀಗಾಗಿ ''ಸಣ್ಣತಾಳಪ್ರಮಾಣದ ಅರ್ಚಾಮೂರ್ತಿಗಳ ನಿರ್ಮಾಣದಲ್ಲಿ ಶಿಲ್ಪಶಾಸ್ತ್ರನಿಯಮ ಪ್ರಕಾರ ಎಂದಿಗೂ ಪೀಠ ಹಾಗೂ ಮೂರ್ತಿಗಳು ಭಿನ್ನಲೋಹವಾಗಬಾರದೆಂಬ ಸ್ಥಿರ ನಿಯಮವಿದೆ'' ಎಂಬ ಮೂ.ಮತೇ ಲೇಖಕರ ವಾದ ಸರಿಯಲ್ಲ. ಯದ್ಯಪಿ ಪ್ರತಿಮೆ ಉತ್ತಮಲೋಹದ್ದಾಗಿದ್ದು ಪೀಠ ಅಧಮಲೋಹದ್ದಾಗಿರಬಹುದೆಂದು ಈ ಪ್ರಮಾಣದ ಆಶಯವಾಗಿದ್ದರೂ ಪ್ರತಿಮೆ ಮತ್ತು ಪೀಠದ ಲೋಹ ಒಂದೇ ಆಗಿರಬೇಕು ಎನ್ನುವ ಸ್ಥಿರನಿಯಮವಿಲ್ಲ ಎನ್ನುವುದನ್ನು ತೋರಿಸುವುದೇ ನಮ್ಮ ಆಶಯವಾಗಿದೆ. **ಪ್ರತಿಮಾದರ್ಶನ ಚಿತ್ರ 29 ನೋಡಿ.**

ಅಲ್ಲದೇ, ಪ್ರತಿಮೆ ಅಧಮಲೋಹದ್ದಾಗಿದ್ದು ಪೀಠ ಉತ್ತಮಲೋಹದ್ದಾಗಿರುವುದಕ್ಕೆ ಪ್ರತ್ಯಕ್ಷ ನಿದರ್ಶನವೂ ಇದೆ.

**ಭೂವೈಕುಂಠ ತಿರುಮಲದಲ್ಲಿ ಶ್ರೀವರಾಹದೇವರ ದೇವಾಲಯದಲ್ಲಿ ವರಾಹದೇವರ ಮೂಲವಿಗ್ರಹದೊಂದಿಗೆ ನಿತ್ಯ ಅರ್ಚನೆಗೊಳ್ಳುವ ಪ್ರಾಚೀನವಾದ ವರಾಹದೇವರ ಉತ್ಸವಪ್ರತಿಮೆಯನ್ನು ಗಮನಿಸಿ. ಇಲ್ಲಿ ವರಾಹ ಪ್ರತಿಮೆ ತಾಮ್ರದ್ದಾಗಿದ್ದು ಅದರ ಪೀಠ ಬೆಳ್ಳಿಯದಾಗಿದೆ.!! ನೋಡಿರಿ ಚಿತ್ರ 30.**

❖ ಮೂ.ಮಠೇ. ಲೇಖಕರು ದ್ವಿತೀಯಾವೃತ್ತಿಯ ಪುಟ 71ರಲ್ಲಿ ಮೂಲಸೀತಾಪ್ರತಿಮೆ ಹಾಗೂ ಪೀಠಗಳ ಬಗ್ಗೆ ಮಾಡಿರುವ ''ಬಹುಶಃ ಇದನ್ನು ಯಾವುದೋ ಒಂದು ತುರ್ತುಪರಿಸ್ಥಿತಿಯಲ್ಲಿ, ಅವಸರದಲ್ಲಿ ನಿರ್ಮಿಸಿರಬಹುದು'' ಎಂಬ ಆಕ್ಷೇಪ ಅರ್ಥಹೀನ. ಯಾಕೆಂದರೆ ಶ್ರೀಅಕ್ಷೋಭ್ಯತೀರ್ಥರ ಕಾಲದಲ್ಲಿ ಇದ್ದ ಹಾಗೂ ಶ್ರೀಅಕ್ಷೋಭ್ಯತೀರ್ಥರಿಂದಲೇ ಉಪದೇಶ ಪಡೆದ ಶ್ರೀಅಕ್ಷೋಭ್ಯತೀರ್ಥರು ಮಾಡುವ ಪೂಜೆಯನ್ನು ಪ್ರತ್ಯಕ್ಷ ಕಂಡ ಮುದ್ದುವಿಠ್ಠಲರು ಶ್ರೀಮೂಲಸೀತಾದೇವಿಯರ ಪ್ರತಿಮೆಯ ಲಕ್ಷಣವನ್ನು ತಮ್ಮ ಸುಳಾದಿಯಲ್ಲಿ ದಾಖಲಿಸಿದ್ದಾರೆ. ಅದೇ ಲಕ್ಷಣಗಳನ್ನು ಗುರುವಂಶಕಥಾಕಲ್ಪತರು ಎಂಬ ಗ್ರಂಥದಲ್ಲಿಯೂ ಪುನಃ ಉದ್ಧರಿಸಲಾಗಿದೆ. ಅಲ್ಲದೆ ಶ್ರೀರಾಯರ ಮಠದ ಅಧಿಕೃತ ಲೇಖಕರಾದ ದಿ. ರಾಜಾ ಎಸ್. ಗುರುರಾಜಾಚಾರ್ಯರು ತಮ್ಮ ''ಶ್ರೀಮೂಲರಾಮ'' ಎಂಬ ಪುಸ್ತಕದಲ್ಲೂ ಈ ಸುಳಾದಿಯನ್ನು ಪ್ರಕಟಿಸಿದ್ದಾರೆ.

ಹೀಗಾಗಿ ತುರ್ತುಪರಿಸ್ಥಿತಿಯಲ್ಲಿ ಅವಸರದಲ್ಲಿ ಸೀತಾಪ್ರತಿಮೆ ನಿರ್ಮಾಣವಾಗಿದ್ದರೆ ಅದನ್ನು ಮಹಾನುಭಾವರಾದ ಶ್ರೀಅಕ್ಷೋಭ್ಯತೀರ್ಥರೇ ಮಾಡಿದ್ದಾರೆ ಎಂದು ಮೂ.ಮಠೇ ಲೇಖಕರು ತಮ್ಮ ಆಕ್ಷೇಪವನ್ನು ನೇರವಾಗಿ ಉತ್ತಮರಾದ, ಮಹನೀಯರ ಮೇಲೆ ಮಾಡಿದಂತಾಗಿದೆ.

ಆದ್ದರಿಂದ ಮೂ.ಮಠೇ ಲೇಖಕರು ಪ್ರತಿಮಾಲಕ್ಷಣಶಾಸ್ತ್ರದ ಆಧಾರದ ಮೇಲೆ ಹಾಗೂ ಶ್ರೀಮದಾಚಾರ್ಯಪ್ರದತ್ತ ಇತರ ಪ್ರತಿಮೆಗಳೊಡನೆ ಹೋಲಿಸಿ ಉತ್ತರಾದಿಮಠದಲ್ಲಿರುವ ಪ್ರತಿಮೆಗಳು ಶ್ರೀಮೂಲಸೀತಾರಾಮಪ್ರತಿಮೆಗಳಲ್ಲ ಎಂದು ವಾದಿಸಿದ್ದು ಸರಿಯಲ್ಲ. ಇದು ಕೇವಲ ಅವರ ಅಜ್ಞಾನ, ಅಲ್ಪಜ್ಞಾನಗಳ ಪ್ರದರ್ಶನ ಮಾತ್ರ.

ಮೂ.ಮಠೇ ಲೇಖಕರಂತೆ ಈ ರೀತಿ ಆಕ್ಷೇಪಿಸುತ್ತ ಹೋದರೆ ಸಕಲ ವೈಷ್ಣವರಿಗೆ ಮೂಲರಾದ ಶ್ರೀಮದಾನಂದತೀರ್ಥರಿಗೆ ಲಕ್ಷಣಶಾಸ್ತ್ರದ ಜ್ಞಾನವಿಲ್ಲವೆಂದು ಲಕ್ಷಣಶಾಸ್ತ್ರಗಳಿಗೆ ವಿರುದ್ಧವಾಗಿ ಮಾಡಿದ್ದಾರೆ ಎಂದು ಆರೋಪಿಸಬೇಕಾಗುತ್ತದೆ. ಆದ್ದರಿಂದ ಮಹನೀಯರು ಪೂಜಿಸಿದ ಸಂಪ್ರದಾಯಾಗತವಾದ ಪ್ರತಿಮೆಗಳನ್ನು ಇಂದು ಉಪಲಬ್ಧವಿರುವ ಲಕ್ಷಣಶಾಸ್ತ್ರಗ್ರಂಥಗಳ ಹಿನ್ನೆಲೆಯಲ್ಲಿ ತುಲನೆ ಮಾಡುವುದು ಮಹಾ ಅಪರಾಧವೇ ಸರಿ. ಮಹಾ ಪಾಪಸಾಧನ ಎನ್ನುವದರಲ್ಲಿ ಸಂದೇಹವಿಲ್ಲ.

ಶ್ರೀಮದಾಚಾರ್ಯಪ್ರದತ್ತವಾದ ಇತರ ಸೀತಾರಾಮಪ್ರತಿಮೆಗಳಂತೆ ಉತ್ತರಾದಿಮಠದಲ್ಲಿ ಪೂಜೆಗೊಳ್ಳುವ ಮೂಲಸೀತಾರಾಮಪ್ರತಿಮೆಗಳು ಇಲ್ಲ. ಕಾರಣ, ಇವುಗಳು ಶ್ರೀಮದಾಚಾರ್ಯರ ಕರಾರ್ಚಿತವಲ್ಲ ಎಂದು ನಿರ್ಣಯಕ್ಕೆ ಬಂದಿರುವ ಮೂ.ಮಠೇ ಲೇಖಕರು ಶ್ರೀಮದಾಚಾರ್ಯಪ್ರದತ್ತವಾದ ಅಷ್ಟಮಠಗಳಲ್ಲಿ ಪೂಜೆಗೊಳ್ಳುವ ಯಾವ ಪ್ರತಿಮೆಗಳೂ ರಜತದ್ದಾಗದೇ ಇರುವಾಗ ಶ್ರೀರಾಯರಮಠದಲ್ಲಿ ಪೂಜೆಗೊಳ್ಳುವ ರಜತ ರಾಮಪ್ರತಿಮೆ ಇದು ಶ್ರೀಮದಾಚಾರ್ಯಕರಾರ್ಚಿತ ಅಲ್ಲ ಎಂದು ಅವರೇ ಸ್ಪಷ್ಟ ಉದ್ಘೋಷಿಸಿಕೊಂಡಿದ್ದಾರೆ!!!

ಅಲ್ಲದೇ, ಮೂ.ಮಠೀ ಲೇಖಕರು ''ಇತರ ಮಠಗಳಲ್ಲಿರುವ ಸೀತಾರಾಮಪ್ರತಿಮೆಗಳು ಶ್ರೀಮದಾಚಾರ್ಯ-ಪ್ರದತ್ತವಾದ ಪ್ರತಿಮೆಗಳು'' ಎಂದು ಅವರೇ ಸ್ಪಷ್ಟ ಉಲ್ಲೇಖಿಸಿ ತಮ್ಮ ಎಲ್ಲ ಅಸಂಬದ್ಧ ಆಕ್ಷೇಪಗಳನ್ನು ತಾವೇ ಖಂಡಿಸಿಕೊಂಡಂತಾಗಿದೆ. ಏಕೆಂದರೆ ಮೂಲಸೀತಾರಾಮಪ್ರತಿಮೆಗಳು ಆಚಾರ್ಯರ ಕಾಲದಿಂದ ಬಂದದ್ದಲ್ಲ. ಅವುಗಳು ಬ್ರಹ್ಮಕರಾರ್ಚಿತವಾದ ಚತುರ್ಯುಗಮೂರ್ತಿಗಳು. ಆದ್ದರಿಂದ ಇತರಪ್ರತಿಮೆಗಳಂತೆ ಈ ಪ್ರತಿಮೆಗಳು ಇರಬೇಕು ಎನ್ನುವುದು ಸರ್ವಥಾ ಸರಿಯಲ್ಲ.

ಅಲ್ಲದೇ, ಇಂದು ಉಪಲಬ್ಧವಿರುವ ಶಿಲ್ಪಶಾಸ್ತ್ರಗ್ರಂಥಗಳ ಆಧಾರದ ಮೇಲೆ ಲೋಕವಿಲಕ್ಷಣವಾದ ಚತುರ್ಯುಗ ಮೂರ್ತಿಗಳ ಲಕ್ಷಣಗಳಿರಬೇಕೆಂದು ಆಗ್ರಹಿಸುವುದು ಸಮಂಜಸವೇ ಅಲ್ಲ. ಈ ಆಕ್ಷೇಪಗಳಿಗೆ ಇಂದು ಉಪಲಬ್ಧವಿರುವ ಶಿಲ್ಪಶಾಸ್ತ್ರಗ್ರಂಥಗಳ ಹಿನ್ನೆಲೆಯಲ್ಲಿ ಉತ್ತರ ಕೊಡುವ ಅಗತ್ಯವೂ ಇಲ್ಲ. ಆದರೂ ಇಂದು ಉಪಲಬ್ಧವಿರುವ ಶಿಲ್ಪಶಾಸ್ತ್ರಗ್ರಂಥಗಳಲ್ಲೂ ದೊರೆಯುವ ಅನೇಕ ಆಧಾರಗಳು ಮೂ.ಮಠೀ ಲೇಖಕರು ಮಾಡಿರುವ ಆಕ್ಷೇಪಗಳಿಗೆ ಹೇಗೆ ಉತ್ತರಿಸುತ್ತಿವೆ ಎಂಬುದನ್ನು ತೋರಿಸಲು ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ.

**ವಾಚಕರೇ!! ಗಮನಿಸಿ.**

ಮೂ.ಮಠೀ ಲೇಖಕರ ಶೈಲಿಯಲ್ಲಿಯೇ ಆಕ್ಷೇಪಿಸುವದಾದರೆ -

- ❖ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ಸೀತಾರಾಮ ಪ್ರತಿಮೆಗಳು ಲಕ್ಷ್ಮಣಸಮೇತವಾಗಿಯೇ ಪ್ರದತ್ತವಾದವುಗಳಾದ್ದರಿಂದ ಶ್ರೀರಾಯರಮಠದಲ್ಲಿ ಲಕ್ಷ್ಮಣನ ಪ್ರತಿಮೆ ಏಕೆ ಇಲ್ಲ?
- ❖ ಶ್ರೀಮದಾಚಾರ್ಯರಿಂದ ಪ್ರದತ್ತವಾದ ಎಲ್ಲ ರಾಮಪ್ರತಿಮೆಗಳು ಸೀತಾಸಮೇತವಾಗಿಯೇ ಇವೆ. ಆದ್ದರಿಂದ ದಿಗ್ವಿಜಯರಾಮನ ಜೊತೆ ಸೀತಾದೇವಿಯ ಪ್ರತಿಮೆ ಏಕೆ ಇಲ್ಲ.?
- ❖ ಶ್ರೀಮದಾಚಾರ್ಯರು ಎಲ್ಲ ರಾಮಪ್ರತಿಮೆಗಳನ್ನು ಸೀತಾಲಕ್ಷ್ಮಣ ಸಮೇತವಾಗಿಯೇ ಕೊಟ್ಟದ್ದರಿಂದ ದಿಗ್ವಿಜಯರಾಮನ ಪ್ರತಿಮೆಯ ಜೊತೆ ಸೀತಾಲಕ್ಷ್ಮಣ ಪ್ರತಿಮೆಗಳು ಏಕೆ ಕೊಡಲ್ಪಟ್ಟಿಲ್ಲ?
- ❖ ಅನೇಕ ಲಕ್ಷಣ ಶಾಸ್ತ್ರಗಳಲ್ಲಿ ಸೀತಾಸಮೇತವಾಗಿಯೇನೆ ರಾಮಪ್ರತಿಮೆಯ ನಿರ್ಮಾಣ ಹಾಗೂ ಪೂಜೆಯನ್ನು ವಿಧಿಸಿದ್ದಾರೆ. ಆದ್ದರಿಂದ ಶ್ರೀಮದಾಚಾರ್ಯರು ಕೇವಲ ದಿಗ್ವಿಜಯರಾಮನ ಪೂಜೆಯನ್ನು ಮಾಡಿ ಶಿಷ್ಯರಿಗೆ ನೀಡಿದ್ದು ಲಕ್ಷಣ ಶಾಸ್ತ್ರಕ್ಕೆ ವಿರುದ್ಧ.

ಎಂಬೆಲ್ಲ ಅರ್ಥಹೀನ ಆಕ್ಷೇಪಗಳನ್ನು ಮಾಡಬಹುದಾಗಿದೆ.

**ಇದರಿಂದ ಇವರ ಬಣ್ಣದ ಬಯಲಾಟ ಸಂಪೂರ್ಣ ಬಯಲಾಗಿರುವುದನ್ನು ವಾಚಕರು ಗಮನಿಸಬಹುದಾಗಿದೆ.**

* * * *

01



**ಪ್ರಾಚೀನ ರಾಮಮಂದಿರ – ಆವನಂ ಪರುತ್ತಿಯೂರ್, ತಿರುವಾರೂರ್ ಜಿಲ್ಲೆ, ತಮಿಳುನಾಡು.**

★ ಸೀತಾಮೂಲವಿಗ್ರಹದ ಎತ್ತರ ರಾಮ ಪ್ರತಿಮೆಯ ಕಿವಿ ಅಥವಾ ಭುಜದವರೆಗೂ ಇಲ್ಲ. ★ ಸೀತಾದೇವಿಯ ಮೂಲವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ. ★ ಉತ್ಸವ ವಿಗ್ರಹಗಳಲ್ಲಿ ಸೀತಾರಾಮರ ಕಿರೀಟದಲ್ಲಿರುವ ವ್ಯತ್ಯಾಸವನ್ನೂ ಕಾಣಬಹುದು.

02



**ತಮಿಳುನಾಡಿನ ಅರಿಯಲೂರ್ ಎಂಬ ನಗರದಲ್ಲಿರುವ 1000 ವರ್ಷಕ್ಕೂ ಹಿಂದಿನ ಪ್ರಾಚೀನವಾದ ದೇವಸ್ಥಾನದಲ್ಲಿರುವ ಕೋದಂಡರಾಮದೇವರು.** ★ ಇದರಲ್ಲಿ ಹಿಂದೆ ಕಾಣುವ ಮೂಲ ವಿಗ್ರಹದಲ್ಲಿ ಹಾಗು ಉತ್ಸವ ಪ್ರತಿಮೆಯಲ್ಲಿ ಶ್ರೀಸೀತಾದೇವಿಯರ ಕಿರೀಟಕ್ಕೂ ಹಾಗು ಶ್ರೀರಾಮದೇವರ ಕಿರೀಟಕ್ಕೂ ವ್ಯತ್ಯಾಸವಿದೆ. ★ ಸೀತಾದೇವಿಯ ಮೂಲ ಹಾಗು ಉತ್ಸವ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿರುವುದನ್ನು ಗಮನಿಸಬಹುದು.

03



**ತಂಜಾವೂರಿನ Royal Palace Museumನಲ್ಲಿರುವ ಪ್ರಾಚೀನ ಸೀತಾರಾಮ ಪ್ರತಿಮೆಗಳು.**
★ ಇಲ್ಲಿಯೂ ಸೀತಾರಾಮರ ಕಿರೀಟಗಳಲ್ಲಿ ವ್ಯತ್ಯಾಸವನ್ನು ಗಮನಿಸಬಹುದು. ★ ಅಲ್ಲದೇ, ಸೀತಾದೇವಿಯ ಪ್ರತಿಮೆ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ ಎಂಬುದೂ ಗಮನಾರ್ಹ.

04



**ತಮಿಳುನಾಡಿನ ನಾಗಪಟ್ಟಿನಂ ಜಿಲ್ಲೆಯಲ್ಲಿರುವ ಮಯಿಲಾಡುದುರೈ ಗ್ರಾಮದ ಮುಡಿಕೊಂಡಾನ್ ಎಂಬ ಸ್ಥಳದಲ್ಲಿರುವ ಕೋದಂಡರಾಮದೇವರು.** ★ ಇಲ್ಲಿಯೂ ಸೀತಾರಾಮರ ಕಿರೀಟಗಳಲ್ಲಿ ವ್ಯತ್ಯಾಸವಿದೆ. ★ ಸೀತಾದೇವಿಯ ಉತ್ಸವ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿರುವುದನ್ನು ಗಮನಿಸಬಹುದು.

05



ತಮಿಳುನಾಡಿನ ಕಂಚಿಪುರಂ ಕ್ಷೇತ್ರದಲ್ಲಿರುವ ತಿರುವೆಕ್ಕ ಎಂಬ ಸ್ಥಳದಲ್ಲಿರುವ ಪ್ರಾಚೀನವಾದ ಶ್ರೀಸೀತಾಲಕ್ಷ್ಮಣಸಮೇತವಾದ ಶ್ರೀರಾಮಚಂದ್ರದೇವರ ವಿಗ್ರಹ. ★ ಇಲ್ಲಿಯೂ ಸೀತಾರಾಮರ ಕಿರೀಟಗಳಲ್ಲಿ ವ್ಯತ್ಯಾಸವಿದೆ. ★ ಸೀತಾದೇವಿಯ ಉತ್ಸವ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿರುವುದನ್ನು ಗಮನಿಸಬಹುದು.

06



ಉಡುಪಿಯ ಪ್ರಸಿದ್ಧ ವಿದ್ವಾಂಸರ ಮನೆಯಲ್ಲಿ ಪೂಜೆಗೊಳ್ಳುತ್ತಿರುವ ಪ್ರಾಚೀನ ರುಕ್ಮಿಣೀಸತ್ಯಭಾಮಾಸಮೇತ ವಿಟ್ಠಲದೇವರು. ಜೋಡಿ ಪ್ರತಿಮೆಗಳಲ್ಲಿ ಲೋಹದ ವ್ಯತ್ಯಾಸ ಇರುವುದನ್ನು ಸ್ಪಷ್ಟ ಗಮನಿಸಬಹುದು.

**07**



**ಮಹಾತಪಸ್ವಿಗಳಾದ ವಿರಕ್ತಶಿಖಾಮಣಿಗಳಾದ ಮಾದನೂರಿನ ಶ್ರೀವಿಷ್ಣುತೀರ್ಥರ ಆರಾಧ್ಯದೈವ ರುಕ್ಮಿಣೀ ಸತ್ಯಭಾಮಾಸಮೇತ ಶ್ರೀವೇಣುಗೋಪಾಲದೇವರು.** ಜೋಡಿ ಪ್ರತಿಮೆಗಳಲ್ಲಿ ಲೋಹದ ವ್ಯತ್ಯಾಸ ಇರುವುದನ್ನು ಸ್ಪಷ್ಟ ಗಮನಿಸಬಹುದು.

**08**



**ಸತ್ಯತೀರ್ಥರಿಗೆ ಶ್ರೀಮನ್ಮಧ್ವಾಚಾರ್ಯರು ದಯಪಾಲಿಸಿರುವ ಸನಕಾದಿಮುನಿಪೂಜಿತ ಲಕ್ಷ್ಮಣಸಮೇತ ಶ್ರೀಸೀತಾರಾಮಚಂದ್ರದೇವರ ಪ್ರತಿಮೆಯನ್ನು** ಗಮನಿಸಿ. ಇಲ್ಲಿಯೂ ಸೀತಾಪ್ರತಿಮೆಯು ಪೀಠ ಹಾಗೂ ರಾಮಪ್ರತಿಮೆಯ ಪೀಠಗಳಲ್ಲಿ ಸಾಮ್ಯ ಇಲ್ಲದೇ ಇರುವುದನ್ನು ಸ್ಪಷ್ಟವಾಗಿ ಕಾಣಬಹುದು.

09



10



ಶ್ರೀ ಪೇಜಾವರ ಮಠದಲ್ಲಿ ಮಂಟಪದ ಮೇಲ್ಭಾಗದಲ್ಲಿ ಇಟ್ಟು ಪ್ರತಿನಿತ್ಯ ಪೂಜೆಗೊಳ್ಳುತ್ತಿರುವ ಶ್ರೀಸೀತಾಲಕ್ಷ್ಮಣ ಸಮೇತ ಶ್ರೀರಾಮಚಂದ್ರದೇವರು.

ಶ್ರೀಸೀತಾದೇವಿಯ ಪ್ರತಿಮೆ ಶ್ರೀರಾಮಚಂದ್ರದೇವರ ಪ್ರತಿಮೆಯ ಭುಜದವರೆಗಾಗಿಲೀ, ಕಿವಿಯವರೆಗಾಗಲೀ ಇಲ್ಲ. ಪೀಠದ ಪರಿಮಾಣದಲ್ಲೂ ವ್ಯತ್ಯಾಸವನ್ನು ಗಮನಿಸಬಹುದು.

11



ಚಿತ್ರದುರ್ಗದಲ್ಲಿರುವ 300 ವರ್ಷ ಪ್ರಾಚೀನವಾದ ರುಕ್ಮಿಣೀಸತ್ಯಭಾಮಾ ಸಮೇತ ವಿಟ್ಠಲದೇವರು. ಜೋಡಿ ಪ್ರತಿಮೆಗಳಲ್ಲಿರುವ ಪರಿಮಾಣದ ವೈಷಮ್ಯವನ್ನು ಕಾಣಬಹುದು.

12



ಶ್ರೀಮದಾಚಾರ್ಯರು ತಮ್ಮ ಗ್ರಂಥಗಳನ್ನು ಭೂಗತ ಮಾಡಿದ ಕಟ್‌ತಿಲಾ ಎಂಬ ಕ್ಷೇತ್ರದಲ್ಲಿರುವ ಆಚಾರ್ಯಕರಾರ್ಚಿತ ರುಕ್ಮಿಣೀಸತ್ಯಭಾಮಾಸಮೇತ ಗೋಪಾಲಕೃಷ್ಣ ದೇವರು. ಈ ಪ್ರತಿಮೆಗಳು ಇಂದು ಅದಮಾರು ಶ್ರೀಪಾದಂಗಳವರಿಂದ ಪೂಜೆಗೊಳ್ಳುತ್ತಿವೆ. ಇಲ್ಲಿಯೂ ಜೋಡಿ ಪ್ರತಿಮೆಗಳಲ್ಲಿ ಪರಿಮಾಣವೈಷಮ್ಯವನ್ನು ಸ್ಪಷ್ಟ ಗಮನಿಸಬಹುದು.

13



14



"Studies in Tuluva History and Culture", Prof. P. Gururaja Bhatt, 1976 ಈ ವಿಮರ್ಶಾ ಪ್ರಬಂಧದಲ್ಲಿ ಮುದ್ರಿಸಲಾದ ಪ್ರಾಚೀನ ಪ್ರತಿಮೆಗಳು. ಇಲ್ಲಿಯೂ ಜೋಡಿ ಪ್ರತಿಮೆಗಳಲ್ಲಿ ಪರಿಮಾಣ ವೈಷಮ್ಯವನ್ನು ಸ್ಪಷ್ಟ ಕಾಣಬಹುದು.

**15**



**ಸೀಮಾಂಧ್ರದ ಕಡಪಾ ಜಿಲ್ಲೆಯ ಒಂಟಿಮಿಟ್ಟಾಂಬ ಗ್ರಾಮದಲ್ಲಿರುವ ಶ್ರೀರಾಮದೇವಾಲಯದ ಗೋಡೆಯ ಮೇಲಿರುವ ಶ್ರೀಸೀತಾರಾಮಕಲ್ಯಾಣದ ಸ್ವಾರಸ್ಯಕರವಾದ ಕೆತ್ತನೆಯನ್ನು** ಗಮನಿಸಿ. ಇದರಲ್ಲಿ ಶ್ರೀಸೀತೆಯ ಪ್ರತಿಮೆಯು ಶ್ರೀರಾಮನಿಗಿಂತಲೂ ಬಹಳ ಚಿಕ್ಕದಾಗಿರುವುದನ್ನು ಗಮನಿಸಬಹುದು.

**16**



**ಶ್ರೀಸತ್ಯತೀರ್ಥರಿಗೆ ಶ್ರೀಮನ್ಮಧ್ವಾಚಾರ್ಯರು ದಯಪಾಲಿಸಿದ ಶ್ರೀಭೀಮಸೇತು ಮುನಿವೃಂದ ಮಠದಲ್ಲಿ ಪೂಜೆಗೊಳ್ಳುತ್ತಿರುವ ಸೀತಾರಾಮಚಂದ್ರದೇವರು.** ಇದರಲ್ಲಿ ಶ್ರೀಸೀತಾದೇವಿಯವರು ಎಡಗೈಯಲ್ಲಿ ಕಮಲವನ್ನು ಧರಿಸಿ ಬಲಗೈಯನ್ನು ನೀಳವಾಗಿ ಇಳಿಬಿಟ್ಟಿರುವುದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

17



**ಪ್ರಾಚೀನ ರಾಮಮಂದಿರ – ಗಂಧರ್ವಕೊಟ್ಟೈ, ಪುದುಕ್ಕೊಟ್ಟೈ ಜಿಲ್ಲೆ, ತಮಿಳುನಾಡು.** ಸೀತಾವಿಗ್ರಹದ ಎತ್ತರ ರಾಮ ಪ್ರತಿಮೆಯ ಕಿವಿ ಅಥವಾ ಭುಜದವರೆಗೂ ಇಲ್ಲ. ಸೀತಾದೇವಿಯ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

18



**ಪ್ರಾಚೀನ ರಾಮಮಂದಿರ – ಆದಂಬಾರ್, ತಿರುವರೂರ್ ಜಿಲ್ಲೆ, ತಮಿಳುನಾಡು.** ಸೀತಾದೇವಿಯ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

19



**ತಮಿಳುನಾಡಿನ ಕಾಂಚೀಪುರಂನಲ್ಲಿರುವ ಅಷ್ಟಪುಯಕರಂ ಎಂಬ ಸ್ಥಳದಲ್ಲಿರುವ ಪ್ರಾಚೀನವಾದ ಶ್ರೀಭೂಸಮೇತ ಶ್ರೀನಿವಾಸದೇವರು.** ಲಕ್ಷ್ಮಿಯ ಒಂದು ಪ್ರತಿಮೆಯ ಎಡಗೈ ದೇವರ ಕಡೆಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

20



**ತಮಿಳುನಾಡಿನ ಕಾಂಚೀಪುರ ಜಿಲ್ಲೆಯ ಮದುರಾಂತಕ ಎಂಬ ಸ್ಥಳದಲ್ಲಿರುವ ಪ್ರಾಚೀನವಾದ ಶ್ರೀಸೀತಾರಾಮಮೂರ್ತಿಗಳು.** ಶ್ರೀಸೀತಾದೇವಿಯ ಪ್ರತಿಮೆ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ. ವಕುಲಾರಣ್ಯ ಕ್ಷೇತ್ರ ಎಂಬುದಾಗಿಯೂ ಇದು ಪ್ರಸಿದ್ಧಿ ಇದೆ. ಏರಿ ಕಾತ್ತರ್ ರಾಮ ಎಂಬುದಾಗಿಯೂ ಇದನ್ನು ಗುರುತಿಸುತ್ತಾರೆ.

21



**ಮುದಿಕೊಂಡಾನ್, ತಿರುವರೂರು ಜಿಲ್ಲೆ, ತಮಿಳುನಾಡು ಕೋದಂಡರಾಮ ವಿಗ್ರಹ.**

★ ಸೀತಾಮೂಲವಿಗ್ರಹದ ಎತ್ತರ ರಾಮ ಪ್ರತಿಮೆಯ ಕಿವಿ ಅಥವಾ ಭುಜದವರೆಗೂ ಇಲ್ಲ. ★ ಸೀತಾದೇವಿಯ ಮೂಲವಿಗ್ರಹ ಹಾಗು ಉತ್ಸವ ಮೂರ್ತಿ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

22



**ಶ್ರೀರಾಯರ ಮಠದಲ್ಲಿ ಮಂಟಪದ ಕೆಳ ಸ್ತರದಲ್ಲಿ ಇಟ್ಟು ನಿತ್ಯ ಪೂಜೆಗೊಳ್ಳುತ್ತಿರುವ ತಾಮ್ರದ ಸೀತಾರಾಮ ಪ್ರತಿಮೆಗಳು.**

ಇಲ್ಲಿಯೂ ಸೀತಾದೇವಿಯ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

23



24



ತಮಿಳುನಾಡಿನ ತಿರುವಾರೂರ್ ಜಿಲ್ಲೆಯ ತಿಲ್ಲೈವಿಲಾಗಂ ಎಂಬ ಸ್ಥಳದಲ್ಲಿರುವ ಶ್ರೀಸೀತಾರಾಮವಿಗ್ರಹಗಳು. **ಎರಡು ಕಡೆಯಲ್ಲಿಯೂ** ಶ್ರೀಸೀತಾದೇವಿಯ ಪ್ರತಿಮೆ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

25



ತಂಜಾವೂರಿನ **Royal Palace Museum**ನಲ್ಲಿರುವ 11ನೇ ಶತಮಾನದ ಶ್ರೀಸೀತಾರಾಮವಿಗ್ರಹ. ಶ್ರೀಸೀತಾದೇವಿಯ ಪ್ರತಿಮೆ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

26



**ಪ್ರಾಚೀನ ರಾಮಮಂದಿರ – ಆದಂಬಾರ್, ತಿರುವರೂರ್ ಜಿಲ್ಲೆ, ತಮಿಳುನಾಡು.** ಶ್ರೀದೇವಿಯ ವಿಗ್ರಹ ಎಡಗೈಯಲ್ಲಿ ಕಮಲವಿದ್ದು ಬಲಗೈಯನ್ನು ಕೆಳಗೆ ಇಳಿಬಿಟ್ಟಿರುವ ಭಂಗಿಯಲ್ಲಿದೆ.

27



**ಪ್ರಾಚೀನ ರಾಮಮಂದಿರ – ಗಂಧರ್ವಕೊಟ್ಟೈ , ಪುದುಕ್ಕೊಟ್ಟೈ ಜಿಲ್ಲೆ, ತಮಿಳುನಾಡು.**

★ ಸೀತಾಮೂಲವಿಗ್ರಹದ ಎತ್ತರ ರಾಮ ಪ್ರತಿಮೆಯ ಕಿವಿ ಅಥವಾ ಭುಜದವರೆಗೂ ಇಲ್ಲ.

★ ಇಲ್ಲಿ ಸೀತಾದೇವಿಯ ಕಮಲವುಳ್ಳ ಹಸ್ತವು ರಾಮದೇವರ ಕಡೆಯಿಲ್ಲದಿರುವುದು ಗಮನಾರ್ಹ.

28



ಪ್ರಾಚೀನ ಸೀತಾರಾಮ ವಿಗ್ರಹ. ಇಲ್ಲಿ ಸೀತಾದೇವಿಯ ಕಮಲವುಳ್ಳ ಹಸ್ತವು ರಾಮದೇವರ ಕಡೆಯಿಲ್ಲದಿರುವುದು ಗಮನಾರ್ಹ.

29






ಪ್ರತಿಮೆ ಹಾಗು ಪೀಠಗಳ ಲೋಹದಲ್ಲಿ ವ್ಯತ್ಯಾಸ ಇರುವ ಪ್ರಾಚೀನ ಪ್ರತಿಮೆಗಳು.

30



**ಭೂವೈಕುಂಠ ತಿರುಮಲದಲ್ಲಿ ಶ್ರೀವರಾಹದೇವರ ದೇವಾಲಯದಲ್ಲಿರುವ ವರಾಹದೇವರ ಉತ್ಸವ ಪ್ರತಿಮೆ.**
ಈ ಪ್ರತಿಮೆಯು ತಾಮ್ರದ್ದಾಗಿದ್ದು ಪೀಠ ಉತ್ತಮ ಲೋಹವಾದ ಬೆಳ್ಳಿಯದ್ದಾಗಿರುವುದು ಗಮನಾರ್ಹ.

# ವ್ಯಾಹತಿಯ ವ್ಯೂಹ

ಕ್ರಿ.ಶ.1949ರಿಂದ ಇಂದಿನ ವರೆಗೆ ಶ್ರೀರಾಯರ ಮಠದ ಅಧಿಕೃತ ಲೇಖಕರಿಂದ ಪ್ರಕಟಿಸಲ್ಪಟ್ಟ ಪುಸ್ತಕಗಳು ಹೀಗಿವೆ.

| ಕ್ರ. ಸಂ. | ಪುಸ್ತಕದ ಹೆಸರು | ಮುದ್ರಣ | ಲೇಖಕರು | ಪ್ರಕಾಶಕರು |
|---|---|---|---|---|
| 1 | ಗುರುಚರಿತೆ | 1949 | ದಿ॥ ಹೆಚ್.ಕೆ. ವೇದವ್ಯಾಸಾಚಾರ್ಯ | ಪರಿಮಳ ಪ್ರಕಾಶನ, ಮೈಸೂರು. |
| | ಗುರುಚರಿತೆ | 1995 | ದಿ॥ ಹೆಚ್.ಕೆ. ವೇದವ್ಯಾಸಾಚಾರ್ಯ | ಪರಿಮಳ ಪ್ರಕಾಶನ ಮಂದಿರ, ನಂಜನಗೂಡು/ ಬೆಂಗಳೂರು. |
| | ಗುರುಚರಿತೆ | 2010 | ದಿ॥ ಹೆಚ್.ಕೆ. ವೇದವ್ಯಾಸಾಚಾರ್ಯ | ಪರಿಮಳ ಪ್ರಕಾಶನ ಮಂದಿರ, ನಂಜನಗೂಡು/ ಬೆಂಗಳೂರು. |
| 2 | ಶ್ರೀಜಿತಾಮಿತ್ರತೀರ್ಥರು | 1992 | ರಾಜಾ ಎಸ್. ಪವಮಾನಾಚಾರ್ಯ ಮತ್ತು ಆ.ರಾ. ಪಂಚಮುಖೀ | ಗುರುಸಾರ್ವಭೌಮ ವಿದ್ಯಾಪೀಠ, ಮಂತ್ರಾಲಯ. |
| 3 | ಶ್ರೀರಾಘವೇಂದ್ರಮಠ-ಗತಾರ್ಚಾಗತಿಕ್ರಮ (ಕನ್ನಡಾನುವಾದ) | 1994 | ರಾಜಾ ಎಸ್. ಗುರುರಾಜಾಚಾರ್ಯ | ಶ್ರೀ ರಾಘವೇಂದ್ರ ಸ್ವಾಮಿಗಳ ವೃಂದಾವನ ಸನ್ನಿಧಾನ, ಸೀತಾಪತಿ ಅಗ್ರಹಾರ, ಬೆಂಗಳೂರು. |
| 4 | ಗುರುಚರಿತೆ (ಆಂಗ್ಲ ಅನುವಾದ) | 2007 | ಹುಲಿ ಪವಮಾನಾಚಾರ್ಯ ಮತ್ತು ರಾಮಸ್ವಾಮಿ | ಪರಿಮಳ ಸಂಶೋಧನ ಮಂದಿರ, ಬೆಂಗಳೂರು. |
| 5 | ಶ್ರೀವಿಜಯೀಂದ್ರವಿಜಯ (ಕನ್ನಡಾನುವಾದ) | 2003 | ಕಡಪಾ ರಾಘವೇಂದ್ರಾಚಾರ್ಯ ಮತ್ತು ಗುರುಸಾರ್ವಭೌಮ ವಿದ್ಯಾಪೀಠದ ವಿದ್ವಾಂಸರು | ಶ್ರೀರಾಘವೇಂದ್ರ ಪರಿಷತ್, ನಂಜನಗೂಡು. |
| 6 | ಶ್ರೀಮೂಲರಾಮ | 2004 | ರಾಜಾ ಎಸ್. ಗುರುರಾಜಾಚಾರ್ಯರು | ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ. |
| 7 | ಸತ್ಯಮೇವ ಜಯತೇ (ಕನ್ನಡಾನುವಾದ) | 2005 | ಗೋವಿಂದ ವಿಠ್ಠಲರಾವ್ ನವಲಗುಂದ | ಶ್ರೀರಾಘವೇಂದ್ರ ಸಾಹಿತ್ಯ ಪರಿಷತ್, ನಂಜನಗೂಡು. |
| 8 | ಸ್ತೋತ್ರಮುಕ್ತಾವಲೀ | 2006 | ರಾಜಾ ಎಸ್. ಗೋಪಾಲಾಚಾರ್ಯ ಮತ್ತು ವಿದ್ವಾನ್ ರಾಮಚಂದ್ರಾಚಾರ್ಯ ಪುರೋಹಿತ | ನಂಜನಗೂಡು ಶ್ರೀರಾಘವೇಂದ್ರ ಸ್ವಾಮಿಗಳ ಮಠ. |

| | | | | |
|---|---|---|---|---|
| 9 | ಕಲಿಯುಗಕಲ್ಪತರು (10ನೇ ಮುದ್ರಣ) | 2007 | ರಾಜಾ ಎಸ್. ಗುರುರಾಜಾಚಾರ್ಯ, ಚಿಂತನ-ಮಂಥನ ಶೀರ್ಷಿಕೆ, ರಾಜಾ ಎಸ್. ಗೋಪಾಲಾಚಾರ್ಯ | ನಂಜನಗೂಡು ಶ್ರೀರಾಘವೇಂದ್ರ ಸ್ವಾಮಿಗಳವರ ಮಠ |
| 10 | ಮೂಲರಾಮಸ್ತು ಮನ್ಮತೇ | 2009 ಮತ್ತು 2010 | ಅನಾಮಧೇಯ, ಶ್ರೀರಾಯರ ಮಠದ ದಿವಾನರ ಮುನ್ನುಡಿಯೊಂದಿಗೆ. | ಶ್ರೀರಾಘವೇಂದ್ರಸಾಹಿತ್ಯ ಪರಿಷತ್, ನಂಜನಗೂಡು. |

ಈ ಎಲ್ಲ ಪುಸ್ತಕಗಳಲ್ಲಿ ಪರಸ್ಪರ ವಿರುದ್ಧ ಹೇಳಿಕೆಗಳು, ವಿರುದ್ಧ ಕಾಲಮಾನಗಳು, ವ್ಯಾಹತಿಗಳು ಹೇಗೆ ತುಂಬಿ ತುಳುಕುತ್ತಿವೆ ಎಂಬುದನ್ನು ಸ್ವಲ್ಪ ನೋಡೋಣ.

| ಸಂ. | | ಹೇಳಿಕೆ | ಆಕರ |
|---|---|---|---|
| 1 | A | ಯರಗೋಳಗ್ರಾಮಕ್ಕೆ ಒಬ್ಬ ತುಳು ಬ್ರಾಹ್ಮಣ ಬಂದ. ಆ ಬ್ರಾಹ್ಮಣನನ್ನು ಶ್ರೀರಾಮಚಂದ್ರತೀರ್ಥರ ಕ್ರೂರರಾದ, ದುಷ್ಟಶಿಷ್ಯರು ಸನ್ನ್ಯಾಸಿಯನ್ನಾಗಿ ಮಾಡಿದರು. | ವಿಜಯೀಂದ್ರವಿಜಯ (ಸರ್ಗ 2 ಶ್ಲೋ.19-27) ಮತ್ತು ಶ್ರೀಜಿತಾಮಿತ್ರತೀರ್ಥರು ಪುಟ 16 |
| | B | ಸನ್ನ್ಯಾಸಿಗಳಾದ ವಿದ್ಯಾನಿಧಿಗಳೆಂಬುವರೊಬ್ಬರು ಸಂಚಾರತ್ವೇನ ಬಂದರು. | ಗುರುಚರಿತೆ (1949) ಪುಟ 114 |
| 2 | A | ಶ್ರೀವಿಬುಧೇಂದ್ರರು ಮೂಲರಾಮನನ್ನು ಪೂಜಿಸಿದರು. | ಮೂ.ಮತೇ 2ನೇ ಮುದ್ರಣ ಪುಟ 7 ಮತ್ತು ಶ್ರೀಜಿತಾಮಿತ್ರತೀರ್ಥರು ಪು.15, ಮೂಲರಾಮ ಪುಟ 10 |
| | B | ಶ್ರೀವಿಬುಧೇಂದ್ರರು ಮೂಲರಾಮನನ್ನು ಪೂಜಿಸಲಿಲ್ಲ. ಮೂಲರಾಮನ ಪೂಜೆಗೋಸ್ಕರವೇ ಮತ್ತೆ ಶ್ರೀವಿಜಯೀಂದ್ರರಾಗಿ ಅವತರಿಸಿದರು.<br>ವಿಬುಧೇಂದ್ರಜಿತಾಮಿತ್ರೌ ಹಂಸೌ ಹಂಸಕುಲೋದ್ಭವೌ।<br>ತಾಭ್ಯಾಂ ನ ಪೂಜಿತಾ ಹ್ಯರ್ಚಾ ರಾಮಸ್ಯ ಪರಮಾತ್ಮನಃ ॥ | ವಿಜಯೀಂದ್ರವಿಜಯ- ಸರ್ಗ 5, ಶ್ಲೋಕ 5<br>ಗುರುಚರಿತೆ ಪುಟ 116, ಸ್ತೋತ್ರಮುಕ್ತಾವಲೀ ಪುಟ 661<br>ಶ್ರೀಜಿತಾಮಿತ್ರತೀರ್ಥರು ಪುಟ 33, ಮೂ.ಮತೇ ಪುಟ 7 |
| 3 | A | ಮೂಲರಾಮಪ್ರತಿಮೆಯನ್ನು ಕಳ್ಳತನ ಮಾಡಿದ್ದು ವಿದ್ಯಾನಿಧಿಗಳ ಕಾಲದಲ್ಲಿ. | ವಿಜಯೀಂದ್ರವಿಜಯದ ಕನ್ನಡಾನುವಾದ ಪುಟ 43 |
| | B | ಮೂಲರಾಮನ ಪ್ರತಿಮೆಯನ್ನು ಕಳ್ಳತನ ಮಾಡಿದ್ದು ಶ್ರೀರಘುನಾಥರ ಕಾಲದಲ್ಲಿ. | ಮೂ.ಮತೇ ಪುಟ 126 |

| | | | |
|---|---|---|---|
| 4 | A | ಮೂಲರಾಮನನ್ನು ಪೂಜಿಸುವವರು ಮತ್ತೆ ಹುಟ್ಟುವುದಿಲ್ಲ. ಅದೇ ಅವರ ಚರಮ ದೇಹ. | ಗುರುಚರಿತೆ ಪುಟ 96 |
| | B | ಮೂಲರಾಮನನ್ನು ವಿಬುಧೇಂದ್ರರು ಪೂಜಿಸಿದರು. ಮೂಲರಾಮನ ಪೂಜೆಯ ಅವಕಾಶ ಈ ಜನ್ಮದಲ್ಲಿ ಸಿಗಲಿಲ್ಲ. ಆದಕಾರಣ ಅವರೇ ಮತ್ತೆ ವಿಜಯೀಂದ್ರರಾಗಿ ಬಂದರು. | ಕಲಿಯುಗಕಲ್ಪತರು, ಶ್ರೀಜಿತಾಮಿತ್ರತೀರ್ಥರು ಪುಟ 33, ಸ್ತೋತ್ರಮುಕ್ತಾವಲಿ ಪುಟ 660, ಮೂ.ಮತೇ. ಪುಟ 7 |
| 5 | A | ಶ್ರೀರಾಮಚಂದ್ರತೀರ್ಥರ ನಿರ್ಯಾಣದ ಕಾಲ ನಳ ಸಂವತ್ಸರ - ಕ್ರಿ.ಶ.1435 | ಗು.ಚರಿತೆ ಪುಟ 111,113, ಶ್ರೀಮೂಲರಾಮ ಪುಟ 10, ಜಿತಾಮಿತ್ರತೀರ್ಥರು ಪುಟ 16 |
| | B | ಕ್ರಿ.ಶ. 1430 | ಮೂ.ಮತೇ ಪುಟ 124 |
| | C | ಶಾ.ಶ. 1298 (ಕ್ರಿ.ಶ. 1376) | ಮೂ.ಮತೇ ಪುಟ 133 - ಪ್ರಾಚೀನತಮದಾಖಲೆ |
| 6 | A | ಶ್ರೀವಿಬುಧೇಂದ್ರರ ನಿರ್ಯಾಣದ ಕಾಲ - ಪರಾಭವಸಂವತ್ಸರ. | ವಿ.ವಿಜಯ ಸರ್ಗ 3 ಶ್ಲೋಕ 9 ಮತ್ತು ಶ್ರೀಜಿತಾಮಿತ್ರತೀರ್ಥರು ಪುಟ 34 |
| | B | ಕ್ರಿ. ಶ. 1490, ಸಾಧಾರಣಸಂವತ್ಸರ | ಗು.ಚ ಪುಟ 117, ಶ್ರೀಮೂಲರಾಮ ಪುಟ 10, ಕಲಿಯುಗಕಲ್ಪತರು |
| | C | ಶಾ.ಶ 1348 ಅಂದರೆ ಕ್ರಿ.ಶ. 1427/28- ಪರಾಭವಸಂವತ್ಸರ | ಮೂ.ಮತೇ ಪುಟ 133, ಪ್ರಾಚೀನತಮದಾಖಲೆ |
| 7 | A | ಶ್ರೀಜಿತಾಮಿತ್ರರು ಅದೃಶ್ಯರಾದ ತಿಥಿ - ಕೀಲಕ ಸಂ.ಅಶ್ವೀನ ಕೃಷ್ಣ ಅಷ್ಟಮೀ | ವಿ.ವಿಜಯ ಸರ್ಗ 3 ಶ್ಲೋಕ 13 |
| | B | ಅಕ್ಷಯ ಸಂ. ಮಾರ್ಗಶಿರ ಅಮಾವಾಸ್ಯೆ - ಶಕ 1368 (ಕ್ರಿ.ಶ.1446) | ಮೂ.ಮತೇ. ಪುಟ 133, ಪ್ರಾಚೀನತಮದಾಖಲೆ |
| | C | ಪ್ರಮಾದೀಚ ಸಂ. -ಕ್ರಿ.ಶ.1497 ಮಾರ್ಗಶಿರ ಅಮಾವಾಸ್ಯೆ | ಶ್ರೀಜಿತಾಮಿತ್ರತೀರ್ಥರು ಪುಟ 45,61 |
| | D | ಪ್ರಮಾದೀಚ ಸಂ. -ಕ್ರಿ.ಶ.1492 ಮಾರ್ಗಶಿರ ಅಮಾವಾಸ್ಯೆ | ಗು.ಚ ಪುಟ 122, ಶ್ರೀಮೂಲರಾಮ ಪುಟ 10 |
| 8 | A | ಶ್ರೀರಘುನಂದನರ ನಿರ್ಯಾಣಕಾಲ - ಕ್ರಿ.ಶ. 1504 | ಗು.ಚ ಪುಟ 122. ಶ್ರೀಮೂಲರಾಮ ಪುಟ 10, ಕಲಿಯುಗಕಲ್ಪತರು |
| | B | ಶಾ.ಶ. 1395 (ಕ್ರಿ.ಶ 1473/74) | ಮೂ.ಮತೇ ಪ್ರಾಚೀನತಮ ದಾಖಲೆ ಪುಟ 133 |

| | | | |
|---|---|---|---|
| 9 | A | ಶ್ರೀಸುರೇಂದ್ರರ ನಿರ್ಯಾಣಕಾಲ, ಕ್ರಿ.ಶ 1575 | ಅಜಯ್ಯವಿಜಯೀಂದ್ರರು ಪುಟ 35,421,424 ಗು. ಚ ಪುಟ 129. ಶ್ರೀಮೂಲರಾಮ ಪುಟ 10 |
| | B | ಶ್ರೀಸುರೇಂದ್ರರ ಕಾಲ (1504-1539) | ಮೂ.ಮಠೇ ಪುಟ 18,88 |
| | C | ವಿಕಾರಿಸಂವತ್ಸರ, (ಕ್ರಿ.ಶ. 1539) ಶಾ.ಶ. 1461 ಅಂದರೆ ಕ್ರಿ.ಶ. 1539-40 | ಮೂ.ಮಠೇ ಪುಟ 133 - ಪ್ರಾಚೀನತಮ ದಾಖಲೆ ವಿಜಯೀಂದ್ರವಿಜಯ ಸರ್ಗ 5 ಶ್ಲೋ 36 |
| 10 | A | ಶ್ರೀಸುರೇಂದ್ರರ ನಿರ್ಯಾಣಸ್ಥಳ (ವೃಂದಾವನ), ಆನೆಗೊಂದಿ (ಗಜಗಹ್ವರ) | ವಿ.ವಿಜಯ ಸರ್ಗ 5 ಶ್ಲೋ 36 |
| | B | ಮಧುರೈ | ಮೂ.ಮಠೇ ಪುಟ 133 ಪ್ರಾಚೀನತಮ ದಾಖಲೆ, ರಾಯರ ಮಠದ ಪರಂಪರೆ, ಗು.ಚ ಪುಟ 140 |
| 11 | A | ಮೂಲಸೀತೆಯ ಪ್ರತಿಮೆ ಮೂಲರಾಮಪ್ರತಿಮೆಗೆ ''ಪೀಠತಃ ವರ್ಣತಃ ಪರಿಮಾಣತಃ'' ಸಾಮ್ಯವಿದೆ. | ಅರ್ಚಾಗತಿಕ್ರಮ |
| | B | ಈವರೆಗೂ ರಾಯರ ಮಠದವರೇ ಒಪ್ಪಿಕೊಂಡಂತೆ ಮೂಲಸೀತಾಪ್ರತಿಮೆ ಇರುವುದು ಉತ್ತರಾದಿಮಠದಲ್ಲಿ. ಈ ಪ್ರತಿಮೆಯು ಹಿತ್ತಾಳೆ ವರ್ಣ-ದ್ದಾಗಿರುವುದು ಪ್ರತ್ಯಕ್ಷಸಿದ್ಧ. (ಹೀಗಾಗಿ ಈಗ ಉತ್ತರಾದಿಮಠದಲ್ಲಿರುವ ಮೂಲಸೀತೆಯ ಪ್ರತಿಮೆ ಮೂಲಪ್ರತಿಮೆ ಅಲ್ಲವೆಂಬ ಹೊಸರಾಗವನ್ನು ಸ್ತೋತ್ರಮುಕ್ತಾವಲಿ, ಮೂ. ಮಠೇ ಪುಸ್ತಕದಲ್ಲಿ ಎತ್ತಿದ್ದಾರೆ.) | ಸ್ತೋತ್ರಮುಕ್ತಾವಲಿ, ಮೂ.ಮಠೇ ಪುಸ್ತಕ ಪುಟ xi |
| 12 | A | ಶ್ರೀಜಯತೀರ್ಥರ ಮೂಲವೃಂದಾವನ ಮಳಖೇಡದಲ್ಲಿದೆ. | ಗು. ಚ. ಪುಟ 106; ಮೂ.ಮಠೇ 133; ರಾಯರ-ಮಠದ ಹಳೆಪಂಚಾಂಗಗಳು, ರಾಯರೇ ಸ್ವಪ್ನದಲ್ಲಿ ಬಂದು ಹೇಳಿದ್ದು ಪರಿಮಳಪತ್ರಿಕೆ 1962 |
| | B | ಟೀಕಾಚಾರ್ಯರ ಮೂಲವೃಂದಾವನ ಗಜಗಹ್ವರ (ನವವೃಂದಾವನ) | ಇತ್ತೀಚಿನ ರಾಯರ ಮಠದ ಎಲ್ಲ ಪ್ರಕಟಣೆಗಳು ಮತ್ತು ಪಂಚಾಂಗಗಳು |

| | | | |
|---|---|---|---|
| 13 | A | ಶ್ರೀಕೃಷ್ಣದ್ವೈಪಾಯನರು ವೈಕುಂಠಯಾತ್ರೆ ಮಾಡುವಾಗ ಶ್ರೀರಾಯರಿಗೆ ದರ್ಶನ ಕೊಟ್ಟು ಆಯುಷ್ಯವನ್ನು ಸೂಚಿಸಿದರು. ''ಆಕಾಶದ ಕಡೆಗೆ ನೋಡಿ ಸ್ತೋತ್ರಮಾಡಿ ...., ಸ್ವಲ್ಪ ಹೊತ್ತಾದಮೇಲೆ ಸರಿ ಎಂದು ಹೇಳಿ ಮತ್ತೊಮ್ಮೆ ಸ್ತೋತ್ರಮಾಡಿ ಕುಳಿತುಕೊಂಡರು''. | ಗು.ಚ. ಪುಟ 299 |
| | B | ಕೃಷ್ಣದ್ವೈಪಾಯನರು ರಾಯರಿಗೆ ದರ್ಶನ ನೀಡಿದ್ದು ಕಟ್ಟು ಕಥೆ. | ಕಲಿಯುಗಕಲ್ಪತರು, 10ನೇ ಮುದ್ರಣ 2007. ಇದರ ಚಿಂತನಮಂಥನದಲ್ಲಿ. |
| 14 | A | ಶ್ರೀಬಿದರಹಳ್ಳಿ ಶ್ರೀನಿವಾಸಾಚಾರ್ಯರಿಗೆ (ಶ್ರೀಯಾದವಾರ್ಯರ ಶಿಷ್ಯರು) ತೀರ್ಥರೆಂಬ ಬಿರುದು ಶ್ರೀರಾಯರು ಕೊಟ್ಟರು<br>''ನೀವು ಗೃಹಸ್ಥಾಶ್ರಮಿಗಳಾದರೂ ಆನಂದತೀರ್ಥರ ಸತ್ತೀರ್ಥಗಳಲ್ಲಿ ಮಗ್ನರಾಗಿರುವುದರಿಂದ ''ಶ್ರೀನಿವಾಸತೀರ್ಥರೇ ಆಗಿದ್ದೀರಿ'' ಎಂದು ರಾಯರು ಪ್ರಶಂಸೆ ಮಾಡಿದರು. | ಗು.ಚ. ಪುಟ 285 (ಈ ಪುಸ್ತಕದ 14 ಸ್ಥಳಗಳಲ್ಲಿ ''ಶ್ರೀನಿವಾಸತೀರ್ಥರು'' ಎಂಬ ಪದಪ್ರಯೋಗವಿದೆ.) |
| | B | ಇದೆಲ್ಲ ಮತಾಂಧತೆಯು, ಸುಳ್ಳು. | ಕಲಿಯುಗಕಲ್ಪತರು, 10ನೇ ಮುದ್ರಣ 2007. ಇದರ ಚಿಂತನಮಂಥನದಲ್ಲಿ. |
| 15 | A | ಉತ್ತರಾದಿಮಠದ ಶ್ರೀರಘುನಾಥರು ಲಕ್ಷ್ಮೀನಾರಾಯಣ ಯತಿಗಳನ್ನು ''ಶ್ರೀಪಾದರಾಜರೆಂದು'' ಕರೆದರು. | ಗು.ಚ ಪುಟ 118<br>ಕರ್ನಾಟಕ ಹರಿದಾಸರು (ಹೆಚ್.ಕೆ.ವೇದವ್ಯಾಸಾಚಾರ್ಯ) |
| | B | ಶ್ರೀರಘುನಾಥರ ಕಾಲ, ಶ್ರೀಪಾದರಾಜರ ಕಾಲ ಕೂಡುವುದಿಲ್ಲ. | ಮೂ.ಮಠೇ ಪುಟ viv |
| | C | ಶ್ರೀಪಾದರಾಜರೆಂಬ ಬಿರುದು ಕೊಟ್ಟವರು ಶ್ರೀವಿಬುಧೇಂದ್ರರು | ಕಲಿಯುಗ ಕಲ್ಪತರು, ಅರ್ಚಾಗತಿಕ್ರಮದ ಅನುವಾದ. |
| 16 | A | ಉತ್ತರಾದಿಮಠ ಆರಂಭವಾದದ್ದು 1444. | ಮೂ. ಮಠೇ. ಪುಟ xii ಮತ್ತು ನಾಲ್ಕನೇ ರಕ್ಷಾಪುಟ (ಪ್ರಥಮಮುದ್ರಣ) |
| | B | ಈ ಮಠವು ಆರಂಭವಾದದ್ದು 1436 | ಮೂ. ಮಠೇ. ಪುಟ 124 ಮತ್ತು -ಮೂ.ಮಠೇ ದ್ವಿತೀಯ ಮುದ್ರಣದಲ್ಲಿಯ ದಿವಾನರ ನುಡಿ, ಮತ್ತು ಪುಟ 126 |
| | C | ಉತ್ತರಾದಿಮಠ ಆರಂಭವಾದದ್ದು 1470 | ಮೂ. ಮಠೇ. ಪುಟ xii, ರಕ್ಷಾಕವಚ (ಎರಡನೇ ಮುದ್ರಣ) |

| | | | |
|---|---|---|---|
| 17 | A | ಗುರುಪುರಂದರದಾಸರ ''ವೇದಾಂತ ವೇದ್ಯನ...'' ಕೃತಿಯು ಗುರುಪುರಂದರದಾಸರದ್ದು. | ಶ್ರೀಮೂಲರಾಮ ಪುಸ್ತಕ. |
| | B | ಈ ಸುಳಾದಿಯನ್ನು, ಅದರ ಹೊಣೆಗಾರಿಕೆಯನ್ನು ಗುರು ಪುರಂದರದಾಸರ ತಲೆಗೆ ಕಟ್ಟಿರುವುದು ಎದ್ದು ಕಾಣುತ್ತದೆ. ಇದು ವಿಷಾದನೀಯ | ಮೂ.ಮತೇ. ಪುಟ 92 |
| 18 | A | ಆದ್ಯ ಮುದ್ದುವಿಠಲರ ''ಋಜುಗಣದ ಜೀವರೊಳು..'' ಎಂಬ ಕೃತಿಯನ್ನು ಉದಾಹರಿಸಿದ್ದಾರೆ. | ಶ್ರೀಮೂಲರಾಮ |
| | B | ಈ ಕೃತಿಯ ಪ್ರಾಮಾಣ್ಯ ಶಂಕಾಸ್ಪದವೇ ಸರಿ. | ಮೂ. ಮತೇ 56. |
| 19 | A | ಶ್ರೀವಿದ್ಯಾನಿಧಿಗಳು ಮೂಲರಾಮನ ಪೂಜೆಯನ್ನು ಸ್ಮರಿಸಿಕೊಂಡು ರೋದಿಸಿದರು, ಸೀತೆಯಿಂದ ಸಹಿತವಾಗಿ ಕೃತ್ರಿಮರಾಮದೇವರನ್ನು ಪೂಜಿಸಿದರು ಎಂದು ಬರೆದಿದ್ದಾರೆ. (ಅರ್ಥಾತ್ ಉತ್ತರಾದಿಮಠದಿಂದ ಮೂಲರಾಮ ಪ್ರತಿಮೆಯು ಅಪಹರಣವಾದದ್ದು ಶ್ರೀವಿದ್ಯಾನಿಧಿಗಳ ಕಾಲದಲ್ಲೇ ಎಂದಾಯಿತು.) | ವಿಜಯೀಂದ್ರವಿಜಯ ಕನ್ನಡಾನುವಾದ ಸಹಿತ (ಶ್ರೀರಾಘವೇಂದ್ರ ಸಾಹಿತ್ಯಪರಿಷತ್ ನಂಜನಗೂಡು -2003. ಪುಟ 43ರಲ್ಲಿ 3ನೇ ಸರ್ಗ 26ನೇ ಶ್ಲೋಕದ ಅನುವಾದ ಹಾಗೂ ಸರ್ಗದ ಸಾರಾಂಶ. ಅನು. : ಶ್ರೀಕಡಪ ರಾಘವೇಂದ್ರಾಚಾರ್ಯ, ಶ್ರೀಗುರುಸಾರ್ವಭೌಮ ವಿದ್ಯಾಪೀಠದ ವಿದ್ವಾಂಸರು. ಮಂತ್ರಾಲಯ) |
| | B | ಉತ್ತರಾದಿಮಠದಿಂದ ಮೂಲರಾಮನ ಪ್ರತಿಮೆ ಕಳುವಾದದ್ದು ಕ್ರಿ.ಶ. 1493 ಆನಂದ ಸಂ. ಎಂದು ಬರೆದಿದ್ದಲ್ಲದೆ ಆಗ ಉತ್ತರಾದಿಮಠದ ಪೀಠದಲ್ಲಿದ್ದವರು ''ಶ್ರೀರಘುನಾಥತೀರ್ಥರು'' ಎಂದಿದ್ದಾರೆ. | ಮೂ.ಮತೇ ಪುಸ್ತಕದ (ಪುಟ viii, ix, 16, 126ರಲ್ಲಿ) |
| 20 | A | ಶ್ರೀರಘುನಂದನರ ಆಳ್ವಿಕೆಯಲ್ಲಿ ಅಂದರೆ ಕ್ರಿ.ಶ. 1493 ರಲ್ಲಿ ಮೂಲರಾಮನನ್ನು ಅಪಹರಿಸಲಾಗಿದೆ. | ಮೂ.ಮತೇ ಪುಟ viii, ix, 16, 126ರಲ್ಲಿ |
| | B | ಶ್ರೀರಘುನಂದನರು ಪೀಠಕ್ಕೆ ಬಂದದ್ದು ಕ್ರಿ.ಶ. 1497 | ಶ್ರೀಜಿತಾಮಿತ್ರತೀರ್ಥರು - ಪುಟ 45 |
| | C | ಶ್ರೀರಘುನಂದನರ ನಿರ್ಯಾಣ ಕಾಲ ಕ್ರಿ.ಶ. 1474 | ಪ್ರಾಚೀನತಮ ದಾಖಲೆ, ಮೂ.ಮತೇ, ಪುಟ 133 |

| | | | |
|---|---|---|---|
| 21 | A | ರಾಮನ ಪ್ರತಿಮೆಯನ್ನು ಅಪಹರಣ ಮಾಡಿದ್ದು ಕಾರ್ತಿಕ ಶುದ್ಧ ಏಕಾದಶೀ ರಾತ್ರಿ | ಗು.ಚ. ಪುಟ 128 |
| | B | ರಾಮನ ಪ್ರತಿಮೆಯನ್ನು ಅಪಹರಣ ಮಾಡಿದ್ದು ಕಾರ್ತಿಕ ಶುದ್ಧ ದ್ವಾದಶಿಯ ಅರುಣೋದಯಕಾಲದಲ್ಲಿ. | ಆಧಾರವಾಗಿರುವ ತಾಮ್ರಪತ್ರದ ಒಕ್ಕಣಿಕೆ ಮೂ.ಮಠೇ, ಪುಟ 155 |
| 22 | A | ಶ್ರೀಜಿತಾಮಿತ್ರರ ಕಾಲ, ಕ್ರಿ.ಶ.1490-1492 | ಗು.ಚ. ಪುಟ 122 |
| | B | ಕ್ರಿ.ಶ.1490-1497 | ''ಶ್ರೀಜಿತಾಮಿತ್ರತೀರ್ಥರು'' ಪುಟ 45 |
| | C | ಕ್ರಿ.ಶ.1427-1447 | ಪ್ರಾಚೀನತಮ ದಾಖಲೆ - ಮೂ.ಮಠೇ. ಪುಟ 133 |
| 23 | A | ಶ್ರೀರಘುನಂದನರ ಕಾಲ, ಕ್ರಿ.ಶ. 1492 - 1504 | ಗು.ಚ. ಪುಟ 127. ಮೊದಲ ಮುದ್ರಣ |
| | B | ಕ್ರಿ.ಶ. 1475 - 1504 | ಮೂ.ಮಠೇ. ಪುಟ 91 |
| | C | ಕ್ರಿ.ಶ. 1447 - 1474 | ಪ್ರಾಚೀನತಮ ದಾಖಲೆ - ಮೂ.ಮಠೇ ಪುಟ 133 |
| 24 | A | ಶ್ರೀಅಕ್ಷೋಭ್ಯತೀರ್ಥರು ಯರಗೋಳದಲ್ಲಿ ವೃಂದಾವನಸ್ಥರಾದರು | ಕಲಿಯುಗ ಕಲ್ಪತರು (1985) ಪುಟ 33 |
| | B | ಶ್ರೀಅಕ್ಷೋಭ್ಯತೀರ್ಥರು ಮಳಖೇಡದಲ್ಲಿ ವೃಂದಾವನಸ್ಥರಾದರು | ಗುರುಚರಿತೆ ಪುಟ 100, ಶ್ರೀರಾಯರ ಮಠದ ಪಂಚಾಂಗ 1988-89, 1989-90, 1990-91 |

ಹೀಗೆ ತಮ್ಮಿಂದಲೇ ಪ್ರತಿಬಾರಿಯೂ ಪ್ರಕಟಗೊಂಡ ಪುಸ್ತಕಗಳಲ್ಲಿ ತಾವೇ ತಮ್ಮ ಹಿಂದಿನ ಪ್ರಕಟಣೆಗಳಿಗೆ ವಿರುದ್ಧವಾಗಿ ಯಾವ ಆಧಾರ ಕೊಡದೇ ಮನಬಂದಂತೆ ಬರೆಯುತ್ತಾ ಬಂದಿದ್ದಾರೆ. ತಾವೇ ಬರೆದ ಐತಿಹಾಸಿಕ ಘಟನೆಗಳನ್ನು ತಾವೇ ಅಲ್ಲಗಳೆಯುತ್ತಾರೆಂದ ಮೇಲೆ ಇವರು ಅವರ ಮಠದ ಇತಿಹಾಸವನ್ನೇ ಸರಿಯಾಗಿ ಅರಿಯದವರೆಂದಾಯಿತು. ಅವರೇ ಕೊಡುವ ಆಧಾರಗಳ ಮೇಲೆ ಅವರಿಗೇ ವಿಶ್ವಾಸವಿಲ್ಲದಿರುವುದು ಆಶ್ಚರ್ಯ. ಇದು ಸಾಮಾನ್ಯ ಮುಗ್ಧಜನರಿಗೆ ಮಾಡಿದ ಮೋಸವಲ್ಲವೇ? ಪ್ರಾಯಃ ಇದೆಲ್ಲಾ ರಾಮಪ್ರತಿಮೆಯ ಅಪಹರಣದ ಕಟ್ಟುಕಥೆಯನ್ನು ಹೊಂದಿಸಲು ಪಟ್ಟ ಪಾಡಾಗಿದೆ ಎಂದು ತೋರುತ್ತದೆ. ಒಂದು ನಿರ್ದಿಷ್ಟ, ನಿರ್ದುಷ್ಟ ಆಧಾರದ ಹಿನ್ನೆಲೆಯಲ್ಲಿ ವಿಷಯ ಮಂಡಿಸುವವರ (ಬರೆಯುವವರ) ಜೊತೆ ಚರ್ಚೆ ಅಥವಾ ವಾದ ಮಾಡಬಹುದೇ ವಿನಹ ಮಾತು ಮಾತಿಗೂ ತಮ್ಮ ನಿಲುವನ್ನು ಬದಲಾಯಿಸುವ ಜನರ ಜೊತೆಗಲ್ಲ.

ಶ್ರೀರಾಯರ ಮಠದಿಂದ ಅಧಿಕೃತವಾಗಿ ಪ್ರಕಟಗೊಂಡ ''ಅಜಯ್ಯ ವಿಜಯೀಂದ್ರರು'' ಎಂಬ ಪುಸ್ತಕದ ಪುಟ 3 ರಲ್ಲಿ ಕೃಷ್ಣದೇವರಾಯನ ಸಮಕ್ಷಮದಲ್ಲಿ ಶ್ರೀವ್ಯಾಸರಾಜರು, ಶ್ರೀಸುರೇಂದ್ರರು ಒಟ್ಟಿಗೆ ಸೇರಿ ಪೂಜೆ ಮಾಡುತ್ತಿರುವಾಗ ಶ್ರೀಸುರೇಂದ್ರರು ದೇವರನ್ನು ಭುಜಂಗಿಸುವ ಸಮಯದಲ್ಲಿ ಪುಳಕಿತರಾದ ಪುರಂದರದಾಸರ ಮುಖದಿಂದ ''ಇಂದಿನ ದಿನ ಸುದಿನವಾಯಿತು'' ಎಂಬ ಕೃತಿಯು ಹೊರಹೊಮ್ಮಿತು ಎಂದು ತಿಳಿಸಿದ್ದಾರೆ.

ಇದೇ ಪುಸ್ತಕದ ಪ್ರಸ್ತಾವನೆಯಲ್ಲಿ ಪುಟ 37 ರಲ್ಲಿ ಶ್ರೀಸುರೇಂದ್ರರು ವಿಜಯನಗರಕ್ಕೆ ಕ್ರಿ.ಶ.1513ರಲ್ಲಿ ಮೊದಲಬಾರಿಗೆ ಮತ್ತು 1530 ರಲ್ಲಿ ಎರಡನೆಯ ಬಾರಿಗೆ ಬಂದಿದ್ದಾರೆಂದು ನಿರ್ಣಯಿಸಿದ್ದಾರೆ. ಈ ಎರಡೂ ಪ್ರಸಂಗದಲ್ಲಿಯೂ ಪುರಂದರದಾಸರು ಈ ಕೃತಿಯನ್ನು ರಚಿಸಿದ್ದು ಕೂಡುವುದಿಲ್ಲ.

ಏಕೆಂದರೆ, ದಿ. ಡಾ|| ಬಿ.ಎನ್.ಕೆ.ಯವರ ಹಾಗೂ ಮೂ.ಮತೇ. ಲೇಖಕರ ಪ್ರಕಾರ ಶ್ರೀಪುರಂದರದಾಸರಿಗೆ ದಾಸದೀಕ್ಷೆಯಾದದ್ದು ಕ್ರಿ.ಶ. 1514 ಅಥವಾ ಕ್ರಿ.ಶ. 1524 (ಸತ್ಯಮೇವ ಜಯತೇ, ಕನ್ನಡಾನುವಾದ, ಪುಟ 55, ಮೂ.ಮತೇ ಪುಟ 87). ಪುರಂದರದಾಸರಿಗೆ 1514ರಲ್ಲಿ ದಾಸದೀಕ್ಷೆ ಯಾಗಿದೆಯೆಂದು ಸ್ವೀಕರಿಸಿದರೆ 1513ರಲ್ಲಿ ಶ್ರೀಸುರೇಂದ್ರರು ವಿಜಯನಗರಕ್ಕೆ ಭೇಟಿಕೊಟ್ಟಾಗ ದಾಸರು ಈ ಕೃತಿಯನ್ನು ರಚಿಸಿರಲು ಸಾಧ್ಯವಿಲ್ಲ. ಏಕೆಂದರೆ ದಾಸದೀಕ್ಷೆ ಸ್ವೀಕರಿಸಿರಲಿಲ್ಲ.

ಇನ್ನು 1530ರ ಎರಡನೆಯ ಭೇಟಿಯ ಸಂದರ್ಭದಲ್ಲಿ ಪುರಂದರದಾಸರು ಈ ಕೃತಿಯನ್ನು ಕೃಷ್ಣದೇವರಾಯನ ಸಮಕ್ಷಮದಲ್ಲಿ ರಚಿಸಿರಲು ಸಾಧ್ಯವಿಲ್ಲ. ಏಕೆಂದರೆ 1530ರಲ್ಲಿ ಕೃಷ್ಣದೇವರಾಯ ಇರಲೇ ಇಲ್ಲ. ಕೃಷ್ಣದೇವರಾಯನ ನಿರ್ಯಾಣ ಕ್ರಿ.ಶ. 1529 ನವೆಂಬರ್ ಎಂಬುದಾಗಿ ಸರ್ಕಾರದ ಗೆಜೆಟಿಯರ್ ವಿಜಯನಗರಚರಿತ್ರೆಯ ಭಾಗದಲ್ಲಿದೆ. ಆದ್ದರಿಂದ ಪುರಂದರದಾಸರು ಈ ಕೃತಿಯನ್ನು ರಚಿಸಿದರೆಂದು ತಿಳಿಯಲು ಬರುವುದಿಲ್ಲ.

**ವಾಚಕರೇ!...** ಇದಕ್ಕೋಸ್ಕರವಾಗಿಯೇ ಪ್ರತಿಬಾರಿಯೂ ಇವರು ಪ್ರಕಟಿಸುವ ಅಪ್ರಾಮಾಣಿಕ ಹೇಳಿಕೆಗಳಿಂದ ಕೂಡಿದ ಪುಸ್ತಕಗಳಿಗೆ ಉತ್ತರಿಸದೇ ಸುಮ್ಮನಿರುವುದೇ ಲೇಸೆಂದೆನಿಸುತ್ತದೆ. ಆದರೂ ಕೆಲವೊಮ್ಮೆ ಅನಿವಾರ್ಯವೆಂದಿನಿಸುತ್ತದೆ.

### ''ಗುರುಚರಿತೆ'' (1949) ಮೂಲ ಕನ್ನಡ ಕೃತಿಗೂ ಇಂಗ್ಲೀಷ್ ಅನುವಾದಕ್ಕೂ (2007) ಇರುವ ವ್ಯಾಹತಿಗಳು ಮತ್ತು ವ್ಯತ್ಯಾಸಗಳು

**(ಗುರುಚರಿತೆ ಪುಸ್ತಕವನ್ನು ಬರೆದ ಹೆಚ್. ಕೆ. ವೇದವ್ಯಾಸಾಚಾರ್ಯರು ಕಾಲವಾದದ್ದು 1953)**

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ದಕ್ಷಿಣ ದೇಶದಲ್ಲೆಲ್ಲ ಸಂಚರಿಸಿ ಟೀಕಾಕೃತ್ಪಾದರು ತಮ್ಮ ಗುರುಗಳು ಬೃಂದಾವನಸ್ಥರಾದ ಮಳಖೇಡಾಕ್ಕೆ ಹೋಗಿ ಅಲ್ಲಿ 1388ನೇ ವಿಭವ ಆಷಾಢ ಕೃಷ್ಣ ಪಂಚಮಿಯ ದಿನ ಹರಿಧ್ಯಾನ ಪರವಶರಾದರು. -ಪುಟ 106 | Touring all over south, he reached the Brindavan of his guru on the fifth day of Ashadha Krishna in Vibhava Samvatsara in AD 1388, attained the lotus feet of Sri Hari. –page No. 67 |

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ತಮ್ಮಲ್ಲಿದ್ದ ವಿದ್ಯೆಗಿಂತ ಲಕ್ಷ್ಮೀನಾರಾಯಣ ಯೋಗಿಗಳಲ್ಲಿದ್ದ ಉತ್ತಮ ಪಾಂಡಿತ್ಯವನ್ನು ನೋಡಿದ ರಘುನಾಥತೀರ್ಥರು, ತಾವು ಶ್ರೀಪಾದಂಗಳವರಾದರೆ ಅವರು ಶ್ರೀಪಾದರಾಜರೆಂದು ಸ್ತುತಿಸಿದರು. - ಪುಟ 118 | In view of great scholarship of Lakshminarayana Yogi which Raghunathatheertha looked upon as superior to his own, Raghunathatheertha declared in praise 'If I am a Sreepada, he is a Sreepadaraja". page No. 75<br>ಈ ರೀತಿಯಾಗಿ ಉಲ್ಲೇಖಿಸಿ ಮೂಲ ಕನ್ನಡ ಪುಸ್ತಕದಲ್ಲಿ ಇಲ್ಲದೇ ಇರುವ ಅಡಿಟಿಪ್ಪಣಿಯನ್ನು ಹೊಸದಾಗಿ ಸೇರಿಸಿದ್ದಾರೆ.<br>"There are clear proofs that in the seminar of Scholars held under the presidentship of Sri Vibhudendra theertha, Sri Lakshminarayanayogi was conferred the title of 'Sripadaraja" as desired by all saints and scholars. |

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ಮೂಲ ಕನ್ನಡ ಪುಸ್ತಕದಲ್ಲಿ ಈ ಮಾತು ಇಲ್ಲ. | After being bestowed ashrama, Vibudendratheertha himself was performing Mahasamsthanapooja." (page no. 71 and 72) |

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ಮೂಲ ಕನ್ನಡ ಪುಸ್ತಕದಲ್ಲಿ ಈ ಮಾತು ಇಲ್ಲ. | Heaving a sign of relief about repossessing idol of Moola Rama "This is the day of great fulfilment and relief for me". –Page 82 |

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ತಮಗೆ (ಶ್ರೀವಿಬುಧೇಂದ್ರತೀರ್ಥರಿಗೆ) ಮೂಲರಾಮರ ಪೂಜೆ ಮಾಡುವ ಸುಯೋಗವಿಲ್ಲೆಂದು ಅವರು ದುಃಖಪಟ್ಟರು. -ಪುಟ 116 | ಮೂಲ ಕನ್ನಡ ಪುಸ್ತಕದಲ್ಲಿರುವ ಈ ಮಾತು ಇಂಗ್ಲೀಷ್ ಭಾಷಾಂತರದಲ್ಲಿ ಇಲ್ಲ. |

| ಗುರುಚರಿತೆ, ಕನ್ನಡ | ಗುರುಚರಿತೆ, ಇಂಗ್ಲಿಷ್ ಅನುವಾದ |
|---|---|
| ಶ್ರೀನಿವಾಸಾಚಾರ್ಯರು ಶ್ರೀಗಳವರಿಗೆ (ಶ್ರೀರಾಘವೇಂದ್ರಸ್ವಾಮಿಗಳಿಗೆ) ಸಾಷ್ಟಾಂಗವೆರಗಿ ತಮ್ಮ ಗ್ರಂಥಗಳನ್ನು ನೋಡಿ ಅನುಗ್ರಹಿಸಿ ಮಾನ್ಯ ಮಾಡಬೇಕೆಂದು ಕೇಳಿಕೊಂಡರು. ಸ್ವಾಮಿಗಳು ಆ ಗ್ರಂಥಗಳನ್ನೆಲ್ಲ ಆ ಮೂಲಾಗ್ರ ನೋಡಿ ''ಇದು ಸಿದ್ಧಾಂತಕ್ಕೆ ತಕ್ಕಂತೆ ಅವಿರುದ್ಧವಾಗಿದೆ, ಮಂದೋಪಕಾರಕವಾಗಿದೆ. ನೀವು ಗೃಹಸ್ಥಾಶ್ರಮಿಗಳಾದರೂ ಆನಂದತೀರ್ಥರ ಸತ್ತೀರ್ಥಗಳಲ್ಲಿ ಮಗ್ನರಾಗಿರುವುದರಿಂದ ''ಶ್ರೀನಿವಾಸತೀರ್ಥ'' ರೇ ಆಗಿದ್ದೀರಿ ಎಂದು ಪ್ರಶಂಸೆ ಮಾಡಿದರು. -ಪುಟ 285 | Sri Yadavarya had advised Srinivasacharya to place his literary works before the Swamiji for his perusal and blessings. In compliance with his elder brother's order, Srinivasacharya prostrated before the Swamiji and placed his books pleading him to vet them. The Swamiji examined the books and appreciated Srinivasacharya saying "this is in conformity with the doctrine and greatly helpful. You really are noble to be so dedicated yourself to the works of Anandatheertha especially amidst your family life". –page no. 184 & 185 |
| ಶ್ರೀನಿವಾಸತೀರ್ಥರು : ಇಲ್ಲಿ ಶ್ರೀಗಳವರು (ಶ್ರೀರಾಘವೇಂದ್ರ ಸ್ವಾಮಿಗಳು) ನನ್ನ ಊಹೆಗೂ ಮೀರಿ ಅನುಗ್ರಹಿಸಿದರು. ಜೊತೆಗೆ ನನ್ನನ್ನು ಬಹಳ ಕೃಪೆಯಿಂದ ''ತೀರ್ಥ'' ಎಂದು ಸಂಬೋಧಿಸಿದರು. -ಪುಟ 286 | Srin : No. The Swamiji blessed me beyond my imagination. In addition, he so kindly honoured me. –page no. 185<br>ಈ ಸಂದರ್ಭದಲ್ಲಿ ಮೂಲ (ಕನ್ನಡ)ದ ಗುರುಚರಿತೆಯಲ್ಲಿ ಕೃತಿಕಾರರು ''ಶ್ರೀನಿವಾಸತೀರ್ಥ'' ಎಂಬ ಪದವನ್ನು **13** ಸಲ ಪ್ರಯೋಗಿಸಿದ್ದಾರೆ. ಆದರೆ ಅನುವಾದಿತ (ಇಂಗ್ಲೀಷ್) ಗುರುಚರಿತೆಯಲ್ಲಿ ಆ ರೀತಿಯಾಗಿ ಭಾಷಾಂತರವನ್ನು ಮಾಡದಯೇ ಉದ್ದೇಶವಾಗಿ ''ಶ್ರೀನಿವಾಸತೀರ್ಥ'' ಎಂಬ ಪದವನ್ನು ಮುಖ್ಯಸ್ಥಳಗಳಲ್ಲಿ ಕೈ ಬಿಡಲಾಗಿದೆ. |

| | |
|---|---|
| ಅಂದು ಸೌಮ್ಯಸಂವತ್ಸರದ ಜ್ಯೇಷ್ಠ ಶು।। ಪೂರ್ಣಿಮಾ ಶ್ರೀಗಳವರು (ಶ್ರೀ ರಾಘವೇಂದ್ರಸ್ವಾಮಿಗಳು) ಶಿಷ್ಯರೊಂದಿಗೆ ವೇದಾಂತ ವಿಚಾರಮಾಡುತ್ತಾ ಕುಳಿತಿದ್ದರು. ಅಷ್ಟರಲ್ಲಿಯೇ ಎದ್ದುನಿಂತು ಆಕಾಶದ ಕಡೆಗೆ ನೋಡಿ ಸ್ತೋತ್ರಮಾಡಿದರು. ಶಿಷ್ಯರಿಗೆ ಒಂದೂ ಅರ್ಥವಾಗಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಸರಿ ಎಂದು ಹೇಳಿ ಮತ್ತೊಮ್ಮೆ ಸ್ತೋತ್ರ ಮಾಡಿ ಕುಳಿತುಕೊಂಡರು. ಶಿಷ್ಯರು ಕುತೂಹಲದಿಂದ ಇದೇನೆಂದು ಕೇಳಿದರು. ಅದಕ್ಕೆ ಶ್ರೀಗಳವರು ಹೇಳಿದರು :- ಕೃಷ್ಣದ್ವೈಪಾಯನರು ವಿಮಾನಾರೂಢರಾಗಿ ಈ ಲೋಕವನ್ನು ಬಿಟ್ಟು ಹೋಗುತ್ತಿದ್ದರು. ನಮ್ಮನ್ನು ನೋಡಿ ಅಂತರಿಕ್ಷದಲ್ಲೇ ಅಭಿನಂದಿಸಿದರು. ನಾವೂ ಪ್ರತ್ಯಭಿವಾದನ ಮಾಡಿ ನಮ್ಮದಿನ್ನೆಷ್ಟು ಕಾಲವಿದೆಯೆಂದು ಕೇಳಿದೆವು. ಅವರು ಮೂರು ಬಾರಿ ಬೆರಳೆರಡನ್ನು ತೋರಿಸಿ ಇನ್ನು ಎರಡು ವರ್ಷ ಎರಡು ತಿಂಗಳು ಎರಡು ದಿನಗಳಿವೆಯೆಂದು ತಿಳಿಸಿದರು ಅಷ್ಟೆ ಎಂದರು. -ಪುಟ 299 ಮತ್ತು 300 | The Swamiji had sat discussing Vedanta with his disciples on the day of pournima of Jyestha Suddha in Soumya Samvatsara. Suddenly getting up, he looked at the sky and offered his reverence with his hands elapsed. As it became incomprehensible, the disciples curiosly enquired what it was all about. In reply, said the Swamiji ""Krishnadwipayana was departing from his world in a Vimana. On seeing me, he paid his respect from the space. I too reciprocated. While offering me reverence once again, he asked me whether it was certain that I would reach the abode of Lord Sri Hari after a period of two years, two months and two days. I nodded my head to say yes. That is all". –page no. 194 |
| ಸಂಚಾರತ್ವೇನ ಬಂದ ವಿದ್ಯಾನಿಧಿಗಳು ಆ ಗ್ರಾಮಸ್ಥರಲ್ಲಿ ತಮ್ಮ ತೀವ್ರ ಆಕಾಂಕ್ಷೆಯನ್ನು ಹೇಳಿಕೊಂಡು ಅವರಿಂದ ಗ್ರಾಮಪ್ರಮುಖರ ಮನವೊಲಿಸಿ ಕೆಲಕಾಲ ಪೂಜೆಗೆಂದು ಆ ಮೂಲಸೀತಾರಾಮ ಪ್ರತಿಮೆಗಳನ್ನು ತೆಗೆದುಕೊಂಡು ಪೂಜಿಸಿದರು. | Vidyanidhi who came later on his tour, revealing his eagerness to some villagers got those prominent villagers persuaded with their help and took possession of the idols of MoolaSeethaRama under the pretext of worshipping them for sometime.<br>Note : 'Pretext- meaning of this word according to Webster's Dictionary : False reason, motive put forth to hide the reasons. |

| | |
|---|---|
| ರಾಮಚಂದ್ರತೀರ್ಥರು ಕಾಲವಾಗುವಾಗ ಅವರ ಪರಿವಾರದಲ್ಲಿದ್ದ ಅರವತ್ತುಮೂರುಜನ ನೌಕರರನ್ನು ಆಶ್ರಯಿಸಿ..... | Therefore. vidyanidhi conspired with sixty three employees who were part of the entourage of Ramachandratheertha.<br>Note : The word 'conspiracy' according to the same dictionary means 'acting secretly for unlawful purpose such as murder or treason.'<br>'conspiracy' ಪದಕ್ಕೆ ಅರ್ಥವನ್ನು ಕೊಡುವ ಶಬ್ದ ಮೂಲ ಕನ್ನಡ ಪುಸ್ತಕದಲ್ಲಿ ಇರುವುದಿಲ್ಲ |

ಇದೇ ರೀತಿಯಾದ ಇನ್ನೂ ಅನೇಕ ವ್ಯತ್ಯಾಸಗಳು ವಿರೋಧಗಳು ಇವೆ. ಕೆಲವನ್ನು ಮಾತ್ರ ನಿದರ್ಶನಕ್ಕೆ ಇಲ್ಲಿ ನೀಡಲಾಗಿದೆ.

**ವಾಚಕರೇ!...** ನಾವು ಈ ಪುಸ್ತಕದಲ್ಲಿ ಹಲವು ಕಡೆ ತೋರಿಸಿದಂತೆ, ರಾಯರಮಠದವರೂ ಕೂಡ ಉತ್ತರಾದಿಮಠದ ಕೆಲವು ಶಿಷ್ಯರು ಬರೆದ ಪುಸ್ತಕಗಳಲ್ಲಿ ಹಾಗು ಕೆಲವು ಕಾವ್ಯಗಳಲ್ಲಿ ಇರುವ ಒಂದೆರಡು ಕಥೆಗಳ ಮತ್ತು ಅವುಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ಕೆಲವು ಕಾಲಮಾನಗಳ ವಿರೋಧಗಳನ್ನು ತೋರಿಸುವ ಪ್ರಯತ್ನವನ್ನು ಮಾಡುವುದು ನಿಶ್ಚಿತ. ಈಗಾಗಲೇ, ಆ ತರಹದ ಕೆಲವು ವಿರೋಧಗಳನ್ನು 'ಸತ್ಯಮೇವ ಜಯತೇ' ಮೊದಲಾದವುಗಳಲ್ಲಿ ತೋರಿಸಿದ್ದಾರೆ. ಆದರೆ, ಆ ವಿರೋಧಗಳು ಪ್ರಧಾನ ವಿಷಯಗಳ ಬಗ್ಗೆ ಇಲ್ಲ ಎಂಬುದು ಗಮನಾರ್ಹ. ನಾವು ಈ ಕೃತಿಯಲ್ಲಿ ರಾಯರಮಠದವರೇ ಹೇಳಿಕೊಳ್ಳುವಂತೆ ''ಎಲ್ಲ ಶಾಸನ, ದಾಖಲೆ ಇತ್ಯಾದಿಗಳನ್ನು ವಿಮರ್ಶಿಸಿ ನಿರ್ಣಯಾತ್ಮಕವಾಗಿ ಬರೆಯಲ್ಪಟ್ಟ'' ಅವರ ಅಧಿಕೃತ ಕೃತಿಗಳಲ್ಲಿಯೇ ಅತ್ಯಂತ ಪ್ರಧಾನವಾದ ವಿಷಯದ (ಮೂಲರಾಮಪ್ರತಿಮೆಯ ಅಪಹರಣ, ಶ್ರೀರಘುನಂದನರ ಕಾಲ ಇತ್ಯಾದಿ)ಕುರಿತಾಗಿ ಇರುವ ಪರಸ್ಪರ ವಿರೋಧಗಳನ್ನು ತೋರಿಸಿದ್ದೇವೆ ಎಂಬುದು ಅತ್ಯಂತ ಗಮನಾರ್ಹ. ಈ ಕಾಲಮಾನದ ವಿರೋಧಗಳು, ಪರಸ್ಪರ ವಿರುದ್ಧಹೇಳಿಕೆಗಳು ಇತರ ಎಲ್ಲ ಪ್ರಬಲ ಆಧಾರಗಳ ಹಿನ್ನೆಲೆಯಲ್ಲಿ ಮಾತ್ರ ವಸ್ತುವಿನ ಘಟನೆಯ ವಾಸ್ತವಿಕತೆಯನ್ನು ಅಲ್ಲಗಳೆಯುವುದರಲ್ಲಿ ಸಮರ್ಥವಾಗುತ್ತವೆ. ಆದ್ದರಿಂದಲೇ ನಾವು ಮೊದಲು ಎಲ್ಲ ಪ್ರಬಲ ಆಧಾರಗಳನ್ನು ವಿಮರ್ಶಿಸಿ ನಂತರ ಈ ವಿರೋಧಗಳನ್ನು ತೋರಿಸಿದ್ದೇವೆ. ಕಾರಣ, ರಾಯರಮಠದವರಾಗಲೀ, ಇತರ ಯಾವ ವಿಮರ್ಶಕರೇ ಆಗಲೀ ಇತರ ಪ್ರಬಲ ಆಧಾರಗಳನ್ನು ಕೊಡದೆ ಉತ್ತರಾದಿಮಠದ ಪುಸ್ತಕದಲ್ಲಿರುವ ಕೇವಲ ಕಾಲಮಾನಗಳ ವಿರೋಧವನ್ನು ತೋರಿಸಿದ ಮಾತ್ರಕ್ಕೆ ಏನನ್ನೂ ಸಾಧಿಸಿದಂತಾಗುವುದಿಲ್ಲ. ಅಲ್ಲದೇ, ಉತ್ತರಾದಿಮಠದ ವೈರುದ್ಧ್ಯಗಳನ್ನು ತೋರಿಸಿದ ಮಾತ್ರಕ್ಕೆ ನಾವು ತೋರಿಸಿರುವ ಈ ಪ್ರಬಲ ವಿರೋಧಗಳನ್ನು ಪರಿಹಾರಮಾಡಿಕೊಂಡಂತೂ ಆಗುವುದಿಲ್ಲ. ಹೀಗಾಗಿ ರಾಯರಮಠದವರು ಇದೇ ರೀತಿಯಾದ ವಿರೋಧಾಭಾಸಗಳನ್ನು ಉತ್ತರಾದಿಮಠದವರ ಕುರಿತಾಗಿ ತೋರಿಸಲು ಮಹಾಪ್ರಯತ್ನ ಮಾಡುವ ಬದಲು ರಾಯರ ಮಠದ ಅಧಿಕೃತ ಪುಸ್ತಕಗಳಲ್ಲಿ ಪ್ರಕಟವಾಗಿರುವ ಕಾಲಮಾನಗಳ ವಿರೋಧಗಳ ಕುರಿತಾಗಿ ಚಿಂತನೆ, ಸಂಶೋಧನೆ ಮಾಡುವುದು ಒಳಿತು.

ಉತ್ತರಾದಿಮಠದ ಪುಸ್ತಕಗಳಲ್ಲಿ ಮೇಲ್ಕಂಡ ಕಾಲವನ್ನು ಆಧಾರವಾಗಿಟ್ಟುಕೊಂಡು ಪ್ರತಿಮಾ ವರ್ಗಾವಣೆಯ ಬಗ್ಗೆ ಏನನ್ನೂ ಸಾಧಿಸಿರುವುದಿಲ್ಲ.

* * * *

# ಕಾಲನಿರ್ಣಯದ ಚಕ್ರವ್ಯೂಹ

ಅನೇಕ ಐತಿಹಾಸಿಕ ಕಾವ್ಯಗಳಲ್ಲಿ ಪರಸ್ಪರವಾಗಿ ಕೆಲವು ಕಾಲವ್ಯತ್ಯಾಸಗಳು ತೋರುವುದು ಸಹಜ. ಅದಕ್ಕೆ ಕಾರಣಗಳು ಅನೇಕ ಇರಬಹುದು. ಆದರೆ ಅವುಗಳಲ್ಲಿ ಪ್ರಧಾನವಾದ ಐತಿಹಾಸಿಕ ಘಟನೆಗಳು ವ್ಯತ್ಯಾಸವಾಗುವುದಿಲ್ಲ.

ಶ್ರೀರಾಯರ ಮಠದ ಎಲ್ಲ ಐತಿಹಾಸಿಕ ದಾಖಲೆಗಳಲ್ಲಿ ಹೇಗೆ ಪರಸ್ಪರ ವಿರೋಧಗಳಿರುವವು ಮತ್ತು ಅವರೇ ಅಧಿಕೃತವಾಗಿ ಪ್ರಕಟಿಸಿರುವ ಪುಸ್ತಕಗಳಲ್ಲಿನ ಅವರ ಮಠದ ಪೀಠಸ್ಥರ ಕಾಲಮಾನಗಳ ಪ್ರಕಾರ ಶ್ರೀರಘುನಂದನತೀರ್ಥರ ಕಾಲದಲ್ಲಿ ಉತ್ತರಾದಿಮಠದಿಂದ ಶ್ರೀಮೂಲರಾಮಪ್ರತಿಮೆ ಅಪಹರಣವಾಗಿಲ್ಲ ಎಂದು ಹೇಗೆ ಧೃಢವಾಗುತ್ತದೆ ಎಂಬುದನ್ನು ಈ ಪ್ರಕರಣದಲ್ಲಿ ನೋಡೋಣ-

ಎಲ್ಲ ಮಠದ ಪರಂಪರೆಗಳಲ್ಲಿ (ಗ್ರಂಥಗಳಲ್ಲಿ ಅಥವಾ ಶಾಸನಗಳಲ್ಲಿ) ಹಿಂದಿನಿಂದಲೂ ಪೀಠಾಧಿಪತಿಗಳ ಆಧಿಪತ್ಯ ಹಾಗೂ ನಿರ್ಯಾಣಕಾಲವನ್ನು ಹಿಂದೂಸಂವತ್ಸರ, ತಿಥಿ ಅಥವಾ ಶಾಲಿವಾಹನ ಶಕೆಯನ್ನು ನಮೂದಿಸಿ ದಾಖಲಿಸಲಾಗಿರುತ್ತದೆ. ಹಿಂದೂ ಸಂವತ್ಸರಗಳನ್ನು ತಿಳಿಸುವಾಗ ಕೆಲವೆಡೆ ಶಾಲಿವಾಹನ ಶಕೆಯ ಅಂಕಿ ಅಂಶಗಳ ಸಂಖ್ಯೆಗಳನ್ನು ಕಾಣಿಸಿರುತ್ತಾರೆ.

ಶ್ರೀರಾಯರ ಮಠದ ಪರಂಪರೆಯ ಯತಿಗಳ ಕುರಿತಾಗಿ ವಿವರಿಸುವ ''ಗುರುಚರಿತೆ'' ಎಂಬ ಕೃತಿ 1949 ರಲ್ಲಿ ಪ್ರಕಾಶಿತವಾಗಿದೆ. ಬಹುಶಃ ಇದು ರಾಯರಮಠದಿಂದ ಪ್ರಕಾಶಿತವಾದ ಮೊಟ್ಟ ಮೊದಲ ಅಧಿಕೃತವಾದ ಐತಿಹಾಸಿಕ ಕೃತಿ. ಇದರ ಲೇಖಕರು ದಿ. ಶ್ರೀ ಹೆಚ್.ಕೆ ವೇದವ್ಯಾಸಾಚಾರ್ಯರು.

ಈ ಪುಸ್ತಕದಲ್ಲಿರುವ ಅಂಕಿ, ಅಂಶ, ದೇಶ-ಕಾಲಾದಿಗಳು ಶ್ರೀರಾಯರ ಮಠದ ಅನೇಕ ತಾಮ್ರಶಾಸನ, ಶಿಲಾಶಾಸನ, ಹಸ್ತಪ್ರತಿ, ಪ್ರಾಚೀನ ದಾಖಲೆಗಳನ್ನು ಪರಿಶೀಲಿಸಿ ಪರಸ್ಪರವಿರೋಧಗಳನ್ನು ಪರಿಹರಿಸಿಕೊಂಡು ಅಂದಿನ ಪೀಠಾಧಿಪತಿಗಳ ಆಜ್ಞೆಯ ಮೇರೆಗೆ ಅಧಿಕೃತವಾಗಿ ಬರೆಯಲ್ಪಟ್ಟಿದೆ ಎಂದು ಅವರೇ ಹೇಳಿಕೊಂಡಿದ್ದಾರೆ.

**(ಗುರುಚರಿತೆ -1949, ಮೊದಲಮಾತು, ಪುಟ ix, xರಲ್ಲಿ - ''ಇದರಲ್ಲಿ ಉಲ್ಲೇಖಿಸಿರುವ ಕಾಲಮಾನವನ್ನು ಮಠದ ಪೀಳಿಗೆ, ತಾಮ್ರಶಾಸನಗಳು ಮತ್ತು ಮೂಲಗ್ರಂಥಗಳ ಆಧಾರವನ್ನೆಲ್ಲಾ ಸಮನ್ವಯ ಮಾಡಿ ಉದಾಹರಿಸಲಾಗಿದೆ'' ಎಂದಿದೆ. ಮತ್ತು ಈ ಪುಸ್ತಕಕ್ಕೆ ಅಂದಿನ ಪೀಠಾಧಿಪತಿಗಳಾಗಿದ್ದ ಶ್ರೀಸುಯಮೀಂದ್ರತೀರ್ಥ ಶ್ರೀಪಾದಂಗಳವರು ತಮ್ಮ ಅನುಗ್ರಹಸಂದೇಶವನ್ನೂ ನೀಡಿದ್ದಾರೆ. ಅದರಲ್ಲಿ ''...ತರುವಾಯ ಶ್ರೀಮಠದಲ್ಲಿನ ಶಾಸನಗಳು, ಕಾಗದಪತ್ರಗಳು, ಮೂಲಪ್ರಮಾಣಗ್ರಂಥಗಳ ಆಧಾರದಿಂದ ನಮ್ಮ ಸಂಸ್ಥಾನದ ಇತಿಹಾಸವನ್ನು ಮತ್ತು ಗುರುಸಾರ್ವಭೌಮರ ದಿವ್ಯಚರಿತ್ರೆಯನ್ನು ಪ್ರಾಮಾಣಿಕವಾಗಿ ಬರೆಯಬೇಕೆಂದು ನಾವು ಆಜ್ಞಾಪಿಸಿದ ಪ್ರಕಾರ ನೀವು ''ಗುರುಚರಿತೆ'' ಎಂಬ ಗ್ರಂಥವನ್ನು ರಚಿಸಿ ನಮ್ಮ ಮುಂದೆ ಓದಿದ್ದನ್ನು ಕೇಳಿ ಬಹಳ ಸಂತೋಷವಾಯಿತು. ಗುರುರಾಜರ ಭಕ್ತರಾದ ನಿಮ್ಮಿಂದ ವಿರಚಿತವಾದ ಈ ಗ್ರಂಥವು ಬಹುಪ್ರಮಾಣಗರ್ಭಿತವೂ, ಪರಂಪರಾಕ್ರಮಕ್ಕೆ ಅನುಸರಿಸಿಯೂ, ಪ್ರಾಜ್ಞಸಮ್ಮತವೂ, ಮನರಂಜಕವೂ ಆಗಿದೆ'' ಎಂದು ಅಪ್ಪಣೆ ಕೊಡಿಸಿದ್ದಾರೆ.)**

''ಗುರುಚರಿತೆ''ಯಲ್ಲಿ ದಾಖಲಿಸಿರುವ ಶ್ರೀರಾಯರ ಮಠದ ಕೆಲ ಪೀಠಾಧಿಪತಿಗಳ ಕಾಲಮಾನದ ಬಗ್ಗೆ ದಿ. ಬಿ.ಎನ್.ಕೆ. ಅವರು ಆಕ್ಷೇಪ ಎತ್ತಿದಾಗ, ಶ್ರೀರಾಯರ ಮಠದ ಅಧಿಕೃತ ಲೇಖಕರಾದ, ಸಂಶೋಧಕರಾದ

ದಿ. ಶ್ರೀರಾಜಾ.ಎಸ್ ಗುರುರಾಜಾಚಾರ್ಯರು ಹಾಗೂ ಶ್ರೀ ಆರ್.ಎಸ್ ಪಂಚಮುಖಿಯವರು ''ಅಜಯ್ಯವಿಜಯೀಂದ್ರರು'' ಎಂಬ ಪುಸ್ತಕದ ಪ್ರಸ್ತಾವನೆಯಲ್ಲಿ ಬಿ.ಎನ್.ಕೆ. ರವರ ನಿಲುವನ್ನು ಅಲ್ಲಗಳೆದು ''ಗುರುಚರಿತೆ''ಯೇ ಅಧಿಕೃತ, ಅದರಲ್ಲಿನ ಅಂಕಿ-ಅಂಶಗಳು ಕಾಲಮಾನಗಳು ಸರಿಯಾಗಿವೆ ಎಂದು ಸಮರ್ಥಿಸಿಕೊಂಡಿದ್ದಾರೆ.

**(ಅಜಯ್ಯವಿಜಯೀಂದ್ರರು-1987. ಪ್ರಸ್ತಾವನೆ, ಪುಟ 33, 34 - ''ಶ್ರೀಮಠದ ಇತಿಹಾಸ, ಗುರುಪರಂಪರೆಯನ್ನು ಬರೆಸುವಾಗ ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾಗಿದ್ದ ಪೂಜ್ಯ ಕೀರ್ತಿಶೇಷ ಶ್ರೀಸುಯಮೀಂದ್ರತೀರ್ಥರು ಶ್ರೀಮಠದ ಮೂಲ ಗುರುಪೀಳಿಗೆ, ಕಾಗದಪತ್ರಗಳು, ತಾಮ್ರಶಾಸನಗಳು, ಇತರ ಪ್ರಮಾಣಗ್ರಂಥಗಳನ್ನು ಸಾವಧಾನವಾಗಿ ಪರಿಶೀಲಿಸಿ ಇತಿಹಾಸಸಂಶೋಧಕ ಪಂಡಿತರಿಂದ ವಿಮರ್ಶಿಸಿ ಪ್ರಮಾಣಗಳಿಗೆ ಅನುಗುಣವಾಗಿ ಶ್ರೀಮಠದ ಅಧಿಕೃತ ಗುರುಪರಂಪರಾ ಚರಿತೆಯಾದ ''ಗುರುಚರಿತೆ''ಯನ್ನು ಬರೆಸಿದ್ದಾರೆ. ಅಲ್ಲಿ ನಿರೂಪಿಸಿರುವ ಕಾಲ-ದೇಶಗಳು ಅಧಿಕೃತವಾಗಿವೆ. ಆದುದರಿಂದ ಡಾ|| ಶರ್ಮರ ನಿರ್ಣಯವನ್ನು ಒಪ್ಪಿದಲ್ಲಿ ಅದಕ್ಕೆ ವಿರೋಧ ಬರುತ್ತದೆ.''....**

**''ಪರಂಪರೆಯ ಮಹತ್ವದ್ಯೋತಕ ಪ್ರಮಾಣಗಳನ್ನು ಸಾಧಾರವಾಗಿ ಎತ್ತಿ ಹಿಡಿಯಬೇಕಾದದ್ದು ಅವಶ್ಯಕರ್ತವ್ಯವಾದುದರಿಂದಲೂ ಅನೇಕಪ್ರಮಾಣಗಳ ಆಧಾರದಿಂದ ಬರೆದಿರುವ ''ಗುರುಚರಿತೆ''ಕಾರರ ನಿರ್ಣಯವನ್ನು ನಾವಿಲ್ಲಿ ಸಮರ್ಥಿಸಿದ್ದೇವೆ'')**

ಈ ಎಲ್ಲ ಹಿನ್ನೆಲೆಯಲ್ಲಿ ನೋಡಿದಾಗ ''ಗುರುಚರಿತೆ'' ಎಂಬ ಕೃತಿ ರಾಯರ ಮಠದ ಇತಿಹಾಸ ಹಾಗೂ ಪರಂಪರೆಯ ಕುರಿತಾಗಿ ತಿಳಿಸಿ ಕೊಡುವ ಅತ್ಯಂತ ಅಧಿಕೃತವಾದ ಕೃತಿ ಎಂಬುದಾಗಿ ತಿಳಿದು ಬರುತ್ತದೆ.

ಅಧಿಕೃತವಾದ ಗುರುಚರಿತೆ ಎಂಬ ಕೃತಿಯಲ್ಲಿ ನಿರ್ಣಯಿಸಲಾಗಿದೆ ಎಂದು ಹೇಳಲಾದ ಕಾಲಮಾನಗಳಿಗೂ ಹಾಗೂ ರಾಯರಮಠದ ಇತರ ಐತಿಹಾಸಿಕದಾಖಲೆಗಳಿಗೂ ಮತ್ತು ಬೇರೆ ಬೇರೆ ಕೃತಿಗಳಲ್ಲಿ ಹೇಳಲಾದ ಕಾಲಮಾನಗಳಿಗೂ ಹೇಗೆ ಪರಸ್ಪರ ವಿರೋಧಗಳುಂಟು ಎಂಬುದನ್ನು ಸ್ವಲ್ಪ ವಿಮರ್ಶಿಸೋಣ. ಸಮಗ್ರ ಗ್ರಂಥದ ವಿಮರ್ಶೆ ಇಲ್ಲಿ ಅಪ್ರಸ್ತುತ. ಮೂಲರಾಮನ ಪ್ರತಿಮೆಯ ಅಪಹರಣದ ಸುತ್ತಮುತ್ತಲಿನ, ಹಿಂದುಮುಂದಿನ ಕಾಲಮಾನಗಳನ್ನು ಮಾತ್ರ ವಿಮರ್ಶೆಗೆ ಒಳಪಡಿಸಿದ್ದೇವೆ.

ಕ್ರಿ.ಶ.2009ರಲ್ಲಿ ಶ್ರೀರಾಯರ ಮಠದಿಂದ ಪ್ರಕಟಗೊಂಡ ''ಮೂ.ಮಠೇ'' ಪುಸ್ತಕದಲ್ಲಿ; ಉತ್ತರಾದಿಮಠದಿಂದ ಶ್ರೀಮೂಲರಾಮನ ಅಪಹರಣವಾದ ಕಾಲ ಹಾಗೂ ಆಗ ವಿರಾಜಮಾನರಾಗಿದ್ದ ಪೀಠಾಧೀಶರ ಹೆಸರನ್ನು ಛಾಪಿಸಿದ್ದಾರೆ. ಪುಟ viii, xi ರಲ್ಲಿ ಮೂಲರಾಮನ ಪ್ರತಿಮೆ ಕಳುವಾದದ್ದು ಕ್ರಿ.ಶ. 1493ರಲ್ಲಿ ಎಂದೂ, ಪುಟ 16ರಲ್ಲಿ ಆನಂದನಾಮಸಂವತ್ಸರದ ಕಾರ್ತಿಕ ಶುದ್ಧ ದ್ವಾದಶೀ ಪ್ರಾತಃಕಾಲದಲ್ಲಿ ಎಂದೂ, ಪುಟ 126 ರಲ್ಲಿ ಆಗ ಪೀಠಾಧೀಶರಾಗಿದ್ದವರು ಶ್ರೀರಘುನಾಥ ತೀರ್ಥರು (1444-1493) ಎಂಬುದಾಗಿಯೂ ಬರೆಯಲಾಗಿದೆ.

ಹಿಂದೆ ಹೇಳಿದಂತೆ ಶ್ರೀರಾಯರ ಮಠದ ಎಲ್ಲ ಪ್ರಾಚೀನದಾಖಲೆಗಳ ಹಿನ್ನೆಲೆಯಲ್ಲಿ ಅಧಿಕೃತವಾಗಿ ಪೀಠಾಧಿಪತಿಗಳಿಂದ ಅನುಮೋದಿತವಾಗಿ ಹೊರಬಂದ ಕೃತಿ ಗುರುಚರಿತೆ (ಕ್ರಿ.ಶ.1949).

**ಇದರಲ್ಲಿ ಹಿಂದಿನ ಕೆಲ ಪೀಠಾಧಿಪತಿಗಳ ಚರಿತ್ರೆಯನ್ನು ಬರೆಯುವಾಗ ಆರಂಭದಲ್ಲಿ ಕಾಲಮಾನಗಳನ್ನು ಹೀಗೆ ನಮೂದಿಸಲಾಗಿದೆ.**

| ಯತಿಗಳು | ಕಾಲ |
|---|---|
| ಶ್ರೀರಾಮಚಂದ್ರತೀರ್ಥರು | **1406 ನೆಯ ಸರ್ವಜಿತ್‌ನಿಂದ ಕ್ರಿ.ಶ. 1435 ನೆಯ ನಳದ ವರೆಗೆ** |
| ಶ್ರೀವಿಬುಧೇಂದ್ರತೀರ್ಥರು | **1435 ರಿಂದ 1490 ರವರೆಗೆ** |
| ಶ್ರೀಜಿತಾಮಿತ್ರತೀರ್ಥರು | **1490 ನೇ ಸಾಧಾರಣದಿಂದ 1492 ನೇ ಪ್ರಮಾದೀಚದ ವರೆಗೆ** |
| ಶ್ರೀರಘುನಂದನತೀರ್ಥರು | **1492 ರಿಂದ 1504 ರವರೆಗೆ** |
| ಶ್ರೀಸುರೇಂದ್ರತೀರ್ಥರು | **1504 ರಿಂದ 1575 ರವರೆಗೆ** |
| ಶ್ರೀವಿಜಯೀಂದ್ರತೀರ್ಥರು | **1575 ರಿಂದ 1614 ರವರೆಗೆ** |

ಇಲ್ಲಿ ಶ್ರೀವಿಬುಧೇಂದ್ರರ, ಶ್ರೀರಘುನಂದನರ, ಶ್ರೀಸುರೇಂದ್ರರ, ಶ್ರೀವಿಜಯೀಂದ್ರರ ಕಾಲ ಹೇಳುವಾಗ ಹಿಂದೂ ಸಂವತ್ಸರದ ಹೆಸರುಗಳನ್ನು ಮುದ್ರಿಸದಿರುವುದು ಗಮನಾರ್ಹ.

(ಶ್ರೀರಾಮಚಂದ್ರತೀರ್ಥರ ನಿರ್ಯಾಣ ಕ್ರಿ.ಶ. 1435 ನಳನಾಮ ಸಂ. ಎಂದಿದ್ದಾರೆ. ಆದರೆ ''ಇಂಡಿಯನ್ ಕ್ರೊನೋಲಾಜಿಕಲ್ ಟೇಬಲ್ಸ್ ಪ್ರಕಾರ ಕ್ರಿ.ಶ. 1435 ಇಸವಿಗೂ ನಳ ಸಂವತ್ಸರಕ್ಕೂ ಸರಿ ಹೊಂದುವುದಿಲ್ಲ. ಇರಲಿ ಸದ್ಯಕ್ಕೆ ಅದು ಅಪ್ರಸ್ತುತ.)

ಶ್ರೀವಿಬುಧೇಂದ್ರರ ನಿರ್ಯಾಣ ಕಾಲ ಕ್ರಿ. ಶ. 1490 ಎಂದಿದೆ. (ಶ್ರೀ.ರಾಜಾ.ಎಸ್. ಗುರುರಾಜಾಚಾರ್ಯರೂ ಅಜಯ್ಯವಿಜಯೀಂದ್ರ ಹಾಗೂ ಕಲಿಯುಗಕಲ್ಪತರು ಪುಸ್ತಕಗಳಲ್ಲಿ ಇದನ್ನೇ ಸಮರ್ಥಿಸಿದ್ದಾರೆ).

''ಶ್ರೀಜಿತಾಮಿತ್ರತೀರ್ಥರು'' ಪುಸ್ತಕದ ಲೇಖಕರಾದ ಶ್ರೀರಾಜಾ. ಎಸ್ ಪವಮಾನಾಚಾರ್ಯರು (ಪ್ರಸ್ತುತ ಪೀಠಾಧಿಪತಿಗಳಾದ ಶ್ರೀಸುಬುಧೇಂದ್ರತೀರ್ಥರು) ಮತ್ತು ಶ್ರೀ ಆ.ರಾ ಪಂಚಮುಖಿಯವರೂ ಸಹ ಶ್ರೀವಿಬುಧೇಂದ್ರರ ನಿರ್ಯಾಣ ಕಾಲ 1490 ನೇ ಪರಾಭವ (ಪುಟ 33-34) ಎಂದಿದ್ದಾರೆ. ಮುಂದೆ ಪುಟ 45 ರಲ್ಲಿ ಶ್ರೀಜಿತಾಮಿತ್ರರ ನಿರ್ಯಾಣಕಾಲ ಕ್ರಿ.ಶ. 1497 ಪ್ರಮಾದೀಚ ಸಂ. ಎಂದಿದೆ.

ಒಟ್ಟಿನಲ್ಲಿ ರಾಯರ ಮಠದ ಅಧಿಕೃತ ಪ್ರಕಟಣೆಗಳಾದ -

ಅ) ''ಗುರುಚರಿತೆ'' ಪುಸ್ತಕ ಪ್ರಕಾರ ಶ್ರೀಜಿತಾಮಿತ್ರರ ಕಾಲ ಕ್ರಿ.ಶ.1490 ಸಾಧಾರಣದಿಂದ ಕ್ರಿ.ಶ. 1492ನೇ ಪ್ರಮಾದೀಚ

ಆ) ''ಶ್ರೀಜಿತಾಮಿತ್ರತೀರ್ಥರು'' ಪುಸ್ತಕ ಪ್ರಕಾರ ಶ್ರೀಜಿತಾಮಿತ್ರರ ಕಾಲ ಕ್ರಿ.ಶ.1490 ಪರಾಭವದಿಂದ ಕ್ರಿ.ಶ.1497 ಪ್ರಮಾದೀಚ.

ಇ) ವಿಜಯೀಂದ್ರವಿಜಯದಲ್ಲಿ ಸರ್ಗ 3 ಶ್ಲೋಕ 9ರಲ್ಲಿ ಶ್ರೀವಿಬುಧೇಂದ್ರರ ನಿರ್ಯಾಣಕಾಲ ಪರಾಭವ ಸಂ. ಎಂದಿದೆ.

ಈ) ಮೂ.ಮಠೇ ಪುಸ್ತಕದ ಪುಟ 133 ರಲ್ಲಿರುವ ಪ್ರಾಚೀನತಮ ಕಲ್ಲಚ್ಚಿನ ಪ್ರಕಾರ ಶ್ರೀವಿಬುಧೇಂದ್ರರ ನಿರ್ಯಾಣಕಾಲ ಪರಾಭವ ಸಂ.ಎಂದಿದೆ.

ವಿಜಯೀಂದ್ರವಿಜಯ ಹಾಗೂ ಪ್ರಾಚೀನತಮಕಲ್ಲಚ್ಚಿನ ಪ್ರಕಾರ ಶ್ರೀವಿಬುಧೇಂದ್ರರ ನಿರ್ಯಾಣಕಾಲ ಪರಾಭವ ನಾಮಸಂವತ್ಸರ. ಅಂದರೆ ಈ ಪರಾಭವನಾಮ ಸಂವತ್ಸರವೇ ಶ್ರೀಜಿತಾಮಿತ್ರರ ಆಳ್ವಿಕೆಯ ಪ್ರಾರಂಭದ ಕಾಲವೆಂದಾಯಿತು.

ಪರಾಭವದಿಂದ ಎಂಟನೇ ಸಂವತ್ಸರ ಪ್ರಮಾದೀಚ. ಇದು ಶ್ರೀಜಿತಾಮಿತ್ರರ ನಿರ್ಯಾಣಕಾಲ. ಹೀಗಾಗಿ ಒಟ್ಟು ಕ್ರಿ.ಶ. 1490 ರಿಂದ ಕ್ರಿ.ಶ. 1497 ರ ವರೆಗೆ ಶ್ರೀಜಿತಾಮಿತ್ರರ ಕಾಲ ಎಂದಾಯಿತು. ಇದನ್ನೇ

''ಶ್ರೀಜಿತಾಮಿತ್ರತೀರ್ಥರು'' ಎಂಬ ಪುಸ್ತಕದಲ್ಲಿ ಬರೆಯಲಾದದ್ದು. ಇದರಿಂದ ಅವರ ಪುಸ್ತಕಗಳಲ್ಲೇ ಬರೆದುಕೊಂಡ ಸಂವತ್ಸರಗಳ ಪ್ರಕಾರ ಒಟ್ಟು ಶ್ರೀಜಿತಾಮಿತ್ರರ ಆಳ್ವಿಕೆ ಏಳು ವರ್ಷಗಳೆಂದಾಯಿತು.

ಶ್ರೀಜಿತಾಮಿತ್ರರ ನಿರ್ಯಾಣಕಾಲದಿಂದಲೇ (''ಶ್ರೀಜಿತಾಮಿತ್ರತೀರ್ಥರು'' ಪುಸ್ತಕದ ಪ್ರಕಾರ 1497 ನೇ ಪ್ರಮಾದೀಚ ಪುಟ. 45) ಶ್ರೀರಘುನಂದನರ ಆಳ್ವಿಕೆಯು ಆರಂಭವಾಗಬೇಕಷ್ಟೇ? ಅಂದರೆ ಶ್ರೀರಘುನಂದನರ ಆಳ್ವಿಕೆ ಪ್ರಾರಂಭವಾದದ್ದು ಕ್ರಿ.ಶ.1497 ಎಂದು ಅವರೇ ಅಂಗೀಕರಿಸಿದಂತಾಯಿತು.

**ಹಾಗಾದರೆ -**

- ಮೂ.ಮಠೇ ಪುಸ್ತಕದಲ್ಲಿ ಕ್ರಿ.ಶ. 1493 ರಲ್ಲಿ ರಘುನಂದನರ ಕಾಲದಲ್ಲಿ ಶ್ರೀಉತ್ತರಾದಿಮಠದಿಂದ ಮೂಲರಾಮನ ಪ್ರತಿಮೆ ಕಳ್ಳತನವಾದದ್ದೆಂದು ಬರೆದಿರುವುದು ಅಪ್ಪಟ ಸುಳ್ಳೆಂದಾಯಿತು. ಕ್ರಿ.ಶ. 1497ರಲ್ಲಿ ಪೀಠಕ್ಕೆ ಬಂದ ಶ್ರೀರಘುನಂದನರು ಕ್ರಿ.ಶ. 1493 ರಲ್ಲಿ ತಮ್ಮ ಶಿಷ್ಯನಾದ ಚಂದ್ರಭಟ್ಟನ ಮೂಲಕ ಮೂಲರಾಮನ ಪ್ರತಿಮೆಯನ್ನು ಅಪಹರಿಸಲು ಸಾಧ್ಯವೇ ಇಲ್ಲ.

ಗುರುಚರಿತೆಯಲ್ಲಿ ಶ್ರೀಜಿತಾಮಿತ್ರತೀರ್ಥರ ನಿರ್ಯಾಣಕಾಲವನ್ನು ಕ್ರಿ.ಶ. 1492 ಎಂಬುದಾಗಿ ತಿಳಿಸಿದ್ದಾರೆ. ಅಪ್ರಾಮಾಣಿಕವಾದ ವಿಜಯೀಂದ್ರವಿಜಯದಲ್ಲಿಯ ಪ್ರತಿಮಾ ಅಪಹರಣದ ಸುಳ್ಳು ಕಥೆಯನ್ನು ಸರಿಹೊಂದಿಸಲು ಗುರುಚರಿತೆಕಾರರು ಇಸಿವಿ-ಸಂವತ್ಸರಗಳಲ್ಲಿ ತಮಗೆ ಬೇಕಾದ ಹಾಗೆ ಛಾಪಿಸಿ ಶ್ರೀಜಿತಾಮಿತ್ರರ ಕಾಲವನ್ನು ಎರಡೇ ವರ್ಷಕ್ಕೆ ಇಳಿಸಿದ್ದಾರೆ. ಶ್ರೀವಿಬುಧೇಂದ್ರರ ನಿರ್ಯಾಣ ಕಾಲ ಪರಾಭವಸಂವತ್ಸರ ಎಂಬುದಾಗಿ ವಿಜಯೀಂದ್ರವಿಜಯ ಹಾಗೂ ಪ್ರಾಚೀನತಮ ಕಲ್ಲಚ್ಚು ಸ್ಪಷ್ಟ ಹೇಳುತ್ತಿರುವಾಗ ಗುರುಚರಿತೆಯಲ್ಲಿ ಸಾಧಾರಣ ಸಂವತ್ಸರ ಎಂದು ನಮೂದಿಸಲು ಕಾರಣವೇನು? ಆಧಾರ ಯಾವುದು?

ಒಟ್ಟಿನಲ್ಲಿ ಶ್ರೀರಘುನಂದನರ ಆಳ್ವಿಕೆಯ ಆರಂಭದ ಕಾಲ -

- ಶ್ರೀಜಿತಾಮಿತ್ರತೀರ್ಥರು ಪುಸ್ತಕದ ಪ್ರಕಾರ-ಕ್ರಿ.ಶ. 1497. (ಅಂದರೆ ಶ್ರೀರಘುನಂದನತೀರ್ಥರು ಕ್ರಿ.ಶ. 1493ರಲ್ಲಿ ಪೀಠಕ್ಕೇ ಬಂದಿಲ್ಲ.)
- ಮೂ.ಮಠೇ ಪುಸ್ತಕದಲ್ಲಿ ಛಾಪಿಸಿರುವ ಪ್ರಾಚೀನತಮ ಕಲ್ಲಚ್ಚಿನ ಪ್ರಕಾರ ಶ್ರೀರಘುನಂದನರ ನಿರ್ಯಾಣ ಕಾಲ ಕ್ರಿ.ಶ. 1474 (ಅಂದರೆ, ಶ್ರೀರಘುನಂದನರು 1493ರಲ್ಲಿ ಇರಲೇ ಇಲ್ಲ.)

ಆದರೆ ಈ ವಿಷಯದಲ್ಲಿ ವಸ್ತುಸ್ಥಿತಿ ಬೇರೆಯೇ ಇದೆ. 'ಗುರುಚರಿತೆ', 'ಶ್ರೀಜಿತಾಮಿತ್ರತೀರ್ಥರು' ಮೊದಲಾದ ಪುಸ್ತಕಗಳ ಲೇಖಕರು ನೀಡುವ ಇಸ್ವಿಗಳಿಗೂ, ಸಂವತ್ಸರದ ಹೆಸರುಗಳಿಗೂ ಧಾರವಾಡದ ಕರ್ನಾಟಕ ವಿಶ್ವ ವಿದ್ಯಾಲಯದಿಂದ ಪ್ರಕಟಿತ ಜಂತ್ರಿ ಪ್ರಕಾರ ಮತ್ತು ಇತರ ಆಧಾರಗಳ ಪ್ರಕಾರ ಯಾವ ರೀತಿಯಲ್ಲೂ ಹೊಂದಾಣಿಕೆ ಕಂಡುಬರುವುದಿಲ್ಲ. ಅವರು ಕೊಟ್ಟ ಇಸ್ವಿ ಸಂವತ್ಸರಗಳ ಹೆಸರುಗಳನ್ನು ಹೊಂದಿಸಿ ಸರಿಪಡಿಸುವುದು ನಮ್ಮ ಕೆಲಸವಲ್ಲ. ಇಲ್ಲಿ ಕೇವಲ ಶ್ರೀರಾಯರ ಮಠದ ಅಧಿಕೃತ ಲೇಖಕರು ಶ್ರೀರಾಮಪ್ರತಿಮೆಯ ಕಳುವಿನ ಕಾಲವನ್ನು ಹೊಂದಿಸಲು ಪ್ರಯತ್ನಿಸಿ ಗೊಂದಲದಲ್ಲಿ ಸಿಲುಕಿ ಇಸ್ವಿ, ಶಕೆ, ಸಂವತ್ಸರಗಳನ್ನು ಸರಿಹೊಂದಿಸಿಕೊಳ್ಳಲು ಮಾಡಿದ ನಾನಾ ಕಸರತ್ತುಗಳನ್ನು ತೋರಿಸುವುದು ಮಾತ್ರ ನಮ್ಮ ಉದ್ದೇಶ.

**ವಾಚಕರೇ, ಗಮನಿಸಿ,** ಮೂ.ಮಠೇ ಪುಸ್ತಕದ ಲೇಖಕರ ಪ್ರಕಾರ ಶ್ರೀರಘುನಂದನರ ಆಳ್ವಿಕೆಯಲ್ಲಿ ಉತ್ತರಾದಿಮಠದಿಂದ ಮೂಲರಾಮ ಪ್ರತಿಮೆ ಅಪಹರಣವಾದದ್ದು ಕ್ರಿ.ಶ. 1493 ಕಾರ್ತೀಕ ಶುದ್ಧ ದ್ವಾದಶಿಯ

ದಿನ. ಈ ಕಾಲದಲ್ಲಿ ಶ್ರೀರಘುನಂದನರು ಪೀಠದಲ್ಲೇ ಇರಲಿಲ್ಲವೆಂಬುದು ಅವರು ಕೊಟ್ಟ ಆಧಾರಗಳಿಂದಲೇ ಸಿದ್ಧವಾಗುತ್ತದೆ.

ಈಗ ಹೇಳಿ..! ತಮ್ಮ ಬೇಳೆ ಬೇಯುವುದಕ್ಕೋಸ್ಕರ ಮನ ಬಂದಂತೆ ಬರೆಯುತ್ತಾ ಜನಗಳಿಗೆ ಮರುಳು ಹಾಗೂ ಮೋಸ ಮಾಡುತ್ತಿರುವವರು ಯಾರು? ಈ ವಿಷಯವನ್ನು ಸರಿ ಮಾಡಿಕೊಳ್ಳಲು ಅವರಿಗೆ ಇರುವ ಉಪಾಯವೆಂದರೆ ಬಿ.ಎನ್.ಕೆ.ರವರ ಲೆಕ್ಕಾಚಾರಕ್ಕೆ ಶರಣು ಹೋಗುವುದೊಂದೇ. ಹಾಗೆ ಶರಣು ಬಂದರೆ ರಾಯರ ಮಠ ಪ್ರಕಟಿಸಿದ ಅಧಿಕೃತ ಪುಸ್ತಕಗಳೆಲ್ಲ (ಗುರುಚರಿತೆ, ಶ್ರೀಮೂಲರಾಮ, ಅಜಯ್ಯವಿಜಯೀಂದ್ರರು, ಕಲಿಯುಗಕಲ್ಪತರು ಮುಂತಾದವುಗಳೆಲ್ಲ) ಅಪ್ರಾಮಾಣಿಕವೆಂದಾಗಿ ಅವರ ಮಠದ ದಾಖಲೆಗಳೆಲ್ಲ ಸುಳ್ಳು ದಾಖಲೆಗಳೆಂದು ಸಾಬೀತಾಗುತ್ತವೆ.

ವಾಚಕರೇ, ಇಂತಹ ಸುಳ್ಳು ದಾಖಲೆಗಳನ್ನು ಬಹಿರಂಗವಾಗಿ ತೋರಿಸಲು ಸಿದ್ಧರಿದ್ದೇವೆಂದು ಅವರ ಮಠದ ದಿವಾನರು ಮುನ್ನುಡಿಯಲ್ಲಿ ಹೇಳಿಕೊಂಡಿರುವುದೂ (ಮೂ. ಮಠೇ ಪುಟ xv) ಸಹ ಜನಗಳನ್ನು ಮರಳು ಮಾಡುವ ಇನ್ನೊಂದು ಯೋಜನೆಯೇ ಆಗಿದೆ.

ಸದ್ಯಕ್ಕೆ ಪ್ರಸ್ತುತವಾದ ಮೂಲರಾಮನ ವಿಷಯಕ್ಕೆ ಬೇಕಾದ ಅದಕ್ಕೆ ಸಂಬಂಧಪಟ್ಟ ಪೀಠಾಧಿಪತಿಗಳ ಕಾಲಮಾನದ ವಿರೋಧಗಳನ್ನು ಮಾತ್ರ ಬಹಿರಂಗ ಪಡಿಸಿದ್ದೇವೆ. ಪ್ರಸಂಗ ಬಂದಾಗ ಇನ್ನಿತರ ವಿರೋಧಗಳನ್ನೂ ಬಹಿರಂಗ ಪಡಿಸುತ್ತೇವೆ.

ಇದೇ ರೀತಿಯಲ್ಲಿ ಅವರಿಂದ ಪ್ರಕಟಿಸಲ್ಪಟ್ಟ ಗುರುಚರಿತೆ, ಶ್ರೀಮೂಲರಾಮ, ಶ್ರೀಜಿತಾಮಿತ್ರತೀರ್ಥರು, ಅಜಯ್ಯವಿಜಯೀಂದ್ರರು, ವಿಜಯೀಂದ್ರವಿಜಯ, ಕಲಿಯುಗಕಲ್ಪತರು, ಸತ್ಯಮೇವ ಜಯತೇ, ಮೂ.ಮಠೇ ಪುಸ್ತಕಗಳಲ್ಲಿ ಮುದ್ರಿಸಿರುವ ( ತಾಮ್ರಶಾಸನ ಮುಂತಾದ) ಅನೇಕ ಆಧಾರಗಳಲ್ಲಿನ ಕಾಲಮಾನಗಳ ಅಂಕಿ-ಅಂಶಗಳ ವಿರೋಧಗಳನ್ನು ಕೆದುಕುತ್ತಾ ಹೋದರೆ ಅದೊಂದು ದೊಡ್ಡ ಚಕ್ರವ್ಯೂಹವೇ ಸರಿ.

ಈ ಮೇಲಿನ ವಿಮರ್ಶೆಯಿಂದ, ಮೂ.ಮಠೇ ಲೇಖಕರು ಹೇಳುವಂತೆ ಕ್ರಿ.ಶ. 1493ರಲ್ಲಿ ನಡೆದಿದೆ ಎನ್ನಲಾಗುವ ಶ್ರೀಮೂಲರಾಮನ ಪ್ರತಿಮೆಯ ಅಪಹರಣದ ಕಥೆ ಸುಳ್ಳು ಆಧಾರಗಳ ಮೇಲೆ ಕಟ್ಟಿರುವ ಕಥೆ ಎಂದೇ ಸಿದ್ಧವಾಗುತ್ತದೆ.

* * * *

# ರಾಯಸಗಳ ಅಸಮರ್ಥ ರಾಯಭಾರ

ಮೂ.ಮಠೇ. ಲೇಖಕರು ಪುಟ 151 ರಿಂದ 154 ರವರೆಗೆ ಉತ್ತರಾದಿಮಠದ ಇತ್ತೀಚಿನ ನಾಲ್ಕು ರಾಯಸಗಳನ್ನು ಛಾಪಿಸಿ ಹೀಗೆ ಬರೆದಿದ್ದಾರೆ.

''ಈ ಕೆಳಗೆ ನೀಡಿದ ರಾಯಸಗಳಲ್ಲಿನ ಉತ್ತರಾದಿಮಠದ ಮುದ್ರೆಗಳಲ್ಲಿ ''ಶ್ರೀದಿಗ್ವಿಜಯರಾಮೋ ವಿಜಯತೇ ಸಂಸ್ಥಾನ ಉತ್ತರಾದಿಮಠ'' ಎಂದಿರುವುದು ಗಮನಿಸಬೇಕಾದ ಅಂಶ. ಈಗಿನ ಶ್ರೀಗಳವರು ಶ್ರೀಮೂಲರಾಮನನ್ನು ಎಲ್ಲ ಸಂದರ್ಭದಲ್ಲೂ ಉಪಯೋಗಿಸುತ್ತಿರುವುದು ಹಾಗೂ ಈ ಎಲ್ಲ ರಾಯಸಗಳಲ್ಲೂ ಕೇವಲ ಜಗದ್ಗುರು ಶ್ರೀಮಧ್ವಾಚಾರ್ಯರ ಸಂಸ್ಥಾನ ಎಂದಿದೆಯೇ ಹೊರತು ''ಮೂಲ ಮಹಾ'' ಎಂದು ಇತ್ತೀಚಿಗೆ ಸೇರ್ಪಡೆಯಾಗಿರುವುದು ಸೋಜಿಗವೇ ಸರಿ''

ಇದರಿಂದ ಮೂ.ಮಠೇ.ಲೇಖಕರು ಏನನ್ನು ಸಾಬೀತು ಮಾಡಲು ಹೊರಟಿದ್ದಾರೆ ಹಾಗೂ ಅವರ ಆಶಯವೇನು? ಎಂಬುದು ಅರ್ಥವಾಗದ ಸಂಗತಿಯಾಗಿದೆ.

- ❖ ಉತ್ತರಾದಿಮಠ ಮೂಲಮಹಾಸಂಸ್ಥಾನ ಅಲ್ಲ. ಶ್ರೀರಾಯರ ಮಠವೇ ಮೂಲಮಹಾಮಠ ಎಂದು ಇವರ ಆಶಯವೋ? **ಅಥವಾ,**
- ❖ ರಾಯಸಗಳು ಹಂಸನಾಮಕಪರಮಾತ್ಮನಿಂದ ಪರಂಪರೆಯಾಗಿ ಒಂದೇ ರೀತಿಯಾಗಿರಬೇಕೆಂದು ಇವರ ಆಶಯವೋ? **ಅಥವಾ,**
- ❖ ರಾಯಸಗಳಲ್ಲಿ ''ಮೂಲಮಹಾ'', ''ಮೂಲರಾಮ'' ಎಂಬ ಒಕ್ಕಣಿಕೆ ಮೊದಲಿನಿಂದಲೂ ಪರಂಪರಾವಿಚ್ಛೇದವಿಲ್ಲದೇ ಇದ್ದರೆ ಮಾತ್ರ ಅದು ಮೂಲಮಹಾಸಂಸ್ಥಾನ ಹಾಗೂ ಮೂಲರಾಮನಿರುವ ಸಂಸ್ಥಾನ ಎಂದಾಗುತ್ತದೆಂಬ ಆಶಯವೋ? **ಅಥವಾ,**
- ❖ ಶ್ರೀರಾಯರ ಮಠದ ರಾಯಸಗಳಲ್ಲಿ ಈ ರೀತಿಯಾದ ಬದಲಾವಣೆಗಳಿಲ್ಲವಾದ ಕಾರಣ ಅವರದ್ದೇ ಮೂಲಮಹಾ ಸಂಸ್ಥಾನವೆಂದು ಹೇಳಿಕೊಳ್ಳುವ ಆಶಯವೋ? **ಅಥವಾ,**
- ❖ ''ಮೂಲಮಹಾ'' ''ಮೂಲರಾಮ'' ಎಂಬ ಒಕ್ಕಣಿಕೆ ರಾಯಸಗಳಲ್ಲಿಲ್ಲದಿದ್ದರೆ ಅದು ಮೂಲಮಹಾಸಂಸ್ಥಾನ ಅಲ್ಲ. ಮೂಲರಾಮನಿರುವ ಸಂಸ್ಥಾನವಲ್ಲ ಎನ್ನುವ ಆಶಯವೋ? **ಅಥವಾ,**
- ❖ ''ಶ್ರೀದಿಗ್ವಿಜಯರಾಮೋ ವಿಜಯತೇ'' ಎಂದಿರುವುದರಿಂದ ಶ್ರೀದಿಗ್ವಿಜಯರಾಮಪ್ರತಿಮೆಯು ಉತ್ತರಾದಿಮಠದಲ್ಲಿ ಇದೆ ಎಂಬ ಆಶಯವೋ?

  ಮೇಲಿನ ಯಾವ ಅಂಶಗಳೂ ಅವರ ಪಕ್ಷವನ್ನು ಸಾಬೀತು ಪಡಿಸಲು ಈ ಯಾವ ರಾಯಸಗಳೂ ಸಮರ್ಥ ರಾಯಭಾರವನ್ನು ವಹಿಸಲಾರವು.

**ವಾಚಕರೇ ಗಮನಿಸಿ.**

- ❖ ಶ್ರೀರಾಯರ ಮಠದ ಹಿಂದಿನ ರಾಯಸಗಳಲ್ಲೂ ''ಶ್ರೀಮನ್ಮೂಲರಾಮೋ ವಿಜಯತೇ, ಮೂಲಮಹಾಸಂಸ್ಥಾನ, ಹಂಸನಾಮಕಪರಮಾತ್ಮನ ಸಾಕ್ಷಾತ್ ಪರಂಪರೆ, ವಿದ್ಯಾಮಠ'' ಎಂಬ ಒಕ್ಕಣಿಕೆಗಳು ಸರ್ವಥಾ ಕಂಡುಬರದಿರುವುದನ್ನು ಕಾಣಬಹುದು. **(ನೋಡಿರಿ ರಾಯಸಗಳ ಚಿತ್ರ 1ರಿಂದ 9)**

- ಇತ್ತೀಚಿನ ರಾಯಸಗಳಲ್ಲಿ ಮಾತ್ರ ಎಡಬಿಡದೇ ಶ್ರೀಮನ್ಮೂಲರಾಮೋ ವಿಜಯತೇ, ಮೂಲ ಮಹಾಸಂಸ್ಥಾನ, ಹಂಸನಾಮಕಪರಮಾತ್ಮನ ಸಾಕ್ಷಾತ್ ಪರಂಪರೆ, ವಿದ್ಯಾಮಠ ಎಂಬ ಒಕ್ಕಣಿಕೆಗಳು ಸೇರ್ಪಡೆಯಾಗಿರುವುದನ್ನು ಕಾಣಬಹುದು. **(ನೋಡಿರಿ ರಾಯಸಗಳ ಚಿತ್ರ 10ರಿಂದ 12)**
- ಶ್ರೀ ಸುಶೀಲೇಂದ್ರತೀರ್ಥರ ಎರಡು ರಾಯಸದಲ್ಲಿ ಗುರುಗಳಾದ ಶ್ರೀಸುಕೃತೀಂದ್ರತೀರ್ಥರ ಕಾಲದ ವರೆಗೂ ಇಲ್ಲದ ಮೂಲ ಎಂಬ ಪದದ ಸೇರ್ಪಡಿಕೆಯನ್ನು ಕಾಣಬಹುದು. ಅದರಲ್ಲೂ ಆಶ್ಚರ್ಯ ಎಂದರೆ ಶ್ರೀಸುಶೀಲೇಂದ್ರತೀರ್ಥರದ್ದೇ ಆದ ಎರಡು ರಾಯಸಗಳಲ್ಲಿಯೂ ಏಕರೂಪತೆ ಇಲ್ಲ. ಶಾ.ಶಕೆ 1842 ರ ಮೊದಲ ರಾಯಸದಲ್ಲಿ ''ರಘುಪತಿ ವೇದವ್ಯಾಸದೇವರ ಪ್ರಾರ್ಥನಾ..'' ಎಂದೂ, ಶಾ.ಶಕೆ. 1847 ರ ಎರಡನೇ ರಾಯಸದಲ್ಲಿ ''ಶ್ರೀಮೂಲ ರಘುಪತಿ ವೇದವ್ಯಾಸದೇವರ ಪ್ರಾರ್ಥನಾ..'' ಎಂಬ ವ್ಯತ್ಯಾಸಗಳನ್ನು ಗಮನಿಸಬಹುದು. **(ನೋಡಿರಿ ರಾಯಸಗಳ ಚಿತ್ರ 12, 13)**
- ಶ್ರೀಸುಯಮೀಂದ್ರತೀರ್ಥರ ರಾಯಸದಲ್ಲಿ ಅವರ ಪರಮಗುರುಗಳಾದ ಶ್ರೀಸುಶಿಲೇಂದ್ರತೀರ್ಥರ ಕಾಲದವರೆಗೂ ಬಳಿಸಲ್ಪಡುತ್ತಿದ್ದ ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದ ಪದ್ಮಾರಾಧಕ'' ಎಂಬ ಸ್ಥಳದಲ್ಲಿ ''ಶ್ರೀಮನ್ಮೂಲರಾಮಚಂದ್ರ ದೇವರ ಪಾದಪದ್ಮಾರಾಧಕರಾದ'' ಎಂಬ ಬದಲಾವಣೆ-ಯನ್ನು, ''ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ'' ಎಂಬುದರ ಜೊತೆಗೆ ಹೊಸದಾಗಿ ''ಶ್ರೀಮನ್ಮಧ್ವಾಚಾರ್ಯರ ಮುಖ್ಯ ಸಂಸ್ಥಾನಾಧೀಶ್ವರ'' ಎಂಬ ಸೇರ್ಪಡಿಕೆಯನ್ನೂ ಕಾಣಬಹುದು. **(ನೋಡಿರಿ ರಾಯಸಗಳ ಚಿತ್ರ 14)**
- ಶ್ರೀಸುಶಮೀಂದ್ರತೀರ್ಥರ ಅನುಗ್ರಹವಚನದ ಪತ್ರದಲ್ಲಿ ''ಶ್ರೀಮದ್ಧಂಸನಾಮಕ ಪರಮಾತ್ಮ-ಸಮಾರಬ್ಧ-ಪರಂಪರಾಗತ'' ''ವಿದ್ಯಾಸಿಂಹಾಸನಾಧೀಶ್ವರ'' ಇತ್ಯಾದಿ ಹೊಸ ಸೇರ್ಪಡಿಕೆಯನ್ನು ಕಾಣಬಹುದು. **(ನೋಡಿರಿ ರಾಯಸಗಳ ಚಿತ್ರ 15, 16)**
- ಮೂ.ಮಠೇ ಲೇಖಕರು ಉತ್ತರಾದಿಮಠದ ರಾಯಸಗಳ ಬಗ್ಗೆ ವಿಮರ್ಶಿಸುತ್ತಾ ''ಜಗದ್ಗುರು ಶ್ರೀಮಧ್ವಾಚಾರ್ಯರ ಸಂಸ್ಥಾನ'' ಎಂದಿದೆಯೇ ಹೊರತು ''ಮೂಲ ಮಹಾ'' ಎಂದು ಇತ್ತೀಚಿಗೆ ಸೇರ್ಪಡೆಯಾಗಿರುವುದು ಸೋಜಿಗವೇ ಸರಿ'' ಎಂದು ಆಶ್ಚರ್ಯವನ್ನು ಅಭಿವ್ಯಕ್ತ ಮಾಡಿದ್ದಾರೆ.

ಶ್ರೀಸುಯಮೀಂದ್ರತೀರ್ಥರ ಗುರುಗಳ ಕಾಲದ ವರೆಗಿನ ರಾಯರಮಠದ ರಾಯಸದಲ್ಲಿ ''ಶ್ರೀಮದ್ವೈಷ್ಣವ-ಸಿದ್ಧಾಂತಪ್ರತಿಷ್ಠಾಪನಾಚಾರ್ಯ'' ''ಶ್ರೀಮದ್ರಾಮಚಂದ್ರದಿವ್ಯಪಾದಪದ್ಮಾರಾಧಕ'' ಎಂದು ಮಾತ್ರ ಇದ್ದದ್ದು ಶ್ರೀಸುಯಮೀಂದ್ರತೀರ್ಥರ ಕಾಲದ ನಂತರ ''ಶ್ರೀಮನ್ಮಧ್ವಾಚಾರ್ಯರ ಮುಖ್ಯಸಂಸ್ಥಾನಾಧಿೀಶ್ವರ'' ಎಂದು ಸೇರ್ಪಡಿಕೆಯಾಗಿದ್ದು, ರಘುಪತಿವೇದವ್ಯಾಸ ಎಂಬ ಸ್ಥಳಗಳಲ್ಲಿ ಮೂಲರಘುಪತಿ ಎಂಬ ಬದಲಾವಣೆ, ''ಶ್ರೀಮದ್ಧಂಸನಾಮಕ ಪರಮಾತ್ಮಸಮಾರಬ್ಧಪರಂಪರಾಗತ'' ಇತ್ಯಾದಿ ಸೇರ್ಪಡೆಗಳು ಮೂ.ಮಠೇ. ಲೇಖಕರಿಗೆ ಅತ್ಯಂತ ಹೆಚ್ಚಿನ ಸೋಜಿಗವನ್ನು ತಂದಿರಲೇ ಬೇಕಲ್ಲವೇ?!!

**07**



ಶ್ರೀಸುಜ್ಞಾನೇಂದ್ರತೀರ್ಥರ ರಾಯಸ ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಘುಪತಿ ವೇದವ್ಯಾಸದೇವರ ಪ್ರಾರ್ಥನಾ...'' ''ಶ್ರೀರಘುಪತಿದೇವರ ದೀಪಾರಾಧನಿ ಬಗ್ಗೆ...''

**08**



ಶ್ರೀಸುಜ್ಞಾನೇಂದ್ರತೀರ್ಥರ ರಾಯಸ ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಘುಪತಿ ವೇದವ್ಯಾಸದೇವರ ಪ್ರಾರ್ಥನಾ...'' ''ಶ್ರೀರಘುಪತಿದೇವರ ಶೇವೆ...''

09

ಶ್ರೀಸುಕೃತೀಂದ್ರತೀರ್ಥರ ರಾಯಸ : ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಾಮದೇವರ ಸಂದರ್ಶನ ಮಾಡಿಸಬೇಕೆಂಬ...''

10

ಶ್ರೀಸುಕೃತೀಂದ್ರತೀರ್ಥರ ರಾಯಸ : ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಾಮದೇವರ ಸಂದರ್ಶನ ಮಾಡಿಸಬೇಕೆಂಬ...''

**11**

ಶ್ರೀಸುಕೃತೀಂದ್ರತೀರ್ಥರ ರಾಯಸ : ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಘುಪತಿ ವೇದವ್ಯಾಸದೇವರ ಪ್ರಾರ್ಥನಾ...'' ''ಶ್ರೀರಾಮದೇವರ ಸಂದರ್ಶನ ಮಾಡಿಸಬೇಕೆಂಬ...''

**12**

ಶ್ರೀಸುಶೀಲೇಂದ್ರತೀರ್ಥರ ರಾಯಸ (ಶಾ.ಶಕೆ 1842) : ''ಶ್ರೀಮದ್ರಾಮಚಂದ್ರದೇವರ ದಿವ್ಯಶ್ರೀಪಾದಪದ್ಮಾರಾಧಕ'' ''ಶ್ರೀರಘುಪತಿ ವೇದವ್ಯಾಸದೇವರ ಪ್ರಾರ್ಥನಾ...'' ''ಶ್ರೀಮೂಲರಾಮವೇದವ್ಯಾಸದೇವರ ಸಂದರ್ಶನ...''

**15**

## आशीर्वचनम्

श्रीमत्परमहंसपरिव्राजकाचार्य, पदवाक्यप्रमाणपारावारपारङ्गत सर्वतन्त्रस्वतन्त्र
श्रीमद्वैष्णवसिद्धान्तप्रतिष्ठापनाचार्य श्रीमन्मूलरघुपतिवेदव्यासदेवदिव्यश्रीपादपद्माराधक,
जगद्गुरु श्रीमन्मध्वाचार्यमूलमहासंस्थानाधीश्वरैः
श्रीराघवेन्द्रस्वामिमठीयवेदान्तसाम्राज्यदिग्विजयविद्यासिंहासनाधीश्वरैः
श्रीमत्सुयमीन्द्रतीर्थश्रीचरणकरकमलसञ्जात श्रीमत्सुजयीन्द्रतीर्थवरकुमारकैः,

### श्रीमत्सुशमीन्द्रतीर्थश्रीपादैः

कृताः नारायणस्मृतयः

हंसनामकपरमात्मसम्प्राप्तसत्संप्रदायपरम्परायां समागतवद्भिः प्रथितयशोभिः वेदप्रतिपाद्यमहिमाभिः समीरावतारसम्भूतैः श्रीमदानन्दतीर्थभगवत्पादैः समधिष्ठितपीठे अस्मत्पूर्वजाः अनेके यतिश्रेष्ठाः पाठप्रवचनग्रन्थरचनादिना श्रीमध्वसिद्धान्तप्रकाशनं अकुर्वन् । अत एव अस्मदीयमहासंस्थानस्य विद्यामठेति नामान्तरमप्यस्ति । एतादृशविद्यामठीयपीठे श्रीमदाचार्येभ्यः द्वादशतमपीठाधिपतीनां प्रातःस्मरणीयानां श्रीब्रह्मकरार्चितश्रीमूलरामार्चां पुनः श्रीमठं आनीतवतां श्रीरघुनन्दनतीर्थश्रीचरणानां पञ्चशताब्दीयाराधनामहोत्सवे, तथा प्रह्लादांशसम्भूतानां श्रीराघवेन्द्रगुरुसार्वभौमानां त्रयस्त्रिंशदुत्तरत्रिशताब्दीयाराधनामधुरस्मृत्यर्थं एकाधिकशतग्रन्थप्रकाशनयोजनायां 'श्रीमद्भागवतम्' (सप्तमस्कन्धः - श्रीव्यासतत्त्वज्ञतीर्थकृतमन्दनन्दिनी-व्याख्यानसहितः) नामकग्रन्थं मुद्रापयित्वा प्रकाशनमिमं ग्रंथं चतुःपञ्चाशत्तमकुसुमरूपेण प्रकाशमानमनितरसाधारणमानन्दमातनोत्यस्माकम् ।

महति कार्येऽस्मिन् भागभाजां समेषां धिषणानां तथाऽन्येषां कार्यकर्तॄणां अस्मदुपास्यः श्रीराघवेन्द्रतीर्थगुर्वन्तर्गतभारतीरमणमुख्यप्राणान्तर्गतः श्रीमूलरघुपतिवेदव्यासदेवः इतोऽप्यतिशयज्ञानभक्तिवैराग्यादीननुगृह्य रक्षत्विति सम्प्रार्थयामहे ।

इति नारायणस्मृतयः

ಶ್ರೀಸುಶಮೀಂದ್ರತೀರ್ಥರ ಅನುಗ್ರಹವಚನ ''ಶ್ರೀಮನ್ಮೂಲರಘುಪತಿ ವೇದವ್ಯಾಸದಿವ್ಯಪಾದಪದ್ಮಾರಾಧಕ'' ''ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ''

**16**

॥ श्रीमन्मूलरामो विजयते ॥

श्रीमद्धंसनामकपरमात्मसमारब्धपरम्परागत-श्रीमत्परमहंसेत्यादिविरुदभूषित-
श्रीमदानन्दतीर्थभगवत्पादाचार्य-मूलमहासंस्थानाधीश्वर-
**श्रीमद्राघवेन्द्रगुरुसार्वभौम-**
वेदान्तसाम्राज्यदिग्विजयविद्यासिंहासनाधीश्वर-
**श्रीमत्सुयमीन्द्रतीर्थश्रीपादकरकमलसञ्जात-**
**श्रीमत्सुजयीन्द्रतीर्थश्रीपादवरकुमारक-**
**श्री श्रीमत्सुशमीन्द्रतीर्थश्रीपादानाम्**

## अनुग्रहवचनम्

अस्मत्प्रियशिष्यान् तथैव अस्मन्मठीयान् नैकान् आस्थानविद्वज्जनान् वयं अस्मद्गुरुचरणानां श्रीमत्सुजयीन्द्रतीर्थश्रीमच्चरणानामाज्ञामनुरुध्य परिमलादि-बहुटिप्पणीभिर्युक्तां श्रीमन्न्यायसुधां संशोध्य प्रकाशयितुमादिष्टवन्तः स्मः ।

अस्मदादेशमनुरुध्य ग्रन्थमिमं संशोध्य मुद्रणप्रतिमपि संशोधितवद्भ्यः प्रधानसंपादकेभ्यः वैकुण्ठवासिभ्यः श्री साणूरु भीमभट्टेभ्यः तथा ग्रन्थमिमं प्रकाशितवद्भ्यः श्रीगुरुसार्वभौमसंस्कृतविद्यापीठीयेभ्यः एवं ग्रन्थसंशोधने तथा मुद्रणप्रतिसंशोधने सहायमाचरितवद्भ्यः अस्मद्विद्यापीठाध्यापकेभ्यः, तथाऽन्येभ्यो विद्वद्भ्यः, एवमल्पकाले सुष्ठु मुद्रणं कृतवद्भ्यः 'सुधा मुद्रण'नेतृभ्यः श्री धनंजयाचार्येभ्यः तथा सर्वेभ्यः एतद्ग्रन्थाध्ययन-अध्यापनादिकर्तृभ्यः अस्मदुपास्यः श्री श्रीमद्राघवेन्द्रतीर्थगुर्वन्तर्गत-श्रीभारतीरमण-मुख्यप्राणान्तर्गतः श्रीसीतापतिः श्रीमूलरामचन्द्रदेवः इतोऽप्यतिशयितायुरारोग्यैश्वर्यादीनि, ज्ञानभक्तिवैराग्यादीनि च दत्वा अनुगृह्णातु इत्याशास्महे ।

*इति नारायणस्मृतिः ।*

मन्त्रालयक्षेत्रम्,
स्वभानु संवत्सर
ज्येष्ठ कृष्ण त्रयोदशी

ಶ್ರೀಸುಶಮೀಂದ್ರತೀರ್ಥರ ಅನುಗ್ರಹವಚನ ''ಶ್ರೀಮದ್ಧಂಸನಾಮಕ ಪರಮಾತ್ಮಸಮಾರಬ್ಧ ಪರಂಪರಾಗತ'' ''ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರ''

ಇಷ್ಟಕ್ಕೆ ಸಾಲದೇ ರಾಯರಮಠದ ಕೆಲವು ಹಿಂದಿನ ರಾಯಸ, ನಿರೂಪ, ಶಾಸನ ಮೊದಲಾದವುಗಳನ್ನು ಬೇರೆ ಬೇರೆ ಕಡೆಗಳಲ್ಲಿ ಛಾಪಿಸಲಾಗಿದೆ. ಮೂಲದಾಖಲೆಗಳ ಜೊತೆಗೆ ಕನ್ನಡ ಮೊದಲಾದ ಭಾಷೆಗಳಲ್ಲಿ ಅನುವಾದ, ಲಿಪ್ಯಂತರವನ್ನೂ ಮಾಡಿ ಮುದ್ರಿಸಿದ್ದಾರೆ.

ಆ ಅನುವಾದ ಮತ್ತು ಲಿಪ್ಯಂತರಗಳಲ್ಲಿ ಮೂಲ ಶಾಸನ, ದಾಖಲೆಗಳಲ್ಲಿದ ''ಮೂಲ'' ಇತ್ಯಾದಿಪದಗಳನ್ನು ಸೇರಿಸಿ ಅಮಾಯಕರಿಗೆ ದಾರಿತಪ್ಪಿಸಿದ್ದಾರೆ. ಆದರೆ ವಿಮರ್ಶಕರ ಕೈಗೆ ಸಿಕ್ಕು ಬಿದ್ದಿದ್ದಾರೆ.!

ಎರಡು ಉದಾಹರಣೆಗಳನ್ನು ನೋಡೋಣ.

1. ಶ್ರೀರಾಯರಮಠದ ಶಿಷ್ಯರೊಬ್ಬರು ಶ್ರೀರಾಘವೇಂದ್ರಸ್ವಾಮಿಗಳ ಸ್ವಂತ ಹಸ್ತಾಕ್ಷರ ಇರುವ ಒಂದು ನಿರೂಪವನ್ನು ಮುದ್ರಿಸಿ ಅದನ್ನು ಕನ್ನಡಲಿಪಿಯಲ್ಲಿ ತರ್ಜುಮೆ ಮಾಡಿ ಹಂಚುತ್ತಿದ್ದಾರೆ. ಶ್ರೀರಾಯರ ಭಕ್ತರೆಲ್ಲರೂ ''ಶ್ರೀರಾಘವೇಂದ್ರಸ್ವಾಮಿಗಳ ಹಸ್ತಾಕ್ಷರ ದೊರಕಿತು ಪಾವನರಾದೆವು'' ಎಂಬ ಧನ್ಯತಾಭಾವದಿಂದ ಅದನ್ನು ಸ್ವೀಕರಿಸಿ ತಮ್ಮ ಮನೆಗಳಲ್ಲಿ ಅದನ್ನು ಪೂಜಿಸುತ್ತಿದ್ದಾರೆ. ನಿಜವಾಗಿಯೂ ಅದು ಪೂಜೆಗೆ ಅರ್ಹವಾದದ್ದೇ ಇದರಲ್ಲಿ ಸಂದೇಹವೇ ಇಲ್ಲ.

   ಆದರೆ ರಾಯರ ಮೂಲನಿರೂಪದ ಜೊತೆಗೆ ಕನ್ನಡ ಲಿಪಿಯಲ್ಲಿ ಅದನ್ನು ತರ್ಜುಮೆ ಮಾಡುವಾಗ ಮಾತ್ರ ರಾಯರ ಮೂಲ ನಿರೂಪದಲ್ಲಿ ಕೇವಲ ''ರಘುಪತಿ'' ಎಂದಿರುವ ಮೂರು ಸ್ಥಳಗಳಲ್ಲಿ ''ಮೂಲರಘುಪತಿ'' ಎಂದು ತಿದ್ದುಪಡಿ ಮಾಡಿ ಮುದ್ರಿಸಿದ್ದಾರೆ !!! ಇದೆಂತಹ ಸಾಹಸ !! ಇದು ಶ್ರೀರಾಘವೇಂದ್ರಸ್ವಾಮಿಗಳಿಗೆ ಮಾಡಿದ ಮಹಾ ಅಪಚಾರವೇ ಸರಿ. **(ನೋಡಿರಿ ರಾಯಸಗಳ ಚಿತ್ರ 17, 18)**

**ವಾಚಕರೇ ಗಮನಿಸಿ...**

ಶ್ರೀ ರಾಯರ ಸ್ವಂತನಿರೂಪದಲ್ಲೇ ಹಸ್ತಕ್ಷೇಪ ಮಾಡುವ ಸಾಹಸಕ್ಕೆ ಇಳಿದಿರುವವರು ಇನ್ನಿತರ ದಾಖಲೆಗಳಲ್ಲಿ ಹಸ್ತಕ್ಷೇಪ ಮಾಡಿಲ್ಲ ಎಂದು ನಂಬುವುದಾದರೂ ಹೇಗೆ? ಇದು ಶ್ರೀರಾಯರಿಗೆ ಮಾಡಿರುವ ದ್ರೋಹವಲ್ಲವೇ? ಶ್ರೀರಾಯರ ಹೆಸರನ್ನು ಮುಂದಿಟ್ಟುಕೊಂಡು ಸಜ್ಜನರಿಗೆ ಜನಸಾಮಾನ್ಯರಿಗೆ ಮರಳುಮಾಡುತ್ತಿರುವುದು ಸರಿಯೇ? ಈ ತರಹದ ಪ್ರವೃತ್ತಿ ಶ್ರೀರಾಯರಿಗೆ ಸಮ್ಮತವೇ? ಇದರಿಂದ ತಮ್ಮದೇ ಮೂಲಮಠ, ಮೂಲಪರಂಪರೆ, ಮೂಲರಾಮನಿರುವ ಮಠ ಎಂದು ಹೇಳಿಕೊಳ್ಳಬೇಕೆಂಬ ಹಠ ಎಷ್ಟು ಪ್ರಬಲವಾಗಿದೆ ಮತ್ತು ಅದಕ್ಕೋಸ್ಕರ ಏನೆಲ್ಲಾ ಕಸರತ್ತುಗಳನ್ನೂ ಮಾಡಲು ಸಿದ್ಧ ಎಂದು ಸಾಬೀತು ಮಾಡಿಕೊಂಡಿದ್ದಾರೆ.

**17**

[illegible]

ಶ್ರೀರಾಯರ ಮೂಲನಿರೂಪದಲ್ಲಿ 'ಶ್ರೀಮನ್ಮೂಲ' ಹಾಗು 'ವೇದವ್ಯಾಸದೇವರ' ಎಂಬ ಎರಡು ಪದಗಳು ಸರ್ವಥಾ ಕಂಡುಬರುವುದಿಲ್ಲ. ಆದರೆ ಕನ್ನಡದಲ್ಲಿ ಲಿಪ್ಯಂತರ ಮಾಡುವಾಗ ಈ ಎರಡು ಪದಗಳನ್ನು ಸೇರಿಸಿರುವುದು ಸ್ಪಷ್ಟ ಕಾಣುತ್ತದೆ. (ಕನ್ನಡ ಲಪ್ಯಂತರದ 3, 4, 8, 10ನೇ ಸಾಲುಗಳನ್ನು ಗಮನಿಸಿ.

**18**

**ಶ್ರೀ ರಾಮಚಂದ್ರ**
**ಶಕೆ 1575**

ಹೇವಳಂಬಿನಾಮ ಸಂವತ್ಸರದ ಜೇಷ್ಟಬಹುಳ 7 ಯಲ್ಲು ಶ್ರೀಮತ್ಪರಮಹಂಸ ಪರಿವ್ರಾಜಕರಾದ ಪದವಾಕ್ಯ ಪ್ರಮಾಣ ಪಾರವಾರ ಪಾರಂಗತ ಸರ್ವತಂತ್ರ ಸ್ವತಂತ್ರರಾದ ಶ್ರೀ ಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮನ್ಮೂಲ ರಘುಪತಿ ವೇದವ್ಯಾಸದೇವರ ದಿವ್ಯಪಾದಪದ್ಮಾರಾದಕರಾದ ಶ್ರೀ ಮದ್ವಿಜಯೀಂದ್ರ ತೀರ್ಥ ಶ್ರೀ ಪಾದಂಗಳವರ ಕರ ಕಮಲ ಸಂಜಾತರಾದ ಶ್ರೀಮತ್ಸುಧೀಂದ್ರ ತೀರ್ಥವರ ಕುಮಾರಕರಾದ ಶ್ರೀ ರಾಘವೇಂದ್ರ ತೀರ್ಥ ಶ್ರೀಪಾದವಡೆಯರು ನಮಗೆ ಪರಮ ಶಿಷ್ಯರಾದ ಪಾಂಡು ರಂಗಸ್ಥ ತಥಾ ತಧಭಿಮತ ದೇಶಸ್ಥಾಶೇಷವಿದ ದ್ವೈದಿಕ ಗೃಹಸ್ಥ ಮಹಾಜನರಲ್ಲಿ ಶ್ರೀಮನ್ಮೂಲ ರಘುಪತಿ ವೇದವ್ಯಾಸದೇವರ ಆಜ್ಞಾಪೂರ್ವಕವಾಗಿ ಮಾಡುವ ವೇದೋಕ್ತ ಆಶೀರ್ವಾದಗಳು । ನಿಮಗೆ ಉತ್ತರೋತ್ತರ ಶ್ರೇಯೋಭಿವೃದ್ಧಿಯಾಗಬೇಕೆಂದು ಶ್ರೀ ಮೂಲರಘುಪತಿಯನ್ನು ಪ್ರಾರ್ಥನೆ ಮಾಡುತ್ತಾ ಪರಿಣಾಮದಲ್ಲಿದ್ದೇವೆ. । ನಿಮ್ಮ ಪರಿಣಾಮವನ್ನು ಬರೆದ ತರುವಾಯ ನಿಮ್ಮ ಗ್ರಾಮದಲ್ಲಿ ರೋಣ ನರಸಿಂಹ ಭಟ್ಟರು ಮಾದವಾಚಾರ್ಯಗೆ ನಾವು ಹಿರೇತನ ಪಾರ್ಪತ್ಯ ಕೊಟ್ಟು ಬಹುಮಾನಿಸಲಿಲ್ಲ । ಇದೇ ಅರಿಕೆ ಮುಂದೆ ನಮ್ಮ ಹಿರೇರು ಇವರಿಗೆ ಪ್ರಥಮ ಗಂಧಾಕ್ಷತೆ ಆಚಾರ ವ್ಯವಹಾರ ಯಾಶ್ಚಿತ ಚಂದ್ರಭಾಗ ತೋರದ ಪುರಾಣ ಮಠದ ದಕ್ಷಿಣಾ ಶುಭಶೋಬಾನಾದಿ ಮೊದಲಾದ ಕರ್ತವ್ಯಗಳನ್ನು ನಮ್ಮ ಮಠದವರು ಕೊಟ್ಟಿದ್ದಾರೆಂತ ಗಂಧಾಕ್ಷತೆ ಮೊದಲಾದವು ಇವರದೆ. ಹಾಗೆ ನಮ್ಮ ಹಿರೇರು ಪತ್ರ ಕೊಟ್ಟಿದ್ದಾದ ಕಾರಣದಿಂದ ನಾವು ಅದೇ ಪ್ರಕಾರ ಅಪ್ಪಣೆ ಕೊಟ್ಟಿದ್ದೇವೆ ಕೊಡಬಹುದಾದ ಸಕಲ ಮಠದ ಮರ್ಯಾದೆಗಳನ್ನು ಇವರ ಮುಖದಿಂದಲೇ ನಡೆಸಿಕೊಳ್ಳುತ್ತಾ ಬಹುದು । ಗಂಧಪ್ರಸಾದಗಳನ್ನು ಕಳಿಸಿದ್ದೇವೆ. । ಮಿಗಿಲಾದ ವರ್ತಮಾನ ಮಾಧವಾಚಾರ್ಯರು ಹೇಳಲಿಕ್ಕೆ ಕೇಳೋದು - ಇತಿ ನಾರಾಯಣ ಸ್ಮರಣೆ.

'NIRUPA' granted by Sri. Raghavendra to one of his disciples Narasimha Bhatta Madhavacharya of Panduranga believed to be Pandharapura on the bank of Chadrabhaga river. Sri. Raghavendra's signature appears on top of this 'NIRUPA'. The Peetadhipathies of Sri. Raghavendra Swamy Mutt, Manthralayam have established two conventions (1) They do not sign at the bottom of a 'Nirupa'. Instead they sign on top as seen here (2) They do not sign there respective name. They sign the name of their Aradhya Moorthy 'SRI RAMACHANDRA'.

Sangraha - K.SATYNARAYACHARYA, President, Sriman Madhwa Sangha, Rajajinagar.

ಶ್ರೀಗುರುಸಾರ್ವಭೌಮ

# ಶ್ರೀಮಠದ ಐತಿಹಾಸಿಕ ದಾಖಲೆಗಳು

*This is to Certify that Shree Soobhoondra Swamy*
? *a Brahmin High Priest proceeds from Ambajee*
*Durg to Mysore via Bangalore with three*
*Elephants viz: one with Umbary, one with*
*flag and one with Nuyganar Six Camels 35*
*Horses, 24 Swords one hundred Bullocks,*
*Two Palanqueens, one hundred and fifty*
*Bramins and one hundred and twenty five*
*attendants.*
*All Officers in authority under the British*
*Government are requested to allow him to*
*pass without molestation.*

*(Signed) A. H. Cole*
*Act. British Rest.*
*Mysore*

*Mysore*
*9th Aug. 1811* — *Rest. Mysore*

This is to certify that Shree Soobhodhendra Swamy, Saint in the Lineage of Sri Madhvacharya proceeds from Ambajee Durg to Mysore vai Bangalore with three Elephants viz; one with Umbary, one with flag and one with Nuygana, Six Camels, 25 Horses, 24 Swords, one hundred Bullocks, two Palanqueens, one hundred and fifty Brahmins and one hundred and twenty five attendants.

All officers in authority under the British Government are requested to allow him to pass without moleestration.

Mysore
9th August 1811

Signed
act British Res't
Mysore

27

ಶ್ರೀರಾಯರ ಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮ (2004)ದಲ್ಲಿ ಶ್ರೀಮಠದ ಐತಿಹಾಸಿಕ ದಾಖಲೆಗಳು ಎಂಬ ಶಿರೋನಾಮೆಯಡಿಯಲ್ಲಿ ಛಾಪಿಸಿರುವ ಮೇಲಿನ ಕೈಬರಹದ ಆಂಗ್ಲ ಪತ್ರವನ್ನು ವಾಚಕರಿಗೆ ಅನುಕೂಲವಾಗುವಂತೆ ಇತ್ತೀಚಿನ ಮುದ್ರಣದ ಶೈಲಿಯಲ್ಲಿ ಮುದ್ರಿಸಿದ್ದಾರೆ. ಹೀಗೆ ಮುದ್ರಿಸುವಾಗ ಮೂಲಪತ್ರದ ಎರಡನೇ ಸಾಲಿನಲ್ಲಿ "a Brahmin high priest..." ಎಂದಿರುವ ವಾಕ್ಯವನ್ನು ಕಿತ್ತಿಹಾಕಿ, ಇಲ್ಲದಿರುವ "in the lineage of Madhwacharya" ಎಂಬ ವಾಕ್ಯವನ್ನು ಸೇರಿಸಿ ವಾಚಕರಿಗೆ ವಂಚನೆ ಮಾಡಿದ್ದು ಕಾಣಬಹುದು.

2. ಶ್ರೀರಾಯರಮಠದ ಅಧಿಕೃತ ಮಾಸಪತ್ರಿಕೆಯಾದ ಗುರುಸಾರ್ವಭೌಮ(2004)ದಲ್ಲಿ ಶ್ರೀಮಠದ ಐತಿಹಾಸಿಕ ದಾಖಲೆಗಳು ಎಂಬ ಶಿರೋನಾಮೆಯಡಿಯಲ್ಲಿ ಛಾಪಿಸಿರುವ ಕೈಬರಹದ ಆಂಗ್ಲಪತ್ರವನ್ನು ವಾಚಕರಿಗೆ ಅನುಕೂಲವಾಗುವಂತೆ ಇತ್ತೀಚಿನ ಮುದ್ರಣದ ಶೈಲಿಯಲ್ಲಿ ಮುದ್ರಿಸಿದ್ದಾರೆ. ಹೀಗೆ ಮುದ್ರಿಸುವಾಗ ಮೂಲಪತ್ರದ ಎರಡನೇ ಸಾಲಿನಲ್ಲಿ 'a Brahmin high priest...' ಎಂದಿರುವ ವಾಕ್ಯವನ್ನು ಕಿತ್ತಿಹಾಕಿ ಇಲ್ಲದಿರುವ 'in the lineage of Madhwacharya' ಎಂಬ ವಾಕ್ಯವನ್ನು ಸೇರಿಸಿ ವಾಚಕರಿಗೆ ವಂಚನೆ ಮಾಡಿದ್ದಾರೆ.

(ಈ ತರಹದ ಸಾಹಸಗಳನ್ನು ಅನೇಕ ಕಡೆ ಮಾಡಿದ್ದಾರೆ. ಇಲ್ಲಿ ಒಂದೆರಡನ್ನು ಮಾತ್ರ ಬಹಿರಂಗಪಡಿಸಿದ್ದೇವೆ.)

**ವಾಚಕರೇ ಗಮನಿಸಿ..**

❖ ಉಭಯಮಠಗಳ ಪ್ರಾಚೀನರಾಯಸ ಹಾಗೂ ಶಾಸನಗಳಲ್ಲಿ ಶ್ರೀರಾಮಚಂದ್ರ ಅಥವಾ ಶ್ರೀರಾಮಚಂದ್ರಾಯ ನಮಃ ಎಂಬ ತಲೆಬರಹಗಳಿವೆಯೇ ಹೊರತು ಮೂಲ, ಮಹಾ ಮೊದಲಾದ ಶಬ್ದಗಳಿಲ್ಲದಿರುವುದು ಗಮನಾರ್ಹ.

❖ ಇಲ್ಲ ಸಲ್ಲದ ಅಪ್ರಾಮಾಣಿಕ ವಿಷಯಗಳ ಪ್ರಸ್ತಾಪಗಳು ಬಂದಾಗ ಮುಂಬರುವ ದಿನಗಳಲ್ಲಿ ಈ ರೀತಿಯ ಒಕ್ಕಣಿಕೆಗಳು ಕಾಣಿಸುತ್ತಾ ಬಂದದ್ದು ಸಹಜ.

ಆದ್ದರಿಂದ ಮೂ.ಮಠೇ ಲೇಖಕರು ಉತ್ತರಾದಿಮಠಗಳ ರಾಯಸಗಳನ್ನು ಮುದ್ರಿಸಿ ಮಹಾ ವಿಜಯ ಸಾಧಿಸಿದಂತೆ ಬೀಗುವ ಮೊದಲು ಶ್ರೀರಾಯರಮಠದ ರಾಯಸಗಳನ್ನು ಶಾಸನಗಳನ್ನು ಅಧ್ಯಯನ ಮಾಡುವುದು ಒಳಿತು. ಮೂ.ಮಠೇ. ಕೃತಿಯಲ್ಲಿ ಮುದ್ರಿಸಿದ ಉತ್ತರಾದಿಮಠದ ರಾಯಸಗಳಿಂದ ಲೇಖಕರು ಏನನ್ನೂ ಸಾಧಿಸಿದಂತಾಗಲಿಲ್ಲ. ಇದಕ್ಕೊಂದು ಅಪವಾದವಿದೆ.

**ವಾಚಕರೇ!** ಗಮನಿಸಬೇಕಾದ ಒಂದು ಅಪರೂಪದ ಶಾಸನ

ಶ್ರೀಮದುತ್ತರಾದಿಮಠವು ಮೂಲಸಂಸ್ಥಾನ. ಆ ಮಠದ ಅಧಿಪತಿಗಳು ಮೂಲಸಂಸ್ಥಾನಾಧಿಪತಿಗಳೆಂಬ ಉಲ್ಲೇಖ ಪ್ರಾಚೀನ ತಾಮ್ರಶಾಸನದಲ್ಲುಂಟು. ಅದರ ವಿವರ ಹೀಗಿದೆ -

ಕಾಶೀಮಠದ ಈ ಶಾಸನವು 1992 ರಲ್ಲಿ ಕೊಚಿನ್ ತಿರುಮಲ ದೇವಸ್ವಂ, ಗೋಸ್ರಿಪುರಂ, ಕೊಚ್ಚಿ. ಇವರಿಂದ'' STUDIES ON COPPER PLATE NO.8 ON Shree Kashi Mutt Samsthan'' ಎಂಬ ಪುಸ್ತಕದಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿದೆ. ಈ ತಾಮ್ರಶಾಸನವು ಕೇರಳ ರಾಜ್ಯಸರ್ಕಾರದ ''ದಿ ಎರ್ನಾಕುಲಂ ರಿಜಿನಲ್ ಆಫೀಸ್ ಆಫ್ ದಿ ಸ್ಟೇಟ್ ಆರ್ಚಿವ್ಸ್, ಕೇರಳ'' ಈ ಸಂಸ್ಥೆಯಲ್ಲಿ ಸಂರಕ್ಷಿಸಿಲ್ಪಟ್ಟಿದೆ. ಈ ಪುಸ್ತಕವು ಕಾಶೀಮಠದ ಶ್ರೀಸುಧೀಂದ್ರತೀರ್ಥರ ಆಶೀರ್ವಚನದಿಂದ ಕೂಡಿದೆ ಎಂಬುದು ಗಮನಾರ್ಹ.

ಈ ಶಾಸನದಲ್ಲಿದ್ದಂತೆ ಪರಮಠೀಯರಿಂದಲೂ (ಶ್ರೀರಾಯರ ಮಠದವರೇ ಆದ ಶ್ರೀವಿಜಯೀಂದ್ರತೀರ್ಥರಿಂದ ಪ್ರವರ್ತಿತವಾದ ಕಾಶೀಮಠದ ಪ್ರಾಚೀನಪೀಠಾಧಿಪತಿಗಳಿಂದಲೂ) ಮೂಲಸಂಸ್ಥಾನ ಎಂದು ಕರೆಸಿಕೊಂಡ ಮಠ ಉತ್ತರಾದಿಮಠ. ಇದು ಪ್ರಾಮಾಣಿಕವಾಗಿ ಸಂಶೋಧಿತವಾಗಿ ಹೊರಬಂದ ಶಾಸನ. ಕೇರಳದ ಸರ್ಕಾರವೇ ಹೊರತಂದ ಶಾಸನ. ಇವತ್ತಿಗೂ ಕಾಶೀಮಠದವರಿಂದ ಅನುಮೋದಿತವಾದ ಶಾಸನ ಎಂಬುದು ಗಮನಾರ್ಹ.

ಈ ತಾಮ್ರಶಾಸನದ 30ನೇ ಸಾಲಿನಲ್ಲಿ (ಗಮನಿಸಿ ದಿಕ್ಸೂಚಿ) ''ನೀವು ಮೂಲಸಂಸ್ಥಾನಾಧಿಪತಿಗಳಾದ ಕಾರಣ'' ಎಂಬ ಒಕ್ಕಣೆಯನ್ನು ಕಾಣಬಹುದಾಗಿದೆ. ಈ ಶಾಸನವು ಶ್ರೀಮದುತ್ತರಾದಿಮಠಾಧೀಶರಾದ ಶ್ರೀಸತ್ಯಾಭಿನವತೀರ್ಥ ಶ್ರೀಪಾದಂಗಳವರ ಕಾಲದ್ದು. ಹೆಚ್ಚಿನ ವಿಷಯಗಳಿಗೆ ಇದರ ಕನ್ನಡ ಲಿಪ್ಯಂತರ ನೋಡಿರಿ.



ಕಾಶೀಮಠದ ತಾಮ್ರಶಾಸನದ ನಕಲು – 1



ಕಾಶೀಮಠದ ತಾಮ್ರಶಾಸನದ ನಕಲು – 2

STUDIES ON COPPER PLATE NO. 8

ON

## Shree Kashi Mutt Samsthan

*PRESERVED AT THE ERNAKULAM REGIONAL OFFICE OF THE STATE ARCHIVES, KERALA*

. *AN INTRODUCTION*

*BY*

**N. PURUSHOTHAMA MALLAYA**
HON. SECRETARY
KONKANI BASHA PRACHAR SABHA
PALACE ROAD. KOCHI - 682 002

1992 AD / 1167 M.E.

*Printed and Published by:*
**PRESIDENT, COCHIN THIRUMALA DEVASWOM**
GOSRIPURAM. KOCHI - 682 002
Phone: 225459 & 223552

The plate is in the custody of the State Government since the last 310 years. It is marked as Copper Plate No. 8 by the Government of Kerala. It is kept in the Regional Office of the State Archives, Keraia at Ernakulam. It appears that the Plate was handed over to the then Ruler of Cochin by name Vira Kerala Varma, the Chazhur adoptee, into the Mootha Thavazhi who was installed as the ruler of Cochin by the Dutch, by Sri Raghavendra Tirtha of Sri Kashi Mutt Samsthan to establish the lineage of Sri Raghavendra Tirtha when enmity has caused between the Swamiji of Sri Kashi Mutt and Sri Yogeendra Vadiar of Kumbakonam Mutt, renamed later as Raghavendra Mutt, which fact can be known from the Plate.

Page 18

**Text of the Copper Plate in Kannada Script**

### ಶ್ರೀ ರಾಮಚಂದ್ರಾಯ ನಮಃ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ತ್ವಾದ್ಯನೇಕ ಗುಣ ಸಂಪನ್ನ [illegible] ಶ್ರೀಮದ್ರಾಮಚಂದ್ರ ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕರಾದ ಶ್ರೀಮ[illegible] ತಾಭಿನವತೀರ್ಥ ಶ್ರೀಪಾದ ವಡೆರ ಕರಕಮಲ ಸಂಜಾತರಾದ ಶ್ರೀಮತ್ಸತ್ಯಾ[illegible] ತೀರ್ಥ ಪಾದಂಗಳು ಶಾಲಿವಾಹನಶಕೆ ೧೬೦೩ ಸಾವಿರದ ಆರ್ನೂರು ಮೂರ್[illegible] ದುರ್ಮತಿ ಸಂವತ್ಸರದ ಕಾರ್ತಿಕ ಬಹುಳ ಪಂಚಮಿಯಲ್ಲಿ ಶ್ರೀ ಮದುಪಂದ್ರ ತೀರ್ಥ ಶ್ರೀಪಾದಂಗಳ ಕರಕಮಲ ಸಂಜಾತರಾದ ಶ್ರೀಮದ್ರಾಘವೇಂದ್ರ ತೀರ್ಥ ಶ್ರೀಪಾ ದಂಗಳಿಗೆ ಬರಸಿಕೊಟ್ಟ ತಾಮ್ರಸಾಶನ ಪದೇಕ್ರಮ ಪೆಂತಂದರೆ ನೀವು ಪೂರ್ವ ದಲ್ಲಿ ವಿಜಯಿಂದ್ರ ಸ್ವಾಮಿಗಳಾರಬ್ಧ ಕುಂಭಕೋಣಿಮಠ ಶೆರೆಕೊಂಡು ಇದ್ದಿರಿ. ವಿ[illegible] ಯಿಂದ್ರ ಸುಧೀಂದ್ರ ರಾಘವೇಂದ್ರರು ನಿಂಮ ಹಿರೆರಿಗೆ ನಡಶಿದ ಮರ್ಯಾದಿ[illegible] ಯೋಗೀಂದ್ರವಡೆರು ಕೊಚ್ಚಿಗೆ ಬಂದಾಗಾ ನಿಮಗೆ ನಡಶಿದಿಲ್ಲಾದ ಕಾರಣ ನಿ[illegible] ಅವರಿಗು ವಿರೋಧವಾಯಿತು ಅದೇ ಸಮಯದಲ್ಲಿ ನಂಮ ಸ್ವಾಮಿಗಳು ಅನಂತಶ[illegible] ಯಾತ್ರೆಗೆ ಬಂದದನು ಕೇಳಿ ನೀವು ಕಾರ್ಕೋಳ ಅನಂತ ಭಟ್ಟಗೆ ನಿಂಮ ಯಾವ[illegible] ಪ್ರಾಯ ಹೇಳಿ ಆತನ ನಂಮ ಸ್ವಾಮಿಗಳ ಸಮಿಪಕ್ಕೆ ಕಳಹಿಶಿದ್ದರಿ ನಂಮ ಸ್ವಾಮಿ[illegible] ನಿಂಮ ಅಭಿಪ್ರಾಯ ತಿಳದು ನಿಂಮ ಮನೋರಥಸಿದ್ಧಿ ಮಾಢೆವು ಯಂತವೆಂ[illegible] ಭಟ್ಟನ ಕಯ್ಯಿಂದ ರಾಯಸ ಕಳಿಹಿಸಿದ್ದರು ಆಮೆಲೆ ನೀವು ಕೊಂಕಣ ವರ್ಗ[illegible] ಅಶೇಷ ಬ್ರಾಹ್ಮಣ ಮಹಾಜನಂಳ ಪತ್ರಸಹ ಪ್ರಣಾಮಲೇದಲ್ಲಿ ನಂಮ ಸ್ವಾಮಿ ಗಳ ಸಮಿಪಕ್ಕೆ ಬೆಂದು ನಿಂವು ಸರ್ವಾತ್ಮನಾ ಯೋಗೀಂದ್ರ ವಡೆರ ಬಿಟ್ಟೆವು ನಿಂವು ಮೂಲ ಸಂಸ್ಥಾನಾಧಿಪತಿಗಳಾದ ಕಾರಣ ನಿಂಮ ಶೇರಬೇಕು ಯಂತ ಬಂದಿದ್ದ[illegible] ನಿಂವು ಸಾಸಷ್ಟಿ ಅಂತ್ರೋಜೆ ಬಟ್ಟಕೋಳಬಸರೂರ ಕೊಚ್ಚಿ ಮೊದಲಾದ ಅಲ್ಲಾ[illegible] ಕೊಂಕಣ ವರ್ಗದ ಅಶೇಷ ಬ್ರಾಂಹ್ಮರ ಮೇಲೆ ದಯೆಮಾಡಿ ಮಂತ್ರಮುದ್ರಾಧರಣ ಮಾಡಬೇಕು ಯಂತ ಹೇಳಿ ಕೊಳಲಾಗಿ ನಂಮನು ಅಶೇಷರಿಗೆ ಮಂತ್ರ ಮುದ್ರಾ ಧರಣ ಮಾಡಬೇಕು ಯಂತ ಕಳಹಿಶಿದ್ದರು ನಿಮಗು ಪಲ್ಲಕ್ಕಿ ಛತ್ರ ಸೂರೇಪಾನ ಚಾಮರ ಮೊದಲಾದ ಅಶೇಷ ಬಹುಮಾನ ಮಾಡಿ ಕಳಹಿಶಿದ್ದರು ನಾಂವು ನಂಮ ಸ್ವಾಮಿಗಳ ಆಜ್ಞಾನುಸಾರ ಬಂದು ಅಶೇಷರಿಗೆ ಮಂತ್ರಮುದ್ರಾಧರಣ ಮಾಡಿದೆವು ಮುಂದಕ್ಕ ಇದೇರೀತಿ ಇಂದ ಉತ್ತರೋತ್ತರ ನಿಂಮ ಅಶೇಷರಿಗೆ ಮಂತ್ರಮುದ್ರಾಧ ರಣ ಮಾಡಕೂಡಿಕೊಂಡು ಬಂಧೆವು ನೀವು ಪೂರ್ವದಲ್ಲಿ ಏದು ಪ್ರಕಾರಾ ಮಂತ್ರ ಮುದ್ರಾಧರಣ ಮಾಡುತ ಇದ್ದಿರಿ ಅದೇ ಪ್ರಕಾರ ಉತ್ತರೋತ್ತರಾ ಮಂತ್ರಮುದ್ರಾ ಧರಣ ಮಾಡಿಕೊಂಡು ಬಾಹೋದು ನಾಂವುಂ ನೀವು ಕೂಡಿ ಬಂದಾಗಾ ನಿಂಮ[illegible] ಚಾತುರ್ಮಾಸ್ಯ ಸ್ವಲ್ಪ ವಾದರೆ ನಿಮಗೆ ಮುದ್ರಾಧರಣೆ ಮಾಡಿ ನಾಂವು ಅಶೇಷ[illegible] ಮುದ್ರಾಧರಣ ಮಾಡಬೇಕು ನಿಂಮಲ್ಲಿ ಅಧಿಕ ವಾದರೆ ನಿಂಮ ಕೂಡಿಶಿ ಕೊಂಡ[illegible] ಅಶೇಷರಿಗೆ ಮುದ್ರಾಧರಣ ಮಾಡಬೇಕು ನಂಮ ಸ್ವಾಮಿಗಳು ನಿಮಗೆ ಮಾಡಿದ ಬಹು ಮಾನ ಉತ್ತರೋತ್ತರ ನಡಶೆವು ನಿಮಗೆ ಯಲ್ಲಿ ಆದರೆ ಪಂದರೆ ವಿವಾದ ಬಂದ[illegible] ಪರಿಹರಿಶಿ ಕೊಡ್ದೆವು ಇದೆ ರೀತಿ ನಂಮ ಪರಂಪರಯಲ್ಲಿ ನಿಂಮ ಪರಂಪರಿಗೆ ನಡಶಿ ಕೊಡ್ದೆವು ಇತ.

24

ಕಾಶೀಮಠದ ಶಾಸನದ ಕನ್ನಡ ಲಿಪ್ಯಂತರ

ಆಶ್ಚರ್ಯವೆಂದರೆ...

❖ ಶ್ರೀವಾದೀಂದ್ರತೀರ್ಥರಿಂದ ರಚಿತವಾದ ಗುರುಗುಣಸ್ತವನಂ ಎಂಬ ಗ್ರಂಥಕ್ಕೆ ವಿಶೇಷ ವ್ಯಾಖ್ಯಾನ ರಚಿಸಿದವರು ಶ್ರೀಧೀರೇಂದ್ರತೀರ್ಥರು. ಇವರು ಮಹಾಜ್ಞಾನಿಗಳು. ಶ್ರೀರಾಯರ ಮಠದ ಪರಂಪರೆಯಲ್ಲಿ ಬಂದವರು. ಈ ಗ್ರಂಥದಲ್ಲಿಯ ಶ್ರೀಮತ್‌ಪೂರ್ಣಪ್ರಬೋಧ..... ಎಂಬ ಶ್ಲೋಕಕ್ಕೆ ವ್ಯಾಖ್ಯಾನಿಸುವ ಸಮಯದಲ್ಲಿ ''ಸಂಸ್ಥಾನಪರಂಪರಾಭೇದ- ಮೂಲಭೂತ ಶ್ರೀವಿಬುಧೇಂದ್ರತೀರ್ಥಾನ್ ಪ್ರಸ್ತೌತಿ'' ಎಂಬುದಾಗಿ ಅವತಾರಿಕೆಯನ್ನು ನೀಡಿದ್ದಾರೆ. ಅಲ್ಲದೇ ಇದನ್ನು ಕನ್ನಡಕ್ಕೆ ಅನುವಾದಿಸಿದ ಶ್ರೀದಿ.ರಾಜಾ.ಎಸ್.ಗುರುರಾಜಾಚಾರ್ಯರು ''ಶ್ರೀಮತ್ ಪೂರ್ಣಪ್ರಬೋಧ ಎಂಬ ಪದ್ಯದಿಂದ ಶ್ರೀಮಠದ ಮೂಲಪುರುಷರಾದ ಶ್ರೀವಿಬುಧೇಂದ್ರ-ತೀರ್ಥ ಗುರುಚರಣರನ್ನು ಸ್ತುತಿಸುತ್ತಾರೆ'' ಎಂಬ ಅವತರಣಿಕೆ ಕೊಟ್ಟಿದ್ದಾರೆ.

**ಅವತಾರಿಕೆ— ಈಗ "ಶ್ರೀಮತ್ಪೂರ್ಣಪ್ರಬೋಧ" ಎಂಬ ಪದ್ಯದಿಂದ ಶ್ರೀಮಠದ ಮೂಲಪುರುಷರಾದ ಶ್ರೀವಿಬುಧೇಂದ್ರತೀರ್ಥ ಗುರುಚರಣರನ್ನು ಸ್ತುತಿಸುತ್ತಾರೆ.**

❖ ''ಗುರುಸಾರ್ವಭೌಮ'' ಸಂಸ್ಕೃತ ಮಾಸಪತ್ರಿಕೆ ಜನವರಿ 2009 ರ ಸಂಚಿಕೆಯ ಪುಟ 40 ರಲ್ಲಿ ರಾಘವೇಂದ್ರವಿಜಯಕಾವ್ಯದ 20 ನೇ ಶ್ಲೋಕಕ್ಕೆ ಚಿಕ್ಕ ಶೀರ್ಷಿಕೆ ಕೊಡಲಾಗಿದೆ. ಅದರಲ್ಲಿ '' ಶ್ರೀವಿಬುಧೇಂದ್ರಪರಂಪರಾ'' ಎಂದು ಬರೆಯಲಾಗಿದೆ.

**''ಶ್ರೀ ವಿಬುಧೇಂದ್ರ ಯತಿವರೇಣ್ಯರ ಪರಂಪರೆಯನ್ನು ವಿವರಿಸುತ್ತಾರೆ.**

**ಜಿತಾರಿರಸ್ಮಾದ್ರಘುನಂದನೋऽತಸ್ತತಃ ಸುರೇಂದ್ರಪ್ರಭೃತಿರ್ಬಭೂವುಃ ।**
**ಪವಿತ್ರಿತಾಭೂದಖಿಲಾ ಧರಿತ್ರೀ ಚಿರಂ ಗೃಹೀತಾಶ್ರಮವ್ರತೈರ್ಯೈಃ ॥ ೨೦ ॥**

**ಪದಚ್ಛೇದ— ಜಿತಾರಿಃ, ಅಸ್ಮಾತ್, ರಘುನಂದನಃ, ಅತಃ, ತತಃ, ಸುರೇಂದ್ರಪ್ರಭೃತಯಃ, ಬಭೂವುಃ, ಪವಿತ್ರಿತಾ, ಅಭೂತ್, ಅಖಿಲಾ, ಧರಿತ್ರೀ, ಚಿರಂ, ಗೃಹೀತಾಶ್ರಮ ವ್ರತೈಃ, ಯೈಃ**

❖ ಶ್ರೀಹೆಚ್.ಕೆ. ವೇದವ್ಯಾಸಾಚಾರ್ಯರು ತಮ್ಮ ''ಗುರುಚರಿತೆ'' ಎಂಬ ಪುಸ್ತಕದಲ್ಲೂ (1949) ಶ್ರೀವಿಬುಧೇಂದ್ರರ ಚರಿತ್ರೆಯನ್ನು ನಿರೂಪಿಸುವ ಮೊದಲು ''ಮಹಾಸಂಸ್ಥಾನದ ಪರಂಪರೆ'' ಎಂಬ ದೊಡ್ಡಕ್ಷರದ ಶೀರ್ಷಿಕೆಯನ್ನು ಕೊಟ್ಟದ್ದನ್ನು ಗಮನಿಸಬಹುದು. ಇತ್ತೀಚೆಗೆ ಮುದ್ರಿತವಾದ ಗುರುಚರಿತೆಯ ಆಂಗ್ಲ ಆವೃತ್ತಿಯಲ್ಲೂ ಕೂಡ ಶ್ರೀವಿಬುಧೇಂದ್ರತೀರ್ಥರ ಚರಿತ್ರೆಯ ಪ್ರಾರಂಭದಲ್ಲಿ ದೊಡ್ಡಕ್ಷರಗಳಲ್ಲಿ THE TRADITION OF MAHASAMSTHANA ಎಂದು ಉಲ್ಲೇಖಿಸಿದ್ದಾರೆ.

**THE TRADITION OF MAHASAMSTHANA**
**Vibhudendratheertha (1435 – 1490)**

ಈ ಕಾರಣಗಳಿಂದ ಶ್ರೀವಿಬುಧೇಂದ್ರರ ಮೇಲಿನ ಶ್ರೀಮದಾಚಾರ್ಯರ ವರೆಗಿನ ಯತಿಗಳು ಮಹಾಸಂಸ್ಥಾನದ ಪರಂಪರೆ, ಟ್ರೆಡಿಶನ್ ಗೆ ಸೇರಿದವರಲ್ಲ ಎಂದು ಅವರೇ ಒಪ್ಪಿಕೊಂಡಂತಾಗಿದೆ.

(ವಾಚಕರೇ! ಗುರುಚರಿತೆ ಪುಸ್ತಕದ ಪ್ರಾಚೀನಪ್ರತಿಗಳನ್ನು ಈಗಲೇ ಸಂರಕ್ಷಿಸಿಕೊಳ್ಳಿ. ಮುಂದಿನ ಮರು ಮುದ್ರಣಗಳಲ್ಲಿ ಈ ಒಕ್ಕಣಿಕೆ ಬದಲಾವಣೆಯಾಗುವ ಸಂಭವ ಇದೆ.)

❖ "ಮೂ.ಮತೇ" ಪುಸ್ತಕದ ಪುಟ 149 ರಲ್ಲಿ ಸರ್ಕಾರಿ ಗೆಜೆಟಿಯರ್ ಅನ್ನು ಮುದ್ರಿಸಲಾಗಿದೆ. ಅದರಲ್ಲಿ "Sri Vibudhendra's branch was subsequently called as Raghavendra swami matha after the great philosopher saint sri Raghavendra swami....." ಎಂಬುದಾಗಿ ಬರೆಯಲಾಗಿದೆ.

ಈ ಎಲ್ಲ ಅವತರಣಿಕೆಗಳಿಂದ ಶ್ರೀರಾಘವೇಂದ್ರಸ್ವಾಮಿಗಳ ಮಠವು ಶ್ರೀವಿಬುಧೇಂದ್ರತೀರ್ಥರಿಂದ ಆರಂಭವಾದ ಶಾಖಾಮಠವು. ಮೂಲಮಠವಲ್ಲ ಎಂದು ತಿಳಿದು ಬರುತ್ತದೆ.

ಶ್ರೀರಾಯರ ಮಠದ ಅಧಿಕೃತ ಲೇಖಕರು ಹಾಗೂ ಇನ್ನಿತರ ಅಪ್ರಬುದ್ಧ ಅನಾಮಧೇಯ ಲೇಖಕರು ತಮ್ಮ ಲೇಖನಗಳಲ್ಲಿ ಉತ್ತರಾದಿಮಠದ ಬಗ್ಗೆ ಬಾರಿ ಬಾರಿಗೆ ತೀರಾ ಇತ್ತೀಚಿನ ಕೆಲ ನ್ಯಾಯಾಲಯಗಳಲ್ಲಿ ನಡೆದ ವೈಯಕ್ತಿಕ ಹಾಗೂ ಆಂತರಿಕ ವಿರೋಧಗಳ (ಪೀಠಾಧಿಪತಿಗಳ ಹಾಗೂ ಕೆಲ ಶಿಷ್ಯರ ನಡುವೆ) ಬಗ್ಗೆ ಗೇಲಿ ಮಾಡುತ್ತ ಪರಂಪರೆಯನ್ನು ಅಲ್ಲಗಳೆಯುತ್ತ, ಪೀಠಾಧಿಪತಿಗಳ ಬಗ್ಗೆ ಅನ್ಯಥಾ ಚಿತ್ರಣ ಮಾಡುತ್ತ ಬರೆಯುತ್ತಿರುವುದು ಖಂಡನೀಯವಾಗಿದೆ. ಇನ್ನು ಮೇಲಾದರೂ ಶ್ರೀಮದುತ್ತರಾದಿಮಠದ ಬಗ್ಗೆ ಬರೆಯುವಾಗ ಸರಿಯಾಗಿ ಆ ಮಠದ ಬಗ್ಗೆ ಅದರ ಪರಂಪರೆ ಬಗ್ಗೆ ಅಧ್ಯಯನ ನಡೆಸಿ ಬರೆಯುತ್ತಾರೆಂದು ಆಶಿಸುತ್ತೇವೆ. ಮೂ.ಮತೇ. ಲೇಖಕರ ಕಣ್ಣು ತೆರೆಸಲು ಇಷ್ಟು ಸಾಕೆನಿಸುತ್ತದೆ.!

* * * *

# ಸರ್ಕಾರೀ ಗೆಜೆಟ್‌ನ ವಿಮರ್ಶೆ

ಮೂ.ಮರೇ ಪುಸ್ತಕದ ಮನ್ನುಡಿಯಲ್ಲಿ ಶ್ರೀರಾಯರ ಮಠದ ದಿವಾನರು ''ಗೆಜೆಟ್‌ಗೆ-ಗೆಜೆಟ್‌ನ ಆಧಾರ'' (ಪುಟ xiv) ಎಂದು ಅತಿ ಸಂತೋಷದಿಂದ ಪ್ರತಿಬಂದೀ ಉತ್ತರವನ್ನು ಕೊಟ್ಟಿದ್ದಾರೆ. ಅರ್ಥಾತ್ ಸಸೀ. ಮೂ.ದಲ್ಲಿ ಪ್ರಕಟಿಸಿರುವ ಗೆಜೆಟ್ ಸರಿಯಿಲ್ಲ ಎಂದು ಉತ್ಸಾಹದಿಂದ ಹೇಳಿದ್ದಾರೆ. ಅದಕ್ಕೆ ಪ್ರತಿಯಾಗಿ ಅತೀ ಅತ್ಮವಿಶ್ವಾಸದಿಂದ ಇನ್ನೊಂದು ಗೆಜೆಟ್ ಅನ್ನು ಮುದ್ರಿಸಿದ್ದಾರೆ. ಆದರೆ ಮೂ.ಮರೇ ಪುಸ್ತಕದ ಪುಟ 147 ರಿಂದ 149ರ ವರೆಗೆ ಛಾಪಿಸಿರುವ ಸರ್ಕಾರೀ ಗೆಜೆಟ್ ಉತ್ತರಾದಿಮಠಕ್ಕೆ ಯಾವ ರೀತಿಯಿಂದಲೂ ಬಾಧಕವಾಗಿಲ್ಲ. ಅವರು ಛಾಪಿಸಿರುವ ಗೆಜೆಟ್ ಅವರಿಗೇ ಹೇಗೆ ಗಂಡಾಂತರವಾಗಿದೆ ಎಂಬುದನ್ನೂ ಇಲ್ಲಿ ತೋರಿಸಲಾಗಿದೆ.

1. ಮೂ.ಮರೇ ಪುಸ್ತಕದ ಪುಟ vii ರಲ್ಲಿ ''ಶ್ರೀಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಸೋಲಿಸಿದರು'' ಎಂಬ ವಿಷಯವನ್ನು ಕಳೆದ ನೂರಾರು ವರ್ಷಗಳಲ್ಲಿ ಹಿಂದೆ ಉತ್ತರಾದಿಮಠೀಯರು ಸೃಷ್ಟಿಸಿದ ಸುಳ್ಳು ಕಥೆಯನ್ನು, ಉತ್ತರಾದಿಮಠೀಯರು ಸೃಷ್ಟಿಸಿದ ಕೃತ್ರಿಮತೆಯನ್ನು ಪರಿಹರಿಸುವುದು ಈಗ ನುಂಗಲಾರದ ತುತ್ತಾಗಿದೆ'' ಎಂದು ಮೂದಲಿಸಿದ್ದಾರೆ.

   ಆದರೆ, ಅವರ ಪುಸ್ತಕದ ಪುಟ 148ರಲ್ಲಿ ಅವರೇ ಪ್ರಮಾಣವೆಂದು ಛಾಪಿಸಿರುವ ಸರ್ಕಾರಿ ಗೆಜೆಟ್‌ನಲ್ಲಿ "Akshobhyatirtha who according to the local chronicles and pillar inscription (Now lost) at Mulubagal (kolar dt) is said to have encountered the great Vidyaranya, the teacher of the founders of the Vijayanagar empire and defeated him in the interpretation of the upanishadic passage Tattwamasi. Visistadvaita scholar Vedanta Desika being the madyasta (umpire) in the disputation" ಎಂದು ಸ್ಪಷ್ಟವಾಗಿದೆ. ಹೀಗಾಗಿ,

   - ಉತ್ತರಾದಿಮಠೀಯರು ಸೃಷ್ಟಿಸಿದ ಈ ಸುಳ್ಳು ಕಥೆಯನ್ನು ಅಂದಿನ ಬ್ರಿಟೀಷ್ ಸರ್ಕಾರ ದಾಖಲಿಸಿದ್ದೇಕೆ?
   - ಅಷ್ಟೇ ಅಲ್ಲದೇ ಶ್ರೀಅಕ್ಷೋಭ್ಯತೀರ್ಥರು ಶ್ರೀವಿದ್ಯಾರಣ್ಯರನ್ನು ಸೋಲಿಸಿದ ವಿಷಯ ಶ್ರೀರಾಘವೇಂದ್ರ ವಿಜಯದ 2ನೇ ಸರ್ಗದ 11ನೇ ಶ್ಲೋಕದಲ್ಲಿ ಅತಿ ಸ್ಪಷ್ಟವಾಗಿ ದಾಖಲಿಸಲಾಗಿದೆ.

**ದೃಢಾಸಿನಾ ತತ್ವಮಸೀತಿವಾಚಾ ಸಾಮರ್ಥ್ಯಭಾಜಾ ಪರಜೀವಭೇದೇ ।**
**ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂ ಬಿಭೇದ ॥**

ಇದರಿಂದ ಉತ್ತರಾದಿಮಠೀಯರು ಸೃಷ್ಟಿಸಿದ ಸುಳ್ಳುಕಥೆಯನ್ನು ಶ್ರೀರಾಘವೇಂದ್ರವಿಜಯಕಾರರೂ ಸಹ ಅನುಮೋದಿಸಿದ್ದಾರೆಂದಾಯಿತು ಅಲ್ಲವೇ?

- ಪ್ರತಿದಿನ ರಾಯರ ಮಠದಲ್ಲಿ ಗುರುಪರಂಪರಾಸ್ತೋತ್ರವನ್ನು ಗಟ್ಟಿಯಾಗಿ ಹೇಳಿಕೊಳ್ಳುವಾಗ -

**ಯೋ ವಿದ್ಯಾರಣ್ಯವಿಪಿನಂ ತತ್ವಮಸ್ಯಸಿನಾಽಚ್ಛಿನತ್ ।**
**ಶ್ರೀಮದಕ್ಷೋಭ್ಯತೀರ್ಥಾಯ ನಮಸ್ತಸ್ಮೈ ಮಹಾತ್ಮನೇ ॥**
**(ಶ್ರೀಮದಕ್ಷೋಭ್ಯತೀರ್ಥಾಖ್ಯಾನ್ ಉಪತಿಷ್ಠೇ ಗುರೂನ್ ಮಮ ॥** -ಗುರುಚರಿತೆ)

ಎಂದು ಹೇಳುತ್ತಿರುವುದು ಸಹ ಶ್ರೀಉತ್ತರಾದಿಮಠೀಯರ ಸುಳ್ಳು ಕಥೆಯನ್ನು ಆಧರಿಸಿಕೊಂಡು ಎಂದು ಒಪ್ಪಿಕೊಂಡಂತಾಯಿತಲ್ಲವೇ.

ಇದರಿಂದ ಅವರೇ ಆಧಾರವೆಂದು ಛಾಪಿಸಿರುವ ಈ ಗೆಜೆಟ್ ಈ ವಿಷಯದಲ್ಲಿ ಅವರಿಗೇ ನುಂಗಲಾರದ ತುತ್ತಾಗಿದೆ.

2. ಮೂ.ಮಠೇ ಪುಸ್ತಕದ ಪುಟ xiiರಲ್ಲಿ ಅವರ ಮಠದ ದಿವಾನರು ''ಶ್ರೀವಿದ್ಯಾನಿಧಿಗಳಿಂದ ಆರಂಭವಾದ ಸಂಸ್ಥೆಯು (ಉತ್ತರಾದಿಮಠ) ಅವರಿಗೆ ಏನೂ ಸಂಬಂಧ ಪಡದ ಶ್ರೀಜಯತೀರ್ಥರು, ಶ್ರೀನರಹರಿತೀರ್ಥರು, ಶ್ರೀಪದ್ಮನಾಭತೀರ್ಥರನ್ನು ನಮ್ಮ ತಂದೆ, ನಮ್ಮ ತಾತ ಎಂದು ಪದೇ ಪದೇ ಹೇಳಿಕೊಳ್ಳುವುದು ಶೋಭೆಯಲ್ಲ'' ಎಂದು ಬರೆದಿದ್ದಾರೆ. ಅದರಂತೆ ಮೂ.ಮಠೇ ಲೇಖಕರ ಪ್ರಕಾರ (ಪುಟ 124) ಮತ್ತು ವಿಜಯೀಂದ್ರವಿಜಯದ ಪ್ರಕಾರ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರ ಶಿಷ್ಯರೇ ಅಲ್ಲ.

ಆದರೆ ಅವರೇ ಆಧಾರವೆಂದು ಛಾಪಿಸಿರುವ ಗೆಜೆಟ್‌ನಲ್ಲಿ - "One represented by SENIOR Sri Vibudhendra and other by the JUNIOR Sri Vidyanidhi. Sri Vibudhendra"s branch was subsequently called as Sri Raghavendra Swamy matha..." ಎಂದಿದೆ. **ಹೀಗಾಗಿ,**

- ❖ ಆಧಾರವಾಗಿ ಛಾಪಿಸಿರುವ ಈ ಗೆಜೆಟ್‌ನಲ್ಲಿ ಶ್ರೀರಾಮಚಂದ್ರತೀರ್ಥರ ಶಿಷ್ಯರಲ್ಲಿ ಆಶ್ರಮಜ್ಯೇಷ್ಠರು ಶ್ರೀವಿಬುಧೇಂದ್ರರು ಮತ್ತು ಆಶ್ರಮಕನಿಷ್ಠರು ಶ್ರೀವಿದ್ಯಾನಿಧಿಗಳು ಎಂದಿರುವುದರಿಂದ ಶ್ರೀವಿದ್ಯಾನಿಧಿತೀರ್ಥರು ಶ್ರೀರಾಮಚಂದ್ರತೀರ್ಥರ ಶಿಷ್ಯರೇ ಅಲ್ಲ ಎಂಬ ನಿಲುವನ್ನು ಅವರೇ ಕೊಟ್ಟ ಗೆಜೆಟ್ ತಳ್ಳಿ ಹಾಕುತ್ತಿದೆ.
- ❖ ಜ್ಯೇಷ್ಠಪರಂಪರೆಯಾದ ಶ್ರೀವಿಬುಧೇಂದ್ರರ ಪರಂಪರೆಯೇ ಮೂಲ ಪರಂಪರೆಯೆಂದು ವಾದಿಸುವುದಾದರೆ, ಹಿಂದೆ ಶ್ರೀವಿದ್ಯಾಧಿರಾಜರ ಕಾಲದಲ್ಲೂ ಇಂತಹದ್ದೇ ವಿಭಜನೆಯ ಘಟನೆ ಆದದ್ದಿದೆ. ಆಗ ಆಶ್ರಮಜ್ಯೇಷ್ಠರಾದ ಶ್ರೀರಾಜೇಂದ್ರತೀರ್ಥರ ಪರಂಪರೆಯೇ (ಇಂದಿನ ಶ್ರೀವ್ಯಾಸರಾಜಮಠ) ಮೂಲ ಪರಂಪರೆ, ತಮ್ಮದಲ್ಲವೆಂದು ಶ್ರೀರಾಯರ ಮಠದವರು ಒಪ್ಪಲು ಯಾಕೆ ಸಿದ್ಧರಿಲ್ಲ? ದಿ. ಡಾ|| ಬಿ.ಎನ್.ಕೆ ರವರ ನಿಲುವೂ ಇದೇ ಆಗಿದೆ. ಈ ವಿಷಯದಲ್ಲಿ ಬಿ.ಎನ್.ಕೆ ರವರ ನಿಲುವನ್ನು ಯಾಕೆ ಅನುಮೋದಿಸುತ್ತಿಲ್ಲ? ಶ್ರೀರಾಜೇಂದ್ರತೀರ್ಥರಿಗೆ ಪಟ್ಟಾಭಿಷೇಕವಾಗಿರಲಿಲ್ಲವೆ? ಆಗಿತ್ತೆಂದರೆ ಅವರದ್ದೇ ಮೂಲಪರಂಪರೆಯಾಗುತ್ತದೆ. ಆಗಿಲ್ಲವೆಂದರೆ ವ್ಯಾಸರಾಜಮಠವೂ ಬಿಡಿಸನ್ಯಾಸಿಗಳ ಮಠವೆಂದು ರಾಯರ ಮಠದವರು ಆರೋಪಿಸಿದಂತಾಗುತ್ತದೆ.

3. ಇತ್ತೀಚಿಗೆ ಯಾವ ನಿರವಕಾಶ ಆಧಾರವನ್ನು ಕೊಡದೆ ಶ್ರೀರಾಯರಮಠದವರು ಹಾಗು ಡಾ|| ಬಿ.ಎನ್.ಕೆ ರವರು ಶ್ರೀಜಯತೀರ್ಥರ ಮೂಲವೃಂದಾವನ ಮಳಖೇಡದಲಿಲ್ಲ. ನವವೃಂದಾವನ ಗಡ್ಡೆಯಲ್ಲಿರುವ ಪ್ರಮಾಣಪ್ರಮಿತ ಶ್ರೀರಘುವರ್ಯರ ವೃಂದಾವನವೇ ಶ್ರೀಜಯತೀರ್ಥರ ಮೂಲ ವೃಂದಾವನವೆಂದು ಹುಯಿಲೆಬ್ಬಿಸಿದ್ದಾರೆ. ಆದರೆ ಅವರ ಈ ನಿಲುವನ್ನು ಅವರೇ ಆಧಾರವಾಗಿ ಕೊಟ್ಟಿರುವ ಈ ಗೆಜೆಟ್ ತಳ್ಳಿ ಹಾಕುತ್ತಿದೆ – "Sri Jayatirtha ruled for twentyone years. His vrindavana (tomb) is at Malkhed, twenty three miles south east of Gulbarga–".

ಸ.ಸೀ.ಮೂ. ಪುಸ್ತಕದ ಪುಟ 53-54 ರಲ್ಲಿ ಸ್ಪಷ್ಟವಾಗಿ "Extract from Bombay Gazetter – Chapter III, P.No. 58-59, Edited and published by james M. Cambell – Compiled During 1863 AD. ಎಂದು ತಿಳಿಸಿಲಾಗಿದೆ. (Editing ಮುಗಿದಿದ್ದು 1873 ಮತ್ತು ಪ್ರಕಟಿಸಿದ್ದು 1884ರಲ್ಲಿ).

ಮೂ.ಮಠೇ ಪುಸ್ತಕದಲ್ಲಿ ಅವರ ಮಠದ ದಿವಾನರು ಅರೋಪಿಸಿದಂತೆ James M. Cambell ಉತ್ತರಾದಿಮಠದ ಶಿಷ್ಯನಲ್ಲ. ಬ್ರಿಟಿಷ್ ಸರ್ಕಾರ ಇಂತಹ ವ್ಯಕ್ತಿಗಳನ್ನು ಈ ಕಾರ್ಯಕ್ಕೆ ನೇಮಿಸುವಾಗ ಹೇಗೆ ನೇಮಿಸುತ್ತಿತ್ತು ಮತ್ತು ಆ ಅಧಿಕಾರಿಗಳು ವಿಷಯಗಳನ್ನು ಹೇಗೆ ಸಂಪಾದಿಸಿ ವಿಮರ್ಶಿಸಿ ಹೇಗೆ ದಾಖಲು ಮಾಡುತ್ತಿದ್ದರು ಎಂಬುದನ್ನು ಸಹ ಗೆಜೆಟ್‌ನ ಪ್ರಸ್ತಾವನೆಯಲ್ಲಿ ಕಾಣಿಸಲಾಗಿದೆ. ಅದರಂತೆ ಯಾವುದೇ ಗೆಜೆಟ್ ವಿಷಯ ಪರಿಷ್ಕೃತವಾಗಿ ಪುನರ್ ಮುದ್ರಣವಾಗಿದ್ದರೆ ಯಾವ ಭಾಗದ ಯಾವ ವಿಷಯ ಪರಿಷ್ಕೃತವಾಗಿದೆ ಎಂಬ ಮಾಹಿತಿಯ ಉಲ್ಲೇಖ ಅವಶ್ಯ ಇರಲೇಬೇಕು.

ಉದಾ- In Modification of the earlier Notification dated... ಇತ್ಯಾದಿಯಾಗಿ. ಅಲ್ಲದೇ ಈ ಗೆಜೆಟನ್ನು ಮುಂಬಯಿ ಸರ್ಕಾರವು 1959ರಲ್ಲಿ ಪುನರ್- ಮುದ್ರಣ ಮಾಡಿದೆ. ಈ ಮುಂಬಯಿ ಸರ್ಕಾರಿ ಗೆಜೆಟ್‌ನ ಪ್ರಸ್ತಾವನೆಯಲ್ಲಿ (ಪುಟ 8) ಪೂರ್ವದ ಗೆಜೆಟ(ಕ್ರಿ.ಶ. 1884)ನ್ನು ಪ್ರಸ್ತಾಪ ಮಾಡಿ - It contained **authentic** and useful information on several aspects of life in a distirict and was considered to be of great value.....

ಈ ಪೂರ್ವದ ಗೆಜೆಟ್ (ಕ್ರಿ.ಶ.1884)ನ್ನೇ ಸಸೀ.ಮೂ. ಗ್ರಂಥದಲ್ಲಿ ಛಾಪಿಸಿದ್ದು. ಇದರಲ್ಲಿರುವ ವಿಷಯ ಸರಿಯಿಲ್ಲವಾಗಿದ್ದರೆ ಅಥವಾ ವ್ಯತ್ಯಾಸವಿದ್ದಿದ್ದರೆ ಮುಂದಿನ ಪರಿಷ್ಕೃತ ಗೆಜೆಟ್‌ನಲ್ಲಿ ಅದರ ಬಗ್ಗೆ ಪ್ರಸ್ತಾಪಿಸಿ, ನಿರಾಕರಿಸಿ, ಹೊಸ ವಿಷಯಕ್ಕೆ ಆಧಾರ ಕೊಟ್ಟು ದಾಖಲಿಸಬೇಕಿತ್ತು. ಆದರೆ ಕ್ರಿ.ಶ 1959ರಲ್ಲಿ ಪುನಃ ಮುದ್ರಿಸಿದ ಈ ಗೆಜೆಟ್‌ನಲ್ಲಿ ಇಂತಹ ವಿಷಯದ ಬಗ್ಗೆ ಉಲ್ಲೇಖಗಳಿಲ್ಲ ಎಂಬುದು ಗಮನಾರ್ಹ. ಅಷ್ಟೇ ಅಲ್ಲದೆ ಎಂತಹ ವಿಷಯವನ್ನು ಗೆಜೆಟ್‌ನಲ್ಲಿ ಪರಿಷ್ಕರಿಸಿ ಪುನರ್‌ಮುದ್ರಿಸಬಹುದು ಎಂಬುದರ ಬಗ್ಗೆ ಗೆಜೆಟ್‌ನಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

In the revised gazetter only a general outline of the practices and customs of main sections of population has been given. After Independence the Ideological concept of secular democracy has been altered.

ಅಂದರೆ, ಧಾರವಾಡ ಜಿಲ್ಲೆಯಲ್ಲಿ ವಾಸಿಸುತ್ತಿದ್ದ ಜನಗಳ ಬಗ್ಗೆ, ಜನಗಣತೆ ಬಗ್ಗೆ ಜಾತ್ಯತೀತೆಗೆ ಅನುಗುಣವಾಗಿ ವ್ಯತ್ಯಸ್ತವಾದ ವಿಷಯಗಳಿವೆ.

ಹೀಗಾಗಿ ಉತ್ತರಾದಿಮಠ ಛಾಪಿಸಿದ ಗೆಜೆಟ್ ಸರಿಯಿಲ್ಲವೆಂದು ಆರೋಪಿಸಿ ತಾವು ಆಧಾರವೆಂದು ಛಾಪಿಸಿರುವ ಗೆಜೆಟ್‌ನಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಪಟ್ಟ ಯಾವ ಮಾರ್ಪಾಟು ಆಗಿಲ್ಲವಾದ್ದರಿಂದ ''ಉತ್ತರಾದಿಮಠದ ಶಿಷ್ಯರಿಂದ ರಚಿತವಾದ ಗೆಜೆಟ್'' ಎಂಬ ಆರೋಪಣೆ ಶುದ್ಧ ಸುಳ್ಳು. ಕಾನೂನಿಗೂ ವಿರುದ್ಧ.

ಮೇಲಿನ ಅಂಶಗಳನ್ನು ಗಮನಿಸಿದಾಗ ಅವರೇ ಆಧಾರವೆಂದು ಛಾಪಿಸಿರುವ ಈ ಗೆಜೆಟ್ ಅವರಿಗೇ ಅನೇಕ ಅಂಶಗಳಲ್ಲಿ ವಿರುದ್ಧವಾಗಿರುವುದು ಸ್ಪಷ್ಟ.

ಮೂ.ಮಠೇ ಪುಸ್ತಕದ ಅನುಬಂಧದಲ್ಲಿ ಪ್ರಕಟಿಸಿರುವ ಗೆಜೆಟ್‌ನ ಆ ಭಾಗದಲ್ಲಿ ಭಾರತಸರ್ಕಾರದ ಚಿಹ್ನೆ (ಎಂಬ್ಲಮ್) ಇದೆ. ಆದರೆ ಗೆಜೆಟ್‌ನ ಮೂಲಪ್ರತಿಯಲ್ಲಿ ಆ ಭಾಗದಲ್ಲಿ ಚಿಹ್ನೆ ಇರುವುದಿಲ್ಲ. ಗಣಕಯಂತ್ರದ ಸಹಾಯದಿಂದ ಅಲ್ಲಿ ಅದನ್ನು ಅಳವಡಿಸಿ ವಾಚಕರಿಗೆ ತಪ್ಪು ಮಾಹಿತಿಯನ್ನು ನೀಡಲಾಗಿದೆ. ಇದೂ ಕಾನೂನಿಗೆ ವಿರುದ್ಧವಾಗಿದೆ.

* * * *

# ಎಪಿಗ್ರಾಫಿಕಾ ಇಂಡಿಕಾದ ಮಿಸ್‌ಇಂಡಿಕೇಶನ್ಸ್

ಮೂ.ಮಠೇ ಲೇಖಕರು ತಮ್ಮ ಪುಸ್ತಕದ ಪುಟ 150ರಲ್ಲಿ "ಎಪಿಗ್ರಾಫಿಕಾ ಇಂಡಿಕಾದಲ್ಲಿ ದಾಖಲಾಗಿರುವ ಶ್ರೀಮನ್ ಮಧ್ವಾಚಾರ್ಯರಿಂದ ಪ್ರವರ್ತಿತವಾದ ಶ್ರೀರಾಯರ ಮಠದ ಪರಂಪರೆಯ ಉಲ್ಲೇಖ" ಎಂಬ ಕೆಳಬರಹದಿಂದೊಡಗೂಡಿದ ಆಧಾರವನ್ನು ಛಾಪಿಸಿದ್ದಾರೆ. ಈ ಆಧಾರ ಎಷ್ಟರ ಮಟ್ಟಿಗೆ ವಿಶ್ವಾಸಾರ್ಹ ಎಂಬುದನ್ನು ಪರೀಶೀಲಿಸೋಣ:

1. Surendra Tirtha of the Purvadi OR Sumatimdra matha who was the twelfth in descent from Madhvacharya, the founder of the Dvaita School of Philosophy, was the Spiritual Guru of Vijayindra. It is from him that he received the robes of Sanyasa....

ಈ ಎಪಿಗ್ರಾಫಿಕಾ ಇಂಡಿಕಾದ ವಾಕ್ಯಗಳಿಂದ ಸ್ಫುಟವಾಗಿ ಶ್ರೀರಾಯರ ಮಠದ ಶ್ರೀಸುರೇಂದ್ರತೀರ್ಥರಿಂದಲೇ ಶ್ರೀವಿಜಯೀಂದ್ರರಿಗೆ ಸನ್ಯಾಸಾಶ್ರಮವಾಗಿದೆ ಎಂದು ತಿಳಿಯುತ್ತಿದೆ. ಆದರೆ,

- ❖ ಶ್ರೀರಾಯರ ಮಠದ ಅಧಿಕೃತ ಪ್ರಕಟಣೆಯಾದ ಗುರುಚರಿತೆ ಲೇಖಕರಾದ ದಿ. ಎಚ್.ಕೆ. ವೇದವ್ಯಾಸಾ-ಚಾರ್ಯರು ಪುಟ 135ರಲ್ಲಿ "ಶ್ರೀವ್ಯಾಸರಾಜರು ವಿದ್ಯಾಪೀಠಕ್ಕೆ ಹೋಗಿ ಅಲ್ಲಿ ಶ್ರೀವಾದಿರಾಜರು, ಶ್ರೀವಿಷ್ಣುತೀರ್ಥರು (ವಿಜಯೀಂದ್ರರು) ಶ್ರೀನಾರಾಯಣತೀರ್ಥರೇ ಮೊದಲಾದ ಯತಿಗಳಿಗೆ ಸುಧಾದಿ ಸದ್ಗ್ರಂಥಗಳನ್ನು ಪಾಠ ಹೇಳುವರು, ಜೊತೆಗೆ ಶ್ರೀಸುರೇಂದ್ರತೀರ್ಥರು ಕುಳಿತಿದ್ದು ಪ್ರವಚನವನ್ನು ಕೇಳಿ ಆನಂದಿಸುವರು....." ಎಂದು ಬರೆದಿದ್ದಾರೆ.
- ❖ ಶ್ರೀರಾಯರ ಮಠದ ಮತ್ತೊಬ್ಬ ಅಧಿಕೃತ ಲೇಖಕರಾದ ದಿ. ರಾಜಾ ಎಸ್.ಗುರುರಾಜಾಚಾರ್ಯರು ತಮ್ಮ ಅಜಯ್ಯವಿಜಯೀಂದ್ರರು ಎಂಬ ಪುಸ್ತಕದ ಪುಟ 8 ರಲ್ಲಿ ಶ್ರೀವ್ಯಾಸರಾಜರು ಶ್ರೀಸುರೇಂದ್ರರನ್ನು ಕುರಿತು ಹೇಳುವ ಸಂದರ್ಭದಲ್ಲಿ "ವಿಠಲನೊಡನೆ ಸಂಚಾರ ಹೊರಟೆವು. ಅಂದಿನಿಂದ ವಿಠಲ ನಮ್ಮ ಪ್ರೀತಿಯ ಮಗುವಾದ.....ಅವನಿಗೆ ಚೌಲ, ಉಪನಯನಾದಿಗಳನ್ನು ಮಾಡಿಸಿ....ವೇದಾಂತ ಪಾಠ ಹೇಳಿದೆವು. ನಂತರ ಆ ವಿಠಲಾಚಾರ್ಯನ ವೈರಾಗ್ಯ ಭಕ್ತ್ಯಾದಿಗಳನ್ನು ಕಂಡು ಅವನಿಗೆ ಸನ್ಯಾಸವನ್ನು ಕೊಟ್ಟು ಚತುಃಷಷ್ಟಿಕಲೆಗಳನ್ನು ಉಪದೇಶಿಸಿದೆವು. ಆ ಬಾಲ ಸನ್ಯಾಸಿಯೇ ಈ ವಿಷ್ಣುತೀರ್ಥರು..." ಎಂದು ಬರೆದಿದ್ದಾರೆ.
- ❖ ವಿಜಯೀಂದ್ರವಿಜಯದಲ್ಲಿಯೂ ಶ್ರೀವ್ಯಾಸರಾಜರೇ ಶ್ರೀವಿಜಯೀಂದ್ರರಿಗೆ (ವಿಷ್ಣುತೀರ್ಥರಿಗೆ) ಅಧ್ಯಯನಮಾಡಿಸಿ ಸನ್ನ್ಯಾಸಾಶ್ರಮವನ್ನು ನೀಡಿದರು ಎಂಬುದಾಗಿ ಉಲ್ಲೇಖಿಸಿದ್ದಾರೆ-

**ಉಪನೀತೋ ದ್ವಿಜೈರ್ಬಾಲೋ ವವೃಧೇ ಚಂದ್ರವತ್ಸದಾ ।**
**ಅಧೀತೋ ಸ ಮಯಾ ಸಮ್ಯಕ್ ತುರ್ಯಾಶ್ರಮಮುಪಾಗತಃ ॥ (5-30)**

ಮೇಲಿನ ಅಧಿಕೃತ ಹೇಳಿಕೆಗಳಿಂದ ಶ್ರೀವಿಷ್ಣುತೀರ್ಥರಿಗೆ (ಶ್ರೀವಿಜಯೀಂದ್ರರಿಗೆ) ಸನ್ನ್ಯಸವನ್ನು ಕೊಟ್ಟವರು ಶ್ರೀಸುರೇಂದ್ರರಲ್ಲ. ಶ್ರೀವ್ಯಾಸರಾಜರೇ ಎಂದು ತಿಳಿದು ಬರುತ್ತದೆ. ಹೀಗಾಗಿ ಶ್ರೀರಾಯರ ಮಠದ ಅಧಿಕೃತ ಪ್ರಕಟಣೆಗಳಿಗೂ ಎಪಿಗ್ರಾಫಿಕಾ ಇಂಡಿಕಾದ ಹೇಳಿಕೆಗೂ ಪರಸ್ಪರ ವಿರೋಧವುಂಟು.

2. The following is the traditional list of Svamins of this Matha as far as Raghavendra Tirtha :-

| | | | |
|---|---|---|---|
| a. Madhvacharya | b. Padmanabha T | c. Madhava T | d. Jayathirtha |
| e. Vidyadhiraja T | f. Kavindra T | g. Vagish T | h. Ramachandra T |
| i. Narayana T | j. Vibudhendra T | k. jitamitra T | l. Raghunandana T |
| m. Surendra T | n. Vijayindra T | o. Sudhindra T | p. Raghavendra T. |

ಎಂದು ಅದೇ ಎಪಿಗ್ರಾಫಿಕಾ ಇಂಡಿಕಾದಲ್ಲಿ ಛಾಪಿಸಲಾಗಿದೆ. ಇದು ಶ್ರೀಮದಾಚಾರ್ಯರಿಂದ ಪ್ರಾರಂಭಿಸಿ ಶ್ರೀರಾಘವೇಂದ್ರತೀರ್ಥರವರೆಗೆ ಪರಂಪರೆಯಲ್ಲಿ ಬಂದ ಯತಿಗಳ ಪಟ್ಟಿ.

ಆಶ್ಚರ್ಯವೆಂದರೆ, ಈ ಪಟ್ಟಿಯಲ್ಲಿ

**ಅ. ಶ್ರೀಪದ್ಮನಾಭತೀರ್ಥರ ನಂತರ ಶ್ರೀನರಹರಿತೀರ್ಥರ ಹೆಸರಿಲ್ಲ.**

**ಆ. ಶ್ರೀಮಾಧವತೀರ್ಥರ ನಂತರ ಶ್ರೀಅಕ್ಷೋಭ್ಯತೀರ್ಥರ ಹೆಸರಿಲ್ಲ.**

ಇನ್ನೂ ಆಶ್ಚರ್ಯವೆಂದರೆ,

3. ಶ್ರೀರಾಮಚಂದ್ರತೀರ್ಥರ ನಂತರ ಶ್ರೀನಾರಾಯಣತೀರ್ಥರ ಹೆಸರು ಸೇರಿಕೊಂಡಿದೆ. ಅವರ ನಂತರ ಶ್ರೀವಿಬುಧೇಂದ್ರತೀರ್ಥರನ್ನು ಹೆಸರಿಸಿದೆ. ಈ ನಾರಾಯಣತೀರ್ಥರು ಯಾರು? ಶ್ರೀರಾಯರ ಮಠದ ಯಾವ ಅಧಿಕೃತ ಪ್ರಕಟಣೆಗಳಲ್ಲೂ ಅವರ ಪರಂಪರೆ ಹೇಳುವಾಗ ಈ ಶ್ರೀನಾರಾಯಣತೀರ್ಥರ ಹೆಸರಿಲ್ಲ ಎಂಬುದು ಗಮನಾರ್ಹ.

4. ಎಪಿಗ್ರಾಫಿಕಾದ ಪ್ರಕಾರ ಶ್ರೀರಾಮಚಂದ್ರತೀರ್ಥರಿಗೆ ಶ್ರೀವಿಬುಧೇಂದ್ರರಿಗಿಂತ ಜೇಷ್ಠರಾಗಿ ಶ್ರೀನಾರಾಯಣ-ತೀರ್ಥರೆಂಬ ಸನ್ಯಾಸಿ ಶಿಷ್ಯರಿದ್ದರೆಂದು ಸಿದ್ಧವಾಗಿರುತ್ತದೆ. ಮೂ.ಮಠೇ ಲೇಖಕರು ಪುಟ 147 ರಲ್ಲಿ ''ಸರ್ಕಾರದ ದಾಖಲೆಗಳಲ್ಲಿ ಜ್ಯೇಷ್ಠ ಪರಂಪರೆಯೆಂಬ ಹೆಗ್ಗಳಿಕೆಗೆ ಪಾತ್ರರಾಗಿರುವುದರ ಉಲ್ಲೇಖ'' ಎಂದು ಮುಂಬಯಿ ಗೆಜೆಟ್‌ನ ಆರಂಭದಲ್ಲಿ ಹೇಳಿಕೊಂಡಿದ್ದಾರೆ. ಇದರಿಂದ ಅವರೇ ಆಧಾರವೆಂದು ಛಾಪಿಸಿರುವ ಈ ಎರಡು ಸರ್ಕಾರಿ ದಾಖಲೆಗಳು ಪರಸ್ಪರ ವಿರುದ್ಧವಾಗಿವೆ. ಜ್ಯೇಷ್ಠ ಪರಂಪರೆಯವರು ನಾರಾಯಣತೀರ್ಥರಾಗುತ್ತಾರೆ ಶ್ರೀವಿಬುಧೇಂದ್ರರಲ್ಲ. ಇದು ಅವರಿಗೆ ಬಾಧಕವಾಗಿದೆ. ಅಲ್ಲದೇ ಶ್ರೀವಿಬುಧೇಂದ್ರರು ಶ್ರೀನಾರಾಯಣತೀರ್ಥರ ಶಿಷ್ಯರೆಂದಾಯಿತು. ಶ್ರೀರಾಮಚಂದ್ರತೀರ್ಥರ ಶಿಷ್ಯರಲ್ಲ.

ತಮ್ಮ ಪರಂಪರೆಯನ್ನೇ ಸರಿಯಾಗಿ ಗುರುತಿಸಿ, ಪರಂಪರಾಪ್ರಾಪ್ತ ಯತಿಗಳ ಪಟ್ಟಿಯನ್ನೇ ಸರಿಯಾಗಿ ತಿಳಿಸದ ಈ ಎಪಿಗ್ರಾಫಿಕಾಇಂಡಿಕಾವನ್ನು ಆಧಾರವನ್ನಾಗಿ ಛಾಪಿಸಿರುವುದು ಆಶ್ಚರ್ಯಕರವಾಗಿದೆ. ಈ ಎಪಿಗ್ರಾಫಿಕಾ ಇಂಡಿಕಾ ಮಿಸ್ ಇಂಡಿಕೇಶನ್ಸ್ ಕೊಡುತ್ತಿರುವ ಕಾರಣ ಅವರಿಗೇ ಬಾಧಕವಾಗಿದೆ.

* * * *

# ''ಮಧ್ವರಾಯರ ದೇವತಾರ್ಚನೆಯ...''

ಶ್ರೀಪುರಂದರದಾಸರ ''ಮಧ್ವರಾಯರ ದೇವತಾರ್ಚನೆಯ ಪ್ರಸಿದ್ಧ ರಘುನಾಥರು ಪೂಜಿಸುವ ಸೊಬಗು'' ಎಂಬ ಕೃತಿಯ ಮೇಲೆ ಮೂ.ಮಠೇ ಪುಸ್ತಕದ ಪುಟ 87, 88 ರಲ್ಲಿ ಮಾಡಿರುವ ಆಕ್ಷೇಪಗಳು ಹೀಗಿವೆ –

1. ಈ ಪದದಲ್ಲಿ ಕಡೆಯ ನುಡಿಯಲ್ಲಿ ದ್ವಿತೀಯಾಕ್ಷರಪ್ರಾಸವಿಲ್ಲ.
2. 28 ಮೂರ್ತಿಗಳ ಲೆಕ್ಕದಲ್ಲಿ ಮೂರ್ತಿಗಳಲ್ಲದ ಅಭಿಷೇಕಶಂಖ, ಮುದ್ರೆ, ಅಕ್ಷಯಪಾತ್ರೆ ಮತ್ತು ಬಾಣ ಮುಂತಾದ ಉಪಕರಣಗಳನ್ನು ಸೇರಿಸಿರುವುದು ಉಚಿತವಲ್ಲ.
3. ಶ್ರೀರಘುನಾಥರ ಕಾಲ, ಶ್ರೀಪುರಂದರದಾಸರ ಕಾಲ ಹೊಂದುವುದಿಲ್ಲ.

ಶ್ರೀಪುರಂದರದಾಸರು ದಾಸದೀಕ್ಷೆ ಸ್ವೀಕರಿಸಿದ್ದೇ ಕ್ರಿ.ಶ. 1514. ಆಗ ಶ್ರೀರಘುನಾಥತೀರ್ಥರು ವೃಂದಾವನಸ್ಥರಾಗಿದ್ದರು. (ಮೂ.ಮ. ಪು.87)

ಮೇಲಿನ ಆಕ್ಷೇಪಗಳಿಗೆ ಉತ್ತರ -

1. ಸಸೀತಾಮೂಲರಾಮಾರ್ಚಾ ಗ್ರಂಥದ ಪುಟ 19ರಲ್ಲಿ ಛಾಪಿಸಿದ ಈ ಪದದ ಕಡೆಯ ನುಡಿಯನ್ನು ಸರಿಯಾಗಿ ಗಮನಿಸದೇ ಮೂ.ಮ. ಲೇಖಕರು ಈ ಆಕ್ಷೇಪ ಮಾಡಿದ್ದಾರೆ.

ಸಸೀತಾಮೂಲರಾಮಾರ್ಚಾದಲ್ಲಿ ಹೀಗೆ ಮುದ್ರಿತವಾಗಿದೆ –

**ವರವ್ಯಾಸಮುಷ್ಟಿ ನಾಲ್ಕು ಕ್ಷೀರದಲಿ**
**ಲೋಲಾಡುವ ಕೂರ್ಮ ಒಂದು**
**ಸ್ಮರಿಸಿ ಇಪ್ಪತ್ತೆಂಟು ಮೂರ್ತಿಗಳನು**
**ಪುರಂದರ ವಿಠಲನ್ನ ಪೂರ್ಣ ಭಕ್ತರೆಂಬ**
**ಈ ರಘುನಾಥತೀರ್ಥರು ಎಷ್ಟು ಪುಣ್ಯವಂತರು** ॥ 3 ॥

'ರಲಯೋರಭೇದಃ' ಎಂದಿರುವುದರಿಂದ ಇಲ್ಲಿ ದ್ವಿತೀಯಾಕ್ಷರಪ್ರಾಸಕ್ಕೆ ಭಂಗ ಬರುವುದಿಲ್ಲ.

ಅಲ್ಲದೇ, ಅದು ಅನವಧಾನದಿಂದ ಮುದ್ರಿತವಾಗಿರಲೂಬಹುದು. ಆ ನುಡಿಯನ್ನು ಈ ಕೆಳಗಿನಂತೆ ಸರಿಯಾಗಿ ಓದಿಕೊಂಡಲ್ಲಿ ಯಾವುದೇ ಗೊಂದಲ ಇಲ್ಲ. ಇಷ್ಟು ಸಣ್ಣ ವಿಷಯವನ್ನು ದೊಡ್ಡ ವಿಜಯ ಎಂಬಂತೆ ಬಿಂಬಿಸಿಕೊಂಡಿದ್ದು ನಿಜಕ್ಕೂ ಆಶ್ಚರ್ಯ!

**ವರವ್ಯಾಸಮುಷ್ಟಿ ನಾಲ್ಕು**
**ಕ್ಷೀರದಲಿ ಲೋಲಾಡುವ ಕೂರ್ಮ ಒಂದು**
**ಸ್ಮರಿಸಿ ಇಪ್ಪತ್ತೆಂಟು ಮೂರ್ತಿಗಳನು**
**ಪುರಂದರ ವಿಠಲನ್ನ ಪೂರ್ಣ ಭಕ್ತರೆಂಬ**
**ಈ ರಘುನಾಥತೀರ್ಥರು ಎಷ್ಟು ಪುಣ್ಯವಂತರು** ॥ 3 ॥

ಎಂಬ ಪಾಠವನ್ನು ಗ್ರಹಿಸಿದಾಗ ದ್ವಿತೀಯಾಕ್ಷರಪ್ರಾಸಕ್ಕೆ ಯಾವುದೇ ಧಕ್ಕೆ ಇಲ್ಲ.

2. ಶಂಖ, ಅಕ್ಷಯಪಾತ್ರೆ ಮುಂತಾದವುಗಳನ್ನೂ ಸಹ ಪ್ರತಿಮಾಸ್ಥಾನದಲ್ಲಿ ಪೂಜಿಸುವುದುಂಟು. ಯಾವುದು ಉಚಿತ, ಯಾವುದು ಉಚಿತವಲ್ಲ ಎಂದು ಈ ಲೇಖಕರಿಂದ ತಿಳಿಯಬೇಕೆ? ಶ್ರೀಸುಮಧ್ವವಿಜಯದ

ಒಂಬತ್ತನೇ ಸರ್ಗದಲ್ಲಿ ಬಲಮುರಿಶಂಖದ ಬೆಲೆ ತಿಳಿದ ಒಬ್ಬರಾಜನು ಆ ಶಂಖವನ್ನು ಪೂಜಿಸಿದ ಉಲ್ಲೇಖವುಂಟು. ಪೂಜಿಸುವ ವಸ್ತುಗಳು ಪ್ರತಿಮಾಸ್ಥಾನೀಯವಲ್ಲದೇ ಮತ್ತೇನು?

3. ಶ್ರೀರಘುನಾಥತೀರ್ಥರ ಹಾಗೂ ಶ್ರೀಪುರಂದರದಾಸರ ಕಾಲ ಸರಿಹೊಂದುವುದಿಲ್ಲ ಎಂಬ ಆರೋಪಣೆಯೂ ಸರಿಯಲ್ಲ. ಪುರಂದರದಾಸರ ಕಾಲದ ಬಗ್ಗೆಯೇ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದೂ ಗಮನಾರ್ಹ.

ಇದರ ಬಗ್ಗೆ ಹೀಗೆ ಸಮಾಧಾನಗಳನ್ನು ಕಾಣಬಹುದಾಗಿದೆ –

❖ ಪ್ರಸಿದ್ಧ ತೆಲಗು ಸಂತರಾದ ಶ್ರೀಅನ್ನಮಾಚಾರ್ಯರ ಮೊಮ್ಮಕ್ಕಳು ಶ್ರೀತಾಳ್ಳಪಾಕಂ ಚಿನ್ನ ತಿರುವೇಂಗಳನಾಥ. ಇವರು ತನ್ನ ತಾತಂದಿರಾದ ಶ್ರೀಅನ್ನಮಾಚಾರ್ಯರನ್ನು ಕುರಿತು ಬರೆದ ದ್ವಿಪದಪ್ರಬಂಧದಲ್ಲಿ ಶ್ರೀಪುರಂದರದಾಸರಿಗೂ ಶ್ರೀಅನ್ನಮಾಚಾರ್ಯರಿಗೂ ತಿರುಪತಿಯಲ್ಲಿ ಭೇಟಿಯಾದ ವಿಷಯವನ್ನು ದಾಖಲಿಸಿದ್ದಾರೆ. ಇದು ಐತಿಹಾಸಿಕವಾದ ಸಮಕಾಲೀನವಾದ ಕೃತಿ. ಈ ವಿಷಯವನ್ನು ಖುದ್ದಾಗಿ ತನ್ನ ತಾತಂದಿರಾದ ಅನ್ನಮಾಚಾರ್ಯರೇ ತನಗೆ ತಿಳಿಸಿದ್ದು ಎಂಬುದಾಗಿಯೂ ಹೇಳುತ್ತಾರೆ. ಈ ಅನ್ನಮಾಚಾರ್ಯರ ಕಾಲ ಕ್ರಿ.ಶ. 1408-1507. ಇದರಿಂದ ಕ್ರಿ.ಶ.1507ಕ್ಕಿಂತಲೂ ಮುಂಚೆ ಶ್ರೀಪುರಂದರದಾಸರಿಗೆ ದಾಸದೀಕ್ಷೆಯಾಗಿತ್ತು ಎಂದು ತಿಳಿದು ಬರುತ್ತದೆ. ಆದ್ದರಿಂದ ''ಶ್ರೀಪುರಂದರದಾಸರು ದಾಸದೀಕ್ಷೆ ಸ್ವೀಕರಿಸಿದ್ದೇ ಕ್ರಿ.ಶ. 1514'' ಎಂಬ ಮೂ.ಮಠೇ ಲೇಖಕರ ವಾದ ಸರಿಯಲ್ಲ. ಮೂ.ಮಠೇ ಲೇಖಕರೇ ಹೇಳುವಂತೆ ಕ್ರಿ.ಶ.1502ರವರೆಗೆ ಇದ್ದ ಶ್ರೀರಘುನಾಥತೀರ್ಥರು ಕ್ರಿ.ಶ. 1507 ಕ್ಕಿಂತೂ ಮೊದಲೇ ದಾಸದೀಕ್ಷೆಯನ್ನು ಪಡೆದ ಶ್ರೀಪುರಂದರದಾಸರ ಸಮಕಾಲೀನರಾಗಿದ್ದರೆಂದು ತಿಳಿಯಬಹುದಾಗಿದೆ.

ಶ್ರೀಪುರಂದರದಾಸರ ಬಗ್ಗೆ ಸಮಕಾಲೀನವಲ್ಲದ ದಾಖಲೆಗಳೇ ಹೆಚ್ಚು. ಸಮಕಾಲೀನ ಐತಿಹಾಸಿಕ ದಾಖಲೆಗಳಲ್ಲಿ ಇದು ಅತ್ಯಂತ ಪ್ರಮುಖವಾದದ್ದೆಂಬುದು ಗಮನಾರ್ಹ. ಅದು ಹೀಗಿದೆ –

**ಅನ್ನಮಾಚಾರ್ಯ ಪುರಂದರದಾಸುಲ ಚೆಲ್ಮಿ**

**ಗದ್ಯಪದ್ಯಮುಲ ಡೆಬ್ಬದಿರೆಂಡು ಮಂದಿ**
**ಯಾದ್ಯುಲಚೇ ಗೊನಿಯಾಡಿಂಚುಕೊನ್ನ**
**ರಸಿಕುಂಡು ಶ್ರೀಪಾಂಡುರಂಗವಿಠಲುಡು**
**ಕೊಸರೆಡು ಭಕ್ತಿ ಚೇಕೂರ ಜೇಸೇತ-**
**ನೆನಯ ಸಂಧ್ಯಲಕು ನೀಳ್ಳಿಯ್ಯ ಜೇಕೊನುಟು**
**ದನರು ಪುರಂದರಸಾಹ್ವಯುಂಡು**
**ಪರಮ ಭಾಗವತುಡೈ ಪರಗುಚು ನಂದ-**
**ನರಕುಲಾಗ್ರಣಿಯೈನ ವೈಷ್ಣವೋತ್ತಮುಡು**
**ಸವರಿಂಚು ಮುರವೈರಿ ಸಂಕೀರ್ತನಮುಲು**
**ಕುವಲಯಂಬುನ ಬೇರುಕೊನ್ನ**
**ಮಾತ್ರಮುನ ತಲಚಿನ ಭೂತಬೇತಾಳಪಿಶಾಚ-**

ಮುಲು ಪಾರಿಪೋವ ನಿಮ್ಮುಲ ಶುಭಂ ಬೆಸಗ
ವಿನಿ ಕನಿಯುನು ಲೋನ ವೆರಗಂದಿಕೊನುಚು ಚನಿ,
ತಾಳ್ಳಪಾಕಶಾಸನುಡನ್ನಮಯ್ಯ
ವೆನ್ನುನಿಗಾನೆ ಭಾವಿಂಚಿ ಕೀರ್ತಿಂಚಿ
ಸನ್ನುತಿಸೇಯ ನಾಚಾರ್ಯವರ್ಯುಂಡು
ನತನಿ ವಿಠ್ಠಲುನಿಗಾ ನನಯಂಬು ದಲಚಿ
ಪ್ರತಿಲೇನಿ ಗತುಲ ಸಂಭಾವಿಂಚಿನಪುಡು-
ನೀರೀತಿ ಮಹಿಮಲನೇಕಮುಲ್ ವೆಲಯ
ವಾರಕ ವರಭಾಗವತುಲು ಗೀರ್ತಿಂಬ ||

-ತಾಳ್ಳಪಾಕ ಚಿನ್ನ ತಿರುವೇಂಗಳನಾಥ ವಿರಚಿತಮು ತಾಳ್ಳಪಾಕಂ ಅನ್ನಮಾಚಾರ್ಯುಲ ಜೀವಿತ ಚರಿತ್ರಮು.
ಮುದ್ರಣ ತಿರುಮಲ ತಿರುಪತಿ ದೇವಸ್ಥಾನಮು. 2001

ಪುರಂದರದಾಸರು ಶ್ರೀನಿವಾಸನ ಭಕ್ತರಾದ ಅನ್ನಮಾಚಾರ್ಯರನ್ನು ಭೇಟಿಯಾಗಿ ಅವರನ್ನು ಗೌರವಿಸಿದರು. ಅನ್ನಮಾಚಾರ್ಯರು ಕೂಡಾ ತಮ್ಮನ್ನು ಭೇಟಿಯಾದ ವಿಠಲನ ಭಕ್ತರಾದ ಪುರಂದರದಾಸರನ್ನು ಕಂಡು ಸಂತೋಷದಿಂದ ಅವರನ್ನು ಗೌರವಿಸಿದರು.

ಈ ವಿಷಯವನ್ನು ತಾಳ್ಳಪಾಕಂ ಚಿನ್ನ ತಿರುವೇಂಗಳನಾಥನು ಅನ್ನಮಾಚಾರ್ಯ ಜೀವನ ಚರಿತೆಯನ್ನು ತಿಳಿಸುವ ಈ ಕಾವ್ಯದಲ್ಲಿ ಉಲ್ಲೇಖಿಸಿದ್ದಾನೆ.

❖ **ಕರ್ನಾಟಕ ಸರ್ಕಾರದಿಂದ ಶ್ರೀಪುರಂದರದಾಸರ 500 ನೇ ಶತಮಾನೋತ್ಸವದ ಅಂಗವಾಗಿ ಪ್ರಕಟಿತವಾದ ''ಶ್ರೀಪುರಂದರಸಾಹಿತ್ಯ ದರ್ಶನ''ದ ಒಂದನೇ ಭಾಗದ ಪುಟ 6 ರಲ್ಲಿ ಅದರ ಪ್ರಧಾನಸಂಪಾದಕರಾದ, ಪ್ರಖ್ಯಾತ ವಿದ್ವಾಂಸರಾದ, ಸಂಶೋಧಕರಾದ ಶ್ರೀ. ಎಸ್.ಕೆ ರಾಮಚಂದ್ರರಾವ್ ಅವರು ತಮ್ಮ ಪ್ರಸ್ತಾವನೆಯಲ್ಲಿ ಶ್ರೀಪುರಂದರದಾಸರ ಕಾಲದ ಬಗ್ಗೆ ಬರೆದ ರೀತಿ ಹೀಗಿದೆ–**

ಇತಿಹಾಸದ ಎಳೆಗಳಲ್ಲಿ ಪುರಂದರದಾಸರ ಪ್ರಸ್ತಾಪವನ್ನು ಎರಡನೇ ಬಾರಿ ನಾವು ಕಾಣುವುದು, ಅವರ ಕಾಲದಲ್ಲೇ ಬದುಕಿದ್ದ ತೆಲುಗು ಕವಿ ತಾಳ್ಳಪಾಕಂ ಚಿನ್ನತಿರುವೆಂಗಳನಾಥನು, ತನ್ನ ಅಜ್ಜ ಅನ್ನಮಾಚಾರ್ಯರನ್ನು ಕುರಿತು ಬರೆದ ದ್ವಿಪದ ಪ್ರಬಂಧ ಒಂದರಲ್ಲಿ. ಇಲ್ಲಿ ಬರುವ ಒಕ್ಕಣಿಕೆಯಂತೆ ತಿರುಮಲೆ ತಿರುಪತಿಯ ದೇವಾಲಯದಲ್ಲಿ ಶ್ರೀಪುರಂದರದಾಸರು ಅನ್ನಮಾಚಾರ್ಯರನ್ನು ಕಂಡು ಮಾತುಕತೆ ನಡೆಸಿದರು. ತಾಳ್ಳಪಾಕಂ ಅನ್ನಮಾಚಾರ್ಯರು (1408-1507) ತಿರುಮಲೆಯ ವೆಂಕಟೇಶ್ವರ ಗುಡಿಯಲ್ಲಿ ಸಂಕೀರ್ತನ ಸೇವೆ ಮಾಡಿಕೊಂಡು ಇರುತ್ತಿದ್ದರು. ವೆಂಕಟೇಶ್ವರ ಆವರಣದಲ್ಲೇ ಸಾವಿರಾರು ಕೃತಿಗಳನ್ನು ರಚಿಸಿದರು. ಮುಂದೆ ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಎಲ್ಲರೂ ಇದೇ ಸೇವೆಯನ್ನು ಮುಂದುವರೆಸಿಕೊಂಡು ಬಂದರು. ಸ್ವತ: ಕವಿಗಳಾಗಿ ಕೃತಿಗಳನ್ನು ರಚಿಸಿದರು. ಅನ್ನಮಾಚಾರ್ಯರ ಮಗ ಪೆದತಿರುಮಲಾಚಾರ್ಯ ಎಂಬುವರ ನಾಲ್ಕನೆಯ ಮಗನೇ ಮೇಲೆ ಹೇಳಿದ ಚಿನ್ನ ತಿರುವೆಂಗಳನಾಥ (ಚಿನ್ನನ್ನ). ಇವನು ಹುಟ್ಟಿದ ವರ್ಷ 1498 ಎಂದು ತಿಳಿದುಬರುತ್ತದೆ. ಇವನಿಗೆ ಬ್ರಹ್ಮೋಪದೇಶವನ್ನು, ಮೊದಲ ಸಂಸ್ಕೃತ ಶಿಕ್ಷಣವನ್ನು ಅಜ್ಜ ಅನ್ನಮಾಚಾರ್ಯರೇ ಒದಗಿಸಿದರೆಂದು ಹೇಳಿಕೊಂಡಿದ್ದಾನೆ. ತನ್ನ ಅಜ್ಜನನ್ನು ಕುರಿತು ತೆಲುಗಿನಲ್ಲಿ 4 ದ್ವಿಪದ ಪ್ರಬಂಧಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಒಂದು ಪ್ರಬಂಧ ತನ್ನ ಅಜ್ಜ ಅನ್ನಮಾಚಾರ್ಯರಿಗೂ

ಹರಿದಾಸರಾದ ಪುರಂದರದಾಸರಿಗೂ ನಡೆದ ಭೇಟಿಯನ್ನು ಉಲ್ಲೇಖಿಸಿದೆ. ತಿರುಮಲೆಗೆ ಮತ್ತೆ ಮತ್ತೆ ಬರುತ್ತಿದ್ದ ಪುರಂದರದಾಸರು ಒಮ್ಮೆ ಬಂದಾಗ ಅಲ್ಲಿ ಹಣ್ಣು ಹಣ್ಣು ಮುದುಕರಾಗಿದ್ದ ಅನ್ನಮಾಚಾರ್ಯರನ್ನು ಕಂಡರಂತೆ. ಅನ್ನಮಾಚಾರ್ಯರು ದೇವರ ಎದುರು ನಿಂತು ಮಾಡಿದ ಸಂಕೀರ್ತನ ಸೇವೆಯನ್ನು ತುಂಬಾ ಮೆಚ್ಚಿಕೊಂಡು ''ಸಾಕ್ಷಾತ್ ವೆಂಕಟೇಶ್ವರನನ್ನೇ ಕಂಡಂತಾಯಿತು'' ಎಂದು ಹೇಳಿದರಂತೆ. ಅನಂತರ ಅನ್ನಮಾಚಾರ್ಯರ ಅಪೇಕ್ಷೆಯಂತೆ ಅವರು ತಮ್ಮ ಕನ್ನಡ ದೇವರ ಹಾಡುಗಳನ್ನು ಹಾಡಿದಾಗ ಅನ್ನಮಾಚಾರ್ಯರು ''ದಿವ್ಯವಾದ ಗಾನ ಪಾಂಡುರಂಗ ವಿಠಲನೆ ಎದುರಿಗೆ ನಿಂತಂತಿದೆ'' ಎಂದು ಹೇಳಿದರಂತೆ.

**ವಾಚಕರೇ ಗಮನಿಸಿ !**

ಮೇಲಿನ ಆಧಾರದಿಂದ ತಿಳಿಯುವುದೇನೆಂದರೆ –

''ಶ್ರೀಪುರಂದರದಾಸರು ದಾಸದೀಕ್ಷೆ ಸ್ವೀಕರಿಸಿದ್ದೇ ಕ್ರಿ.ಶ. 1514'' ಎಂಬ ವಾದ ಸರ್ವಥಾ ಸರಿಯಲ್ಲ.

ಕ್ರಿ.ಶ. 1507ರಲ್ಲಿ ಕಾಲವಾದ ಶ್ರೀಅನ್ನಮಾಚಾರ್ಯರಿಗೂ ಶ್ರೀಪುರಂದರದಾಸರಿಗೂ ಭೇಟಿಯಾಗಿತ್ತು. ಅಲ್ಲದೇ ಆ ಸಮಯದಲ್ಲಿ ಪುರಂದರದಾಸರು ಅನೇಕ ಕೃತಿಗಳನ್ನು ರಚಿಸಿ ವಿಖ್ಯಾತರಾಗಿದ್ದರು. ಇದರಿಂದ ಕ್ರಿ.ಶ.1507 ಕ್ಕಿಂತಲೂ ಬಹಳ ಮುಂಚೆಯೇ ಶ್ರೀಪುರಂದರದಾಸರಿಗೆ ದಾಸದೀಕ್ಷೆಯಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಆದ್ದರಿಂದ ಶ್ರೀರಘುನಾಥತೀರ್ಥರ ಪೂಜೆಯ ಸೊಬಗನ್ನು ನೋಡಿ ಶ್ರೀಪುರಂದರದಾಸರು ''ಮಧ್ವರಾಯರ ದೇವತಾರ್ಚನೆಯ...'' ಎಂಬ ಕೃತಿಯನ್ನು ರಚಿಸಿದ್ದಾರೆಂದು ತಿಳಿಯಲು ಯಾವುದೇ ಬಾಧಕಗಳಿಲ್ಲ.

ಶ್ರೀರಘುನಾಥತೀರ್ಥರ ಹಾಗೂ ಶ್ರೀಶ್ರೀಪಾದರಾಜರ ಕಾಲಗಳೇ ನಿರ್ಣಯವಾಗಿಲ್ಲ ಎಂದು ಹೇಳುವ ಮೂ.ಮಠೇ (ಪುಟ 51) ಲೇಖಕರು ಮೊದಲು ಕಾಲನಿರ್ಣಯದ ಚಕ್ರವ್ಯೂಹದಿಂದ ಹೊರಬರಲಿ ನಂತರ ಆಕ್ಷೇಪಿಸಿಲಿ. ಎಲ್ಲವನ್ನೂ ಬಿ.ಎನ್.ಕೆ.ರವರ ಮೇಲೆ ಭಾರ ಹಾಕಿ ಕುಳಿತ ಇವರು ಬಿ.ಎನ್.ಕೆ.ರವರು ಮಾಡಿದ ರಾಯರ ಮಠದ ಪರಂಪರೆಯಲ್ಲಿ ಬಂದ ಎಲ್ಲ ಯತಿಗಳ ಕಾಲ ನಿರ್ಣಯವನ್ನು ಒಪ್ಪಲು ಸಿದ್ಧರಿದ್ದಾರೆಯೇ? ಹಾಗೆ ಒಪ್ಪಿದರೆ ಈ ಹಿಂದೆಯೇ ತಿಳಿಸಿದಂತೆ ಶ್ರೀರಾಯರ ಮಠದ ಆಧಿಕೃತದಾಖಲೆಗಳೆಲ್ಲ ಸುಳ್ಳಿನ ಕಂತೆಗಳೆಂದಾಗುವುದು ನಿಶ್ಚಿತ.

* * * *

# ಶ್ರೀದಾಮೋದರದಾಸರ ಹಸ್ತಲಿಖಿತ ಮೂಲಪ್ರತಿಯ ವಿಮರ್ಶೆ

ಮೂ.ಮರೇ ಪುಸ್ತಕದ ಪುಟ 138 ರಲ್ಲಿ ''ಮಾನವಿಯಲ್ಲಿರುವ ಶ್ರೀಜಗನ್ನಾಥದಾಸವರ್ಯರ ಪುತ್ರರಾದ ಶ್ರೀದಾಮೋದರದಾಸರ ಹಸ್ತಲಿಖಿತ ಮೂಲಪ್ರತಿ. ಇದರಲ್ಲಿ ಶ್ರೀಜಗನ್ನಾಥದಾಸರು ಶ್ರೀಭುವನೇಂದ್ರಾರಾಧಿತ ಶ್ರೀಮೂಲರಾಮನನ್ನು ಉಲ್ಲೇಖಿಸಿದ್ದಾರೆ.'' ಎಂಬ ಕೆಳಬರಹದೊಂದಿಗೆ ಒಂದು ಹಸ್ತಪ್ರತಿಯನ್ನು ಛಾಪಿಸಿದ್ದಾರೆ. ಆ ಹಸ್ತಪ್ರತಿಯ ಬಗ್ಗೆ ಒಂದು ವಿಮರ್ಶೆ.

ಈ ಹಸ್ತಪ್ರತಿಯನ್ನು ಅನೇಕ ಪೀಠಾಧಿಪತಿಗಳು, ವಿದ್ವಾಂಸರು, ಸಂಶೋಧಕರು, ಮಾನವೀ ಕ್ಷೇತ್ರಕ್ಕೆ ಭೇಟಿಕೊಟ್ಟಾಗ ಖುದ್ದಾಗಿ ಪರಿಶೀಲಿಸಿದ್ದಾರೆ. ನಾವು ಖುದ್ದಾಗಿ ಅಲ್ಲಿರುವ ಅರ್ಚಕರಾದ ಶ್ರೀಜಗನ್ನಾಥದಾಸರನ್ನು ಭೇಟಿ ಆದಾಗ ಆ ಪ್ರತಿಯನ್ನು ನೋಡಲು ಅನುಮತಿಯನ್ನು ಕೊಟ್ಟಿದ್ದರು. ಅದರಲ್ಲಿ ಕಂಡು ಬಂದ ಕೆಲವು ಸತ್ಯಾಂಶಗಳು ಹೀಗಿವೆ –

- ಇದು ದಾಮೋದರದಾಸರಿಂದ ಲಿಖಿತವೆಂದು ಹೇಳಲು ಯಾವ ಆಧಾರಗಳಿಲ್ಲ. ಕೇವಲ ಪ್ರತೀತಿ ಮಾತ್ರ ಉಂಟು.
- ಈ ಹಸ್ತಪ್ರತಿಯಲ್ಲಿ ಒಂದೇ ರೀತಿಯ ಹಾಳೆಗಳಿಲ್ಲ.
- ಇದು ಒಬ್ಬ ವ್ಯಕ್ತಿಯ ಹಸ್ತದಿಂದ ಲಿಖಿತವಾದ ಪ್ರತಿ ಅಲ್ಲ.
- ಬೇರೆ ಬೇರೆ ವ್ಯಕ್ತಿಗಳಿಂದ ಲಿಖಿತವಾದ ಅನೇಕ ಶೈಲಿಯ ಅಕ್ಷರಗಳಿವೆ.
- ಕೆಲವೇ ಹಾಳೆಗಳು ತುಂಬಾ ತೆಳುವಾಗಿವೆ. ಅಲ್ಲಲ್ಲಿ ಹುಳತಿಂದಿರುವುದು ಕಾಣುತ್ತದೆ. ಈ ಹಾಳೆಗಳಲ್ಲಿ ಮಾತ್ರ ಶ್ರೀಜಗನ್ನಾಥದಾಸರ ಕಾಲದ್ದಾಗಿರಬಹುದಾದ ಮೋಡಿ ಅಕ್ಷರಗಳಿವೆ. ಉಳಿದ ಹಾಳೆಗಳಲ್ಲಿ ತೀರಾ ಇತ್ತೀಚಿನವರು ಬರೆಯುವ ಶೈಲಿಯ ಅಕ್ಷರಗಳಿವೆ.
- ಆರಂಭದಲ್ಲಿ ಹಾಗೂ ಕೊನೆಯಲ್ಲಿ ಹರಿಕಥಾಮೃತಸಾರದ ಕೆಲಸಂಧಿಗಳು ಮಾತ್ರ ಇವೆ. ಮಧ್ಯದಲ್ಲಿ ಶ್ರೀಜಗನ್ನಾಥದಾಸರ ಕೆಲ ಕೃತಿಗಳಿವೆ.
- ಕೆಲವು ಕೃತಿಯ ಆರಂಭದಲ್ಲಿ ''ಶ್ರೀಮದ್ಗುರುರಾಜೋ ವಿಜಯತೇ'' ಎಂಬ ಒಕ್ಕಣಿಕೆ ಹಾಗೂ ಕೃತಿಯ ಕೊನೆಯಲ್ಲಿ ''ಶ್ರೀಮಧ್ವೇಶಾರ್ಪಣಮಸ್ತು'' ಎಂಬ ಒಕ್ಕಣಿಕೆ ಕಂಡು ಬರುತ್ತದೆ. ಆದರೆ ಪ್ರಾಚೀನ ಮೋಡಿ ಅಕ್ಷರಗಳಲ್ಲಿ ಬರೆದಿರುವ ಕೃತಿಗಳ ಆರಂಭದಲ್ಲಿ ''ಶ್ರೀಮದ್ಗುರುರಾಜೋ ವಿಜಯತೇ'' ಎಂಬ ಒಕ್ಕಣಿಕೆ ಇಲ್ಲ. ಕೊನೆಯಲ್ಲಿ ಮಾತ್ರ ''ಶ್ರೀಕೃಷ್ಣಾರ್ಪಣಮಸ್ತು'' ಎಂಬ ಒಕ್ಕಣಿಕೆ ಇದೆ.

(ಈ ಅಂಶಗಳನ್ನು ಈಗಲೂ ಯಾರು ಬೇಕಾದರೂ ಗಮನಿಸಬಹುದಾಗಿದೆ.)

ಮೇಲಿನ ಈ ಅಂಶಗಳನ್ನು ಗಮನಿಸಿದಾಗ ಈ ಪ್ರತಿ ಶ್ರೀಜಗನ್ನಾಥದಾಸರ ಪುತ್ರರಾದ ಶ್ರೀದಾಮೋದರ ದಾಸರದ್ದೆಂದು ಖಚಿತವಾಗಿ ಹೇಳಲಾಗದು. ಮೂ.ಮರೇ ಪುಸ್ತಕದಲ್ಲಿ ಛಾಪಿಸಿರುವ ಮೂಲರಾಮನ ಉಲ್ಲೇಖವಿರುವ ಪತ್ರದಲ್ಲಿರುವ ಅಕ್ಷರಗಳು ಮೋಡಿ ಅಕ್ಷರಗಳಲ್ಲ. ತೀರಾ ಇತ್ತೀಚಿನವರು ಬರೆಯಬಹುದಾದ ಅಕ್ಷರಗಳಾಗಿವೆ.

ಅಲ್ಲದೇ ಇತರ ಅರ್ವಾಚೀನ ಪ್ರತಿಗಳಲ್ಲಿರುವಂತೆ ಮಧ್ವೇಶಾರ್ಪಣಮಸ್ತು ಎಂದು ಒಕ್ಕಣಿಕೆ ಇದೆ. ಆದ್ದರಿಂದ ಇದರ ಪ್ರಾಚೀನತೆಯ ಬಗ್ಗೆ ಸಂದೇಹ ಬರುತ್ತದೆ.

**ವಾಚಕರೇ ಗಮನಿಸಿ!** ಮೂ.ಮಠೇ ಪುಸ್ತಕದ ದ್ವಿತೀಯ ಆವೃತ್ತಿಯ ಪುಟ 159ರಿಂದ 163ರ ವರೆಗೆ ಛಾಪಿಸಿರುವ ಶ್ರೀಜಗನ್ನಾಥದಾಸರ ಕೀರ್ತನೆಗಳ ಹಸ್ತಪ್ರತಿಗಳಿಗೂ ಸಹ ಶ್ರೀಜಗನ್ನಾಥದಾಸರ ಪುತ್ರರಾದ ಶ್ರೀದಾಮೋದರದಾಸರದ್ದೆಂದು ಹೇಳಲಾಗುವ ಮೂಲದಿಂದಲೇ ಉದ್ಧರಿಸಲಾಗಿದೆ ಎಂಬುದು ಅವುಗಳಲ್ಲಿರುವ ಅಕ್ಷರಗಳ ಸಾಮ್ಯದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಮೇಲೆ ಕೊಟ್ಟ ಉತ್ತರವೇ ಇದಕ್ಕೂ ಅನ್ವಯಿಸುತ್ತದೆ. ಇದರಂತೆ ಶ್ರೀವಿಜಯದಾಸರದ್ದೆಂದು ಹೇಳಿಕೊಳ್ಳುವ ದಿಗ್ವಿಜಯರಾಮ ಸುಳಾದಿಗೂ ಇದೇ ಉತ್ತರ.

ಹೀಗಾಗಿ ಇದು ನಂಬಲರ್ಹವಾದ ಆಧಾರವಾಗುವುದಿಲ್ಲ. ಇದರಂತೆ ಮೂ.ಮಠೇ ಲೇಖಕರು ಉದಾಹರಿಸುವ ಹರಿದಾಸರ ಕೃತಿಗಳು ನಂಬಲರ್ಹವಲ್ಲ ಎಂಬ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ''ಹರಿದಾಸಸಾಹಿತ್ಯವನ್ನು ಹದೆಗೆಡಿಸಿದವರಾರು'' ಎಂಬ ಶೀರ್ಷಿಕೆಯನ್ನು ನೋಡಿ.

ಅಲ್ಲದೇ ಶ್ರೀ ಶ್ರೀಪಾದರಾಜರ ಕೃತಿಯಾದ ''ತೂಗೀರೋ ರಾಮನ..'', ಶ್ರೀಪ್ರಸನ್ನ ವೆಂಕಟದಾಸರ ''ನೆನೆವೆ ಮಾರುತಿಯ ಸಂತತಿಯ..'', ಶ್ರೀಪುರಂದರದಾಸರ ''ಮಧ್ವರಾಯರ ದೇವತಾರ್ಚನೆಯ..'', ಮೊದಲಾದ ಕೃತಿಗಳಲ್ಲಿ ಸ್ಪಷ್ಟವಾಗಿ ಉತ್ತರಾದಿಮಠದ ಪರಂಪರೆಯಲ್ಲಿ ಪೂಜಿತವಾಗುತ್ತಿರುವ ಶ್ರೀಮೂಲರಾಮಾದಿ ಪ್ರಧಾನಪ್ರತಿಮೆಗಳ ಉಲ್ಲೇಖಗಳುಂಟು. ಈ ಕೃತಿಗಳೆಲ್ಲಾ ಶ್ರೀಜಗನ್ನಾಥದಾಸರಿಗಿಂತಲೂ ಪ್ರಾಚೀನವಾದವುಗಳು. ಅದರಂತೆ ಶ್ರೀಜಗನ್ನಾಥದಾಸರ ಸಮಕಾಲೀನರಾದ ಮೋಹನದಾಸರ ''ಏನ ಪೇಳಲಿ ಇವರ ಕೀರ್ತಿ..'', ಶ್ರೀವೆಂಕಟವಿಠ್ಠಲರ ''ಸತ್ಯಬೋಧರಾಯಾ ಪಾಲಿಸೋ...'' ಮುಂತಾದ ಕೃತಿಗಳಲ್ಲೂ ಉತ್ತರಾದಿಮಠದ ಪರಂಪರೆಯಲ್ಲಿ ಪೂಜಿತವಾಗುತ್ತಿರುವ ಶ್ರೀಮೂಲರಾಮಾದಿ ಪ್ರಧಾನಪ್ರತಿಮೆಗಳ ಉಲ್ಲೇಖಗಳುಂಟು. ಈ ಎಲ್ಲ ಸ್ವೋತ್ತಮ ಹಾಗೂ ಸಮಕಾಲೀನ ಮಹನೀಯರ ಮಾತಿಗೆ ವಿರುದ್ಧವಾಗಿ ಶ್ರೀಜಗನ್ನಾಥದಾಸರು ಹೇಳಲು ಸಾಧ್ಯವಿಲ್ಲ.

# ''ಹರಿದಾಸಸಾಹಿತ್ಯವನ್ನು ಹದಗೆಡಿಸಿದವರು'' ಯಾರು?

ಮೂ.ಮಠೇ ಪುಸ್ತಕದ ಪುಟ 113ರಲ್ಲಿ ''ದಾಸರ ಕೃತಿಗಳನ್ನು ಹದಗೆಡಿಸ ಹೊರಟವರಿಗೆ ಅಣ್ಣನೇನು? ತಮ್ಮನೇನು?'' ಎಂದು ಆರೋಪಿಸಿದ್ದಾರೆ.

ಶ್ರೀಗೋರೆಬಾಳ ಹನುಮಂತರಾಯರು ಶ್ರೀವಿಜಯದಾಸರ ಕಟ್ಟೆಯಲ್ಲಿದ್ದ ಮೂಲ ಹಸ್ತಪ್ರತಿಗಳನ್ನು ಪರಿಶೀಲಿಸಿ ಅಲ್ಲೇ ಕುಳಿತು ಅನೇಕ ದಾಸರ ಕೃತಿಗಳನ್ನು ಪ್ರತಿಮಾಡಿಕೊಂಡು ಬಂದು ಕ್ರಿ.ಶ.1947ರಲ್ಲೇ ಮುದ್ರಿಸಿ ಪ್ರಕಟಿಸಿದ್ದರು. ಅವರು ತಮ್ಮ ''ವರದೇಂದ್ರಸಾಹಿತ್ಯಮಂಡಳಿಯ'' ಮೂಲಕ ಪ್ರಕಟಿಸಿದ ಕೃತಿಗಳನ್ನೇ ಉತ್ತರಾದಿಮಠದವರ ಸಸೀತಾಮೂಲರಾಮಾರ್ಚಾದಲ್ಲಿ ಮುದ್ರಿಸಲಾಗಿದೆ. ಆ ಕೃತಿಗಳಲ್ಲಿ ಉತ್ತರಾದಿಮಠದವರ ಕೈವಾಡವೇನಾದರೂ ಇದ್ದಿದ್ದರೆ ಹದಗೆಡೆಸಿದವರು, ಕೃತಿಚೌರ್ಯ ಮುಂತಾದ ಆರೋಪಗಳಿಗೆ ಅರ್ಥವಿರುತ್ತಿತ್ತು. ಹೀಗಾಗಿ ಈ ಆರೋಪಗಳನ್ನು, ಶ್ರೀರಾಯರ ಮಠದವರೇ ಆದ ಸಾತ್ವಿಕರಾದ, ಹರಿದಾಸಸಾಹಿತ್ಯಕ್ಕಾಗಿ ಜೀವನವನ್ನೇ ಮುಡುಪಿಟ್ಟ ಶ್ರೀಗೋರೇಬಾಳ ಹನುಮಂತರಾಯರಿಗೆ ಮಾಡಿದಂತಾಗುತ್ತದೆ ಎಂಬುದನ್ನು ಲೇಖಕರು ಮರೆತಿದ್ದಾರೆ.

ಮೊದಲಿನಿಂದಲೂ ಹರಿದಾಸಸಾಹಿತ್ಯಕ್ಕೆ ಕೈಹಾಕಿ ತಮ್ಮ ಬೇಳೆ ಬೇಯುವುದಕ್ಕೆ ಎಷ್ಟು ಬೇಕೋ ಅಷ್ಟು ಹದಗೆಡಿಸುತ್ತಾ ನುಡಿಗಳನ್ನು, ಶಬ್ದಗಳನ್ನು ಸೇರಿಸುವುದು, ಕಿತ್ತಿ ಹಾಕುವುದನ್ನು ರಾಯರಮಠದ ಅಧಿಕೃತ ಲೇಖಕರು ಹೇಗೆ ಮಾಡುತ್ತಾ ಬಂದಿದ್ದಾರೆ ಎಂಬುದನ್ನು ಈ ಅಧ್ಯಾಯದಲ್ಲಿ ನೋಡೋಣ-

1. ''ಶ್ರೀಮೂಲರಾಮ'' (2004) (ರಚನೆ: ದಿ. ಶ್ರೀ ರಾಜಾ.ಎಸ್. ಗುರುರಾಜಾಚಾರ್ಯರ ಸಂಪಾದಕರು: ರಾಜಾ. ಜಿ. ಸುಧೀಂದ್ರಾಚಾರ್ಯ) ಪುಸ್ತಕದ ಪುಟ 20/21ರಲ್ಲಿ

''ಪೊರಬೊಮ್ಮ ಹರಿಯು ತಾ ನರರೂಪ ತಾಳಿದ---'' ಎಂಬ ಶ್ರೀವಿಜಯೀಂದ್ರತೀರ್ಥರದ್ದೆಂದು ಹೇಳಿಕೊಳ್ಳುವ ಸುಳಾದಿಯನ್ನು ಛಾಪಿಸಿದ್ದಾರೆ. ಈ ಸುಳಾದಿಯ ಕೊನೆಯ ಏಕತಾಳದ ಅಂತ್ಯದಲ್ಲಿ ''ಸರಸಿಜಾಸನ ವಿನುತ ಸಿರಿ ಮೂಲರಾಮ'' ಎಂದು ಬರೆಯಲಾಗಿದೆ. ಆದರೆ,

- ❖ ಶ್ರೀವರದೇಂದ್ರ ಹರಿದಾಸ ಸಾಹಿತ್ಯಮಂಡಲಿ (1957)ಯವರು ಕರ್ನಾಟಕ ಹರಿದಾಸಸಾಹಿತ್ಯ ದ್ವೈಮಾಸಿಕ ಪತ್ರಿಕೆಯ 2 ನೇ ಸಂಚಿಕೆ, (ಶಕೆ 1879, ಕ್ರಿ.ಶ. 1957)ಯ ಪುಟ 71ರಿಂದ 75ರವರೆಗೆ ಶ್ರೀವಿಜಯೀಂದ್ರಸ್ವಾಮಿಗಳು ಮಾಡಿದ 2 ಸುಳಾದಿಗಳನ್ನು ಮುದ್ರಿಸಿದ್ದಾರೆ. ಈ ಪತ್ರಿಕೆಯ ಸಂಪಾದಕರು ಹಾಗೂ ಪ್ರಕಾಶಕರು ಶ್ರೀಗೊರೆಬಾಳ ಹನುಮಂತರಾಯರು. ಈ ಎರಡು ಸುಳಾದಿಗಳಲ್ಲಿ ಮೇಲಿನ ''ಪೊರಬೊಮ್ಮ ಹರಿಯು ತಾ ನರರೂಪ ತಾಳಿದ---'' ಎಂಬುದು ಒಂದು. ಈ ಸುಳಾದಿ ಶ್ರೀರಾಮಚಂದ್ರದೇವರ ಚರಿತ್ರೆಯನ್ನು ಬಣ್ಣಿಸುತ್ತದೆ. ಇದರಲ್ಲಿ ಮೂಲರಾಮನ ಬಗ್ಗೆ ಚಕಾರವೇ ಇಲ್ಲ. ಎರಡೂ ಸುಳಾದಿಗಳಲ್ಲಿ ಮೂಲರಾಮ ಎಂಬ ಶಬ್ದಪ್ರಯೋಗವಿಲ್ಲದಿರುವುದು ಗಮನಾರ್ಹ. ''ಸಿರಿ ವಿಜಯೀಂದ್ರರಾಮ'' ಎಂದಿರುವುದನ್ನು ರಾಜಾ ಎಸ್. ಗುರುರಾಜಾಚಾರ್ಯರು ಹಾಗೂ ಮೂ. ಮಠೇ ಲೇಖಕರು ''ಸಿರಿ ಮೂಲರಾಮ'' ಎಂದು ತಿದ್ದಿದ್ದಾರೆ. ಇದರ ಸ್ಕ್ಯಾನ್ ಪ್ರತಿಗಳನ್ನು ಮುಂದಿನ ಪುಟಗಳಲ್ಲಿ ನೀಡಿದ್ದೇವೆ.
- ❖ ಎಲ್ಲದಕ್ಕಿಂತ ಹಾಸ್ಯಾಸ್ಪದ ಎಂದರೆ ಶ್ರೀರಾಯರ ಮಠದಿಂದಲೇ ಅಧಿಕೃತವಾಗಿ ಹೊರಡುವ ''ವಿಜಯಸಂಪದ'' ಎಂಬ ಮಾಸಪತ್ರಿಕೆಯ ಜೂನ್ 2009ರ ಸಂಚಿಕೆಯ ಪುಟ 42-43ರಲ್ಲಿ ಇದೇ ಶ್ರೀವಿಜಯೀಂದ್ರತೀರ್ಥರ ಸುಳಾದಿಯನ್ನು ಪ್ರಕಟಿಸಿದ್ದಾರೆ. ಅದರಲ್ಲೂ ಎಲ್ಲಿಯೂ ''ಸಿರಿಮೂಲರಾಮ'' ಎಂಬ ಶಬ್ದವೇ ಕಾಣುವುದಿಲ್ಲ !

## ಶ್ರೀವಿಜಯೀಂದ್ರತೀರ್ಥ ವಿರಚಿತ ಶ್ರೀರಾಮ ಸುಳಾದಿ

**ತಾಳ : ಧ್ರುವ**

"ಪರಬೊಮ್ಮ ಹರಿಯು ತಾ ನರರೂಪವ ತಾಳಿದ
ನರನಾದ ದಶರಥನ ವರಗೇಹದಲವತರಿಸಿ ।
ಸಿರಿರಾಮನೆಂಬ ಪುಣ್ಯನಾಮದಿಂದ ಮೆರೆವುತ್ತಿರೆ
ಹರುಷದಿಂದ ಲೀಲೆಗೈದು ಕರೆಯಬಂದ ಕೌಶಿಕನ
ಉರುಯಜ್ಞ ವಿಘ್ನವನು ಪರಿಹರಿಸುವುದಕ್ಕಾಗಿ ಆಟ ಪರಬೊಮ್ಮ ॥
ಪರಿತಂದು ವಿಘ್ನವನು ಪರಿಹರಿಸಿದ ಮುನಿವರನ ।
ಹರುಷದಿಂದ ಪರಮಾನಂದ ಶರಧಿಯಲೋಲಾಡಿಸಿದ
ಸಿರಿವಿಜಯೀಂದ್ರರಾಮ ತೊರೆಯಲೆಮ್ಮನಾವಾಗ ಆಟ ॥ ೧ ॥

**ತಾಳ : ಮಟ್ಟ**

ಈತನಂದು ಯಜ್ಞದ ವಿಘ್ನವ ಪರಿಹರಿಸುವ
ಪೂತಮಹಾದ್ಭುತರಂತಿಹ ರಕ್ಕಸರ
ವೀತಭಯನಾಗಿ ಕೊಲ್ಲುವುದೆಂತೋ
ಭೂತಳಕಚ್ಚರಿ ವಿಜಯೀಂದ್ರರಾಮನ ಚರಿತಾ ।
ಪೂತಮಹಾದ್ಭುತರಂತಿಹ ॥ ೨ ॥

**ತಾಳ : ರೂಪಕ**

ಜನಕನೆಂಬ ಜನಪತಿಯ ಮನೆಗೆ ಹೋಗಿ
ಜಾನಕಿಯ ಮನಕೆ ಹರುಷವಪ್ಪಂತೆ
ಜನಪದ ಕೈವಾರಿಸುತ್ತಿರೆ ಮಾನಕ್ಕೆ
ಅಣಕವಾಡಿ ಶಿವನ ಧನುವ ಮುರಿದ ವಿಜಯೀಂದ್ರರಾಮ
ಮನಕೆ ಹರುಷವಪ್ಪಂತೆ ॥ ೩ ॥

**ತಾಳ : ಝಂಪೆ**

ಇವನರ್ಭಕನೆ ಇವನ ಮುನಿಗಳಾದದರೆಲ್ಲ ಮನದಿ
ಭಾವಿಸಿ ಕಾಣದಂಬುವರಿಯಾ ಆಟ ಎಲೆ ರಮಣಿ
ಭುವನ ಪಾವನ ನಾಮ ಸಿರಿ ವಿಜಯೀಂದ್ರರಾಮ
ರಾಮ ಮನದಿ ಭಾವಿಸಿ ॥ ೪ ॥

42

**ತಾಳ : ತ್ರಿವುಟ**

ರಾಮಜಾನಕಿ ಮದುವೆಯಾಗಿ ಬರುವಾಗ ಪರಶು
ರಾಮನಿದಿರಿಸಿ ಅವನ ಬಿಲ್ಲನೇರಿಸಿ ಮೆರೆದ
ರಾಮನಿದಿರಿಸಿ ಶಾಮಲಾಂಗ ವಿಜಯೀಂದ್ರ
ರಾಮ ಬಾಲಕನೆ ಹೇಳಾ ರಾಮನಿದಿರಿಸಿ ॥ ೫ ॥

**ತಾಳ : ಅಟ್ಟ**

ನೊಸಲಲಿ ಕಣ್ಣು ಪಡೆದವನ ಗೆಲಿದೆ
ಅಸುಳೆಯಂದು ಬೆಂಕೊಂಡು ಕಂದನ ಕಾಯ್ದೆ
ಕುಸುರಿ ಜವದೊಂದೆ ಬಾಣದಿಂದ ನಿಮಿಷದಿ
ಅಸುಳೆ ಅಸಮ ವಿಕ್ರಮ ವಿಜಯೀಂದ್ರರಾಮ ಜಗದೊಳು
ಅಸುಳೆಯೆಂದು ಬೆಂಕೊಂಡು ಕಂದನ ಕಾಯ್ದು ॥ ೬ ॥

**ಏಕತಾಳ**

ಉರವಣಿಸಿ ಬಹ ತಾಟಕಿಯ ಮಹಾ
ಕರಗಳ ನಿಮಿಷದಿ ಕತ್ತರಿಸುಯೆಂದು
ಹಿರಿಯದು ಪೇಳಲಿದಿರು ಪೇಳದೆ ತಾಯ
ಕೊರಳ ಸುರರ ಕಡಿದ ವಿಜಯೀಂದ್ರರಾಮ ॥ ೭ ॥

**ಜತೆ**

ಲೋಕಾಭಿರಾಮ ಸದ್ಗುಣಧಾಮ
ಲೋಕೈಕ ಧಾಮ ವಿಜಯೀಂದ್ರರಾಮ ॥ ೮ ॥

ವಿಜಯಸಂಪದ ಮಾಸಪತ್ರಿಕೆಯ ಜೂನ್ 2009ರ ಸಂಚಿಕೆಯ ಪುಟ 42, 43

ಹರಿ: ಓಂ ಶ್ರೀಶೋऽವತುಮಾಂ

— ಶ್ರೀ ವರದೇಂದ್ರ —

# ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕ

| ಸಂಪುಟ | ಶಕೆ ೧೮೭೯, ಚೈತ್ರ-ವೈಶಾಖ ಪ್ರಕಟನೆ-೫೬ | ಸಂಚಿಕೆ |
|---|---|---|
| ೧ | | ೨ |

(ಕ್ರಿ.ಶ. 1958 ; April-May)



ಶ್ರೀ ಗೋಪಾಲ ವಿಠಲರು ಚಿತ್ರಿಸಿದ ಚಿತ್ರ

→ ಸಂಪಾದಕ-ಪ್ರಕಾಶಕರು : ←

ವಿದ್ವಾನ್ ಸಾಹಿತ್ಯ ಸೇವಾಲಂಕಾರ ಹನುಮಂತರಾವ ಗೋರಬಾಳ

ಸಂಚಾಲಕ

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ
ಲಿಂಗಸುಗೂರ, ಜಿ. ರಾಯಚೂರ.

ವಾರ್ಷಿಕ ಚಂದಾ ೬-೦-೦] [ಬಿಡಿ ಸಂಚಿಕೆ ೧-೪-೦

ಸುಳಾದಿ ೦೩ ವಿಜಯೀಂದ್ರರಾಮ

ಶ್ರೀ ವಿಜಯೀಂದ್ರ ಸ್ವಾಮಿಗಳು ಮಾಡಿದ ಸುಳಾದಿ

ರಾಗ

ಧ್ರುವತಾಳ

ಯಾಕೆಲ ಮನವೆ ನೀ ಎನ್ನ ಕೀಕಟ ದೇಶಕ್ಕೆ ಕಳದು ಇಂದು।
ಲೋಕೈಕನಾಥ ಹರಿಯ ಪಾದಕೆನ್ನನು ದೂರನ ಮಾಡಿ ಇಂದು ವಾ
ಯಕೈಲ ಚಿಕ್ಕೆ ಲೋಕ ವಾರ್ತೆಗಳ ಸೇವಿಸದು।
ಶ್ರೀಕಾಂತನ ವಾರುತಿ ನುಡಿಸಿದಂತೆ ಮಾಡಿದಯ್ಯಾ।
ಯಾಕೆಲಕಿವಿಯೆ ಪೋಕರ ಆಲಾಪಗಳ ಕೇಳಿ ಕೆಡದೀ।
ಯಾಕೆಲ ಕಣ್ಣೆ ಪರವಧುಗಳ ಆಲೋಕಿಸಿ ಎನ್ನನು ಬಯಸಿದಿ।
ಸಾಕು ಸಾಕು ನಿಮ್ಮ ಸಂಗತಿ ಎಂಬಂತೆ ನೀ ಮಾಡಿದಿ।
ಸಾಕು ಮಾಡದೆನ್ನ ಸಿರಿ ವಿಜಯೀಂದ್ರರಾಮುನ್ನ ಅಗಲಿಸಿದಿ ೧

ಮಟ್ಟತಾಳ

ಹರಿಚಿಂತನ ನಾಮ ಮೂರುತಿ ಕೀರುತಿಗಳ।
ವಿರಚಿಸಿ ಸವಿಯದ ನೋಡದ ಕೇಳದ।
ಕರಣಗಳಿದ್ದೆಡೆ ಇಲ್ಲದಿದ್ದಡೇ ನೊ।
ಹರಿಗೆ ಸನ್ಮುಖವಾಗದ ಕಾರಣ।
ಕರಣಂಗಳ ಶಿರವೇವ ದೋಳಿತೊ।
ಸಿರಿ ವಿಜಯೀಂದ್ರ ರಾಮುನಲ್ಲ ದನ್ಯ ವಿಷಯ।
ಕೈರಗುವ ಕರಣಂಗಳ ಶಿರವರಿವದ್ದೊಳಿತೊ ೨

ರೂಪಕತಾಳ

ಮನುಮಥ ನಯ್ಯನಕಿಂತ ಕಡು ಚಲ್ವನಾವನೊ।
ವನಜ ಭವನ ತಂದೆ ಕಿಂತ ದೇವರೊಳದಾವನೊ।
ಮುನಿ ಮನಕೆ ಗೋಚರನಾಗಿ ತೋರಿ ತೋರನು ದಾವನೋ।
ಘನ ವಿಜಯೀಂದ್ರ ಶಾಮ ಪೊರೆಯಲೆಮ್ಮನುದಿನ ೩

ಝಂಪತಾಳ

ನಿನ್ನ ಕೀರುತಿ ಕಿವಿಗೆ ನಾಮ ಎನ್ನ ನಾಲಿಗೆ।
ಎನ್ನ ಕಣ್ಣಿಗೆ ನಿನ್ನ ಮೂರ್ತಿ ದೊರೆಯಲೊ।
ಎನ್ನ ಮನಕೆ ನೆನವ ಸಿರಿ ವಿಜಯೀಂದ ರಾಮ।
ಎನ್ನ ಕಣ್ಣಿಗೆ ನೀ ನನ್ನ ಮೂರ್ತಿ ದೊರೆಯಲೊ ೪

ತ್ರಿವಿಡಿ ತಾಳ

ಮೂರೇಳು ಕರಣಂಗಳರೇ ನೀವು।
ಸಿರಿ ಪತಿಗೆ ದೂರರಾಗಿ ನರಕಯಾತನೆ ಗೈದಲೆ।
ಹರುಷಗುಂದಲಿ ಲೇಸಾದೆ।
ಸುರೇಶ ಮೊದಲಾಗಿ ಅರ್ಚಿಸ ಪರಮ ಪಾವನಾ ಚರಣ
ಶ್ರೀ ಗರುವ ದೇವರ ದೇವನ।
ಸಿರಿ ವಿಜಯೀಂದ್ರರಾಮ ಪೊರೆಯಲೆಮ್ಮನುದಿನ ೫

ವಿಜಯೀಂದ್ರರ ಸುಳಾದಿಗಳು

ಅಟ್ಟತಾಳ

ತಪ್ಪನೊಪ್ಪನರಸನು ತನ್ನ ನೆರೆ ನಂಬಿದ।
ಶ್ರೀಪತಿ ಅಜಮಿಳ ಸುರಪತಿ ಮುಖರ।
ತಪ್ಪು ಮಾಡಿದವರ ತಪ್ಪು ಹಿಡಿದನೆ ಎ।
ನಪ್ಪ ಶ್ರೀ ವಿಜಯೀಂದ್ರ ರಾಮ ದಯಾನಿಧಿ ||೬||

ಆದಿತಾಳ

ನಾರಾಯಣನೆಂದು ಮಗನ ಕರಿಯಲಾಗ।
ಆರತನಾಗಿ ಆವಾತಕರದನೆಂದು ಅ
ದರ ದಿಂದಲಿ ಕೇಳಿ ಅಜಾಮಿಳನ।
ಭೂರಿ ಭೀತಿಗಳು ಕ್ಷಣದಿ ಬಿಡಿಸನೆ।
ಸಾರ ಹೃದಯ ನೆಂದರಿದರೆ ಬಿಡುವನೆ।
ಮಾರಮಣ ಸಿರಿ ವಿಜಯೀಂದ್ರರಾಮ।

ಜತೆ

ಸಾಧುಗಳನ ಸಂತತ ಸಲಹುವ ಸು।
ಬೋಧ ಮೂರುತಿ ಸಿರಿ ವಿಜಯೀಂದ್ರರಾಮ ||೭||

**ಅಟ್ಟತಾಳ**

ತಪ್ಪನೊಪ್ಪನರಸನು ತನ್ನ ನೆರೆ ನಂಬಿದ।
ಶ್ರೀಪತಿ ಅಜಮಿಳ ಸುರಪತಿ ಮುಖರ।
ತಪ್ಪು ಮಾಡಿದವರ ತಪ್ಪುಹಿಡಿದನೆ ಎ।
ನಪ್ಪ ಶ್ರೀ ವಿಜಯೀಂದ್ರ ರಾಮು ದಯಾನಿಧೆ ||೬||

**ಆದಿತಾಳ**

ನಾರಾಯಣನೆಂದು ಮಗನ ಕರೆಯಲಾಗ।
ಆರತನಾಗಿ ಆವಾತಕರದನೆಂದು ಅ
ದರೆ ದಿಂದಲಿ ಕೇಳಿ ಅಜಾಮಿಳನ।
ಭೂರಿ ಭೀತಿಗಳು ಕ್ಷಣದಿ ಬಿಡಿಸನೆ।
ಸಾರ ಹೃದಯ ನೆಂದರಿದರೆ ಬಿಡುವನೆ।
ಮಾರಮಣ ಸಿರಿ ವಿಜಯೀಂದ್ರರಾಮು।

**ಜತೆ**

ಸಾಧುಗಳನ ಸಂತತ ಸಲಹುವ ಸು।
ಬೋಧ ಮೂರುತಿ ಸಿರಿ ವಿಜಯೀಂದ್ರರಾಮ ||೮||

ವಿಜಯೀಂದ್ರರಾಮು (೨)
ಸುಳಾದಿ ೧೪
**ಶ್ರೀರಾಮಚಂದ್ರ ದೇವರ ಮಹಾಮಹತ್ತ್ವ**

**ರಾಗ ನಾಟಿ** **ಧ್ರುವತಾ**

ಪರಬೊಮ್ಮ ಕರಿಯುತಾ ನರ ರೂಪ ತಾಳಿಹ
ನರನಾಥ ದಶರಥನ್ನವರ ಗೇಹದಲವತರಿಸಿ
ಸಿರಿರಾಮ ನೆಂಬೊ ಪುಣ್ಯನಾಮದಿಂದ ಕರೆವುತಿರೆ
ಹರುಷದಿಂದ ಇಲ್ಲಿಗೈದಿ ಕರಿಯಬಂದ ಕೌಶಿಕನ್ನ
ಗುರು ಯಜ್ಞ ವಿಘ್ನವನ್ನು ಪರಿಹರಿಸುವ ಮುನಿವರನ
ಕರುಣದಿಂದ ಪರಮಾನಂದ ಶರಧಿಯಲೊಲ್ಯಾಡಿಸಿದ
ಸಿರಿ ವಿಜಯೀಂದ್ರ ರಾಮು ಪೊರೆಯಲಿಮ್ಮ ನಾಮವ
ಹಾಹಾ ಎಲೆ ರಮಣಾ ೧



**ಮಟ್ಟತಾಳ**

ಈತನೆಂದು ಯಜ್ಞದ ವಿಘ್ನ ಪರಿಹರಿಸುವ
ಪೋತ ಮಹದ್ಭೂತ ದಂತಿಹ ರಕ್ಕಸರ
ವೀತ ಭಯನಾಗಿ ಪೊರೆವದೆಂತೊ
ಪೋತ ಮಹದ್ಭೂತ ದಂತಿಹ ರಕ್ಕಸರ
ಭೂತಳಕರ್ತಸಿರಿ ವಿಜಯೀಂದ್ರ ರಾಮುನಚರಿತ
ಪೋತ ಮಹದ್ಭೂತದಂತಿಹ ರಕ್ಕಸರ ವೀತಭಯ
ನಾಗಿ ಪೊರೆವದೆಂತೊ ೨

**ರೂಪಕತಾಳ**

ಜನಕನಂದು ಜನಪತಿಯು
ಮುನಿಗೆ ಪೋಗಿ ಜಾನಕಿಯು
ಮನಕೆ ಹರುಷ ಬಪ್ಪಂತೆ
ಅಣಕವಾಗಿ ಶಿವನ
ಧನುವು ಮುರಿದು ವಿಜಯೀಂದ್ರ ರಾಮು
ಮನಕೆ ಹರುಷ ಬಪ್ಪಂತೆ ೩

**ಝಂಪೆತಾಳ**

ಇವನರ್ಭಕನೆ ಇವನ ಮುನಿಗಳಾದವರೆಲ್ಲ
ಮನದಿ ಭಾವಿಸಿ ಕಾಣನೆಂಬದರಿಯಾ
ಭುವನ ಪಾವನ ನಾಮ ಸಿರಿ ವಿಜಯೀಂದ್ರರಾಮ
ಇವನರ್ಭಕನೆ ಇವನ ಮುನಿಗಳಾದವರೆ ೪

**ತ್ರಿವಿಡಿತಾಳ**

ರಾಮು ಜಾನಕಿ ಮದುವೆಯು ಆಗಿ ಬಾವಾಗ ಪರುಶ
ರಾಮನ ದರಸ ಅವನಖಿಲ ಹೆದರಿಸಿ ಮೆರೆದೆ
ಕೋಮಲಾಂಗ ವಿಜಯೀಂದ್ರ ರಾಮು ಬಾಲಕನೆ—
ಹೇಗೆ ಹೆದರಿಸಿದಾ ೫

**ಅಟ್ಟತಾಳ**

ನಸಲಲ್ಲಿ ಕಣ್ಣು ಪಡದವನ ಗೆಲಿದೆ
ಅಸುಳೆಯೆಂದು ಬೇಡಿಕೊಂಡ ಕಂದನ ಕಾಯ್ದೆ



ಉಸರ ಬೇಕೆಂದು ಪವಣ (ಪಣವ) ಮಾಡಿದನ
ಅಸುಳೆ ಯೆಂದ ಸುರರ ಪೊರೆವೆ ವಿಜಯೀಂದ್ರ ರಾಮು
ಅಸುಳೆ ಯೆಂದು ಬೇಡಿಕೊಂಡ ಕಂದನ ಕಾಯ್ದೆ ನರಹರಿ ೬

**ಆದಿ ತಾಳ**

ಉರವಣಿಸಿ ಬಾಹ ತಾಟಕಿಯು ಕೈ
ಕರಗಳ ನಿಮಿಷದಿ ಕತ್ತರಿಸುವೆನೆಂದು
ಸುರರ ಪೊರೆವ ವಿಜಯೀಂದ್ರ ರಾಮು
ನರಹರಿ ಕರಗಳ ನಿಮಿಷದಿ ಕತ್ತರಿಸುವೆ ನೆಂದಾ ೭

**ಜತೆ**

ಲೋಕಾಭಿರಾಮು ಶುಭಗುಣ ಧಾಮು
ಲೋಕೇಶ ಧಾಮ ವಿಜಯೀಂದ್ರ ರಾಮು ೮

ಹೀಗಾಗಿ ಮೂಲದಲ್ಲಿಲ್ಲದ ''ಸಿರಿಮೂಲರಾಮ'' ಎಂಬುದನ್ನು ಸೇರಿಸಿದ್ದಾರೆಂದು ಧೈರ್ಯವಾಗಿ ಹೇಳಬಹುದಾಗಿದೆ. ಈ ಸುಳಾದಿಯನ್ನೇ ಮೂ.ಮಠೇ ಪುಸ್ತಕದ ಪುಟ 18-19ರಲ್ಲಿ ''ವಿಜಯೀಂದ್ರರಾಮ ನೀ ಮೂಲರಾಮ'' ಎಂಬ ಉಪಶೀರ್ಷಿಕೆಯಲ್ಲಿ ಉದಾಹರಿಸಿ ಲೇಖಕರು ''ಅವರು(ಶ್ರೀವಿಜಯೀಂದ್ರರು) ಶ್ರೀಮೂಲರಾಮದೇವರೇ ತಮ್ಮ ಉಪಾಸ್ಯಮೂರ್ತಿಯೆಂಬ ವಿಚಾರವನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ'' ಎಂದು ಬರೆದು ಶ್ರೀವಿಜಯೀಂದ್ರರ ಬಗ್ಗೆ ವಿಶ್ವಾಸವಿರುವ ಭಕ್ತರಿಗೆ ಮೋಸ ಮಾಡಿದ್ದಾರೆ.

2. ದಿ. ಶ್ರೀರಾಜಾ.ಎಸ್.ಗುರುರಾಜಾಚಾರ್ಯರ ''ಶ್ರೀಮೂಲರಾಮ'' ಪುಸ್ತಕದ ಪುಟ 25ರಲ್ಲಿ ಶ್ರೀವಿಜಯದಾಸರ ''ಕಂಡೆನು ಕಂಡೆನು ಕಂಗಳಲ್ಲಿ ---'' ಎಂಬ ಕೃತಿಯಲ್ಲಿಯ 5ನೇ ನುಡಿಯನ್ನು ಮಾತ್ರ ಛಾಪಿಸಿದ್ದಾರೆ. ಈ 5ನೇ ನುಡಿಯಲ್ಲಿ ''ಮಿಸುನಿಪ ಮಂಟಪದೊಳಗೆ ನೆರೆ ರಂಜಿಸುವ ಮೂಲರಾಮನ್ನ ಕುಳ್ಳಿರಿಸಿ ಅರ್ಚಿಸುತಿಹ---'' ಎಂಬ ಪಾಠ ಕೊಟ್ಟು ಈ ಕೃತಿಯ ಆರಂಭದಲ್ಲಿ ''ಶ್ರೀವಿಜಯದಾಸರು ತಮ್ಮ ಕುಲಗುರುಗಳಾದ ಶ್ರೀವಾದೀಂದ್ರತೀರ್ಥರನ್ನೂ, ಅವರು ಪೂಜಿಸುವ ಮೂಲರಾಮನನ್ನು ಭಕ್ತಿಯಿಂದ ಮೈಮರೆತು ಸ್ತುತಿಸಿದ್ದಾರೆ'' ಎಂದು ಬರೆದಿದ್ದಾರೆ.

ಇಲ್ಲಿಯು ಸಹ ''ಮೂಲರಾಮನ'' ಎಂಬ ಪಾಠ ತಪ್ಪು. ಕೇವಲ ''ರಾಮನ'' ಎಂಬುದೇ ಸರಿಯಾದ ಪಾಠ. ಮೂಲದಲ್ಲಿಲ್ಲದ ''ಮೂಲ'' ಶಬ್ದವನ್ನು ಸೇರಿಸಿದ್ದಾರೆ.

- ❖ ಶ್ರೀರಾಯರಮಠದಿಂದಲೇ ಪ್ರಕಟವಾದ ''ಶ್ರೀರಾಘವೇಂದ್ರಸತ್ಸಂಪ್ರದಾಯ ಜನಪ್ರಿಯ ಭಜನ ಸಂಪುಟ''ದ ಪುಟ 367ರಲ್ಲಿ ಮತ್ತು
- ❖ ಸರ್ಕಾರ ಪ್ರಕಟಿಸಿರುವ ಸ.ದಾ.ಸ. ಸಂಪುಟ 9, ಭಾಗ 2, ಪುಟ 34 ರಲ್ಲಿ ಈ ಕೃತಿಯ ಪೂರ್ಣಪಾಠವಿದ್ದು ಈ ಎರಡರಲ್ಲೂ ''ಮೂಲ'' ಶಬ್ದವಿಲ್ಲದಿರುವುದು ಗಮನಾರ್ಹ.

ಇಲ್ಲದ ''ಮೂಲ'' ಶಬ್ದ ಸೇರಿಸಿ ಶ್ರೀವಿಜಯದಾಸರ ಭಕ್ತರಿಗೆ ವಿಪರೀತ ತಿಳುವಳಿಕೆ ಬರುವಂತೆ ವಂಚನೆ ಮಾಡಲಾಗಿದೆ.

3. ಮತ್ತೆ, ಅದೇ ''ಶ್ರೀಮೂಲರಾಮ'' ಎಂಬ ಪುಸ್ತಕದ ಪುಟ 70 ರಲ್ಲಿ ಛಾಪಿಸಿರುವ ''ರಾಮನ ನೋಡಿರೈ ...'' ಎಂಬ ಪದ್ಯದಲ್ಲಿ ಎಲ್ಲೂ ''ಮೂಲರಾಮ'' ಎಂಬ ಶಬ್ದವಿಲ್ಲದಿದ್ದರೂ ಮತ್ತು ಇಡೀ ಪದ್ಯದಲ್ಲಿ ವರ್ಣಿಸಿರುವ ಆಭರಣ, ಕೋದಂಡಾದಿಗಳು ಅವರ ರಾಮದೇವರ ಪ್ರತಿಮೆಯಲ್ಲಿ ಇಲ್ಲದಿದ್ದರೂ ಸಹ ''ಶ್ರೀಗುರುಗೋಪಾಲದಾಸ ವಿರಚಿತ ಶ್ರೀಮೂಲರಾಮದೇವರ ಪದ'' ಎಂದು ಕೃತಿಯ ಆರಂಭದಲ್ಲಿ ದಪ್ಪ ಅಕ್ಷರಗಳಿಂದ ಕಾಣಿಸಿರುವುದು ಓದುಗರಿಗೆ ಮಾಡಿರುವ ಮತ್ತೊಂದು ಮೋಸ.

**ವಾಚಕರೇ !...**

**ಈಗ ಹೇಳಿ, ಹರಿದಾಸಸಾಹಿತ್ಯವನ್ನು ಹದಗೆಡಿಸುತ್ತ ಬಂದವರು ಯಾರು? (ಇಂತಹ ಉದಾಹರಣೆಗಳು ಅನೇಕ ಇವೆ. ಕೆಲವನ್ನು ಮಾತ್ರ ಇಲ್ಲಿ ವಾಚಕರ ಅವಗಾಹನೆಗೆ ತಂದಿದ್ದೇವೆ).**

ಇದಲ್ಲದೆ, ಇವರು ಮುದ್ರಿಸಿರುವ ''ಇಂದಿನ ದಿನ ಸುದಿನವಾಯಿತು'' ಮೊದಲಾದ ಕೃತಿಗಳಿಗೆ ಮೂಲ ಗೋರೆಬಾಳ ಹನುಮಂತರಾಯರ ಪ್ರಕಟಣೆಗಳೇ ಆಗಿವೆ. ಈ ಗೋರೆಬಾಳ ಹನುಮಂತರಾಯರಿಗೆ ಶ್ರೀವಿಜಯರಾಯರ ಕಟ್ಟೆಯಲ್ಲಿದ್ದ ಹಸ್ತಪ್ರತಿಗಳೇ ಮೂಲವಾಗಿವೆ. (ಪ್ರತಿಯೊಂದು ಕೃತಿಯ ಕೊನೆಗೆ ''ಶ್ರೀಕೃಷ್ಣಾರ್ಪಣಮಸ್ತು ಎಂಬ ಒಕ್ಕಣಿಕೆಯಿಂದ ಇದು ಸ್ಪಷ್ಟ.) ಹೀಗಿರುವಾಗ ಅದೇ ವಿಜಯದಾಸರ ಕಟ್ಟೆಯ ಮೂಲಪ್ರತಿಗಳಲ್ಲಿದ್ದ

ಶ್ರೀಪಾದರಾಜರ ''ತೂಗೀರೋ ರಾಮನ'' ಕೃತಿಯನ್ನು ಉತ್ತರಾದಿಮಠದವರು ಸಸೀತಾಮೂಲರಾಮಾರ್ಚಾ ಪುಸ್ತಕದಲ್ಲಿ ಪ್ರಕಾಶಿಸಿದಾಗ ಹಿಂದೆ ಮುಂದೆ ವಿಚಾರಿಸದೇ ಅಲ್ಲಗಳೆವುದು ಸಾಹಸವಲ್ಲವೇ?

ಮತ್ತೊಂದು ಆಶ್ಚರ್ಯವೆಂದರೆ ಶ್ರೀರಾಜಾ.ಎಸ್. ಗುರುರಾಜಾಚಾರ್ಯರೇ ತಮ್ಮ ''ಶ್ರೀಮೂಲ-ರಾಮ'' ಎಂಬ ಪುಸ್ತಕದಲ್ಲಿ ''ವೇದಾಂತವೇದ್ಯನ'' ಎಂಬ ದೀರ್ಘಸುಳಾದಿಯನ್ನು ಆಧಾರವೆಂಬುದಾಗಿ ಮುದ್ರಿಸಿದ್ದಾರೆ. ಆದರೆ ಈ ಕೃತಿ ಅವರಿಗೇ ಬಾಧಕವಾಗಿರವುದೆಂದು ಸ.ಸೀ.ಮೂಲ ತೋರಿಸಿದಾಗ, ಈ ಕೃತಿಯನ್ನು ''ಗುರು ಪುರಂದರವಿಠ್ಠಲರ ತಲೆಗೆ ಕಟ್ಟಿರುವುದು ವಿಷಾದಕರ'' ಎಂದು ಮೂಲರಾಮಸ್ತು ಮನ್ಮಠೇ ಪು. 92 ರಲ್ಲಿ ಲೇಖಕರು ಆರೋಪಿಸಿದ್ದಾರೆ.

ಹೀಗೆಯೇ ಪ್ರತಿಬಾರಿಯೂ ತಮ್ಮ ಹಿಂದಿನವರು ಅಧಿಕೃತವಾಗಿ ಅವರ ಪುಸ್ತಕಗಳಲ್ಲಿ ಆಧಾರಗಳೆಂದು ಕೊಟ್ಟ ಶ್ಲೋಕ ಅಥವಾ ಹರಿದಾಸರ ಪದಗಳನ್ನು ತಾವೇ ಅಲ್ಲಗಳೆಯುತ್ತಾ ತಮ್ಮ ಹಿರಿಯರು ಮಾಡಿದ ತಪ್ಪುಗಳನ್ನು ಉತ್ತರಾದಿಮಠದವರ ತಲೆಗೆ ಕಟ್ಟುತ್ತಾ ಹೊರಟಿದ್ದಾರೆ. ''ವೇದಾಂತವೇದ್ಯನ...'' ಸುಳಾದಿಯನ್ನು ಗುರುಪುರಂದರರ ತಲೆಗೆ ಕಟ್ಟಿದವರು ರಾಯರ ಮಠದ ಹಿರಿಯರೇ. ಅವರು ಕೊಟ್ಟ ಆಧಾರಗಳು ಅವರಿಗೇ ಹೇಗೆ ಬಾಧಕಗಳಾಗಿವೆ ಮತ್ತು ಅವರು ಕೊಟ್ಟ ಆಧಾರಗಳಲ್ಲಿ ಉತ್ತರಾದಿಮಠಕ್ಕೆ ಪೋಷಕವಾದ ಅನೇಕ ಅಂಶಗಳಿವೆ ಎಂಬುದು ಗಮನಾರ್ಹ. ''ಅವರ ಹಿರಿಯರೇ ಕೊಟ್ಟ ಆಧಾರಗಳು ಸರಿಯಿಲ್ಲ'' ಎಂದು ಅವರೇ ಆಕ್ಷೇಪಿಸಿದ್ದರಿಂದ ಇಂತಹ ವ್ಯಾಹತ ಬರಹಗಳನ್ನು ವಿಮರ್ಶಿಸುವುದು, ಚರ್ಚೆ ಮಾಡುವುದು ಅರ್ಥಹೀನ.

ಇದರಂತೆ ಶ್ರೀಜಿತಾಮಿತ್ರತೀರ್ಥರು, ಶ್ರೀಮೂಲರಾಮ, ಅಜಯ್ಯವಿಜಯೀಂದ್ರರು ಮತ್ತು ಕಲಿಯುಗಕಲ್ಪತರು ಪುಸ್ತಕಗಳಲ್ಲಿ ಛಾಪಿಸಿರುವ ಅನೇಕ ದಾಸರ ಕೃತಿಗಳಲ್ಲಿ ಶ್ರೀಗೋರೆಬಾಳು ಹನುಮಂತರಾಯರು ಶ್ರೀವರದೇಂದ್ರಸಾಹಿತ್ಯ ಮಂಡಳಿಯಿಂದ ಪ್ರಕಟಸಿದ ಕೃತಿಗಳಲ್ಲಿಲ್ಲದ ''ಮೂಲರಾಮ'' ಮೊದಲಾದ ಶಬ್ದಗಳನ್ನು ಸೇರಿಸಿರುವುದನ್ನು ಕಾಣಬಹುದಾಗಿದೆ. ಕೆಲವನ್ನು ಮಾತ್ರ ಮೇಲೆ ಉದಾಹರಿಸಲಾಗಿದೆ.

ಇದರಿಂದ ಮೂ.ಮಠೇ. ಲೇಖಕರು ಉದಾಹರಿಸುವ ಹರಿದಾಸರ ಕೃತಿಗಳ ಪಾಠಗಳಲ್ಲಿ ವಿಶ್ವಾಸ ಮೂಡಲು ಸಾಧ್ಯವಿಲ್ಲ.

ಒಟ್ಟಿನಲ್ಲಿ ಸಮಗ್ರದಾಸಸಾಹಿತ್ಯವೇ ತಮ್ಮ ಜನ್ಮಸಿದ್ಧಹಕ್ಕಿನಡಿಯಲ್ಲಿದೆ ಎಂದು ತಿಳಿದು ಮನಬಂದಂತೆ ಸಾಹಿತ್ಯವನ್ನು ಹದಗೆಡಸುತ್ತಾ ಹೊರಟಿದ್ದಾರೆ. ಈಗಾಗಲೇ ಸಂಶೋಧಿತವಾಗಿ ಅನ್ಯರಿಂದ ಪ್ರಕಟಿತವಾದ ಕೆಲಕೃತಿಗಳನ್ನು ಕೆಲವೊಮ್ಮೆ ಉತ್ತರಾದಿಮಠದವರು ಪುಸ್ತಕಗಳಲ್ಲಿ ಉದಾಹರಿಸಿದಾಗ ವಿನಾಕಾರಣ ಉತ್ತರಾದಿಮಠದವರ ತಲೆಯ ಮೇಲೆ ಗೂಬೆ ಕೂಡಿಸುವ ಪ್ರಯತ್ನ ಅತ್ಯಂತ ಅಸಾಧುವಾಗಿದೆ. ಅಲ್ಲದೇ ಉತ್ತರಾದಿಮಠದ ಮೂಲಪರಂಪರೆ, ಮೂಲಪ್ರತಿಮೆಗಳು ಹಾಗೂ ಪೀಠಾಧಿಪತಿಗಳ ಬಗ್ಗೆ, ಯಾವ ಸಂಕೋಚವಿಲ್ಲದೇ ದಿಟ್ಟತನದಿಂದ ಪ್ರಾಮಾಣಿಕವಾಗಿ ತಮ್ಮ ಕೃತಿಗಳಲ್ಲಿ ಐತಿಹಾಸಿಕವಾಗಿ ದಾಖಲಿಸಿದ ಎಲ್ಲ ಸಮಕಾಲಿನ ಹರಿದಾಸರುಗಳ ದ್ರೋಹವೂ ಆಗಿದೆ. (ಹೆಚ್ಚಿನ ವಿಷಯಗಳಿಗೆ ನೋಡಿರಿ- ''ಹರಿದಾಸರು ಕಂಡ ಉತ್ತರಾದಿಮಠ'' ಪ್ರಕಟಣೆ -ವಿಶ್ವಮಧ್ವಮಹಾಪರಿಷತ್, ಬೆಂಗಳೂರು.)

* * * *

# ''ಸತ್ಯಮೇವ ಜಯತೇ''
## ಪುಸ್ತಕದ ಬಗ್ಗೆ ಚಿಂತನೆ

ಮೂ.ಮಠೇ ಪುಸ್ತಕದಲ್ಲಿ ಅನೇಕ ಕಡೆ ದಿ. ಡಾ|| ಬಿ.ಎನ್.ಕೆ. ಶರ್ಮಾ ರವರ ''ಸತ್ಯಮೇವ ಜಯತೇ'' ಎಂಬ ಪುಸ್ತಕವನ್ನು ಪ್ರಮಾಣ ಗ್ರಂಥದಂತೆ ಉಲ್ಲೇಖಿಸಿದ್ದಾರೆ. ಈ ''ಸತ್ಯಮೇವ ಜಯತೇ'' ಪುಸ್ತಕಕ್ಕೆ ಯಾರೂ ಉತ್ತರಿಸಲಾರರು. ಅದೇ ಅಂತಿಮ ನಿರ್ಣಯ ಎಂದು ತಿಳಿದು ಜನಮನಗಳಲ್ಲೂ ಹಾಗೆಯೇ ಭಾವನೆ ಬರುವಂತೆ ಮೂಡಿಸುತ್ತಿರುವುದನ್ನು ಗಮನಿಸಲಾಗಿದೆ. ಕೆಲ ಪ್ರಸಿದ್ಧವಿದ್ವಾಂಸರೂ, ಸಂಶೋಧಕರೂ ಸಹ ಈ ಭಾವನೆಯನ್ನು ತಾಳಿರುವುದು ನಿಜಕ್ಕೂ ಆಶ್ಚರ್ಯ. ಈ ಪುಸ್ತಕದ ಇತಿಮಿತಿಗಳನ್ನು, ಸಂಶೋಧನೆಯ ಅಪೂರ್ಣತೆಯನ್ನು ಇಲ್ಲಿ ಮನಗಾಣಿಸಿ ಕೊಡುತ್ತಿದ್ದೇವೆ.

''ಸತ್ಯಮೇವ ಜಯತೇ'' ಎಂಬ ಪುಸ್ತಕ ಹೊರಟದ್ದು ಶ್ರೀ ಸಿ.ಆರ್. ರಾವ್ ಅವರು ಬರೆದ ''ಶ್ರೀಉತ್ತರಾದಿಮಠ'' ಎಂಬ ಆಂಗ್ಲ ಪುಸ್ತಕದ ಪ್ರತಿಕ್ಷೇಪರೂಪದಲ್ಲಿ. ಸಾಂದರ್ಭಿಕವಾಗಿ ಆ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ಪಂ. ಶ್ರೀಮಾಹುಲಿ ಗೋಪಾಲಾಚಾರ್ಯರ ಅಭಿಪ್ರಾಯಗಳನ್ನು ಬಿ.ಎನ್.ಕೆ.ರವರು ಟೀಕಿಸಿದ್ದಾರೆ. ಅದನ್ನು ಗಂಭೀರವಾಗಿ ಮಾಡಿದ್ದರೆ ಅವರ ಘನತೆಗೆ ತಕ್ಕದ್ದಾಗಿರುತ್ತಿತ್ತೇನೋ. ಆದರೆ, ಯಾವುದೋ ನಿಗೂಢ ವಿಷಯದ ಸುಳಿಗೆ ಸಿಲುಕಿ ಮಹಾಸಂಸ್ಥಾನವಾದ ಉತ್ತರಾದಿಮಠ ಹಾಗೂ ಆ ಪರಂಪರೆಯ ಪೀಠಾಧಿಪತಿಗಳನ್ನು ನಿಕೃಷ್ಟವಾಗಿ ಚಿತ್ರೀಕರಿಸಿದ್ದು ಆಕ್ಷೇಪಾರ್ಹವಾಗಿದೆ.

ಇಷ್ಟಕ್ಕೂ ಪಂ.ಪೂ. ಮಾಹುಲೀ ಆಚಾರ್ಯರು ತಮ್ಮ ಮುನ್ನುಡಿಯಲ್ಲಿ ಹೇಳಿದ್ದೇನು? ತಮ್ಮ ಪ್ರಸ್ತಾವನೆಯಲ್ಲಿ ಮೊದಲು ಉತ್ತರಾದಿಮಠ ಮೂಲಮಠ ಎಂಬುದಕ್ಕೆ ಅನೇಕ ಪ್ರಬಲ ಸಾಕ್ಷ್ಯಾಧಾರಗಳನ್ನು ನೀಡಿ ನಂತರ,

''If for arguments sake we were to imagine that Srimad uttaradi mutt is not the original Mutt, we shall be happy to know if some other Dwaita Mutt is proved on strong and incontestable grounds to be the original mutt''

ಎಂಬುದಾಗಿ ಇತರ ಮಠದವರು ತಮ್ಮ ಮಠವೇ ಮೂಲ ಮಠ ಎನ್ನುವದಕ್ಕೆ ಪ್ರಬಲವಾದ, ನಿರವಕಾಶವಾದ, ಯುಕ್ತಿಬದ್ಧವಾದ ಪ್ರಮಾಣಗಳನ್ನು ಕೊಟ್ಟು ಸಮರ್ಥಿಸಿಕೊಂಡಲ್ಲಿ ನಾವು ಸಂತೋಷಿಸುತ್ತೇವೆ ಎಂಬುದಾಗಿ ಬಿಚ್ಚು ಹೃದಯದಿಂದ ಹೇಳಿದ್ದಾರೆ. ಇದನ್ನು ಮನಗಾಣದೇ ದಿ| ಬಿ.ಎನ್.ಕೆ.ಯವರು ಪಂ. ಗೋಪಾಲಾಚಾರ್ಯರನ್ನು ಟೀಕಿಸಿದ್ದು ಅಸಾಧುವಾಗಿದೆ. ಉತ್ತರಾದಿಮಠದ ಉತ್ಕರ್ಷವನ್ನು ಆ ಮಠದ ಶಿಷ್ಯರು ಹೇಳಿಕೊಂಡದ್ದೇ ಅವರ ಸಹನೆಗೆ ಬಿದ್ದ ಪೆಟ್ಟೆಂದು ಸ್ಪಷ್ಟ ತೋರುತ್ತಿದೆ.

ತಮ್ಮ ಪುಸ್ತಕದಲ್ಲಿ ಬಿ.ಎನ್.ಕೆ ಅವರು ಎಲ್ಲ ಮಾಧ್ವಮಠಗಳ ವಿಷಯದಲ್ಲಿ ಸಮತಾವಾದವನ್ನು ಎತ್ತಿಹಿಡಿಯಲು ಹೊರಟು ಕೊನೆಗೆ ತಾರತಮ್ಯವಾದಕ್ಕೆ ಸೋತಿದ್ದಾರೆ. ಆ ತಾರತಮ್ಯದಲ್ಲಿ ಯಾರನ್ನು ಯಾವ ಮಟ್ಟದಲ್ಲಿಡಲು ಹವಣಿಸಿದರು ಎಂಬುದು ಬೇರೆ. ಆದರೆ, ಸಮತಾವಾದಕ್ಕೆ ಪೂರ್ಣವಿರಾಮ ಹಾಕಿದರು. ಹಾಗೆ ನೋಡಿದರೆ ತಮ್ಮ ಮಠವಾದ ವ್ಯಾಸರಾಜಮಠವೇ ಮೂಲಮಠವೆಂಬ ತಮ್ಮ ಹಾರ್ದವನ್ನು ಸ್ಪಷ್ಟವಾಗಿ ಹೊರಗೆಡಹಿದ್ದಾರೆ. ಸರಿಯಾಗಿ ಸಂಶೋಧನೆಯನ್ನು ನಡೆಸದೇ ಉತ್ತರಾದಿಮಠದವರ ಮೇಲೆ ಇಲ್ಲ ಸಲ್ಲದ ಆರೋಪಗಳನ್ನು ಮಾಡಿದರು.

ಮೂಲಸೀತಾರಾಮರ ಪ್ರತಿಮೆಗಳನ್ನು ಶ್ರೀನರಹರಿತೀರ್ಥರು ಶ್ರೀಮದಾಚಾರ್ಯರಿಗೆ ತಂದು ಒಪ್ಪಿಸಿದ್ದು ಸರ್ವವಿದಿತ ಮತ್ತು ದಿಗ್ವಿಜಯರಾಮಪ್ರತಿಮೆಯು ಶ್ರೀಮದಾಚಾರ್ಯರ ಕಾಲದ್ದೆಂದು ಗೊತ್ತಿದ್ದರೂ ಉತ್ತರಾದಿಮಠದಲ್ಲಿಯ ಪ್ರತಿಮೆಗಳು ಪ್ರಾಚೀನವಲ್ಲವೆಂದು ಸಿದ್ಧಪಡಿಸಲು ಮಣಿಮಂಜರಿಯಲ್ಲಿ ಹೇಳಿದ ಮಾಯಾವಾದಿಗಳ ಕಿರುಕುಳ, ಅವರು ಪ್ರಾಜ್ಞತೀರ್ಥರ ಶಿಷ್ಯರುಗಳ ಆಶ್ರಮಗಳನ್ನು ಸುಟ್ಟುಹಾಕಿದ್ದು, ದಂಡಾದಿಗಳನ್ನು ಒಡೆದುಹಾಕಿದ ವಿಷಯ ಪ್ರಸ್ತಾಪಿಸುತ್ತ, ''ದೇವರ ಪೆಟ್ಟಿಗೆ, ಅದರಲ್ಲಿಯ ಸಾಮಾನು ಸುರಕ್ಷಿತ ಉಳಿದಿರಬಹುದೆಂಬ ಸಂಭಾವನೆಯಿಲ್ಲ.'' ಎನ್ನುತ್ತಾರೆ. (ಪುಟ 50). ಇದು ಹಿರಿಯ ಸಂಶೋಧಕರು ಮಾಡುವ ಕೆಲಸವೇ?

ಶ್ರೀಮದಾಚಾರ್ಯರಿಗಿಂತಲೂ ಹಿಂದಿನವರ ಕಾಲದಲ್ಲಿ ನಡೆದ ಘಟನೆಯು ಶ್ರೀಮದಾಚಾರ್ಯರ ಕಾಲದಲ್ಲಿ ಬಂದ ಪ್ರತಿಮೆಗಳ ಅಸ್ತಿತ್ವದ ಸಂಶಯಕ್ಕೆ ಕಾರಣವಾಗುವುದಿಲ್ಲ. ಇಷ್ಟು ಸ್ಪಷ್ಟವಾಗಿ ತೋರುವ ವಿಷಯವನ್ನು ಮುಚ್ಚಿಹಾಕಿ ವಾಚಕರಿಗೆ ಶ್ರೀಉತ್ತರಾದಿಮಠದಲ್ಲಿರುವ ಪ್ರತಿಮೆಗಳ ಬಗ್ಗೆ ಸಂಶಯ ಮೂಡಿಸುವುದು ಸಂಶೋಧಕರಿಗೆ ಶೋಭೆಯೆನಿಸುತ್ತದೆಯೇ?

ತಮ್ಮ ಅನೇಕ ನಿಲುವುಗಳಿಗೆ ಅವರು ಸಂಪೂರ್ಣಭಾರ ಹಾಕಿದ್ದು ''ಗುರುಚರ್ಯಾ'' ಎಂಬ ಹಸ್ತಪ್ರತಿಯ ಮೇಲೆ. ಈ ಹಸ್ತಪ್ರತಿಯಲ್ಲಿ ತಮಗೆ ಬೇಕಾದ ಅಂಶಗಳನ್ನಷ್ಟೇ (ಉತ್ತರಾದಿಮಠವನ್ನು ಹಳಿಯಲು) ತೆಗೆದುಕೊಂಡು ಬಾಕಿ ವಿಷಯಗಳನ್ನೆಲ್ಲ ಮುಚ್ಚಿಟ್ಟರು. ಎಲ್ಲಕ್ಕಿಂತ ಆಶ್ಚರ್ಯವೆಂದರೆ ಇಷ್ಟು ಪ್ರಸಿದ್ಧರಾದ ಇವರು ತಮ್ಮ ಸಂಶೋಧನೆಗೆ ಆಧಾರವಾಗಿಟ್ಟುಕೊಂಡ ಹಸ್ತಪ್ರತಿಯ ಕಾಲ, ಅದನ್ನು ಬರೆದವರ ಹೆಸರು, ಯಾವುದನ್ನೂ ನಿರ್ಣಯಿಸಿಕೊಳ್ಳಲಾಗದಿದ್ದದ್ದು.

ಅದರಂತೆಯೇ ಉತ್ತರಾದಿಮಠದ ಪರಂಪರೆಯನ್ನು ಐತಿಹಾಸಿಕವಾಗಿ ತಿಳಿಸುವ ಅನೇಕ ಆಕರಗಳಲ್ಲಿರುವ ವ್ಯತಿರಿಕ್ತ ಹಾಗೂ ವಿರೋಧಾಭಾಸಗಳನ್ನು ಎತ್ತಿ ತೋರಿಸುವುದರಲ್ಲೇ ತಮ್ಮ ಬುದ್ಧಿವಂತಿಕೆಯನ್ನು ಉಪಯೋಗಿಸುತ್ತಾರೆ.

ಉತ್ತರಾದಿಮಠದ ಹಸ್ತಪ್ರತಿಗಳ ಗ್ರಂಥಾಲಯದಲ್ಲಿರುವ ಇತರ ಮೂಲ ಆಧಾರಗಳ ಬಗ್ಗೆ, ಯಾವುದೇ ಮಾಹಿತಿ ಬಗ್ಗೆ, ವಿಚಾರವನ್ನೂ ಮಾಡದೆ ನಿರ್ಣಯ ತೆಗೆದುಕೊಳ್ಳುವ ಸಾಹಸ ಮಾಡಿದ್ದಾರೆ. ''ಸತ್ಯಮೇವ ಜಯತೇ''ಯಲ್ಲಿ ಶ್ರೀವಿದ್ಯಾನಿಧಿಗಳ ಹಾಗೂ ಶ್ರೀರಘುನಾಥತೀರ್ಥರ ಬಗ್ಗೆ ಅವರಾಡುವ ಶಬ್ದಗಳು ಪೂರ್ವಗ್ರಹದೂಷಿತವಾಗಿವೆ. ಅತ್ಯಂತ ನಿಕೃಷ್ಟವಾಗಿವೆ. ''ಶ್ರೀರಘುನಾಥತೀರ್ಥರು ಹೇಳಿಕೊಳ್ಳುವ ಯಾವುದೇ ಪ್ರಮುಖ ಗ್ರಂಥಗಳನ್ನು ಬರೆದಂತೆ, ಅದರ ಮೇಲೆ ಅಧಿಕೃತವೆಂದಾಗಲೀ, ಮಹಾನ್ ವ್ಯಕ್ತಿತ್ವ ಉಳ್ಳವರೆಂದಾಗಲೀ ಇತಿಹಾಸದಲ್ಲಿ ಕಂಡು ಬಂದಿಲ್ಲ. ಉತ್ತರಾದಿಮಠದ ಶ್ರೀರಘುನಾಥತೀರ್ಥರು ಭಾರೀ ವಿದ್ವಾಂಸರು, ಅಧಿಕೃತ ವ್ಯಕ್ತಿಗಳಾಗಿದ್ದರೆಂದು ಉದ್ದೇಶಪೂರ್ವಕವಾಗಿ ಅವರ ವ್ಯಕ್ತಿತ್ವವನ್ನು ಎತ್ತರಿಸುವ ಹವಣಿಕೆ ಮಾತಾಗಿದೆ. ಸ್ವತಃ ವಿದ್ಯಾನಿಧಿಗಳಿಗೇ ವಿಧ್ಯುಕ್ತವಾಗಿ ಪಟ್ಟಾಭಿಷೇಕವಾಗಿಲ್ಲ.., ಪೀಠವನ್ನು ಕಿತ್ತುಕೊಂಡು ಕುಳಿತ ಶ್ರೀರಘುನಾಥತೀರ್ಥರ ಸನ್ಯಾಸಗುರುಗಳು ಯಾರೆಂದು ಪ್ರಶ್ನೆ ಏಳುತ್ತದೆ. ಇವೆಲ್ಲ ಉತ್ತರಾದಿಮಠದ ತಲೆಶೂಲಿಗಳೇ ಹೊರತು ನಮ್ಮವಲ್ಲ'' ಹೀಗೆಲ್ಲ ಉತ್ತಮರ ಮೇಲೆ ಆಕ್ಷೇಪಿಸಿದ್ದಾರೆ.

**ಈ ಎಲ್ಲ ಆಕ್ಷೇಪಗಳನ್ನು ಮಹನೀಯರ ಮೇಲೆ ಮಾಡುವ ಮುಂಚೆ ಶ್ರೀವಿದ್ಯಾನಿಧಿಗಳ ಮತ್ತು ಶ್ರೀರಘುನಾಥತೀರ್ಥರ ಬಗ್ಗೆ ಮಾಹಿತಿ ಒದಗಿಸುವ ಆಕರಗಳ ಮೇಲೆ ಸರಿಯಾದ ಸಂಶೋಧನೆ ನಡೆಸಬೇಕಿತ್ತು. ಅವರೇ ಪ್ರಮಾಣವೆಂದು ಕೊಡುವ ಗುರುಚರ್ಯಾ ಗ್ರಂಥವನ್ನೇ ಪೂರ್ಣವಾಗಿ ಪೂರ್ವಗ್ರಹವಿಲ್ಲದೇ ಅಧ್ಯಯನ ಮಾಡಿದ್ದರೂ ಅವರು ಈ ನಿಲುವಿಗೆ ಬರುತ್ತಿರಲಿಲ್ಲ. ಕೇವಲ ಇತ್ತೀಚಿನ ಕೆಲವರ ಒತ್ತಡದ ಹೇಳಿಕೆಗಳ ಮೇಲೆ ಈ ರೀತಿ ಬರೆಯುವುದು ಸರಿ**

**ಅಲ್ಲವೆಂದು ಅವರಿಗೇ ಮನವರಿಕೆ ಮಾಡಿಕೊಡಲು ಅವರೀಗ ಇಲ್ಲ. ಆದರೂ ಉಳಿದ ಸಂಶೋಧಕರಿಗೆ ವಿಮರ್ಶಕರಿಗೆ ಸಜ್ಜನರಿಗೆ ತೋರಿಸಿಕೊಡುತ್ತಿದ್ದೇವೆ.**

**ಶ್ರೀರಘುನಾಥತೀರ್ಥರ ಬಗ್ಗೆ ಮಾಹಿತಿಯನ್ನು ಕೊಡುವ ಆಕರಗಳು ಹೀಗಿವೆ-**

i) ಶ್ರೀಪಾದರಾಜರ ''ತೂಗಿರೊ ರಾಮನ'' ಕೃತಿ.

ii) ಶ್ರೀವ್ಯಾಸರಾಜರು ತಮ್ಮ ಕೃತಿಯಲ್ಲಿ ''ಸುರನಾಥಪುರಕಂದು ಘನಪುಷ್ಪ ವಿಮಾನದಿ ಸುರಿವುತ್ತಲಿರೆ ರಘುನಾಥೇಂದ್ರರು..'' ಎಂದು ದಾಖಲಿಸಿದ್ದಾರೆ.

iii) ಶ್ರೀಪುರಂದರದಾಸರ ಮಧ್ವರಾಯರದೇವತಾರ್ಚನೆಯ....

iv) ಗುರುಪುರಂದರದಾಸರ ಕೃತಿ.

v) ''ಶ್ರೀಸತ್ಯನಿಧಿವಿಲಾಸ'' ಸರ್ವತೋವಿಲಾಸ ವ್ಯಾಖ್ಯಾನಸಮೇತ

vi) ಶ್ರೀಸತ್ಯಾಭಿನವತೀರ್ಥಕೃತ ''ಶ್ರೀಸತ್ಯನಾಥಗುರುಸ್ತುತಿ''

vii) ಗುರುಚರ್ಯಾ

viii) ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು

ix) ಗುರುಮಾಹಾತ್ಮ್ಯರತ್ನಾವಲಿ.

x) ಶ್ರೀಪಾದರಾಜಮಠದ ಶ್ರೀಸತ್ಯನಿಧಿತೀರ್ಥವಿರಚಿತ ''ನವಪದ್ಯಸುರತ್ನಮಾಲಾ'' ಮತ್ತು ''ಶ್ರೀಪಾದರಾಜಾಷ್ಟಕ''

xi) ಇಮ್ಮಡಿ ಆದ್ಯವರದಾಚಾರ್ಯರು ಬರೆದ ಭಗವದ್ಗೀತಾ ಕನ್ನಡ ವ್ಯಾಖ್ಯಾನ

xii) ಆದ್ಯವಂಶಪ್ರದೀಪ ..... ಇತ್ಯಾದಿ ಇತ್ಯಾದಿ.

ಇವುಗಳಲ್ಲಿ ಶ್ರೀರಘುನಾಥತೀರ್ಥರು ಅಪರೋಕ್ಷಜ್ಞಾನಿಗಳೆಂದು, ಗುರುಸೇವಾಧುರಂಧರರೆಂದು, ಸಹಗಮನಕ್ಕೆ ಅನುಮತಿಕೇಳಲು ಬಂದ ಪತಿವ್ರತೆಗೆ ''ಅಷ್ಟಪುತ್ರಾ ಭವ'' ಎಂದು ಹರಿಸಿ ಅವಳ ಗಂಡನ ಅಪಮೃತ್ಯು ಪರಿಹರಿಸದರೆಂದು, ಅವಳಲ್ಲಿ ಹುಟ್ಟಿದ 8 ಮಕ್ಕಳ ವಂಶಕ್ಕೆ ಮುಂದೆ ''ಅಷ್ಟಪುತ್ರಾ'' ಎಂಬ ಹೆಸರೇ ಬಂದಿತೆಂದು (ಅದ್ಯಾಪಿ ಈ ವಂಶ ಇದೆ), ರಾಮೇಶ್ವರದಲ್ಲಿ ವರುಣನ ದರ್ಶನವಾಯಿತೆಂದು, ವ್ಯಾಸಮುಷ್ಟಿಕೆ ಕೂರ್ಮವಾಗಿ ಪ್ರತ್ಯಕ್ಷ ಬಂದದ್ದು, ಶ್ರೀಪಾದರಾಜರೆಂಬ ಪ್ರಶಸ್ತಿ ಕೊಟ್ಟದ್ದು, ಶ್ರೀರಘೂತ್ತಮ ತೀರ್ಥರಿಗೆ ಪಾಠಹೇಳಿದ ಶ್ರೀಆದ್ಯ ವರದಾಚಾರ್ಯರೇ ಮೊದಲಾದ ಘನ ಶಿಷ್ಯರಿದ್ದದ್ದು, ವಿಮಾನದಲ್ಲಿ ಕುಳಿತು ಪರಲೋಕಯಾತ್ರೆ ಮಾಡುವಾಗ ಶ್ರೀಪಾದರಾಜರ ಮೇಲೆ ಪುಷ್ಪ ಹಾಕಿದ್ದು ಮೊದಲಾದ ಮಹಿಮೆಗಳ ಉಲ್ಲೇಖಗಳುಂಟು. ಇವೆಲ್ಲ ಮಹಾನ್ ವ್ಯಕ್ತಿತ್ವಗಳಲ್ಲವೇ? ಗ್ರಂಥರಚನೆ ಮಾಡಿರಲೂಬಹುದು. ಗ್ರಂಥರಚನೆ ನಿಯಮೇನ ಮಾಡಿರಲೇಬೇಕೆಂದಿದೆಯೇ? ಶ್ರೀಅಕ್ಷೋಭ್ಯತೀರ್ಥರು, ಶ್ರೀಬ್ರಹ್ಮಣ್ಯತೀರ್ಥರು, ಶ್ರೀವಿಬುಧೇಂದ್ರರು, ಶ್ರೀಜಿತಾಮಿತ್ರರು, ಶ್ರೀಸ್ವರ್ಣವರ್ಣ ತೀರ್ಥರು, ಶ್ರೀಸತ್ಯಭೋಧತೀರ್ಥರು ಇವರೆಲ್ಲ ಗ್ರಂಥರಚನೆ ಮಾಡಿದ ಉಲ್ಲೇಖಗಳಿವೆಯೇ? ಹಾಗಾದರೆ ಇವರಾರೂ ಮಹಾನುಭಾವರಲ್ಲವೇ? ಶಿಷ್ಯರನ್ನು (ಟಿಪ್ಪಣಿಕಾರರನ್ನು) ತಯಾರು ಮಾಡುವುದೇ ಕೆಲವರಿಗೆ ಸಂತುಷ್ಟಿಯನ್ನು ತಂದಿರುತ್ತದೆ.

ಇನ್ನು ಶ್ರೀವಿದ್ಯಾನಿಧಿಗಳು ಸ್ವಯಂ ಗ್ರಂಥಕರ್ತೃಗಳೆಂದು ಪ್ರಚಂಡವಿದ್ವಾಂಸರೆಂದು, ಮಹಾಜ್ಞಾನಿಗಳೆಂದು, ಪ್ರಸಿದ್ಧ ಟಿಪ್ಪಣಿಕಾರರಾದ ಶ್ರೀಸತ್ಯಾಭಿನವತೀರ್ಥರು ತಮ್ಮ ಸತ್ಯನಾಥಗುರುಸ್ತುತಿಯಲ್ಲಿ ತಿಳಿಸಿದ್ದಾರೆ. ಈಗ

ಅವರ ಗ್ರಂಥಗಳು ಉಪಲಬ್ಧವಿಲ್ಲದಿರಬಹುದು. ಶ್ರೀಮಾಧವತೀರ್ಥರ ಗ್ರಂಥಗಳು ಈಗ ಉಪಲಬ್ಧವಿವೆಯೇ? ಅದರಂತೆ ಇವರ ಗ್ರಂಥಗಳೂ ಉಪಲಬ್ಧವಿಲ್ಲ. ಪ್ರಸಿದ್ಧಿಗೆ ಬಂದವರೇ ದೊಡ್ಡವರು ಇಲ್ಲದಿದ್ದರಿಲ್ಲವೆ? ಏನಿದು ವಿಚಾರ ವೈಖರಿ?!, ಶ್ರೀವಿದ್ಯಾನಿಧಿಗಳಿಗೆ ಭೂಮಿ ಬಿರುಕು ಬಿಟ್ಟು ಶ್ರೀಮೂಲರಾಮದೇವರ ಪೆಟ್ಟಿಗೆ ಪ್ರಾಪ್ತವಾದದ್ದನ್ನೂ ತಿಳಿಸಿದ್ದಾರೆ ಶ್ರೀಸತ್ಯಾಭಿನವರು. ಶ್ರೀರಾಮಚಂದ್ರತೀರ್ಥರ ಶಿಷ್ಯರು ಶ್ರೀವಿದ್ಯಾನಿಧಿಗಳೆಂದು ಅನೇಕ ಪ್ರಾಚೀನಗ್ರಂಥಗಳಲ್ಲಿ, ಹರಿದಾಸರ ಕೀರ್ತನೆಗಳಲ್ಲಿ, ಸರ್ಕಾರಿ ದಾಖಲೆಗಳಲ್ಲಿ ಉಕ್ತವಾಗಿದೆ. (ನೋಡಿರಿ ಅನುಬಂಧ–1 ''ಶ್ರೀವಿದ್ಯಾನಿಧಿತೀರ್ಥರು'')

ಇದರಂತೆ ಶ್ರೀಪುರಂದರದಾಸರ ಕಾಲಮಾನದ ಬಗ್ಗೆ ಮತ್ತು ಉತ್ತರಾದಿಮಠದ ಪರಂಪರೆಯ ಬಗ್ಗೆ ಇರುವ ಪ್ರಾಚೀನ ಹಾಗೂ ಸಮಕಾಲೀನ ದಾಖಲೆಗಳನ್ನು, ಆಧಾರಗಳನ್ನು ಗಣನೆಗೆ ತೆಗೆದುಕೊಳ್ಳದೆ ಏಕಮುಖವಾಗಿ ನಿಲುವುಗಳನ್ನು ತಾಳಿದ್ದಾರೆ. (''ಮಧ್ವರಾಯರ ದೇವತಾರ್ಚನೆಯ'' ''ಕಾಶೀಮಠದ ತಾಮ್ರಪತ್ರ'' ''ರಾಯಸಗಳ ಅಸಮರ್ಥ ರಾಯಭಾರ'' – ಈ ಶೀರ್ಷಿಕೆಗಳನ್ನು ನೋಡಿರಿ.)

ದಿ. ಬಿ.ಎನ್.ಕೆ. ಅವರು ಹೇಗೆ ತಮ್ಮ ಗ್ರಂಥದಲ್ಲಿ ಶ್ರೀಸತ್ಯಧ್ಯಾನರನ್ನು ಅವರ ಗುಣ ಹಾಗೂ ಪಾಂಡಿತ್ಯವನ್ನು ಸ್ವತಃ ನೋಡಿ ಹೊಗಳಿ ಬರೆದಿದ್ದಾರೋ ಹಾಗೆಯೇ ಶ್ರೀರಘುನಾಥರನ್ನು, ಶ್ರೀವಿದ್ಯಾಧೀಶರನ್ನು, ಶ್ರೀಸತ್ಯನಿಧಿಗಳನ್ನು, ಶ್ರೀಸತ್ಯನಾಥರನ್ನು, ಶ್ರೀಸತ್ಯಾಭಿನವರನ್ನು, ಶ್ರೀಸತ್ಯಪೂರ್ಣರನ್ನು, ಶ್ರೀಸತ್ಯಪ್ರಿಯರನ್ನು, ಶ್ರೀಸತ್ಯಬೋಧರನ್ನು ಹಾಗೂ ಶ್ರೀಸತ್ಯಸಂಧರನ್ನು, ಅವರು ಪೂಜಿಸಿದ ಮೂಲಸೀತಾರಾಮ ದಿಗ್ವಿಜಯರಾಮ, ವೇದವ್ಯಾಸಪ್ರತಿಮೆಗಳನ್ನು ಕೊಂಡಾಡಿ ಸಮಕಾಲೀನ ಕಾವ್ಯಗಳಲ್ಲಿ ಆ ಎಲ್ಲ ಕವಿಗಳು ಹಾಗೂ ಹರಿದಾಸರು ದಾಖಲಿಸಿದ್ದಾರೆ. ಅವುಗಳನ್ನು ಯಾವ ಆಧಾರವಿಲ್ಲದೇ ಸಾರಾಸಗಟಾಗಿ ತಳ್ಳಿಹಾಕಿ ತಮ್ಮದೇ ಆದ ನಿಲುವನ್ನು ಹೊಂದುತ್ತಾರೆ. ಇದು ಸಂಶೋಧಕರ ಸಂಶೋಧನೆಯ ಕ್ರಮವೇ?

ಅದರಂತೆ ಪುಟ 52 ರಲ್ಲಿ ''... ಮಧ್ವರು ಕೇವಲ ಎಂಟೇ ವ್ಯಾಸಮುಷ್ಟಿಗಳನ್ನು ತಂದರೆಂಬ ಬಗ್ಗೆ ಎಲ್ಲಿಯೂ ನಿಶ್ಚಿತ ಸಾಕ್ಷ್ಯಗಳಿಲ್ಲ.'' ಎಂದಿದ್ದಾರೆ.

ಆದರೆ, ವ್ಯಾಸಮುಷ್ಟಿಗಳು ಎಂಟು ಎಂದು ವಾಯುಪುರಾಣ, ಶ್ರೀಸತ್ಯಾಭಿನವರ ರಾಮಾಮೃತ-ಮಹಾರ್ಣವಗ್ರಂಥದಲ್ಲಿ ಉದ್ಧರಿಸಿರುವ ಪುರಾಣವಾಕ್ಯ, ಸುಮಧ್ವವಿಜಯದ ಛಲಾರೀ ಶೇಷಾಚಾರ್ಯರ ವ್ಯಾಖ್ಯಾನಗಳಲ್ಲಿ ಸ್ಪಷ್ಟವಾದ ಉಲ್ಲೇಖವಿದೆ.

**ಗದ್ಗದಾಕ್ಷರಸಂಯುಕ್ತೋ ನನಾಮ ಚ ಪುನಃ ಪುನಃ ।**
**ತಸ್ಮೈ ಮಧ್ವಾಯ ವಿಶ್ವಾತ್ಮಾ ಸ್ವಾಧಿಷ್ಠಾನಶಿಲಾಷ್ಟಕಮ್ ॥ 157 ॥**

ಗದ್ಗದಕಂಠಿತರಾಗಿ ಶ್ರೀವೇದವ್ಯಾಸರಿಗೆ ಪುನಃ ಪುನಃ ಭಕ್ತಿಯಿಂದ ನಮಿಸಿದರು. ವಿಶ್ವಾತ್ಮರಾದ ಶ್ರೀವೇದವ್ಯಾಸರು ತಮ್ಮ ಪೂರ್ಣಸನ್ನಿಧಾನವುಳ್ಳ ವ್ಯಾಸಮುಷ್ಟಿಗಳೆಂಬ 8 ಮುಷ್ಟಿಶಿಲೆಗಳನ್ನು ಮಧ್ವರಿಗೆ ಕೊಟ್ಟರು.

*ವಾಯುಪುರಾಣೋಕ್ತ ಶ್ರೀಮಧ್ವಾವತಾರಮಹಿಮಾವರ್ಣನೆ, ಸಂಪಾದಕ ಹಾಗೂ ಅನುವಾದಕ: ಶ್ರೀ ಆ.ರಾ.ಪಂಚಮುಖಿ, ಪ್ರಕಾಶನ: ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥಪ್ರತಿಷ್ಠಾನಮ್, ಧಾರವಾಡ 1999*

**ಸ್ವಾಧಿಷ್ಠಾನಾನ್ ಪರಾನಷ್ಟೌ ಗ್ರಾವಾಣಃ ಕೃಪಯಾ ದದೌ ।**
**ಸಜ್ಜನೇಷು ತತಸ್ತೋಷಾನ್ ಮಧ್ವಃ ಪ್ರತಿಜಗಾಮ ಹ ॥ 28 ॥**

*ಶ್ರೀಸತ್ಯಾಭಿನವತೀರ್ಥಕೃತ ರಾಮಾಮೃತಮಹಾರ್ಣವ, ಸಂಪಾದಕ: ಶ್ರೀ ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯ ಪ್ರಕಾಶನ: ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ, 2009*

**ತಾಶ್ಚ ಶಿಲಾಃ ಅಷ್ಟಸಂಖ್ಯಾಕಾಃ ಜ್ಞೇಯಾಃ ತಚ್ಛ್ಲೋಕ್ತಂ ವಾಯುಪುರಾಣೇ ಮಧ್ವಾವತಾರೇ-**
**ಸ್ವಾಧಿಷ್ಠಾನಾನ್ ಪರಂ ಚಾಷ್ಟೌ ಗ್ರಾವಾಣಃ ಕೃಪಯಾ ದದೌ ||** –ಸುಮಧ್ವವಿಜಯ ಸರ್ಗ 10, ಭಲಾರೀಯ.

**ನಾರಾಯಣೇನ ಯಾ ದತ್ತಾ ವೇದವ್ಯಾಸಾಭಿದಾಃ ಶಿಲಾಃ |**
**ರೇಜೇ ಸ ತಾಭಿರಷ್ಟಾಭಿಃ ಮೂರ್ತಾಭಿರಿವ ಸಿದ್ಧಿಭಿಃ ||** –ಸತ್ಯನಿಧಿವಿಲಾಸಃ 2-40

''ವೇದಾಂತವೇದ್ಯನ....'' ಎಂಬ ಗುರುಪುರಂದರವಿಠ್ಠಲರ ಕೃತಿಯಲ್ಲೂ ವ್ಯಾಸಮುಷ್ಟಿಗಳ ಸಂಖ್ಯೆ ಎಂಟೇ ಎಂದಿದೆ. ಅವುಗಳ ಬಣ್ಣ, ಎಲ್ಲೆಲ್ಲಿ ಎಷ್ಟಿವೆ ಎಂದು ಸ್ಪಷ್ಟವಿದೆ. (ಈ ಕೃತಿಯನ್ನು ಅನುಬಂಧದಲ್ಲಿ ನೋಡಿ.) ಈ ಕೃತಿಯನ್ನು ಪ್ರಮಾಣತ್ವೇನ ಉಲ್ಲೇಖಿಸಿದವರು ರಾಯರ ಮಠದ ದಿ.ಪಂ.ರಾಜಾ.ಗುರುರಾಜಾಚಾರ್ಯರೇ.

ಸತ್ಯಮೇವ ಜಯತೇ – ಪುಟ 27ರಲ್ಲಿ ''ಉತ್ತರೋ ಗೋಪತಿರ್ಗೋಪ್ತಾ ಎಂಬ ನೀರ್ಗುಳ್ಳೆಯ ಸ್ಫೋಟ'' ಎಂಬ ಶೀರ್ಷಿಕೆಯ ಅಡಿಯಲ್ಲಿ ವಿಷ್ಣುಸಹಸ್ರನಾಮದ ''ಉತ್ತರೋ ಗೋಪತಿರ್ಗೋಪ್ತಾ'' ಎಂಬುದರ ಹಿನ್ನೆಲೆಯಲ್ಲಿ ಉತ್ತರಾದಿಮಠ ಎಂಬ ಹೆಸರು ಬಂತು ಎಂಬುದರ ಬಗ್ಗೆ ಮನಬಂದಂತೆ ಆಕ್ಷೇಪಿಸಿದ್ದಾರೆ.

ಉತ್ತರಾದಿಮಠ ಎಂಬ ಹೆಸರು ಆ ಮಠಕ್ಕೆ ಬರುವುದಕ್ಕೆ ಶ್ರೀ. ದಿ. ಬಿ.ಎನ್.ಕೆ. ಅವರು ಹೇಳುವಂತೆ ಪ್ರಾಂತೀಯ ಹಿನ್ನೆಲೆಯೇ ಕಾರಣವಾಗಿರಬಹುದು. ಅದನ್ನು ಒಪ್ಪಿಕೊಂಡರೂ ಬೇರೆ ರೀತಿಯಲ್ಲಿಯೂ ಆ ಹೆಸರಿನ ಔಚಿತ್ಯವನ್ನು ಚಿಂತಿಸುವುದರಲ್ಲಿ ತಪ್ಪೇನಿಲ್ಲ. ಉತ್ತರೋ ಗೋಪತಿರ್ಗೋಪ್ತಾ ಎನ್ನುವುದು ಅದರ ಆಧ್ಯಾತ್ಮಿಕ ಹಿನ್ನಲೆಯನ್ನು ಚಿಂತಿಸುವ ಉದ್ದೇಶ್ಯದಿಂದ ಹೇಳಲ್ಪಟ್ಟಿದ್ದೆಂದು ತಿಳಿದಾಗ ಯಾವ ಗೊಂದಲಕ್ಕೂ ಅವಕಾಶ ಇಲ್ಲ.

'ಪರೀಕ್ಷಿತ್' ಎಂಬ ಹೆಸರು ಆ ರಾಜನಿಗೆ ಬರುವುದಕ್ಕೆ ಮೂರು ನಾಲ್ಕು ಕಾರಣಗಳನ್ನು ಬೇರೆ ಬೇರೆ ಕಡೆ ಕಾಣುತ್ತೇವೆ! ಹಾಗಿದ್ದರೆ ಒಂದು ಮಾತ್ರ ಸತ್ಯ ಬೇರೆ ಎಲ್ಲ ಸುಳ್ಳು ಕಾರಣಗಳು ಎಂದು ಹೇಳಲು ಬರುತ್ತದೆಯೇ? ಇಲ್ಲ.

ಆಶ್ಚರ್ಯವೆಂದರೆ, ಮಾಹುಲೀ ಗೋಪಾಲಾಚಾರ್ಯರು ಹೇಳಿದ ಉತ್ತರೋ ಗೋಪತಿರ್ಗೋಪ್ತಾ ಎಂಬ ಮಾತನ್ನು ಗೇಲಿ ಮಾಡುವ ಬಿ.ಎನ್.ಕೆ ಅವರು ತಾವೂ ಸಹ ಇದೇ ರೀತಿಯಲ್ಲಿ ವಿಷ್ಣುಸಹಸ್ರನಾಮದ ಹಿನ್ನೆಲೆಯಲ್ಲಿಯೇ ತಮ್ಮ ಮಠವಾದ ಶ್ರೀವ್ಯಾಸರಾಜಮಠಕ್ಕೆ ವಿಶ್ವಪಾವನ ಮಠ ಎಂದು ಹೆಸರಿರುವುದನ್ನು ತಮ್ಮ ವಿಜಯೀಂದ್ರವಿಜಯದ ಪ್ರಕಟಣೆಯ (1995) ಪ್ರಸ್ತಾವನೆಯ ಅಡಿಟಿಪ್ಪಣಿಯಲ್ಲಿ ನೀಡಿರುವುದು ಸೋಜಿಗವೇ ಸರಿ. ಅದು ಹೀಗಿದೆ –

The vyasa yogicharite of poet Somanatha gives it's name as" Visvapavana Matha", probably signifying it's origin from "Visva" the first name of the lord among his thousand and "Pavana" Vayu wiz. Madhvacharya (ಸ್ವಾರ್ಥೇ ಅಣ್ ಪ್ರತ್ಯಯಃ)

ಶ್ರೀಬಿ.ಎನ್.ಕೆ ಅವರು ಪೂಜ್ಯ ಮಾಹುಲೀ ಅವರ ಮೇಲೆ ಆಕ್ಷೇಪಿಸಿರುವುದೆಲ್ಲವೂ ಅವರಿಗೇ ಅನ್ವಯಿಸುತ್ತಿದೆ.

ಪುಟ 39-40ರಲ್ಲಿ ಶ್ರೀಮುಷ್ಣ ಮಾಹಾತ್ಮ್ಯೆಯಲ್ಲಿಯ

**ಶ್ರೀಮಧ್ವಃ ಕಲ್ಪವೃಕ್ಷಸ್ತು ಜಯಾರ್ಯಾಃ ಕಾಮಧೇನವಃ |**
**ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಮುದೀರಿತಮ್ ||**

ಎಂಬ ಶ್ಲೋಕವನ್ನು ಉದಾಹರಿಸಿ ವ್ಯಾಸತೀರ್ಥರ ಸ್ಥಾನ ಚಿಂತಾಮಣಿ. ಮುನಿತ್ರಯರಲ್ಲಿ ಮೂರನೆಯವರು ಎಂಬುದು ಅವಶ್ಯವಾಗಿ ಅವರ ಮಠದ ಶ್ರೇಷ್ಠತ್ವವನ್ನು ಹೇಳುತ್ತದೆ ಎಂದು ಬರೆದಿದ್ದಾರೆ.

ಆದರೆ, ಈ ಶ್ಲೋಕದಲ್ಲಿ ವ್ಯಕ್ತಿಯ ಶ್ರೇಷ್ಠತ್ವವನ್ನು ಹೇಳಲಾಗಿದೆಯೇ ಹೊರತು ಮಠದ ಬಗ್ಗೆ ಅಲ್ಲ.

ಉತ್ತರಾದಿಮಠದ ಅನೇಕ ಪ್ರಾಚೀನ ಸಮಕಾಲೀನ ನಿರವಕಾಶ ಆಧಾರಗಳನ್ನು ಕಡೆಗಣಿಸಿ ಟೀಕಾ-ಕೃತ್ಪಾದರ ಮೂಲವೃಂದಾವನ, ಶ್ರೀವಿದ್ಯಾನಿಧಿತೀರ್ಥರು, ಶ್ರೀ ರಘುನಾಥತೀರ್ಥರು ಹಾಗೂ ಇನ್ನುಳಿದ ಅನೇಕ ವಿಷಯಗಳ ಬಗ್ಗೆ ಅವಸರವಾದ ನಿರ್ಣಯವನ್ನು ತೆಗೆದುಕೊಂಡು ಅಮಾಯಕರಿಗೆ ದಾರಿ ತಪ್ಪಿಸಿದ್ದು ಸಾಧುವೇ?

ಮೇಲೆ ತಿಳಿಸಿದ ಪ್ರಾಚೀನ ಸಮಕಾಲೀನ ಆಕರಗಳನ್ನು ಕಡೆಗಣಿಸಿ ಸಂಶೋಧನೆ ಪೂರ್ಣವಾಯಿತೆಂದು ಹಿಗ್ಗಿ ಉತ್ತಮರ ಬಗ್ಗೆ ಮನಬಂದಂತೆ ಬರೆದದ್ದು ಸಾಧುವೇ? ಶ್ರೀಸತ್ಯಾಭಿನವರ ಕೃತಿಯೇ ಮೊದಲಾದ ಕೃತಿಗಳು (ಗುರುಚರ್ಯೆಗಿಂತ ಪ್ರಾಚೀನ ಕೃತಿಗಳು) ಬಿ.ಎನ್.ಕೆ ರವರಿಗೆ ಲಭ್ಯವಾಗಿಯೇ ಇಲ್ಲವಾದ್ದರಿಂದ ಇವರ ಸಂಶೋಧನೆ ಅಪರಿಪೂರ್ಣ ಎಂದು ಸಿದ್ಧವಾಗುತ್ತದೆ. ಇಂತಹ ಅಪರಿಪೂರ್ಣ ಸಂಶೋಧನೆಯಿಂದ ಹೊರಬಂದ ''ಸತ್ಯಮೇವ ಜಯತೇ''ಗೆ ಬೆಲೆ ಕೊಟ್ಟು ನಂಜನಗೂಡಿನ ಶ್ರೀರಾಘವೇಂದ್ರಪರಿಷತ್‌ರವರ ಮಾತಿನ ಮೇರೆಗೆ ಒಬ್ಬ ಅಭಿಯಂತರರಿಂದ ಕನ್ನಡಾನುವಾದ!, ಸಾಲದ್ದಕ್ಕೆ ವೈಯಕ್ತಿಕ ಅಭಿಪ್ರಾಯಗಳಿಂದ ಕೂಡಿದ ಪೀಠಾಧಿಪತಿಗಳ ಆಶೀರ್ವಚನ ಬೇರೆ.!

ದಿ. ಬಿ.ಎನ್.ಕೆ. ಶರ್ಮಾರವರ ''ಸತ್ಯಮೇವ ಜಯತೇ'' ಪುಸ್ತಕವನ್ನು ಆಧಾರವಾಗಿಟ್ಟುಕೊಂಡು ಶ್ರೀರಾಯರ ಮಠದ ಕೆಲ ಅಪ್ರಬುದ್ಧರು ಉತ್ತರಾದಿಮಠದ ಅಸ್ತಿತ್ವವನ್ನು ಇತಿಹಾಸವನ್ನು ಪರಂಪರೆಯನ್ನು ಪ್ರಶ್ನಿಸುತ್ತಾ ಹೊರಟಿದ್ದಾರೆ. ಡಾ||ಬಿ.ಎನ್.ಕೆ. ರವರು ''ಸತ್ಯಮೇವ ಜಯತೇ'' ಪುಸ್ತಕದಲ್ಲಿ ಉತ್ತರಾದಿಮಠದ ಇತಿಹಾಸವನ್ನು ಹೇಳುವ ಕೆಲ ಗ್ರಂಥಗಳಲ್ಲಿರುವ ಕಾಲ ವ್ಯತ್ಯಾಸ ಹಾಗೂ ವಿರೋಧಾಭಾಸಗಳನ್ನು ಎತ್ತಿ ತೋರಿಸುವ ಕೆಲಸವನ್ನು ಮಾಡಿದ್ದಾರೆ. ಕೊನೆಗೆ ಇದೆಲ್ಲ ಉತ್ತರಾದಿಮಠದ ತಲೆಶೂಲಿಗಳು ಎಂದು ಮುಕ್ತಾಯ ಮಾಡಿದ್ದಾರೆ. ಒಬ್ಬ ಪ್ರಸಿದ್ಧ ಸಂಶೋಧಕರು ಮಾಡುವ ಕೆಲಸ ಇದಲ್ಲ. ಇತಿಹಾಸದ ಸಂಶೋಧನಕಾರನೊಬ್ಬ ದಾಖಲೆಗಳಲ್ಲಿರುವ ವ್ಯತ್ಯಾಸಗಳನ್ನು ಜನಗಳ ಮುಂದಿಡುವುದರಿಂದ ಏನೂ ಸಾಧಿಸಿದಂತಾಗುವುದಿಲ್ಲ. ವಿಮರ್ಶೆ ಬೇರೆ, ಸಂಶೋಧನೆ ಬೇರೆ.

ಡಾ|| ಬಿ.ಎನ್.ಕೆ.ರವರು ಪ್ರಸಿದ್ಧ ಸಂಶೋಧಕರು, ಪಾಶ್ಚಿಮಾತ್ಯ ಭಾಷೆಯಲ್ಲಿ ಹಾಗೂ ಗೀರ್ವಾಣಭಾಷೆಯಲ್ಲಿ ಪ್ರವೀಣರು, ಬುದ್ಧಿವಂತರು. ಮಾಧ್ವತತ್ವಜ್ಞಾನ ಪ್ರಸಾರಕ್ಕೆ ತಮ್ಮದೇ ಆದ ವಿಶೇಷ ಕೊಡುಗೆಯನ್ನಿತ್ತವರು. ಆಧುನಿಕ ವಿಚಾರವಂತರು, ಆಧುನಿಕವಿಜ್ಞಾನ ಯುಗದ ಚಿಂತನೆಗಳನ್ನು ಅಳವಡಿಸಿಕೊಂಡು ಪಾಶ್ಚಿಮಾತ್ಯಸಂಶೋಧನೆಯ ಸಂಸ್ಕಾರವನ್ನೂ ಹೊಂದಿದವರು. ಶ್ರೀಮದುತ್ತರಾದಿಮಠದ ಶ್ರೀಸತ್ಯಧ್ಯಾನತೀರ್ಥರಿಂದ ತಮ್ಮ ಅನೇಕ ಸಮಸ್ಯೆಗಳಿಗೆ ಉತ್ತರವನ್ನು ಪಡೆದು ಕೊಂಡವರೆಂದು ತಾವೇ ಹೇಳಿಕೊಂಡಿದ್ದಾರೆ. ಅಂತೆಯೇ ಎಲ್ಲರಲ್ಲೂ ಅವರ ಮಾತಿಗೆ ಬೆಲೆ ಇದೆ ಎಂಬ ಭಾವನೆ ಮೂಡಿರುವುದು ಸಹಜ.

ಎಂತಹ ವ್ಯಕ್ತಿಯೇ ಆದರೂ ತನ್ನ ಸ್ಥಾನಮಾನಗಳಿಗೆ ವ್ಯತ್ಯಸ್ತವಾಗಿ ಕೆಲಬಾರಿ ನಡೆದುಕೊಳ್ಳುವುದುಂಟು. ಅದಕ್ಕೆ ಆಂತರಿಕ, ಬಾಹಿರ ಎಂಬ ಎರಡೂ ಕಾರಣಗಳಿರುತ್ತವೆ. ಬಿ.ಎನ್.ಕೆ. ರವರಂತಹ ವ್ಯಕ್ತಿಗಳೂ ಸಹ ಒಂದು ವಿಷಯದ ಬಗ್ಗೆ ಅಪರಿಪೂರ್ಣ ಸಂಶೋಧನೆ ನಡೆಸಿ ಜನಸಾಮಾನ್ಯರಲ್ಲಿ ಸಂಶಯಬೀಜ ಬಿತ್ತುವ ಕೆಲಸ ಮಾಡುತ್ತಾರೆಂದರೆ ನಂಬುವುದು ಕಷ್ಟಸಾಧ್ಯ. ಆದರೆ ಇದು ಸತ್ಯ. ಇದಕ್ಕೆ ದೊಡ್ಡ ನಿದರ್ಶನ ಶ್ರೀಜಯತೀರ್ಥರ ಮೂಲವೃಂದಾವನದ ಬಗ್ಗೆ ಅವರು ತೆಗೆದುಕೊಂಡ ನಿಲುವು. ನವವೃಂದಾವನದಲ್ಲಿರುವ ಪ್ರಮಾಣ ಹಾಗೂ

ಪರಂಪರೆಯಿಂದ ಪ್ರಸಿದ್ಧವಿರುವ ಶ್ರೀರಘುವರ್ಯರ ವೃಂದಾವನವೇ ಶ್ರೀಮಜ್ಜಯತೀರ್ಥರದ್ದು ಎಂದೇ ಅವರ ತರ್ಕ. ಇದಕ್ಕೆ ಅವರು ಮುಂದಿಡುವ ಆಧಾರಗಳು ಮೂರು. 1. ಭಾಷ್ಯದೀಪಿಕಾಚಾರ್ಯರ ''ಪದ್ಮನಾಭಂ ಜಯಮುನಿಂ'' ಎಂಬ ಶ್ಲೋಕ, 2. ಶ್ರೀವಾದಿರಾಜರ ತೀರ್ಥಪ್ರಬಂಧ, 3. ವೃಂದಾವನದ ಮೇಲಿರುವ ಕೆತ್ತನೆಗಳು.

ಒಬ್ಬ ಶ್ರೇಷ್ಠ ಸಂಶೋಧಕರಾಗಿ ಅತ್ಯಂತ ಸಾವಕಾಶವಾದ ಮೂರೇ ಆಧಾರಗಳ ಮೇಲೆ ಹತ್ತಾರು ನಿರವಕಾಶ ಆಧಾರಗಳನ್ನು ಕಡೆಗಣಿಸಿದ್ದು ಹಾಗೂ ತಮ್ಮದೇ ಆದ ಮೊದಲಿನ ನಿಲುವನ್ನು (ಶ್ರೀಜಯತೀರ್ಥರ ಮೂಲವೃಂದಾವನ ಮಳಖೇಡದಲ್ಲಿದೆ ಎಂಬ ನಿಲುವನ್ನು) ಕೈ ಬಿಟ್ಟದ್ದು ಆಶ್ಚರ್ಯ. ಕೊಡುವ ಮೂರು ಆಧಾರಗಳ ಮೇಲೂ ಯಾವ ಸಂಶೋಧನೆಯನ್ನೂ ನಡೆಸದೇ ಮುಂದಿಟ್ಟದ್ದನ್ನು ನೋಡಿದರೆ ಬಾಹಿರವಾದ ಹಾಗೂ ನಿಗೂಢವಾದ ಆಂತರಿಕ ಒತ್ತಡಗಳಿಗೆ ಸಿಲುಕಿದ್ದಾರೆಂಬುದು ಸ್ಪಷ್ಟ.

1. **ಭಾಷ್ಯದೀಪಿಕಾಚಾರ್ಯರ ''ಪದ್ಮನಾಭಂ ಜಯಮುನಿಂ'' ಎಂಬ ಶ್ಲೋಕದ ಆಕರವನ್ನು ಮುಂದಿಟ್ಟಿಲ್ಲ. ಅದು ಭಾಷ್ಯದೀಪಿಕಾಚಾರ್ಯರದ್ದು ಎಂದು ಹೇಳಲು ಯಾವ ಆಧಾರವಿಲ್ಲ. ಯಾವ ಸಂಶೋಧನೆಯನ್ನು ಮಾಡದೆ ಉದ್ಧರಿಸಿದ್ದು ಸಾಧುವಲ್ಲ.**
2. **ತೀರ್ಥಪ್ರಬಂಧ ವ್ಯಾಖ್ಯಾನದ ಮೂಲ ಹಸ್ತಪ್ರತಿಗಳನ್ನು ಪರಿಶೀಲಿಸಿಲ್ಲ. ಪರಿಶೀಲಿಸಿದ್ದರೆ ಸತ್ಯ ಗೋಚರಿಸುತ್ತಿತ್ತು. ದಿ. ಶ್ರೀಸಾಣೂರು ಭೀಮಭಟ್ಟರು ಈ ಕೆಲಸ ಮಾಡಿದ್ದಾರೆ. (ನೋಡಿರಿ - ಶ್ರೀಸಾಣೂರು ಭೀಮಭಟ್ಟರ ಲೇಖನ, ತತ್ವವಾದ, ಅಕ್ಟೋಬರ್ 2003 ಹಾಗೂ ತೀರ್ಥಪ್ರಬಂಧದ ಕೊನೆಯ ಆವೃತ್ತಿ). ತೀರ್ಥಪ್ರಬಂಧದ ವ್ಯಾಖ್ಯಾನದ ಮೂಲಹಸ್ತಪ್ರತಿಗಳಲ್ಲಿ ವೃಂದಾವನದ ಬಗ್ಗೆ ಚಕಾರವೇ ಇಲ್ಲ.**
3. **ವೃಂದಾವನಗಳ ಮೇಲಿರುವ ಕೆತ್ತನೆಗಳನ್ನು ಆಧಾರವಾಗಿ ಕೊಡುವುದನ್ನು ನೋಡಿದರೆ ಎಂತಹ ಬಾಲಿಶ ಎಂದು ಸಾಮಾನ್ಯ ಸಂಶೋಧಕರಿಗೂ ಅನ್ನಿಸದೇ ಇರದು. (ನೋಡಿರಿ- ವಿಶ್ವಮಧ್ವಮಹಾ ಪರಿಷತ್ತಿನಿಂದ ಪ್ರಕಟಗೊಂಡ ''ಶ್ರೀಮಟ್ಟೀಕಾಕೃತ್ಪಾದರ ಮೂಲವೃಂದಾವನ'' ಎಂಬ ಪುಸ್ತಕ.)**

**ವಾಚಕರೇ!** ಸಂಶೋಧಕರೇ, ಇಂತಹ ಪುಸ್ತಕಗಳಿಗೆ ಬೆಲೆ ಕೊಡುವದರಿಂದ ಸ್ವೋತ್ತಮದ್ರೋಹವಾಗುವುದರಲ್ಲಿ ಸಂದೇಹವೇ ಇಲ್ಲ. ಎಚ್ಚರಿಕೆಯಿಂದಿರಿ! ಸತ್ಯ ಯಾವುದೆಂಬುದನ್ನೇ ನಿರ್ಣಯಿಸಲಾಗದೆ ''ಸತ್ಯಮೇವ ಜಯತೇ'' ಎಂಬ ಆರ್ಷ ವಾಕ್ಯಕ್ಕೆ ಅವಮಾನಿಸುವುದು ಬೇಡ. ''ಯತೋ ಧರ್ಮಸ್ತತೋ ಜಯಃ'' ಎಂಬುದನ್ನು ಮರೆಯುವುದು ಬೇಡ.

* * * *

# ‘‘ಮೂಲರಾಮಸ್ತು ಮನ್ಮತೇ’’
# ಆಕ್ಷೇಪ ಮತ್ತು ಸಂದೇಹಗಳಿಗೆ ಸಮಾಧಾನ

ಶ್ರೀರಾಯರ ಮಠದಿಂದ ಅಧಿಕೃತವಾಗಿ ಹೊರಬಂದ ‘‘ಮೂಲರಾಮಸ್ತು ಮನ್ಮತೇ’’ ಎಂಬ ಪುಸ್ತಕದಲ್ಲಿರುವ ವಿಷಯಗಳನ್ನು ಮರು ಪರಿಶೀಲಿಸಿದಾಗ ಯಾವ ಅಂಶದಲ್ಲೂ ಅವರ ವಿಷಯ ವಿಮರ್ಶೆ ಸಾಧುವಾಗಿಲ್ಲ. ಇಲ್ಲ ಸಲ್ಲದ ಆಕ್ಷೇಪಗಳು, ಅಸಂಬದ್ಧವಿಕಲ್ಪಗಳು, ಅಪ್ರಸ್ತುತವಿಷಯಗಳೇ ತುಂಬಿವೆ. ಅವರ ರೀತಿಯಲ್ಲಿ ವಿಮರ್ಶಿಸುತ್ತಾ ಹೋದರೆ ಯಾರೂ ಸಹ ಅವರ ಮೇಲೂ ನಾನಾ ಆಕ್ಷೇಪಗಳನ್ನು ಅವರಂತೆ ಮಾಡಲು ಬರುತ್ತದೆ. ಆದರೆ ಆ ಮಟ್ಟಕ್ಕೆ ನಾವು ಇಳಿಯಲು ಸಾಧ್ಯವಿಲ್ಲ. ಅವರ ವಿಮರ್ಶೆ ಹೇಗೆ ಅಸಾಧುವಾಗಿದೆ ಎಂಬುದನ್ನು ಈ ಭಾಗದಲ್ಲಿ ತೋರಿಸಿಕೊಡುತ್ತಿದ್ದೇವೆ. ಸಜ್ಜನರು ಗಮನಿಸಬೇಕು.

(ಈಗಾಗಲೇ ಈ ಹಿಂದಿನ ಅಧ್ಯಾಯಗಳಲ್ಲಿ ಮೂ.ಮಠೇ. ಪುಸ್ತಕದ ಅನುಬಂಧಗಳಲ್ಲಿ ಹಾಗೂ ಕೆಲವು ಶೀರ್ಷಿಕೆಗಳ ಅಡಿಯಲ್ಲಿ ನೀಡಿರುವ ಆಧಾರಗಳನ್ನು, ಆಕರಗಳನ್ನು ಸವಿವರವಾಗಿ ವಿಮರ್ಶಿಸಲಾಗಿದೆ. ಈ ಭಾಗದಲ್ಲಿ ಅವರು ಮಾಡಿದ ಇನ್ನಿತರ ಆಕ್ಷೇಪಗಳಿಗೆ ಉತ್ತರವನ್ನು ನೀಡುತ್ತಿದ್ದೇವೆ. ಕೆಲವು ಹಿಂದೆ ತಿಳಿಸಿದ ವಿಷಯಗಳನ್ನೇ ಸ್ಪಷ್ಟ ಮಾಡುವುದಕ್ಕಾಗಿ ಪುನರಾವೃತ್ತಿ ಮಾಡಿದ್ದೇವೆ.)

**‘‘ಮೂ.ಮಠೇ’’ ಪುಸ್ತಕದ ಪ್ರಸ್ತಾವನೆಯಲ್ಲಿ ಆಕ್ಷೇಪಿಸಿರುವ ಅಂಶಗಳ ನಿರಾಕರಣೆ ಹಾಗೂ ವಿಮರ್ಶೆ.**

**ಆಕ್ಷೇಪ 1:** ನಾವೇ ಮೂಲ ಮಠ, ಮಧ್ವರ ಹಾಗೂ ಅವರ ಪೂರ್ವಜರಿಂದ ಪಾರಂಪರಿಕವಾಗಿ ಬಂದ ಎಲ್ಲಾ ಪ್ರತಿಮೆಗಳಿಗೆ ನಾವೇ ಏಕಮಾತ್ರ ವಾರಸುದಾರರು, ಇತರ ಮಠಗಳು ಕೇವಲ ಬಾಲಂಗೋಚಿಗಳು ಹಾಗೂ ನಗಣ್ಯ ಇತ್ಯಾದಿ ವಿಷಯಗಳನ್ನು ಪ್ರತಿಪಾದಿಸಲು ಈ ಸಲ ಮೂಲರಾಮ ಪ್ರತಿಮೆ ನಮ್ಮಲ್ಲಿದೆ ಎಂಬ ವಾದವನ್ನು ಎತ್ತಿದ್ದಾರೆ. (ಪು. v)

**ಉತ್ತರ:** ಇದು ಅಪ್ಪಟ ಸುಳ್ಳು ಹೇಳಿಕೆ. ಸಸೀತಾಮೂಲರಾಮಾರ್ಚಾ ಗ್ರಂಥದ ಯಾವ ಪುಟದಲ್ಲೂ ‘‘ಇತರ ಮಠಗಳು ಬಾಲಂಗೋಚಿಗಳು, ನಗಣ್ಯ...’’ ಈ ರೀತಿಯ ಹೇಳಿಕೆ ಇಲ್ಲ. ಆ ಅಭಿಪ್ರಾಯ ಬರುವ ವಾಕ್ಯಗಳೂ ಇಲ್ಲ.

ಹಾಗೆ ನೋಡಿದರೆ ರಾಯರ ಮಠದವರೇ ತಮ್ಮ ಅಧಿಕೃತ ಪುಸ್ತಕವಾದ ಅಜಯ್ಯ ವಿಜಯೀಂದ್ರರು ಎಂಬ ಕೃತಿಯಲ್ಲಿ (ಪುಟ xviii) ಶ್ರೀಪಾದರಾಜರ ಮಠವನ್ನು ಶಾಖಾಪರಂಪರೆ ಎಂಬುದಾಗಿ ಉಲ್ಲೇಖಿಸಿರುವುದು ಗಮನಾರ್ಹ.

**ಆಕ್ಷೇಪ 2:** ಸಸೀತಾಮೂಲರಾಮಾರ್ಚಾ ವಿಷಯವು ಚರ್ವಿತಚರ್ವಣ. (ಪು. v)

**ಉತ್ತರ:** ಅನೇಕ ಆಧಾರಗಳನ್ನು ಕೊಡುವಾಗ ಇತರ ಹಿಂದಿನ ಕೆಲ ಲೇಖಕರು ಉದಾಹರಿಸಿದ ಕೆಲ ವಾಕ್ಯಗಳನ್ನು, ಶ್ಲೋಕಗಳನ್ನು ಸಸೀತಾಮೂಲರಾಮಾರ್ಚಾದಲ್ಲಿ ಕೊಟ್ಟಾಕ್ಷಣ ಚರ್ವಿತಚರ್ವಣ ಆಗುವುದಿಲ್ಲ. ಅನೇಕ ಇತರ ವಿಭಿನ್ನ ಪ್ರಾಚೀನ ಆಧಾರಗಳನ್ನು, ಹರಿದಾಸರ ಕೃತಿಗಳನ್ನು ಉದಾಹರಿಸಿದ್ದನ್ನು ಯಾರಾದರೂ ಕಾಣಬಹುದಾಗಿದೆ. ಹಾಗೆ ನೋಡಿದರೆ ಹಿಂದಿನ ಪುಟಗಳಲ್ಲಿ ತಿಳಿಸಿದಂತೆ ಅಪ್ರಾಮಾಣಿಕವಾದ ವಿಜಯೀಂದ್ರವಿಜಯ, ಅರ್ಚಾಗತಿಕ್ರಮ, ತಾಮ್ರಪತ್ರ ಈ ಮೂರು ಬಿಟ್ಟರೆ ಇನ್ನೊಂದು ಹೇಳಿಕೊಳ್ಳುವಂತಹ

ಆಧಾರಗಳು ಇಲ್ಲದೆ ಇವುಗಳಲ್ಲಿರುವ ವಿಷಯಗಳನ್ನೇ ಮತ್ತೆ ಮತ್ತೆ ಉಲ್ಲೇಖಿಸುವ ಮೂ.ಮಠೇ ಪುಸ್ತಕವೇ ಚರ್ವಿತಚರ್ವಣವಾಗಿದೆ.

**ಆಕ್ಷೇಪ 3.** ಶ್ರೀಸತ್ಯಪ್ರಮೋದರವರೆಗೆ ಎತ್ತಲಾಗದ ಮೂಲರಾಮನ ಪ್ರಕರಣವನ್ನು ಪ್ರಸ್ತುತ ಪೀಠಾಧಿಪತಿಗಳು ಎತ್ತಿ ಜೇನಗೂಡಿಗೆ ಕೈ ಹಾಕಿದ್ದಾರೆ. (ಪು. v)

**ಉತ್ತರ:** ಶುದ್ಧ ಸುಳ್ಳು. ಶ್ರೀವಿದ್ಯಾಧೀಶವಿಜಯ ಆರಂಭಮಾಡಿಕೊಂಡು ಶ್ರೀಸತ್ಯಪ್ರಮೋದವಿಜಯದ ತನಕ ಎಲ್ಲಾ ವಿಜಯಕಾವ್ಯಗಳಲ್ಲಿ ಶ್ರೀಮಠದಲ್ಲಿರುವ ಮೂಲರಾಮನ ವಿಷಯ ಬಂದಿದೆ. ಲೇಖಕರಿಗೆ ಇದರ ಬಗ್ಗೆ ಅಜ್ಞಾನವಿದ್ದಂತಿದೆ. ಯಾವತ್ತೂ ಜೇನುಗೂಡಿಗೆ ಕೈ ಹಾಕದ ಹೊರತು ಜೇನು ತುಪ್ಪ ಸಿಗಲಾರದೆಂದು ಲೇಖಕರು ತಿಳಿಯುವುದು ಒಳಿತು.

**ಆಕ್ಷೇಪ 4.** ''ಸಸೀತಾಮೂಲರಾಮಾರ್ಚಾ''ದಲ್ಲಿ ಉದಾಹರಿಸಿದ ಎಲ್ಲ ದಾಖಲೆಗಳು ಪೂರ್ವಾಗ್ರಹ ದೂಷಿತ-ವಾಗಿವೆ. ಅವಿಚಾರದಿಂದ ಕೂಡಿವೆ. ಮಠ-ಮಠಗಳಲ್ಲಿ ವೈಮನಸ್ಸು ಉಂಟಾಗುವಂತಹವು.(ಪು. v)

**ಉತ್ತರ:** ''ಸಸೀತಾಮೂಲರಾಮಾರ್ಚಾ'' ಪುಸ್ತಕದಲ್ಲಿ ಉದಾಹರಿಸಿರುವ ಆಧಾರಗಳಲ್ಲಿ ಪೂರ್ವಾಗ್ರಹವೇನಿದೆ? ಮಠಮಠಗಳಲ್ಲಿ ವೈಮನಸ್ಯ ಉಂಟಾಗುವ ಅಂಶವೇನಿದೆ? ಪ್ರಾಚೀನರು, ವ್ಯಾಸ ಹಾಗೂ ದಾಸಸಾಹಿತ್ಯದಲ್ಲಿ ದಾಖಲಿಸಿರುವ ಆಧಾರಗಳನ್ನು ಮುಂದಿಡಲಾಗಿದೆ. ಈ ಆಕ್ಷೇಪ ಮೂ.ಮಠೇ ಲೇಖಕರಿಗೆ ಸರಿಹೊಂದುವುದು. ಹಿಂದಿನ ಪುಟಗಳಲ್ಲಿ ಮಾಡಿರುವ ವಿಮರ್ಶೆಯಿಂದ ಇದು ಸ್ಪಷ್ಟ.

**ಆಕ್ಷೇಪ 5.** ಎಲ್ಲವನ್ನೂ ಡಾ||ಬಿ.ಎನ್.ಕೆ ಶರ್ಮಾರವರು ಶತಶಃ ಖಂಡಿಸಿರುವರು. ಸತ್ಯಾಸತ್ಯತೆಯ ನಿರ್ಣಯವನ್ನು ಮಾಡಿರುವರು. (ಪು. v)

**ಉತ್ತರ:** ಡಾ||ಬಿ.ಎನ್.ಕೆ ರವರು ಸತ್ಯಮೇವ ಜಯತೇ ಪುಸ್ತಕದಲ್ಲಿ ಕೆಲ ಪ್ರಾಚೀನ ಗ್ರಂಥಗಳಲ್ಲಿರುವ ಹೇಳಿಕೆಗಳನ್ನು ಚರ್ಚಿಸಿ ವಿಮರ್ಶಿಸಲು ಪ್ರಯತ್ನ ಪಟ್ಟು ''ಇವೆಲ್ಲ ಉತ್ತರಾದಿಮಠದ ತಲೆಶೂಲಿಗಳು'' ಎಂದು ತಮ್ಮ ತಲೆಶೂಲಿಯನ್ನು ಹೊರಗೆ ಹಾಕುತ್ತಾ ತಮ್ಮ ಲೇಖನ ಮುಗಿಸಿದ್ದಾರೆ. ಯಾವುದನ್ನೂ ನಿರ್ಣಯಿಸಿಲ್ಲ ಎಂಬುದು ಗಮನಾರ್ಹ.

ಸತ್ಯಮೇವ ಜಯತೇ ಕನ್ನಡಾನುವಾದ ಪುಟ 94-95ರಲ್ಲಿ ಡಾ|| ಬಿ.ಎನ್.ಕೆ.ರವರೇ ಶ್ರೀರಾಯರ ಮಠವನ್ನು ಕಟುವಾಗಿ ಟೀಕಿಸಿದ್ದು ಹೀಗಿದೆ–

- ''ಮಂತ್ರಾಲಯ ಮಠಕ್ಕೆ ಇನ್ನೊಂದು ಮಠದ ಅನುಪಸ್ಥಿತಿಯಲ್ಲಿ ತಾನೇ ಮಹಾಸಂಸ್ಥಾನವೆಂದು ಸಾಧಿಸಲು ಕೇವಲ ಪ್ರಾಂತಿಕ ಲಾಭವಾಗುವುದು''
- ''ರಾಜೇಂದ್ರಮುನಿಸೇವಿತಮ್'' ಎಂಬ ಒಕ್ಕಣೆಯು ಖಂಡನಾರ್ಹವಾದುದು. ಈ ವಿಷಯವನ್ನು ತಿದ್ದುಪಡಿಗಾಗಿ ಬಹಳಷ್ಟು ಹಿಂದೆಯೇ ಮಂತ್ರಾಲಯಮಠದ ಇಬ್ಬರು ಸಂಶೋಧಕ ಪಂಡಿತರ ಗಮನಕ್ಕೆ ತರಲಾಗಿದೆ. ಅವರು ಯಾವುದೇ ಕೆಲಸ ಮಾಡಿಲ್ಲ.''

ಮೂ.ಮಠೇ ಲೇಖಕರ ಪ್ರಕಾರ ಸತ್ಯಾಸತ್ಯತೆಯನ್ನು ನಿರ್ಣಯಮಾಡಿರುವ ಡಾ||ಬಿ.ಎನ್. ಕೆ.ರವರ ಸಲಹೆಯಂತೆ ರಾಯರ ಮಠದವರು ''ರಾಜೇಂದ್ರಮುನಿಸೇವಿತಮ್'' ಎಂಬ ಪಾಠವನ್ನು ತಿದ್ದುಪಡಿಮಾಡಿಕೊಂಡು ರಾಜೇಂದ್ರಮುನಿಸೋದರಂ (ಸೇವಕಂ) ಎಂಬ ಪಾಠವನ್ನು ಇಷ್ಟು ದಿನಗಳವರೆಗೆ ಏಕೆ ಅಂಗೀಕರಿಸಿಲ್ಲ.?

ಇದರಂತೆಯೇ ಡಾ|| ಬಿ.ಎನ್.ಕೆ ರವರ ಶ್ರೀರಾಯರ ಮಠದ ಪೀಠಾಧಿಪತಿಗಳ ಕಾಲಮಾನದ ನಿರ್ಣಯವನ್ನು ಒಪ್ಪಲು ರಾಯರ ಮಠದವರು ಸಿದ್ಧರಿದ್ದಾರೆಯೇ? ಇಲ್ಲ.

ಅಂದಮೇಲೆ ಬಿ.ಎನ್.ಕೆ ರವರು ಸತ್ಯಾಸತ್ಯತೆಯ ನಿರ್ಣಯವನ್ನು ಮಾಡಿದ್ದಾರೆ ಎಂದು ರಾಯರಮಠದವರು ಒಪ್ಪಲು ಸಿದ್ಧರಿಲ್ಲ ಎಂದಾಯಿತು. ಉತ್ತರಾದಿಮಠದ ಮೇಲೆ ಬಿ.ಎನ್.ಕೆ.ರವರು ಆಕ್ಷೇಪಿಸಿದ್ದೆಲ್ಲ ನಿಜ, ಸಂಶೋಧನೆ ಮತ್ತು ನಿರ್ಣಯ. ರಾಯರಮಠದ ಮೇಲೆ ಮಾಡಿದ ಆಕ್ಷೇಪಗಳು ಮಾತ್ರ ನಿರ್ಣಯಗಳಲ್ಲ. ಇದ್ಯಾವ ನ್ಯಾಯ?

ಆಕ್ಷೇಪ **6**. ಆಚಾರ್ಯರು ''ಕ್ವಚಿತ್ ಗ್ರಂಥಾನ್ ಪ್ರಕ್ಷಿಪಂತಿ'' ಎಂದು ತಿಳಿಸಿದಂತೆ ಇತಿಹಾಸವನ್ನು ತಿರುಚಿರುವರು. ಒಂದು ಸುಳ್ಳನ್ನು ನೂರು ಸಲ ಹೇಳಿದರೆ ಅದು ಸತ್ಯವಾಗುವದೆಂಬುದು ಈಗ ಎದ್ದು ಕಾಣುತ್ತಿದೆ. (ಪು. vi)

ಉತ್ತರ: ಇದು ಶುದ್ಧ ಸುಳ್ಳು ಆರೋಪಣೆ. ''ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ'' ಎಂಬ ಆಚಾರ್ಯರ ವಾಕ್ಯಕ್ಕೆ ಕೆಲ ರಾಯರ ಮಠದ ಪಂಡಿತರೇ ನಿದರ್ಶನರಾಗಿದ್ದಾರೆ. ರಾಯರ ಮಠದ ಅಧಿಕೃತ ಲೇಖಕರು ಹೇಗೆ ಇಲ್ಲದ ಶ್ಲೋಕಗಳನ್ನು ಸೇರಿಸುವುದು, ಇದ್ದ ಶ್ಲೋಕಗಳನ್ನು ತೆಗೆಯುವುದನ್ನು ಮಾಡುತ್ತಾ ನಡೆದಿದ್ದಾರೆ ಎಂಬುದಕ್ಕೆ ಎರಡು ಉದಾಹರಣೆಗಳು (ಬೇಕಾದಷ್ಟು ಇವೆ. ಸದ್ಯಕ್ಕೆ ಎರಡು ಮಾತ್ರ.)–

ಅ. ರಾಯರ ಮಠದ ಅಧಿಕೃತ ಲೇಖಕರಾದ ದಿ. ಶ್ರೀರಾಜಾ ಎಸ್ ಗುರುರಾಜಾಚಾರ್ಯರ ''ಶ್ರೀಮೂಲರಾಮ'' ಪುಸ್ತಕ ಪುಟ 3 ರಲ್ಲಿ ವಾಸಿಷ್ಠರಾಮಾಯಣದ ಶ್ಲೋಕಗಳು ಎಂಬುದಾಗಿ ಕೆಳಗಿನ ಎರಡು ಶ್ಲೋಕಗಳನ್ನು ಮುದ್ರಿಸಿದ್ದಾರೆ.

**ಶುದ್ಧಾಂ ತಾಮ್ರಮಯೀಂ ಶಸ್ತಾಂ ಬ್ರಹ್ಮಣಾ ಚಿರಪೂಜಿತಾಮ್ ।**
**ಸರ್ವಲಕ್ಷಣಸಂಪನ್ನಾಂ ಪಾದೇ ದ್ವಿರದಸಂಯುತಾಮ್ ॥**

**ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ ।**
**ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರ ಸಂಶಯಃ ॥**

ಇದರಲ್ಲಿ ಮೂರನೆಯ ಪಾದವಾದ-

**''ವೃತ್ತಪೀಠಾ ಲಂಬಕರ್ಣಾ ತ್ರಿವಕ್ರಾ ಸೀತಯಾ ಸಹ''**

ಎಂಬುದು ವಾಸಿಷ್ಠರಾಮಾಯಣದ ಹಸ್ತಪ್ರತಿಗಳಲ್ಲಾಗಲೀ ಮುದ್ರಿತಪುಸ್ತಕದಲ್ಲಾಗಲೀ ಇಲ್ಲ. ಈ ಪಾದವು ಶ್ರೀವಾದೀಂದ್ರತೀರ್ಥರದ್ದು ಎಂದು ಹೇಳಿಕೊಳ್ಳುವ ಅರ್ಚಾಗತಿಕ್ರಮದ 12ನೇ ಶ್ಲೋಕದ 2ನೇ ಪಾದವು. ಅದನ್ನು ವಾಸಿಷ್ಠರಾಮಾಯಣದ ಶ್ಲೋಕದ ಜೊತೆಗೆ ಪ್ರಕ್ಷೇಪ ಮಾಡಲಾಗಿದೆ. ಇದರಿಂದ ಮೂಲವಾಸಿಷ್ಠರಾಮಾಯಣಕ್ಕೆ ಅನುಗುಣವಾಗಿ ಅರ್ಚಾಗತಿಕ್ರಮ ಶ್ಲೋಕವಿದೆ ಎಂದು ಸಾಮಾನ್ಯರಿಗೆ ಭಾಸವಾಗುವಂತೆ ಮೋಸ ಮಾಡಲಾಗಿದೆ. ಹೀಗೆ ಮಾಡಿದ್ದರಿಂದ ಅರ್ಚಾಗತಿಕ್ರಮದ ಪ್ರಾಮಾಣ್ಯದ ಬಗ್ಗೆಯೂ ಸಂಶಯ ಮೂಡುತ್ತದೆ. ಅಲ್ಲದೇ ಮೂ.ಮಠೇ ಪುಸ್ತಕದ ಪುಟ 131 ರಲ್ಲಿ ಅವರೇ ಆಧಾರವೆಂದು ಛಾಪಿಸಿರುವ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯಲ್ಲೂ ಈ ಮೂರನೇ ಪಾದವು ಇಲ್ಲದಿರುವುದು ಗಮನಾರ್ಹ.

ಆ. ಶ್ರೀರಾಯರ ಮಠದಿಂದ ಅಧಿಕೃತವಾಗಿ ಪ್ರಕಟವಾದ ''ಸ್ತೋತ್ರಮುಕ್ತಾವಲೀ'' (ಪ್ರಕಟಣೆ 2006 ನಂಜನಗೂಡು ರಾಘವೇಂದ್ರಸ್ವಾಮಿಗಳ ಮಠ) ಪುಸ್ತಕದಲ್ಲಿ ಶ್ರೀಕೃಷ್ಣಾವಧೂತರ ''ಶ್ರೀರಾಘವೇಂದ್ರತಂತ್ರ'' ಎಂಬ ಗ್ರಂಥವನ್ನು ಮುದ್ರಿಸಿದ್ದಾರೆ. ಈ ಗ್ರಂಥದಲ್ಲಿ 15 ಪಟಲಗಳಿವೆ. ಅವುಗಳಲ್ಲಿ ನಾಲ್ಕು ಪಟಲಗಳಲ್ಲಿ 3-12ಶ್ಲೋಕ, 7-32, 33ಶ್ಲೋಕ, 8-141, 170ಶ್ಲೋಕ, 15-10ಶ್ಲೋಕ ಈ ಆರು ಶ್ಲೋಕಗಳನ್ನು (ಶ್ರೀಸತ್ಯಸಂಧರೇ ಪ್ರಹ್ಲಾದರಾಜರ ಅರ್ಥಾತ್ ರಾಯರ ಅವತಾರ ಎಂದು ಸ್ಪಷ್ಟವಿರುವ ಶ್ಲೋಕಗಳು) ಅನಾಮತ್ತಾಗಿ ಕಿತ್ತಿ ಹಾಕಿದ್ದಾರೆ. ಇದರಿಂದ ಉತ್ತರಾದಿಮಠಕ್ಕೆ ಹಾನಿಯೇನೂ ಇಲ್ಲ. ಆದರೆ, ಇದು ಮೂಲಕೃತಿಕಾರರಾದ ಶ್ರೀಕೃಷ್ಣಾವಧೂತರಿಗೆ ಮಾಡಿದ ದ್ರೋಹ ಹಾಗೂ ಸ್ತೋತ್ರಮುಕ್ತಾವಲೀ ಪುಸ್ತಕದ ವಾಚಕರಿಗೆ (ಮುಗ್ಧ) ಮಾಡಿದ ಮೋಸ. ಒಂದು ಪ್ರಾಚೀನ ಕೃತಿಯಲ್ಲಿರುವ ವಿಷಯ ನಮಗೆ ಸಮ್ಮತಿ ಇರಲಿ, ಇಲ್ಲದಿರಲಿ ಅದರಲ್ಲಿರುವ ಶ್ಲೋಕ ಅಥವಾ ವಾಕ್ಯಗಳನ್ನು ತೆಗೆಯುವ ಅಥವಾ ಸೇರಿಸುವ ಹಕ್ಕು ನಮ್ಮದಲ್ಲ. ಕಾನೂನಿಗೂ ವಿರುದ್ಧ.

ಇ) ವಿಜಯೀಂದ್ರವಿಜಯಕಾವ್ಯದಲ್ಲಿ ಮಾಡಿರುವ ಹಸ್ತಕ್ಷೇಪವನ್ನು ಹಿಂದಿನ ಪುಟಗಳಲ್ಲಿ ಬಯಲು ಮಾಡಲಾಗಿದೆ. (ನೋಡಿರಿ ಶೀರ್ಷಿಕೆ – ''ವಿಜಯೀಂದ್ರವಿಜಯದ ಹಸ್ತಪ್ರತಿಯ ವಿಮರ್ಶೆ'')

**ವಾಚಕರೇ...! ಈಗ ನೀವೇ ಹೇಳಿ ''ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ'' ಎಂಬುದಕ್ಕೆ ಯಾರು ನಿದರ್ಶನರು?**

**ಆಕ್ಷೇಪ 7.** ಉತ್ತರಾದಿಮಠವು ದಾಖಲೆಗಳನ್ನು ಸೃಷ್ಟಿಸುತ್ತಲೇ ಬಂದಿದೆ.(ಪು. vii)

**ಉತ್ತರ:** ಮತ್ತೊಂದು ಶುದ್ಧ ಸುಳ್ಳು ಆರೋಪಣೆ. ಸಸೀತಾಮೂಲರಾಮಾರ್ಚಾದಲ್ಲಿ ಉದಾಹರಿಸಿರುವ ಎಲ್ಲಾ ಆಧಾರಗಳಿಗೂ ಆಕರಗಳನ್ನು ತಿಳಿಸಿದ್ದಾರೆ. ಮೂ.ಮಠೇ ಪುಸ್ತಕದಲ್ಲಿ ಆಧಾರಗಳೆಂದು ಛಾಪಿಸಿರುವ ದಾಖಲೆಗಳು ಹೇಗೆ ಕೃತ್ರಿಮವಾಗಿವೆ, ನಂಬಲರ್ಹವಾಗಿಲ್ಲ ಎಂಬುದನ್ನು ಸಾಧಾರವಾಗಿ ಹಿಂದಿನ ಪುಟಗಳಲ್ಲಿ ನಿರೂಪಿಸಿದ್ದೇವೆ. ಆದ್ದರಿಂದ ಕೃತ್ರಿಮ ಆಧಾರಗಳನ್ನು ಸೃಷ್ಟಿಸಿರುವುದು ರಾಯರಮಠದವರೇ ಹೊರತು ಉತ್ತರಾದಿಮಠದವರಲ್ಲ ಎಂಬುದು ಸಿದ್ಧವಾಗುತ್ತದೆ.

**ಆಕ್ಷೇಪ 8.** ಶ್ರೀಶ್ರೀಪಾದರಾಜರಿಗೆ ಶ್ರೀರಘುನಾಥತೀರ್ಥರು ಪ್ರಶಸ್ತಿಕೊಟ್ಟದ್ದು, ಶ್ರೀಅಕ್ಷೋಭ್ಯತೀರ್ಥರು ಶ್ರೀವಿದ್ಯಾರಣ್ಯರನ್ನು ಸೋಲಿಸಿದ್ದು. .. ... ಈ ಎಲ್ಲ ಕಥೆಗಳನ್ನು ಉತ್ತರಾದಿಮಠೀಯರು ಸೃಷ್ಟಿಸಿದ್ದು. (ಪು. vii)

ಇದೇ ತರಹದ ಆಕ್ಷೇಪವನ್ನು ರಾಯರ ಮಠದ ದಿವಾನರು ತಮ್ಮ ಮುನ್ನುಡಿಯಲ್ಲಿ ಮಾಡಿದ್ದಾರೆ

**ಆಕ್ಷೇಪ 8ಅ.** ಸಮಕಾಲೀನರಲ್ಲದ ಶ್ರೀರಘುನಾಥತೀರ್ಥರು ಶ್ರೀಪಾದರಾಜರೆಂಬ ಪ್ರಶಸ್ತಿ ಕೊಟ್ಟದ್ದು ಕಾಗಕ್ಕ-ಗುಬ್ಬಕ್ಕ ಕಥೆಗಳು. ಮುಖಚಿತ್ರದಲ್ಲಿ ಕೆಟ್ಟ ಅಭಿರುಚಿಯ ಅಭಿವ್ಯಕ್ತಿ.... ಮೇಲೆ ಅವರ ವೃಂದಾವನದಿಂದ ಶ್ರೀಪಾದರಾಜರ ವೃಂದಾವನಕ್ಕೆ ತೋರುವ ಆಶೀರ್ವಾದ ಥೂ.. ಥೂ.. ಹೀಗೆಲ್ಲ ವೈಷ್ಣವರು ವರ್ತಿಸಬಾರದು. ನಿಜವಾದಲ್ಲಿ ಅವರ ಆರಾಧನೆ ಏಕೆ ಮಾಡುವುದಿಲ್ಲ.? (ಪು. vi)

**ಆಕ್ಷೇಪ 8ಆ:** ''ಶ್ರೀಪಾದರಾಜರು ಎಂದವರು ಯಾರು? ಶ್ರೀಪಾದರಾಜರೆಂಬ ಬಿರುದು ಶ್ರೀರಘುನಾಥತೀರ್ಥರಿಂದ ದೊರೆಯಿತು ಎಂಬ ಕಾಲ್ಪನಿಕ ಕಥೆ ವಿವಿಧಕಾವ್ಯಗಳಲ್ಲಿ ಕಂಡು ಬಂದರೂ ಕಾಲಗಣನೆಯ ದೃಷ್ಟಿಯಿಂದ ಹೊಂದುವುದಿಲ್ಲ'' (ಪುಟ 51.)

ಉತ್ತರ: ಶ್ರೀಪಾದರಾಜರೆಂಬ ಪ್ರಶಸ್ತಿ ಕೊಟ್ಟದ್ದು ಶ್ರೀರಘುನಾಥತೀರ್ಥರೆಂಬುದನ್ನು ಉತ್ತರಾದಿಮಠದವರು ಸೃಷ್ಟಿಸಿದ್ದಲ್ಲ. ಈ ವಿಷಯವನ್ನು ದಾಖಲಿಸಿದವರ ವಿವರ ಹೀಗಿದೆ–

ಅ) ಶ್ರೀರಾಯರ ಮಠದ ಅಧಿಕೃತ ಲೇಖಕರು ದಿ. ಶ್ರೀಹೆಚ್. ಕೆ ವೇದವ್ಯಾಸಾಚಾರ್ಯರು. ಅವರು ತಮ್ಮ ''ಗುರುಚರಿತೆ'' ಎಂಬ ಪುಸ್ತಕದ ಪುಟ 118ರಲ್ಲಿ ಮತ್ತು ತಮ್ಮ ಪಿ.ಹೆಚ್.ಡಿ. ಪ್ರಬಂಧರೂಪವಾದ ''ಕರ್ನಾಟಕ ಹರಿದಾಸರು'' ಎಂಬ ಪುಸ್ತಕದ ಪುಟ 186ರಲ್ಲಿ ಉತ್ತರಾದಿ-ಮಠದ ರಘುನಾಥತೀರ್ಥರು ಶ್ರೀಪಾದರಾಜರೆಂದು ಕರೆದದ್ದನ್ನು ದಾಖಲಿಸಿದ್ದಾರೆ. ಇವೆರಡರಲ್ಲಿ ''ಗುರುಚರಿತೆ'' ಶ್ರೀರಾಯರ ಮಠದ ಎಲ್ಲ ಪ್ರಾಚೀನ ಅಧಿಕೃತ ಆಧಾರಗಳಿಗೆ ಅನುಗುಣವಾಗಿದೆ ಎಂದು ಅಂದಿನ ಪೀಠಾಧಿಪತಿಗಳೇ ತಿಳಿಸಿದ್ದಾರೆ. ಅಂದ ಮೇಲೆ ರಾಯರ ಮಠದ ಯಾವುದಾದರೂ ಶಾಸನ, ಪತ್ರಗಳಲ್ಲಿ ಈ ವಿಷಯ ಇರಲೇಬೇಕಲ್ಲಾ?

ಆ) ಶ್ರೀ ಶ್ರೀಪಾದರಾಜಮಠಾಧೀಶರಾದ ಶ್ರೀಸತ್ಯನಿಧಿತೀರ್ಥ ಶ್ರೀಪಾದಂಗಳವರಿಂದ (ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ತಂದೆಯವರು) ರಚಿತವಾದ ''ಶ್ರೀಶ್ರೀಪಾದರಾಜಚರಿತಾಮೃತ''ಎಂಬ ಪುಸ್ತಕದ ಪುಟ 6 ರಲ್ಲಿ ಶ್ರೀಪಾದರಾಜರೆಂಬ ಪ್ರಶಸ್ತಿ ಶ್ರೀರಘುನಾಥತೀರ್ಥರೇ ನೀಡಿದ್ದರ ಬಗ್ಗೆ ಸ್ಪಷ್ಟ ಉಲ್ಲೇಖವಿದೆ.

ಇ) ಡಾ||ಬಿ.ಎನ್.ಕೆ ಶರ್ಮಾರವರು ತಮ್ಮ ''ದ್ವೈತವೇದಾಂತವಾಙ್ಮಯ ಹಾಗೂ ಇತಿಹಾಸ'' ಕೃತಿಯ ಸಂಪುಟ-2, ಪುಟ 397 ರಲ್ಲಿ ಶ್ರೀಪಾದರಾಜರೆಂಬ ಅಂಕಿತವನ್ನಿತ್ತವರು ಉತ್ತರಾದಿಮಠದ ಶ್ರೀರಘುನಾಥತೀರ್ಥರು ಎಂದು ಬರೆದಿದ್ದಾರೆ. ಇವರು ವ್ಯಾಸರಾಜಮಠದವರು ಮಾತ್ರವಲ್ಲದೆ ರಾಯರ ಮಠದವರಿಗೆ ಅತ್ಯಂತ ವಿಶ್ವಾಸಾರ್ಹರಾಗಿದ್ದಾರೆ.

ಈ) ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು ಹೊರತಂದ, ಡಾ|| ಜಿ. ವರದರಾಜರಾವ್ ಮೊದಲಾದ ವಿದ್ವಾಂಸರಿಂದ ಸಂಶೋಧಿತವಾದ ''ಶ್ರೀಪಾದರಾಜ ಕೃತಿಗಳು'' ಪಂಡಿತ ಆವೃತ್ತಿ 1973, ಇದರ ಪುಟ 25 ರಲ್ಲಿ ಉತ್ತರಾದಿಮಠದ ಶ್ರೀರಘುನಾಥತೀರ್ಥರು ಶ್ರೀಪಾದರಾಜರೆಂದು ಕೊಂಡಾಡಿದ್ದಾರೆ. ಅದೇ ಹೆಸರೇ ಬಳಕೆಗೆ ಬಂದು ಸಂಸ್ಥಾನಕ್ಕೂ ಶ್ರೀಪಾದರಾಜಮಠವೆಂದು ಹೆಸರಾಯಿತೆಂದು ಬರೆಯಲಾಗಿದೆ.

ಉ) ದಾಸಶಾಸ್ತ್ರನಿಧಿ ಶ್ರೀಎಂ.ಟಿ ಪ್ರಹ್ಲಾದರವರು ಪ್ರಕಟಿಸಿದ ''ಪ್ರಾಚೀನ ಹಸ್ತಪ್ರತಿಗಳಲ್ಲಿನ ಹರಿದಾಸರ ಕೃತಿಗಳು'' ಎಂಬ ಪುಸ್ತಕದ ಪುಟ 146ರಲ್ಲಿ ಶ್ರೀರಘುನಾಥತೀರ್ಥರು ಶ್ರೀಪಾದರಾಜರೆಂಬ ಪ್ರಶಸ್ತಿ ಕೊಟ್ಟ ವಿಷಯ ಉಲ್ಲೇಖಿಸಿದ್ದಾರೆ. ಇವರು ಉತ್ತರಾದಿಮಠದವರಲ್ಲ.

ಊ) ಶ್ರೀಅರಳುಮಲ್ಲಿಗೆ ಪಾರ್ಥಸಾರಥಿಯವರ ''ಶ್ರೀಪಾದರಾಜ ಸಂಪುಟ'' ಪುಸ್ತಕದಲ್ಲಿ ಪುಟ 81 ರಲ್ಲೂ ಉತ್ತರಾದಿಮಠದ ಶ್ರೀರಘುನಾಥತೀರ್ಥರು ಶ್ರೀಪಾದರಾಜರೆಂಬ ಪ್ರಶಸ್ತಿ ನೀಡಿದ ವಿಷಯವಿದೆ. ಈ ಪುಸ್ತಕಕ್ಕೆ ಶ್ರೀಪಾದರಾಜಮಠದ ಶ್ರೀವಿಜ್ಞಾನನಿಧಿತೀರ್ಥರು ಅನುಗ್ರಹವಚನದಲ್ಲಿ ''ನಮ್ಮ ಇಚ್ಛೆಯನ್ನು ಅರಿತು ಶ್ರೀಅರಳು ಮಲ್ಲಿಗೆ ಪಾರ್ಥಸಾರಥಿಯವರು ಈ ಕೃತಿ ರಚಿಸಿದ್ದಾರೆ'' ಎಂದಿದ್ದಾರೆ. ಇವರೂ ಉತ್ತರಾದಿಮಠದವರಲ್ಲ. ಇನ್ನೂ ಅನೇಕರು ಉತ್ತರಾದಿಮಠದವರಲ್ಲದವರು ಈ ವಿಷಯವನ್ನು ಒಪ್ಪಿದ್ದಾರೆ.

ಶ್ರೀರಘುನಾಥತೀರ್ಥರು ಮತ್ತು ಶ್ರೀಶ್ರೀಪಾದರಾಜರು ಸಮಕಾಲೀನರಲ್ಲವೆಂದು ಯಾವ ಆಧಾರದ ಮೇಲೆ ನಿರ್ಧಾರವಾಗಿದೆ? ಡಾ||ಬಿ.ಎನ್.ಕೆ. ರವರು ತಮ್ಮ ದ್ವೈತವೇದಾಂತ ವಾಙ್ಮಯ ಹಾಗೂ ಇತಿಹಾಸ ಸಂಪುಟ-2 ಪುಟ 398 ರಲ್ಲಿ ''ಶ್ರೀಪಾದರಾಜರು ಉತ್ತರಾದಿಮಠಾಧೀಶರಾದ ಶ್ರೀರಘುನಾಥತೀರ್ಥರ ಸಮಕಾಲೀನರೆಂದು ತಿಳಿದಿದೆ''......ಅವರಿಬ್ಬರೂ ಒಟ್ಟಿಗೆ ಕಾಶೀಯಾತ್ರೆ ಮಾಡಿದರೆಂದು ತಿಳಿದು ಬರುತ್ತದೆ''. ಎಂದು ಬರೆದಿದ್ದಾರೆ. ಮುಂದೆ ಅವರೇ ''ಸತ್ಯಮೇವ ಜಯತೇ'' ಎಂಬ ಅವರ ಗ್ರಂಥದಲ್ಲಿ ಇತರ ಕೆಲ ಅಂಶಗಳನ್ನು ಚರ್ಚಿಸಿದ್ದಾರಾಗಲಿ ಈ ವಿಷಯವನ್ನು ಅಲ್ಲಗಳೆದಿಲ್ಲವೆಂಬುದು ಗಮನಾರ್ಹ.

❖ ಶ್ರೀವ್ಯಾಸರಾಜರೇ ''ಪರಮತ ಘನವನ ಪಾವಕನೆ ಶರಣು'' ಎಂಬ ತಮ್ಮ ಪದ್ಯದಲ್ಲಿ ''ಸುರನಾಥಪುರಕಂದು ಘನಪುಷ್ಪ ವಿಮಾನದಿ ಸರಿವುತ್ತಲಿರೆ ರಘುನಾಥೇಂದ್ರರು'' ಎಂದು ಉಲ್ಲೇಖಿಸಿ ಸಮಕಾಲೀನತ್ವವನ್ನು ಸಾರಿದ್ದಾರೆ. ಈ ಪದ್ಯವನ್ನು ಶ್ರೀರಾಯರ ಮಠದವರೇ ಪ್ರಕಟಿಸಿರುವ ''ಜನಪ್ರಿಯ ಭಜನ ಸಂಪುಟ''ದಲ್ಲಿ ಛಾಪಿಸಿದ್ದಾರೆ.

❖ ಶ್ರೀಪಾದರಾಜಮಠಾಧೀಶರಾದ ಶ್ರೀಶ್ರೀನಿಧಿತೀರ್ಥರ (1745-1772) ನವಪದ್ಯ ಸುರತ್ನಮಾಲಾ ಹಾಗೂ ಶ್ರೀಪಾದರಾಜಾಷ್ಟಕ ಮತ್ತು ಸ್ವಯಂ ಶ್ರೀಪಾದರಾಜರ ''ತೂಗಿರೋ ರಾಮನ..'' ಕೃತಿಗಳೇ ಈ ವಿಷಯದಲ್ಲಿ ನಿರವಕಾಶ ಪ್ರಮಾಣಗಳು. ಹೀಗಾಗಿ ಶ್ರೀಶ್ರೀಪಾದರಾಜರೂ, ಶ್ರೀರಘುನಾಥತೀರ್ಥರೂ ಸಮಕಾಲೀನರೆಂಬುದು ನಿರ್ವಿವಾದ.

❖ ವಿಶ್ವಮಧ್ವಮಹಾಪರಿಷತ್ತಿನ ದ್ವಾರಾ ಪ್ರಕಟಿಸಲ್ಪಟ್ಟ ''ಶ್ರೀರಘುನಾಥ ತೀರ್ಥರು ಹಾಗೂ ಶ್ರೀಶ್ರೀಪಾದರಾಜರು'' ಎಂಬ ಪುಸ್ತಕದ ಮುಖಪುಟದಲ್ಲಿ ಸುರನಾಥಪುರಕ್ಕೆ ತೆರಳುವಾಗ ಶ್ರೀರಘುನಾಥತೀರ್ಥರು ಪುಷ್ಪವನ್ನು ಶ್ರೀಪಾದರಾಜರ ಮೇಲೆ ಹಾಕುತ್ತಿರುವ ಚಿತ್ರ ಕೆಟ್ಟ ಅಭಿರುಚಿ ಉಳ್ಳದ್ದು , ವೈಷ್ಣವರು ಹಾಗೆ ವರ್ತಿಸಬಾರದು ಎಂದು ರಾಯರ ಮಠದ ದಿವಾನರು ತಮ್ಮ ದಿವಾನಗಿರಿಯ ಹಕ್ಕನ್ನು ಚಲಾಯಿಸುತ್ತಾ ಉಪದೇಶ ನೀಡಿದ್ದಾರೆ. ವಾಕ್ಯರೂಪದಲ್ಲಿರುವ ಒಂದು ವಿಷಯವನ್ನು ಚಿತ್ರರೂಪದಲ್ಲಿ ಬಿತ್ತರಿಸಿದಾಗ ಕೆಟ್ಟ ಅಭಿರುಚಿ ಅವೈಷ್ಣವತೆ ಹೇಗಾಗುತ್ತದೆ?

❖ ಶ್ರೀಪಾದರಾಜಮಠಾಧೀಶರಾದ ಶ್ರೀಶ್ರೀನಿಧಿತೀರ್ಥರು (1745-1772) ತಮ್ಮ ''ನವಪದ್ಯಸುರತ್ನಮಾಲಾ'' ಎಂಬ ಸ್ತೋತ್ರದಲ್ಲಿ ''ಶ್ರೀಮದ್ಯತೀಶರಘುನಾಥಗುರೋರ್ವಿಮಾನಾತ್ ಪುಷ್ಪೇ ಸ್ವಮೂರ್ಧ್ನಿ ಪತತಿ ಪ್ರಸಮೀಕ್ಷ ಚೋಕ್ತ್ವಾ'' ಎಂಬುದಾಗಿ ಶ್ರೀಮತ್ ಯತೀಶರಾದ ರಘುನಾಥಗುರುಗಳು ವಿಮಾನಾರೂಢರಾಗಿ ಪರಲೋಕ ಯಾತ್ರೆ ಮಾಡುವಾಗ ಶ್ರೀಪಾದರಾಜರ ತಲೆಯ ಮೇಲೆ ಪುಷ್ಪ ಹಾಕಿ ಸಂಭಾಷಿಸಿದ ವಿಚಾರವನ್ನು ದಾಖಲಿಸಿದ್ದಾರೆ.

❖ ಮೇಲಿನ ವಿಷಯವನ್ನು ಶ್ರೀಪಾದರಾಜಮಠಾಧೀಶರಾದ ಶ್ರೀಸತ್ಯನಿಧಿತೀರ್ಥ ಶ್ರೀಪಾದಂಗಳವರು ತಮ್ಮ ''ಶ್ರೀಪಾದರಾಜ ಚರಿತಾಮೃತಮ್'' ಎಂಬ ಪುಸ್ತಕದಲ್ಲಿ ಪುಟ 27, 42, 67ರಲ್ಲಿ ಕಾಣಿಸಿದ್ದಾರೆ.

❖ ಶ್ರೀರಾಯರ ಮಠದಿಂದ ಪ್ರಕಾಶಿಸಲ್ಪಟ್ಟ ''ಸ್ತೋತ್ರಮುಕ್ತಾವಲಿ'' ಎಂಬ ಪುಸ್ತಕದ ಪುಟ 590 ರಲ್ಲಿ ಶ್ರೀಶ್ರೀನಿಧಿತೀರ್ಥರ ನವಪದ್ಯಸುರತ್ನಮಾಲಾ ಕೃತಿಯನ್ನು ಛಾಪಿಸಲಾಗಿದೆ. ಈ ಕೃತಿಯ ಆರಂಭದಲ್ಲಿ ವಿವರಣೆ ಕೊಡುತ್ತಾ ''ಶ್ರೀರಘುನಾಥತೀರ್ಥರು ವಿಮಾನಾರೂಢರಾಗಿ ದೇವಲೋಕಕ್ಕೆ ಪ್ರಯಾಣ ಬೆಳೆಸಿದಾಗ ಸ್ವರ್ಗೀಯಕುಸುಮವನ್ನು ಅನುಗ್ರಹಿಸಿ ಎರಡು ಬಾರಿ ದರ್ಶನವಿತ್ತ ರೋಮಾಂಚಕ ಘಟನೆ ಮೊದಲಾದ ವಿಷಯಗಳನ್ನು ಈ ಸ್ತೋತ್ರ ಪ್ರಸ್ತುತ ಪಡಿಸಿದೆ'' ಎಂದು ಪುಸ್ತಕದ ಸಂಪಾದಕರು ಬರೆದಿದ್ದಾರೆ.

❖ ಶ್ರೀರಘುನಾಥತೀರ್ಥರು ವಿಮಾನದಿಂದ ಪುಷ್ಪವನ್ನು ಶ್ರೀಪಾದರಾಜರ ತಲೆಯ ಮೇಲೆ ಹಾಕುತ್ತಿರುವ ಒಂದು ಬಣ್ಣದ ತೈಲ ಚಿತ್ರವನ್ನು ನೃಸಿಂಹತೀರ್ಥದ ಬಳಿಯಿರುವ ಶ್ರೀಪಾದರಾಜರ ಮೂಲವೃಂದಾವನದ ಪ್ರಾಕಾರದಲ್ಲೇ ಹಾಕಲಾಗಿತ್ತು. ಈ ಚಿತ್ರ ನೋಡಿದವರು ಈಗಲೂ ಇದ್ದಾರೆ. ಹೊಸ ಕಟ್ಟಡ ಶುರುವಾದ ಮೇಲೆ ಈ ಚಿತ್ರ ಮಂಗಮಾಯವಾಗಿದೆ. ಮುಳಬಾಗಿಲು ಊರಿನಲ್ಲಿ ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ ಶ್ರೀಶ್ರೀಪಾದರಾಜರು ಪಾಠ ಮಾಡುತ್ತಿದ್ದ ಸ್ಥಳ, ಪುಷ್ಪ ವೃಷ್ಟಿ ಮಾಡಿದ ಸ್ಥಳದಲ್ಲಿ ಒಂದು ತುಳಸೀ ವೃಂದಾವನವಿತ್ತು. ಅಲ್ಲಿ ತೀರ್ಥ, ಗಂಧಾಕ್ಷತೆ, ಹಸ್ತೋದಕಗಳನ್ನು ನೀಡಲಾಗುತ್ತಿತ್ತು. ಹೊಸ ಕಟ್ಟಡ ಬಂದಾದ ಮೇಲೆ ಈ ಸ್ಥಳ ಕಾಣದಾಗಿದೆ.

❖ ಅಲ್ಲದೇ ''ಮೂಲರಾಮಸ್ತು ಮನ್ಮತೇ'' ಪುಸ್ತಕದ ಪುಟ. viii, xi, 16, 126ರಲ್ಲಿ ಶ್ರೀಮೂಲರಾಮನ ಪ್ರತಿಮೆ ಅಪಹರಣದ ವಿಷಯ ತಿಳಿಸುವಾಗ ಕ್ರಿ.ಶ. 1493 ಶ್ರೀರಘುನಾಥತೀರ್ಥರ ಕಾಲ ಎಂದು ಬರೆಯಲಾಗಿದೆ. ಶ್ರೀಪಾದರಾಜರ ನಿರ್ಯಾಣಕಾಲ ಕ್ರಿ.ಶ. 1504. ಇದಕ್ಕೆ ವ್ಯತಿರಿಕ್ತವಾಗಿ ಎಲ್ಲೂ ಯಾವ ಉಲ್ಲೇಖಗಳನ್ನೂ ಯಾರೂ ಇದುವರೆಗೆ ಮಾಡಿಲ್ಲ. ಇದರಿಂದ ಶ್ರೀರಘುನಾಥತೀರ್ಥರು ಹಾಗೂ ಶ್ರೀಪಾದರಾಜರು ಸಮಕಾಲೀನರು ಎಂದು ಲೇಖಕರೇ ಒಪ್ಪಿದಂತಾಯಿತು. ಆದರೆ, ಅವರೇ ಕಾಲಗಣನೆಯ ದೃಷ್ಟಿಯಿಂದ ಸರಿ ಹೊಂದುವುದಿಲ್ಲ ಎಂದು ಬರೆದದ್ದರಿಂದ ಮೂ.ಮತೇ. ಲೇಖಕರಿಗೆ ಸ್ವವ್ಯಾಹತಿದೋಷ ಬರುತ್ತದೆ.

ಹಾಗೆ ನೋಡಿದರೆ ಮೂ.ಮತೇ ಪುಸ್ತಕದ (2009) ಮುಖಪುಟ ಅತ್ಯಂತ ಕೆಟ್ಟ ಅಭಿರುಚಿಯಿಂದ ಕೂಡಿದೆ. ಆಧಾರ ರಹಿತವಾಗಿದೆ. ಪಾಪ ಘಟನೆಯಾಗಿದೆ. ಅವೈಷ್ಣವತೆಯಿಂದ ಕೂಡಿದೆ.

**ವಾಚಕರೇ!....** ಈಗ ಹೇಳಿ! ಶ್ರೀರಾಯರ ಮಠದ ದಿವಾನರ ಆಕ್ಷೇಪ ಯಾರ ಮೇಲೆ? ಅವರ ಪ್ರಕಾರ, ಪ್ರಾಚೀನರಾದ ಶ್ರೀವ್ಯಾಸರಾಜಗುರು ಸಾರ್ವಭೌಮರು, ಶ್ರೀಪಾದರಾಜರಮಠಾಧೀಶರಾದ ತಪಸ್ವಿಗಳಾದ ಶ್ರೀನಿಧಿತೀರ್ಥರು, ಶ್ರೀಸತ್ಯನಿಧಿತೀರ್ಥರು, ರಾಯರ ಮಠದ ಸ್ತೋತ್ರಮುಕ್ತಾವಲಿ ಪುಸ್ತಕದ ಸಂಪಾದಕರುಗಳು, ಅವರ ಪೂರ್ವಿಕರಾದ ದಿ.ಹೆಚ್.ಕೆ. ವೇದವ್ಯಾಸಾಚಾರ್ಯರು, ದಿ.ಬಿ.ಎನ್.ಕೆ.ರವರು ಹಾಗೂ ತೈಲ ಚಿತ್ರವನ್ನು ಶ್ರೀಪಾದರಾಜರ ಮಠದ ಪ್ರಾಕಾರದಲ್ಲೇ ಹಾಕಲು ಅನುಮತಿ ಕೊಟ್ಟ ಶ್ರೀಪಾದರಾಜಮಠದ ಹಿಂದಿನ ಪೀಠಾಧಿಪತಿಗಳು ಮೊದಲಾದವರಿಗೆಲ್ಲರಿಗೂ ಕೆಟ್ಟ ಅಭಿರುಚಿ ಇತ್ತು. ಅವರೆಲ್ಲ ಅವೈಷ್ಣವರಾಗಿ ವರ್ತಿಸಿದ್ದಾರೆಂದಾಯಿತು. ಅವರೆಲ್ಲರಿಗೂ ಛೀ ಥೂ.. ಎಂದು ಬೈಯ್ಯುವ ಸಾಹಸಮಾಡಿದ ಇವರು ನಿಜ ಅರ್ಥದಲ್ಲಿ ದಿವಾನರೇ? ವೈಷ್ಣವರೇ?

**ಗಮನಿಸಿ...**

ಈ ವಿಷಯ ಅವರ ಸಾಕ್ಷಿಗೆ ವೇದ್ಯವಾಗಿದ್ದರಿಂದಲೇ ಮೂ.ಮತೇ ದ್ವಿತೀಯ ಮುದ್ರಣದಲ್ಲಿ ಮುಖಪುಟವನ್ನು ಬದಲಾಯಿಸಿಕೊಂಡಿದ್ದಾರೆ.

**ಶ್ರೀಅಕ್ಷೋಭ್ಯತೀರ್ಥರು ಹಾಗೂ ಶ್ರೀವಿದ್ಯಾರಣ್ಯರು**

ಶ್ರೀಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಸೋಲಿಸಿದ ವಿಷಯವನ್ನು ಸಹ ಉತ್ತರಾದಿಮಠದವರು ಸೃಷ್ಟಿಸಿದ್ದಲ್ಲ-

ಅ) ನಿತ್ಯವೂ ರಾಯರಮಠದಲ್ಲಿ ಗುರುಪರಂಪರಾ ಸ್ತೋತ್ರ ಹೇಳುವಾಗ

**ಯೋ ವಿದ್ಯಾರಣ್ಯವಿಪಿನಂ ತತ್ವಮಸ್ಯಸಿನಾಽಚ್ಛಿನತ್ ।**
**ಶ್ರೀಮದಕ್ಷೋಭ್ಯತೀರ್ಥಾಯ ನಮಸ್ತಸ್ಮೈ ಮಹಾತ್ಮನೇ ॥**

ಎಂಬ ಶ್ಲೋಕ ಜೋರಾಗಿ ಪಠಿಸುವುದಿದೆ. ಪಾಪ, ಮೂ.ಮತೇ ಲೇಖಕರಿಗೆ ಈ ಶ್ಲೋಕದ ಅರ್ಥವೇ ಗೊತ್ತಿಲ್ಲ ಅಂತ ಕಾಣತ್ತೆ.

ಆ) ಈ ವಿಷಯ ಶ್ರೀಮದ್ರಾಘವೇಂದ್ರವಿಜಯಕಾವ್ಯದಲ್ಲಿಯೂ ದಾಖಲಾಗಿದೆ ಎಂಬುದು ಗಮನಾರ್ಹ. ಶ್ರೀಮದ್ರಾಘವೇಂದ್ರವಿಜಯಕಾವ್ಯದಲ್ಲಿ ಎರಡನೇ ಸರ್ಗದಲ್ಲಿ 11 ನೇ ಶ್ಲೋಕ ಹೀಗಿದೆ.

**ದೃಢಾಸಿನಾ ತತ್ವಮಸೀತಿ ವಾಚಾ ಸಾಮರ್ಥ್ಯಭಾಜಾ ಪರಜೀವಭೇದೇ ।**
**ಅವೈದಿಕಾಗ್ರ್ಯಂ ಮುನಿರೇಷ ವಿದ್ಯಾರಣ್ಯಂ ಶರಣ್ಯಂ ಕುದೃಶಾಂ ಬಿಭೇದ ॥**

ಅಕ್ಷೋಭ್ಯತೀರ್ಥರೆಂಬ ಮುನಿಗಳು ಹರಿತವಾದ ''ತತ್ವಮಸಿ'' ಎಂಬ ವಾಕ್ಯಖಡ್ಗದಿಂದ ಅವೈದಿಕರಲ್ಲಿ ಅಗ್ರಗಣ್ಯರಾದ ವಿದ್ಯಾರಣ್ಯರೆಂಬ ಅರಣ್ಯವನ್ನು ಕತ್ತರಿಸಿ ಹಾಕಿದರು. (ಇಂದಿನ ಕೆಲವರು ಹೇಳುವಂತೆ ಇಲ್ಲಿ ಪ್ರಸಕ್ತರಾದ ವಿದ್ಯಾರಣ್ಯರು ಬೇರೆ ಯಾರೋ ಒಬ್ಬ ವಿದ್ಯಾರಣ್ಯರಾಗಿದ್ದರೆ ಆಗ ಅದು ಶ್ರೀಅಕ್ಷೋಭ್ಯತೀರ್ಥರಿಗೆ ಪ್ರಶಸ್ತಿಯೇ? ವಿಜಯದ್ಯೋತಕ ಮಹಿಮೆಯಾಗಲು ಸಾಧ್ಯವೇ?)

ಈ ಗ್ರಂಥವನ್ನು ಕನ್ನಡದಲ್ಲಿ ಅನುವಾದಿಸಿ ''ಗುರುಸಾರ್ವಭೌಮ ಶ್ರೀರಾಘವೇಂದ್ರತೀರ್ಥಪ್ರತಿಷ್ಠಾನ'' ಧಾರವಾಡದಿಂದ ಶ್ರೀಆ.ರಾ. ಪಂಚಮುಖಿ ಮತ್ತು ಶ್ರೀ ರಾಜಾ ಎಸ್. ಪವಮಾನಾಚಾರ್ಯರು ಪ್ರಕಟಿಸಿದ್ದಾರೆ. ಈ ಪುಸ್ತಕದ ಪುಟ 22ರಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲು ಗ್ರಾಮದ ಹತ್ತಿರವಿರುವ ಗುಡ್ಡದ ಮೇಲೆ ಶ್ರೀಅಕ್ಷೋಭ್ಯತೀರ್ಥರಿಗೂ ವಿದ್ಯಾರಣ್ಯರಿಗೂ ಆದ ವಾದ, ಶ್ರೀವೇದಾಂತದೇಶಿಕರ ನಿರ್ಣಯದ ಶ್ಲೋಕ ಮತ್ತು ವಿಜಯಸ್ಥಂಭಗಳ ಬಗ್ಗೆ ಉಲ್ಲೇಖಿಸಿದ್ದಾರೆ.

ಈಗ ಈ ಕಥೆ ಸುಳ್ಳೆಂದರೆ ಶ್ರೀರಾಘವೇಂದ್ರವಿಜಯ ಕಾವ್ಯವು ಸುಳ್ಳು ಮಾಹಿತಿಯನ್ನು ಕೊಡುತ್ತಿದೆ ಎಂದು ಅವರೇ ಒಪ್ಪಿಕೊಂಡಂತಾಯಿತಲ್ಲಾ!

ಇ) ಈ ವಿಷಯವು ಪರಕೀಯರಾದ ಶ್ರೀವೈಷ್ಣವರ ಗ್ರಂಥಗಳಲ್ಲಿಯೂ ಉಲ್ಲಿಖಿತವಾಗಿದೆ.

ಈ) ತೂಪಿಲ್ ಎಂಬ ಗ್ರಾಮದಲ್ಲಿರುವ ಶ್ರೀವೇದಾಂತದೇಶಿಕರ ಗುಡಿಯ ಗೋಡೆಗಳ ಮೇಲೆ ಶ್ರೀವೇದಾಂತದೇಶಿಕರು ತಮ್ಮ ನಿರ್ಣಯಶ್ಲೋಕ ಬರೆದು ಕೊಡುತ್ತಿರುವ ಬಣ್ಣದ ತೈಲಚಿತ್ರಗಳಿವೆ. ಮದ್ರಾಸ್ ಓರಿಯಂಟಲ್ ಗ್ರಂಥಾಲಯದ ಹಸ್ತಪ್ರತಿಗಳಲ್ಲಿ ಈ ವಿಷಯ ಉಲ್ಲೇಖಿಸಲಾಗಿದೆ.

ಉ) ರಾಯರಮಠದ ಅಧಿಕೃತ ಪುಸ್ತಕವಾದ ಗುರುಚರಿತೆಯಲ್ಲೂ ದಾಖಲಾಗಿದೆ.

ಇವರೆಲ್ಲರೂ ಉತ್ತರಾದಿಮಠದ ಶಿಷ್ಯರು ಸೃಷ್ಟಿಸಿದ ಕಥೆಯನ್ನೇ ಅನುಸರಿಸಿದ್ದಾರೆಯೇ?

**ವಾಚಕರೆ, ಗಮನಿಸಿ !**

ಯಾವ ವೈಷ್ಣವದೀಕ್ಷೆಯೂ ಇಲ್ಲದ ಮೂ.ಮತೇ ಲೇಖಕರು ಉತ್ತರಾದಿಮಠದವರನ್ನು ದೂಷಿಸುವುದರಲ್ಲೇ ಅತ್ಯಂತ ದೀಕ್ಷಾಬದ್ಧರಾಗಿ ಏನು ಬರೆಯುತ್ತಿದ್ದೇವೆ ಎಂಬ ಪರಿಜ್ಞಾನವಿಲ್ಲದೆ ಬರೆದಿದ್ದಾರೆ. ತಮ್ಮ ಪೂರ್ವಿಕರ ಕಾವ್ಯಗಳಲ್ಲಿ ಮತ್ತು ಚರಮಶ್ಲೋಕದಲ್ಲಿ ಇರುವ ವಿಷಯಗಳಿಗೆ ತಾವೇ ದ್ರೋಹ ಬಗೆದಿದ್ದಾರೆ. ಸತ್ಯವಾದ ಇತಿಹಾಸವನ್ನು ತಿರುಚುತ್ತಿರುವುದು ಯಾರು? ವಾಚಕರೇ ತೀರ್ಮಾನಿಸಲಿ.

**ಆಕ್ಷೇಪ 9.** ಶ್ರೀವಿದ್ಯಾನಿಧಿಗಳಿಗೆ ಹಾಗೂ ಶ್ರೀರಘುನಾಥತೀರ್ಥರಿಗೆ ಆಶ್ರಮ ಗುರುಗಳು ಯಾರೆಂದು ನಿರ್ಣಯಿಸಲಾಗದ ಸಂದಿಗ್ಧತೆ ಉಂಟು.(ಪು. vii)

ಉತ್ತರ: ಶ್ರೀಅಕ್ಷೋಭ್ಯತೀರ್ಥರಿಗೂ, ವಿದ್ಯಾರಣ್ಯರಿಗೂ ವಾದ ಆಯಿತೆಂಬ ವಿಷಯದಲ್ಲೇ ಸಂದಿಗ್ಧತೆ ಇರುವ ಮೂ.ಮಠೇ ಲೇಖಕರಿಗೆ ಶ್ರೀವಿದ್ಯಾನಿಧಿಗಳಿಗೆ ಹಾಗೂ ಶ್ರೀರಘುನಾಥತೀರ್ಥರಿಗೆ ಅಶ್ರಮ ಗುರುಗಳು ಯಾರೆಂಬುದು ನಿರ್ಣಯಿಸಲಾಗದ ಸಂದಿಗ್ಧತೆ ಕಂಡದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ !

ಮಹಾನ್ ಟಿಪ್ಪಣಿಕಾರರಾದ ಶ್ರೀಸತ್ಯಾಭಿನವರ ವಾಕ್ಯ, ಶ್ರೀಸತ್ಯನಾಥಮಾಹಾತ್ಮ್ಯರತ್ನಾಕರ, ಶ್ರೀಸತ್ಯನಿಧಿವಿಲಾಸ, ಶ್ರೀವಿದ್ಯಾಧೀಶವಿಜಯ, ಪೂರ್ಣಬೋಧಗುರುವಂಶಕಥಾಕಲ್ಪತರು, ಶ್ರೀಸತ್ಯಬೋಧವಿಜಯ, ಶ್ರೀಸತ್ಯಸಂಧವಿಜಯಾದಿಗಳು ಹಾಗೂ ಶ್ರೇಷ್ಠ ಹರಿದಾಸರ ನುಡಿಗಳು, ಮೂ.ಮಠೇ ಪುಸ್ತಕದ ಪುಟ 147ರಲ್ಲಿ ಅವರೇ ಛಾಪಿಸಿರುವ ಸರ್ಕಾರದ ಗೆಜೆಟ್ ಮುಂತಾದವುಗಳು ಶ್ರೀವಿದ್ಯಾನಿಧಿಗಳಿಗೆ ಆಶ್ರಮಗುರುಗಳು ಶ್ರೀರಾಮಚಂದ್ರತೀರ್ಥರು ಹಾಗೂ ಶ್ರೀರಘುನಾಥತೀರ್ಥರಿಗೆ ಆಶ್ರಮಗುರುಗಳು ಶ್ರೀವಿದ್ಯಾನಿಧಿಗಳೆಂದು ಸಾರುತ್ತಿವೆ. ಅಪರಿಪೂರ್ಣವಾದ ಸಂಶೋಧನೆಯಲ್ಲಿ ತಮ್ಮ ವಿಚಾರಗಳನ್ನು ''ಸತ್ಯಮೇವ ಜಯತೇ'' ಎಂಬ ಪುಸ್ತಕದಲ್ಲಿ ಬರೆದ ಡಾ।। ಬಿ.ಎನ್.ಕೆ. ರವರ ವಾಕ್ಯವನ್ನು ಕದ್ದ ಮೂ.ಮಠೇ ಲೇಖಕರಿಗೆ ಸಂದಿಗ್ಧತೆ ಉಂಟಾದದ್ದು ಸಹಜವೇ !

**ಆಕ್ಷೇಪ 10.** ಇನ್ನು ಅವಿಚ್ಛಿನ್ನಪರಂಪರೆ ಎಂದು ಹೇಳಿಕೊಳ್ಳುವುದಂತೂ ತೀರಾ ಹಾಸ್ಯಾಸ್ಪದ. ಅನೇಕ ಯತಿಗಳ ನಿರ್ಯಾಣಾನಂತರ ಮುಂದಿನವರು ಪೀಠಕ್ಕೆ ಬರುವುದು, ಅನಾರೋಗ್ಯ ನಿಮಿತ್ತ ಪೂಜಾ ವಿಚ್ಛಿತ್ತಿ ಇತ್ಯಾದಿಗಳು ಈ ವಾದಕ್ಕೆ ಬಾಧಕವಾಗಿವೆ.(ಪು. vii)

ಉತ್ತರ: ಮರಣ ಹಾಗೂ ಅನಾರೋಗ್ಯಗಳು ಅನಿಶ್ಚಿತ. ಪೀಠ ಹಸ್ತಾಂತರ ಎಂಬುದು ಎಷ್ಟು ಬಗೆಯಾಗಿದೆ ಎಂಬ ಜ್ಞಾನವೇ ಇಲ್ಲದೆ ಆಕ್ಷೇಪ ಮಾಡಿರುವರು. ಮಠಗಳ ವಿವಾದವೇ ಇಲ್ಲದ ಶ್ರೀರಾಮಚಂದ್ರತೀರ್ಥರ ನಿರ್ಯಾಣದ ನಂತರ ಕಾಲದಲ್ಲಿ ಮೂಲರಾಮನ ಪೂಜೆಗೆ ವಿಚ್ಛೇದನ ಬಂದದ್ದಿದೆ. ಅದರಂತೆ ಗಜಪತಿರಾಜನ ಕೋಶಾಗಾರದಲ್ಲಿದ್ದಾಗ ಯಾರು ಯಾವ ಪರಂಪರೆಯವರು ಪೂಜೆ ಮಾಡಿದ್ದರು? ಆಗಲೂ ಪೂಜೆಗೆ ವಿಚ್ಛೇದನ ಬಂದದ್ದಿದೆ. ಪೂರ್ವಾಗ್ರಹಪೀಡಿತರಾಗಿ ಅವಸರ ಅವಸರದಲ್ಲಿ ಪೂಜೆಗೆ ವಿಚ್ಛೇದನ ಬರುವುದೇ ಪರಂಪರೆಯ ವಿಚ್ಛೇದನೆ ಎಂದು ಬರೆದಿರುವ ಲೇಖಕರು ರಾಯರ ಮಠದವರಿಗೂ ಮೇಲೆ ತಿಳಿಸಿದಂತೆ ಅವಿಚ್ಛಿನ್ನಪರಂಪರೆ ಎಂದು ಹೇಳಿಕೊಳ್ಳಲಾಗದೆಂಬುದನ್ನು ಮರೆತಿರುವರು. ನಿರ್ಯಾಣಕಾಲದಲ್ಲಿ ಗುರುಗಳು ಯಾರನ್ನು ಉತ್ತರಾಧಿಕಾರಿಗಳೆಂದು ಸಂಕಲ್ಪಿಸಿರುತ್ತಾರೋ ಅವರೇ ಮುಖ್ಯ ಅಧಿಕಾರಿಗಳು. ಶ್ರೀರಾಯರ ಮಠದವರು ಅವರ ಅನೇಕ ಪುಸ್ತಕಗಳಲ್ಲಿ ಒಪ್ಪಿಕೊಂಡಂತೆ ಮಹಾಸಂಸ್ಥಾನದ್ಯೋತಕವಾದ ಸಮಸ್ತದೇವರ ಪೆಟ್ಟಿಗೆಯನ್ನು ಶ್ರೀರಾಮಚಂದ್ರತೀರ್ಥರ ಆಜ್ಞೆಯ ಮೇರೆಗೆ ಸ್ವೀಕರಿಸಿದವರು ಶ್ರೀವಿದ್ಯಾನಿಧಿಗಳಾದ ಕಾರಣ ಮೂಲಪರಂಪರೆಗೆ ಯಾವ ಧಕ್ಕೆ ಉಂಟಾಗಿಲ್ಲ ಎಂಬುದು ಗಮನಾರ್ಹ. ಶ್ರೀವಿಬುಧೇಂದ್ರತೀರ್ಥರು ಶ್ರೀರಾಮಚಂದ್ರತೀರ್ಥರ ಶಿಷ್ಯರಲ್ಲ ಎಂದು ಸ.ಸೀ.ಮೂ ಕೃತಿಯಲ್ಲಿ ಎಲ್ಲೂ ಹೇಳಿಲ್ಲ. ಯಾರೂ ಹಾಗೆ ಹೇಳಿಲ್ಲ. ಆದರೆ ಪರಂಪರೆಗೂ, ಮೂಲಪರಂಪರೆಗೂ ಇರುವ ವ್ಯತ್ಯಾಸವನ್ನು ತಿಳಿಯುವುದು ಆವಶ್ಯಕವಾಗಿದೆ. ಈ ನಿಟ್ಟಿನಲ್ಲಿ ಅವಿಚ್ಛಿನ್ನ ಶಬ್ದವನ್ನು ಅರ್ಥೈಸಿಕೊಳ್ಳುವುದು ಒಳಿತು.

**ಆಕ್ಷೇಪ 11.** ಮೂಲಸೀತಾವಿಗ್ರಹ ಶಿಲ್ಪಶಾಸ್ತ್ರಕ್ಕೆ ವಿರುದ್ಧವಾಗಿ ತಾಮ್ರದ ಬದಲು ಹಿತ್ತಾಳೆಯದಿದ್ದ ಬಗ್ಗೆ ಶ್ರೀಸತ್ಯವರರು ಹಾಗೂ ಶ್ರೀಸತ್ಯವೀರರ ಕಾಲದಲ್ಲಿ ಮಠದಲ್ಲಿ ನಡೆದ ಕಳುವಿನ ಪ್ರಕರಣದಿಂದ

ಮೂಲರಾಮ ಸೀತೆಯರ ಪ್ರತಿಮೆಗಳ ನಿರ್ಮಾಣ (ಒಂದು ತಾಮ್ರ ಹಾಗೂ ಇನ್ನೊಂದು ಹಿತ್ತಾಳೆಯದನ್ನಾಗಿ) ಮಾಡಲಾಯಿತು.(ಪು. viii)

ಉತ್ತರ: ಶ್ರೀಸತ್ಯವೀರತೀರ್ಥರ ಕಾಲದಲ್ಲಿ ಪ್ರತಿಮೆಗಳ ಕಳ್ಳತನವಾಗಿಯೇ ಇಲ್ಲ. ಇದು ಕೇವಲ ಶುದ್ಧ ಸುಳ್ಳು ಆರೋಪಣೆ.

ಶ್ರೀಸತ್ಯವರರು ಹಾಗೂ ಶ್ರೀಸತ್ಯವೀರರ ಕಾಲಕ್ಕೆ ಪ್ರತಿಮೆಗಳ ಕಳುವಿನ ಹಿನ್ನಲೆಯಲ್ಲಿ ರಾಮ-ಸೀತೆಯರ ಪ್ರತಿಮೆಗಳು (ಒಂದು ತಾಮ್ರ ಇನ್ನೊಂದು ಹಿತ್ತಾಳೆಯದ್ದು) ನಿರ್ಮಾಣಗೊಂಡಿದೆ ಎಂದು ಆರೋಪಿಸುವ ಲೇಖಕರು, ಶ್ರೀಸತ್ಯವರರಿಗಿಂತಲೂ ಪೂರ್ವದಲ್ಲಿಯೇ ಶ್ರೀಮೂಲಸೀತಾರಾಮರ ಬಣ್ಣಗಳ (ಲೋಹಗಳ) ಬಗ್ಗೆ ಪ್ರಸ್ತಾವನೆ ಬಂದಿದೆ ಎಂಬುದನ್ನು ತಿಳಿದಿಲ್ಲ.

ಮೂಲಸೀತೆಯ ಪ್ರತಿಮೆ ಹಿತ್ತಾಳೆಯದ್ದು ಎಂದು ಉಲ್ಲೇಖಿಸಿದ್ದು ಗುರುವಂಶಕಥಾಕಲ್ಪತರು. ಈ ಕಾವ್ಯ ಶ್ರೀಸತ್ಯಧರ್ಮರ ಕಾಲಕ್ಕಿಂತ ಪೂರ್ವದಲ್ಲಿದ್ದ ಶ್ರೀಸತ್ಯಬೋಧರ ಕಾಲಕ್ಕೆ ರಚಿತವಾದದ್ದು. ಆದ್ದರಿಂದ ಶ್ರೀಸತ್ಯಧರ್ಮರ ಕಾಲಕ್ಕೆ ಕೃತ್ರಿಮ ಹಿತ್ತಾಳೆ ಸೀತಾಪ್ರತಿಮೆ ಮಾಡಲಾಯಿತು ಎನ್ನುವುದು ಕೇವಲ ಮೂ.ಮತೇ ಲೇಖಕರ ನಿರಾಧಾರವಾದ ಊಹೆ ಮಾತ್ರ.

ಮೂಲಸೀತಾಪ್ರತಿಮೆ ಹಿತ್ತಾಳೆಯದ್ದೆಂಬ ವಿಷಯ ಮೊದಲಿನಿಂದಲೂ ಉತ್ತರಾದಿಮಠದಲ್ಲಿ ಪೂಜೆಯನ್ನು ವೀಕ್ಷಿಸುವ ಸಹಸ್ರಾರು ಭಕ್ತರ ಪ್ರತ್ಯಕ್ಷಸಿದ್ಧ. ಅಷ್ಟೇ ಅಲ್ಲದೇ ಗುರುವಂಶಕಥಾಕಲ್ಪತರು ಕಾವ್ಯದಲ್ಲಿ ಸ್ಪಷ್ಟವಾಗಿ ಸೀತಾಪ್ರತಿಮೆಯ ಲಕ್ಷಣವನ್ನು ಉಲ್ಲೇಖಿಸಿದ್ದರಿಂದ ಆ ನಂತರದ ಕಾಲದಲ್ಲಿ ಈ ವಿಷಯವು ಜಗಜ್ಜನಿತವೂ ಆಗಿತ್ತು.

ಆದರೂ ಸೀತಾರಾಮರ ಪ್ರತಿಮೆಗಳಿಗೆ ಸಾಮ್ಯ ಒಪ್ಪುವ (ವರ್ಣತಃ) ಯಾವ ರಾಯರಮಠದ ಅಧಿಕೃತ ಲೇಖಕರೂ ಅಂದಿನಿಂದಲೂ ಉತ್ತರಾದಿಮಠದಲ್ಲಿರುವ ಸೀತೆಯು ಮೂಲವಲ್ಲ ಎಂದು ಹೇಳುವ ಸಾಹಸಕ್ಕೆ ಕೈ ಹಾಕಿಲ್ಲ. ಮೂಲಸೀತಾಪ್ರತಿಮೆ ಉತ್ತರಾದಿಮಠದಲ್ಲಿಯೇ ಇದೆ ಎಂದು ಅಂಗೀಕರಿಸಿ ಅದರಂತೆಯೇ ನಂಬಿಕೊಂಡು ಬಂದಿದ್ದಾರೆ.

ಅವರೆಲ್ಲರೂ ವರ್ಣತಃ ಸಾಮ್ಯವನ್ನು ಹೇಳುವ ಅರ್ಚಾಗತಿಕ್ರಮದ ಪ್ರಾಮಾಣ್ಯವನ್ನು ಒಪ್ಪಿಲ್ಲ ಎಂದಾಯಿತು. ಅಥವಾ ಅದರ ಪ್ರಾಮಾಣ್ಯವನ್ನು ಒಪ್ಪಿ ವರ್ಣತಃ ಸಾಮ್ಯ ಎನ್ನುವುದಕ್ಕೆ ಬೇರೆ ಅರ್ಥವನ್ನಾದರೂ ಮಾಡಿಕೊಂಡಿರಬೇಕು. ಅಂತೂ ಅರ್ಚಾಗತಿಕ್ರಮ ಹೇಳುವ ವರ್ಣತಃ ಸಾಮ್ಯವನ್ನು ಆಧರಿಸಿ ಇಂದು ಉತ್ತರಾದಿಮಠದಲ್ಲಿ ಪೂಜೆಗೊಳ್ಳುತ್ತಿರುವ ಮೂಲಸೀತಾಪ್ರತಿಮೆಯನ್ನು ಕೃತ್ರಿಮ ಎಂದು ಸಾಧಿಸಲು ಸಾಧ್ಯವಿಲ್ಲ.

ಶ್ರೀರಾಯರ ಮಠದಿಂದ ಅಧಿಕೃತವಾಗಿ ಪ್ರಕಟಿಸಲ್ಪಟ್ಟ ಶ್ರೀಮೂಲರಾಮ ಎಂಬ ಪುಸ್ತಕದಲ್ಲಿ ಅವರೇ ಆಧಾರವೆಂಬುದಾಗಿ ಮುದ್ರಿಸಿರುವ ಶ್ರೀಮುದ್ದುವಿಠ್ಠಲದಾಸರ ಸುಳಾದಿಯಲ್ಲಿ ''ತಾಂಬ್ರಗದ್ದುಗೆಯಲ್ಲಿ ನಿಂದಿದ್ದ'' ಎಂದು ಗದ್ದುಗೆಯನ್ನು ಪ್ರತ್ಯೇಕವಾಗಿ ತಾಮ್ರ ಎಂದು ಉಲ್ಲೇಖಿಸಿರುವುದನ್ನು ನೋಡಿದರೆ ಶ್ರೀಸೀತಾದೇವಿಯ ಮೂರ್ತಿ (ಗದ್ದುಗೆ ಬಿಟ್ಟು) ತಾಮ್ರದ್ದಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಈ ಮುದ್ದುವಿಠ್ಠಲರು ಶ್ರೀಅಕ್ಷೋಭ್ಯತೀರ್ಥರ ಕಾಲದವರು. ವಿಲಕ್ಷಣವಾದ ಚತುರ್ಯುಗಮೂರ್ತಿಗಳನ್ನು ಶಿಲ್ಪಶಾಸ್ತ್ರಕ್ಕೆ ವಿರುದ್ಧ ಎಂದು ಆರೋಪಿಸುವುದು ಲೇಖಕರ ಶಿಲ್ಪಶಾಸ್ತ್ರದ ಅಜ್ಞಾನವನ್ನು ತಿಳಿಸುತ್ತಿದೆ.

ಒಂದು ವೇಳೆ ಮೂ.ಮತೇ ಲೇಖಕರ ಆರೋಪಣೆಯ ಪ್ರಕಾರ ಉತ್ತರಾದಿಮಠದ ಪೂರ್ವಿಕರು (ಶ್ರೀಸತ್ಯಧರ್ಮತೀರ್ಥರು) ಕೃತ್ರಿಮ ಸೀತಾಪ್ರತಿಮೆಯನ್ನು ನಿರ್ಮಾಣ ಮಾಡಿದರೆಂದು ಇಟ್ಟು ಕೊಂಡರೂ

ಸಹ (ಶ್ರೀಸತ್ಯಧರ್ಮರ ಗುರುಗಳಾದ ಶ್ರೀಸತ್ಯವರರ ಅಂತ್ಯಕಾಲದಲ್ಲಿ ಕಳುವಿನ ಘಟನೆ ನಡೆದದ್ದರಿಂದ) ತಾಮ್ರಮಯವಾದ, ಪೀಠತಃ ಪರಿಮಾಣತಃ ಸಾಮ್ಯವಿರುವ ಸೀತೆಯ ಪ್ರತಿಮೆಯನ್ನು ಮಾಡಲು ಬರುತ್ತಿರಲಿಲ್ಲವೇ? ಇದೆಂತಹ ಹಾಸ್ಯಾಸ್ಪದ ಆರೋಪಣೆ. ಯಾರೂ ಕಳುವಾದ ಮೇಲೆ ಹಿಂದಿದ್ದ ಪ್ರತಿಮೆಗಳಿಗೆ ವಿರುದ್ಧವಾಗಿ ಪರಿಮಾಣ, ಲೋಹಾದಿಗಳಲ್ಲಿ ವ್ಯತ್ಯಸ್ತವಾಗಿ ನಿರ್ಮಿಸಲು ಸಾಧ್ಯವಿಲ್ಲ. ಹಾಗೆ ನಿರ್ಮಿಸಿದ್ದರೆ ಅಂತಹ ಕೃತ್ರಿಮ ಪ್ರತಿಮೆಗಳನ್ನು ಅಂದಿನ ಶಿಷ್ಯಕೋಟಿ ಅನುಮೋದಿಸಲೂ ಸಾಧ್ಯವಿರಲಿಲ್ಲ. ಮಹಾನುಭಾವರಾದ, ಟಿಪ್ಪಣೀಕಾರರಾದ ಶ್ರೀಸತ್ಯಧರ್ಮತೀರ್ಥರು ಕೃತ್ರಿಮ ರಾಮಸೀತೆಯರ ಪ್ರತಿಮೆಗಳನ್ನು ಮಾಡಿಸಿದ್ದಾರೆ ಎಂದು ಆರೋಪಿಸುತ್ತಿರುವುದು ಮೂ.ಮಠೀ ಲೇಖಕರ ಅತ್ಯಂತ ಸಾಹಸ ಹಾಗೂ ಸ್ವೋತ್ತಮದ್ರೋಹವೇ ಸರಿ.

ಅಲ್ಲದೇ, ಶ್ರೀಸತ್ಯವರತೀರ್ಥರ ಕೊನೆಯ ಕಾಲದಲ್ಲಿ ಕಳುವಾದ ಮೂಲಸೀತಾರಾಮರ ಪ್ರತಿಮೆಗಳು ಶ್ರೀಸತ್ಯಧರ್ಮರಿಗೆ (ಶ್ರೀನವರತ್ನ ಅಣ್ಣಯ್ಯಾಚಾರ್ಯರಿಗೆ) ದೊರೆತ ವಿಷಯವನ್ನು ಆಗ ಪ್ರತ್ಯಕ್ಷರಿದ್ದ ಶ್ರೀವಿಜಯದಾಸರ ಸಾಕು ಮಕ್ಕಳಾದ ಶ್ರೀಮೋಹನದಾಸರು ಹೀಗೆ ದಾಖಲಿಸಿದ್ದಾರೆ-

ಏನ ಪೇಳಲಿ ಇವರ ಕೀರ್ತಿ
ಶ್ರೀನಾಥ ರಾಮ ಬಂದನು ಭವ್ಯ ಮೂರ್ತಿ ॥ಪ॥

ಅಂದು ನರಹರಿ ಯತಿಯು ತಂದದ್ದು ನಾ ಕರ್ಣ-
ದಿಂದ ಕೇಳಿ ಬಲ್ಲೆ ನಾ ಕಂಡದ್ದು ಇಲ್ಲ।
ಇಂದೆಮ್ಮ ಗುರು ಸತ್ಯಸಂಧ ಸುತರಿಗೊಲಿದು
ಬಂದ ರಾಮನ ಕಣ್ಣಿಂದ ನಾ ಕಂಡೆ ॥ 1 ॥

ಆಗ ಶ್ರೀರಘುನಾಥ ಯೋಗಿಗೊಲಿದು ಕೂರ್ಮ
ನಾಗಿ ಬಂದದ್ದು ನಾನು ಕೇಳಿ ಬಲ್ಲೆ।
ಈಗ ಸತ್ಯವರರ ಯೋಗಕೊಲಿದು ರಾಮ
ಬ್ಯಾಗ ಬಂದದ್ದು ಚೆನ್ನಾಗಿ ನಾ ಕಂಡೆ ॥ 2 ॥

ಅವರೊಯ್ದರಿವರೊಯ್ದರೆಂಬ ಮಾತುಗಳ್ ಪುಸಿ
ಅವನ ಸತಿಯು ತನ್ನ ತವರು ಮನೆಗೆ।
ತವಕದಿಂದಲಿ ಕರದೊಯ್ಯೆ ಈ ಗುರುಗಳ ತಪಕೆ
ಭುವನ ತಲ್ಲಣಿಸಲು ಭುವನೇಶ ಬಂದ ॥ 3 ॥

ನಾಮಗೊಂಡಲು ಈ ಭೂಮಿದೇವಿ ಇಲ್ಲಿ
ತಾ ಮಗಳು ಅಳಿಯನ್ನ ಕರೆದು ಒಯ್ದು।
ಪಾಮರರಿಗೆ ಪೋದರೆಂದೆಂಬ ಭ್ರಮೆಯನ್ನು ತೋರಿ
ಈ ಮುನಿಯ ಮಾನಸ ಹಂಸನಾಗಿದ್ದ ॥ 4 ॥

ಒಂದು ಮಾಸೋಪವಾಸ ಮಾಡಿದವರಿಗೆ
ಬಂದೊದಗುವ ಜಗದೊಳಗೆ ಖ್ಯಾತಿ ॥
ಸಂದೇಹವಿಲ್ಲದೆ ಅನಶನ ವ್ರತವನ್ನು
ಒಂದು ತಿಂಗಳು ಮಾಡಿ ಇಂದಿರೇಶನ ತಂದ ॥ 5 ॥

ನಳನಾಮ ಸಂವತ್ಸರ ಫಾಲ್ಗುಣ ಬಹುಳ ದ್ವಾದಶಿ
ನಳಿನಾಕ್ಷ ರಾಮಸ್ವಾಮಿಯು ಹೊರಟು ||
ಖಳರ ಖಂಡಿಸಿ ತಾನು ಇವರ ಭಾವಕೆ ಮೆಚ್ಚಿ
ಲಲನೆ ಸಹಿತವಾಗಿ ಭುವನೇಶ ಬಂದ ||6||

ಗಂಗಾದಿ ಸಕಲ ತೀರ್ಥಗಳಲ್ಲಿ ಮಿಂದು ಶ್ರೀ-
ರಂಗಾದಿಯಲ್ಲಿ ಮೋಹನ ವಿಠಲನ್ನ ||
ಸಂಗೀತರಿಗೆ ಸರ್ವದಾಧಿಕ ಫಲ
ಸಂಘಟಿಸುವದು ಸಜ್ಜನರು ಕೇಳಿ ||7||

ಎಂದು ದಾಖಲಿಸಿದ್ದಾರೆ. ಇದೊಂದು ಐತಿಹಾಸಿಕ ದಾಖಲೆ.

ಶ್ರೀವಿಜಯದಾಸರ ಸಾಕುಮಕ್ಕಳಾದ ಶ್ರೀಮೋಹನದಾಸರ ಈ ಕೃತಿಯು ಶ್ರೀಸತ್ಯವರರ ಕಾಲಕ್ಕೆ ರಚಿತವಾದದ್ದು. ಇದನ್ನು ಚಿಪ್ಪಗಿರಿಯಲ್ಲಿರುವ ಮೂಲ ಹಸ್ತಪ್ರತಿಗಳಲ್ಲಿ ಕಾಣಬಹುದಾಗಿದೆ.

ಒಟ್ಟಿನಲ್ಲಿ ತಮ್ಮ ಪಕ್ಷಸಾಧನೆಗೋಸ್ಕರ ಎಂತಹ ನೀಚ ಆರೋಪಣೆ ಮಾಡಲೂ ಹಿಂಜರಿಯಲಾರರು ಎಂದು ಮೂ.ಮತೇ. ಲೇಖಕರು ತೋರಿಸಿಕೊಂಡಿದ್ದಾರೆ.

**ಆಕ್ಷೇಪ 12.** ....ಅಲ್ಲದೇ ಶ್ರೀರಘುನಂದನತೀರ್ಥರು 1493ರಲ್ಲಿ ಮೂಲರಾಮನನ್ನು ರಾಯರ ಮಠಕ್ಕೆ ಮೌಲ್ಯದಿಂದ ತರಿಸಿದ ಬಳಿಕ ಆ ಸ್ಥಾನದಲ್ಲಿ ಇನ್ನೊಂದು ರಾಮನ ಪ್ರತಿಮೆಯನ್ನು ಬಳಿಸಲಾಯಿತು ಎಂದು ವಿಜಯೀಂದ್ರವಿಜಯದಲ್ಲಿ ಸ್ಪಷ್ಟವಾಗಿದೆ..(ಪು. viii)

**ಉತ್ತರ:** ವಿಜಯೀಂದ್ರವಿಜಯದ ಅಪ್ರಾಮಾಣಿಕತೆಯ ಬಗ್ಗೆ ಈ ಹಿಂದಿನ ಪುಟಗಳಲ್ಲಿ ತಿಳಿಸಲಾಗಿದೆ. (ನೋಡಿರಿ ''ವಿಜಯೀಂದ್ರವಿಜಯ ವಿಮರ್ಶೆ'' ಶೀರ್ಷಿಕೆ.) ಅಷ್ಟೇ ಅಲ್ಲದೆ ಶ್ರೀಮೂಲರಾಮನ ಅಪಹರಣದ ಈ ಕಟ್ಟು ಕಥೆಯನ್ನು ಹೇಳುವ ವಿಜಯೀಂದ್ರವಿಜಯದಲ್ಲಿ ಎಲ್ಲೂ ಸಹ ಅದರ ಕಾಲವನ್ನು ಉಲ್ಲೇಖಿಸಿಲ್ಲ. 1493ರಲ್ಲಿ ಶ್ರೀರಘುನಂದನರು ಶ್ರೀಮೂಲರಾಮನನ್ನು ತರಿಸಿದರು ಎಂದು ಯಾವ ವಿಜಯೀಂದ್ರವಿಜಯದಲ್ಲಿ ಉಂಟು ಎಂಬುದನ್ನು ಲೇಖಕರೇ ಬಲ್ಲರು!

ಅಲ್ಲದೇ, ಶ್ರೀವಿದ್ಯಾನಿಧಿಗಳಿಗೆ ಶ್ರೀಮೂಲರಾಮಚಂದ್ರಾದಿ ಸಂಸ್ಥಾನ ಪ್ರತಿಮೆಗಳು ಲಬ್ಧವಾದ ಮೇಲೆ ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಬಂದ ಶ್ರೀಸುಧೀಂದ್ರರು ಬೇರೆ ರಾಮಪ್ರತಿಮೆಯನ್ನು ಮಾಡಿಸಿಕೊಂಡು ಪೂಜಿಸಿದರು ಎಂಬುದಾಗಿ ಗುರುಚರ್ಯಾ ಹಾಗೂ ಪೂರ್ಣಬೋಧಗುರುವಂಶ-ಕಥಾಕಲ್ಪತರು ಮೊದಲಾದ ಕಾವ್ಯಗಳಲ್ಲಿ ಸ್ಪಷ್ಟವಾಗಿದೆ.

**ಆಕ್ಷೇಪ 13.** ಶ್ರೀಮಠದ ಶಿಷ್ಯಕೋಟಿಗೆ ಏನನ್ನಾದರೂ ಉಪದೇಶಿಸಬಹುದು. ಇತರ ಮಠಗಳ ಚಾರಿತ್ರ್ಯದ ಕೊಲೆಯಾಗುವುದಾದರೆ ಖಂಡಿತ ಆಕ್ಷೇಪಾರ್ಹ. (ಪು. ix)

**ಉತ್ತರ:** ''ಇತರ ಮಠಗಳ ಚಾರಿತ್ರ್ಯದ ಕೊಲೆಯಾಗುವುದಾದರೆ ಖಂಡಿತ ಆಕ್ಷೇಪಾರ್ಹ'' ಎಂದು ಒಂದೇ ಒಂದು ಸತ್ಯವಾದ ಮಾತನ್ನು ಮೂ.ಮತೇ ಲೇಖಕರು ಆಡಿದ್ದು ಸ್ವಾಗತಾರ್ಹ. ಉತ್ತರಾದಿಮಠದವರು ಇತರ ಮಠಗಳ ಚಾರಿತ್ರ್ಯದ ಕೊಲೆ ಮಾಡಿಯೇ ಇಲ್ಲ. ''ಸಸೀತಾಮೂಲರಾಮಾರ್ಚಾ'' ಎಂಬ ಪುಸ್ತಕದಲ್ಲಿ ಇತರ ಮಠಗಳ ಕೊಲೆಯಾಗುವಂತಹ ಒಂದು ವಾಕ್ಯವೂ ಇಲ್ಲ. ಸ್ಪಷ್ಟ ಆಧಾರಗಳ ಹಿನ್ನೆಲೆಯಲ್ಲಿ

ಶ್ರೀರಘುನಂದನರ ಕಾಲದಲ್ಲಿ ಶ್ರೀಮಠದಲ್ಲಿರುವ ಮೂಲರಾಮಪ್ರತಿಮೆಯನ್ನು ಅಪಹರಿಸಲಾಗಿದೆ ಎಂಬುದು ''ಪ್ರಮಾಣಗಳಿಗೆ ಅನನುಗುಣವಾಗಿದೆ'' ಎಂದು ಮಾತ್ರ ಉಲ್ಲೇಖಿಸಿದ್ದಾರೆ.

ಹಾಗೆ ನೋಡಿದರೆ ಯಾವ ಪರಂಪರೆಯೇ ಇಲ್ಲದ ಬಿಡಿಸನ್ಯಾಸಿಗಳು ಉತ್ತರಾದಿಮಠದವರೆಂದು ಹೀನ ಶಬ್ದದಿಂದ ಉಲ್ಲೇಖಿಸುತ್ತ ಉತ್ತರಾದಿಮಠದ ಚಾರಿತ್ರ್ಯದ ಕೊಲೆಯನ್ನು (ಅಪ್ರಾಮಾಣಿಕತಮವಾದ ''ವಿಜಯೀಂದ್ರವಿಜಯ'' ಎಂಬ ಒಂದೇ ಒಂದು ಕಾವ್ಯದ ಆಧಾರದ ಮೇಲೆ) ಮಾಡಲು ಪ್ರಯತ್ನಿಸುತ್ತಿರುವವರು ರಾಯರಮಠದವರೇ ಎಂಬುದನ್ನು ಮರೆಯಲಾಗದು.

- ''ಚಂದವಾದ-ಮನಮೋಹಕವಾಗಿ-ಚುಂಬಕಶಕ್ತಿ ಇರುವ ನಮ್ಮ ಮೂಲರಾಮನೆಲ್ಲಿ? ಅದೆಲ್ಲಿ. ಅದರ ನೆರಳಿಗೂ ಸಾಮ್ಯವಿಲ್ಲ.'' (ಮೂ.ಮಠೇ ಪುಟ xiii) ಎಂದು ಉತ್ತರಾದಿಮಠದಲ್ಲಿ ನಿತ್ಯಪೂಜೆಗೊಳ್ಳುವ ಬ್ರಹ್ಮಕರಾರ್ಚಿತ ಶ್ರೀಮೂಲರಾಮನನ್ನು ನಿಂದಿಸಿದವರು ಶ್ರೀರಾಯರ ಮಠದ ದಿವಾನರು.
- ಶ್ರೀವಿದ್ಯಾನಿಧಿಗಳು ಪರಂಪರೆಗೆ ಕಳಂಕ (ಸ್ತೋತ್ರಮುಕ್ತಾವಳಿ ಪುಟ 641)
- ಶ್ರೀವಿದ್ಯಾನಿಧಿಗಳು ಕಪಟಸಂನ್ಯಾಸಿಗಳು (ವಿಜಯೀಂದ್ರವಿಜಯ)
- ಶ್ರೀವಿದ್ಯಾನಿಧಿಗಳಿಂದ ಆರಂಭವಾದ ಶ್ರೀಉತ್ತರಾದಿಮಠ ಅದಕ್ಕೂ ಹಿಂದಿನ ಪರಂಪರೆಯಂತೂ ತಿಲಾಂಜಲಿಯನ್ನಿತ್ತಂತಾಯಿತು. ಮುಂದಿನ ಪರಂಪರೆಯಲ್ಲಿಯೂ ಅನೇಕ ವಿಪ್ಲವಗಳು. (ಮೂ.ಮಠೇ ಮುನ್ನುಡಿ)
- ಶ್ರೀವಿದ್ಯಾನಿಧಿಗಳಿಂದ ಆರಂಭವಾದ ಸಂಸ್ಥೆಯು(ಉ.ಮ) ಅವರಿಗೆ ಏನೂ ಸಂಬಂಧ ಪಡದ ಶ್ರೀಜಯತೀರ್ಥರು, ಶ್ರೀನರಹರಿತೀರ್ಥರು, ಶ್ರೀಪದ್ಮನಾಭತೀರ್ಥರು ನಮ್ಮ ತಂದೆ, ನಮ್ಮ ತಾತ, ಎಂದು ಪದೇ ಪದೇ ಹೇಳಿಕೊಳ್ಳುವುದು ಶೋಭೆಯಲ್ಲ. (ಮೂ.ಮಠೇ 124)

ಹೀಗೆ ಹೀನಶಬ್ದಗಳಿಂದ ಉಲ್ಲೇಖಿಸುತ್ತ ಉತ್ತರಾದಿಮಠದ ಚಾರಿತ್ರ್ಯದ ಕೊಲೆಯನ್ನು ರಾಯರಮಠದವರೇ ಮಾಡುತ್ತಿರುವುದು ಗಮನಾರ್ಹ.

ಉತ್ತರಾದಿಮಠವು ಪಾಠ, ಪ್ರವಚನ, ಗ್ರಂಥಪ್ರಕಾಶನ, ವಿದ್ವಾಂಸರ ನಿರ್ಮಾಣ, ವಿದ್ವಾಂಸರ ಪೋಷಣೆ, ಊರೂರುಗಳಲ್ಲಿ ಧರ್ಮಪ್ರಚಾರ, ಯುವಕರಲ್ಲಿ ಜಾಗೃತಿ, ಸಾಮಾಜಿಕ ಕಾರ್ಯಗಳು ಮೊದಲಾದ ಅನೇಕ ವಿಧಾಯಕಕಾರ್ಯಗಳನ್ನು ಮಾಡುತ್ತಲೇ ಇದೆ. ಕಾರಣ ಮೂ.ಮಠೇ ಲೇಖಕರು ಉತ್ತರಾದಿಮಠಕ್ಕೆ ವಿಧಾಯಕ ಕಾರ್ಯಗಳನ್ನು ಮಾಡುವ ಉಪದೇಶವನ್ನು ಮಾಡುವ ಅಗತ್ಯ ಇಲ್ಲ. ಮೂ.ಮಠೇ ಲೇಖಕರು ಕಾಲದ ಆವಶ್ಯಕತೆಗೆ ಅನುಗುಣವಾಗಿ ''ಮೂಲರಾಮಸ್ತು ಮನ್ಮಠೇ''ಎಂಬ ಕೃತಿಯನ್ನು ಹೊರತಂದಿದ್ದಾರೆ ಎಂದು ಬರೆದುಕೊಂಡಿದ್ದಾರೆ. ಕಾಲದ ಆವಶ್ಯಕತೆ ಇದ್ದದ್ದಕ್ಕಾಗಿಯೇ ನಾವೂ ಕೂಡ ''ಮೂ.ಮಠೇ'' ಪುಸ್ತಕದ ವಿಮರ್ಶೆಯನ್ನು ಮಾಡುತ್ತಿದ್ದೇವೆ.

**ಮೂಲರಾಮಸ್ತು ಮನ್ಮತೇ ಎಂಬ ಪುಸ್ತಕದ ಉಪೋದ್ಘಾತದಲ್ಲಿ**

ಆಕ್ಷೇಪ: ಶ್ರೀರಾಯರ ಮಠದ ಪರಂಪರೆಯಲ್ಲಿ ಕೇವಲ ಶ್ರೀಮೂಲರಾಮನನ್ನು ಸ್ತುತಿಸಿರುವರಲ್ಲದೆ ಮೂಲಸೀತೆಯರ ಗೋಜಿಗೆ ಹೋಗಿಲ್ಲ. ಇದು ರಾಯರ ಮಠದಲ್ಲಿ ಸತ್ಯವನ್ನು ಮಾತ್ರ ಹೇಳುವ ಸಂಪ್ರದಾಯವಿದೆ ಎಂಬುದನ್ನು ಸಿದ್ಧಪಡಿಸುತ್ತದೆ. (ಪು. xi)

ಉತ್ತರ: ಶ್ರೀಸೀತಾದೇವಿಯ ಪ್ರತಿಮೆ ಶ್ರೀರಾಯರ ಮಠದಲ್ಲಿ ಇಲ್ಲವೇ ಇಲ್ಲವಾದ ಕಾರಣ ಗೋಜಿಗೆ ಹೋಗುವ ಪ್ರಸಕ್ತಿಯೇ ಇಲ್ಲ. ಇದರಲ್ಲಿ ಹೇಳಿಕೊಳ್ಳುವಂತಹದ್ದೇನೂ ಇಲ್ಲ.

**ವಾಚಕರೇ ! ಗಮನಿಸಿ...** ಶ್ರೀರಾಯರಮಠದ ವಿಜಯಕಾವ್ಯಗಳಲ್ಲಿ ಪರಂಪರೆಯನ್ನು ಹೇಳುವಾಗ ಶ್ರೀನರಹರಿತೀರ್ಥರು ಗಜಪತಿಯ ಆಸ್ಥಾನದಿಂದ ಬ್ರಹ್ಮಕರಾರ್ಚಿತ ಪ್ರತಿಮೆಗಳನ್ನು ತಂದ ವಿಷಯವನ್ನು ವರ್ಣಿಸುವಾಗಲೂ ಮೂಲಸೀತೆಯ ಗೋಜಿಗೆ ಹೋಗದಿರುವುದು ನಿಜಕ್ಕೂ ಆಶ್ಚರ್ಯ! ಇದು ಸತ್ಯವನ್ನೇ ಹೇಳುವ ಸಂಪ್ರದಾಯವೇ? ಶ್ರೀರಾಘವೇಂದ್ರವಿಜಯವೂ ಇದಕ್ಕೆ ಹೊರತಾಗಿಲ್ಲ ಎಂಬುದು ಗಮನಾರ್ಹ ! ನಿತ್ಯದಲ್ಲಿ ಪಠಿಸುವ ಶ್ರೀನರಹರಿತೀರ್ಥರ ಚರಮ ಶ್ಲೋಕಕ್ಕೆ ಮಾನ್ಯತೆ ನೀಡಿಲ್ಲ!

## ದಿವಾನರ ಮುನ್ನುಡಿಯಲ್ಲಿರುವ ಬರಹದ ವಿಮರ್ಶೆ

ಆಕ್ಷೇಪ 1. ಯಾಕೋ ಗೊತ್ತಿಲ್ಲ ರಾಮ ಎಂದರೆ ವಿವಾದ....... ಕನ್ನಡ ಚಿತ್ರರಂಗ ಪ್ರಸ್ತುತ ಕಥೆಗಾರರ ಸಮಸ್ಯೆಯನ್ನು ಎದುರಿಸುತ್ತಿದೆ. ಇಂತಹ ಕಥೆಗಾರರಿಗೆ ಅಲ್ಲಿ ತುಂಬಾ ಅವಕಾಶವಿದೆ. (ಪು. xii)

ಉತ್ತರ: ಸಿನಿಮಾರಂಗದ ಸಂಸ್ಕಾರವಿರುವವರಿಗೆ ಈ ಮಾತುಗಳು ಶೋಭಿಸುತ್ತವೆಯೇ ಹೊರತು ಒಂದು ಪ್ರತಿಷ್ಠಿತ ಮಠದ ದಿವಾನರಿಗಲ್ಲ.

ಆಕ್ಷೇಪ 2. ಉತ್ತರಾದಿಮಠ ಆರಂಭವಾದದ್ದು 1444 ರಂದು. (ಪು. xii)

ಉತ್ತರ: ಉತ್ತರಾದಿಮಠ ಆರಂಭವಾದದ್ದು 1444 ಎಂದು ತಮ್ಮ ಮುನ್ನುಡಿಯಲ್ಲಿ ಉಲ್ಲೇಖಿಸಿರುವ ದಿವಾನರಿಗೆ ವ್ಯತಿರಿಕ್ತವಾಗಿ ಮೂ.ಮತೇ ಲೇಖಕರು ಪುಟ 124 ರಲ್ಲಿ ಉತ್ತರಾದಿಮಠ ಪ್ರಾರಂಭವಾದದ್ದು 1436 ಎಂದಿದ್ದಾರೆ. ಪಾಪ! ದಿವಾನರಿಗೂ, ಲೇಖಕರಿಗೂ ಪರಸ್ಪರ ಹೊಂದಾಣಿಕೆ ಇದ್ದಂತೆ ಕಾಣುತ್ತಿಲ್ಲ.

**ವಾಚಕರೇ ಗಮನಿಸಿ !** ಮೂ.ಮತೇ ಪುಸ್ತಕದ ದ್ವಿತೀಯ ಆವೃತ್ತಿ (2010)ಯ ಪುಟ xi ರಲ್ಲಿ ಹಾಗೂ ಹಿಂಬದಿಯ ರಕ್ಷಾಪುಟದಲ್ಲಿ ಯಾವುದೇ ಸ್ಪಷ್ಟೀಕರಣವನ್ನು ನೀಡದೇ ದಿಢೀರಾಗಿ ಉತ್ತರಾದಿಮಠ ಆರಂಭವಾದದ್ದು ಕ್ರಿ.ಶ. 1470 ಎಂಬುದಾಗಿ ಶ್ರೀರಾಯರ ಮಠದ ದಿವಾನರು ಸೇರಿಸಿದ್ದಾರೆ. ಇದರಿಂದ ಇವೆಲ್ಲಾ ನಿರಾಧಾರವಾದ ಊಹೆಗಳೆಂಬುದು ಸ್ಪಷ್ಟವಾಗುತ್ತದೆ. ಕೈಯಲ್ಲಿ ಲೇಖನಿಯ ಜೊತೆ ಹಣವಿದೆ. ಮೇಲೆ ಹೇಳುವವರಿಲ್ಲ ಕೇಳುವವರಿಲ್ಲ. ಎಷ್ಟಾದರೂ ದಿವಾನರಲ್ಲವಾ ?

ಆಕ್ಷೇಪ 3. ದಾಸರ ಕೃತಿಗಳನ್ನು ಇಷ್ಟು ಕೃತಿಚೌರ್ಯ ಮಾಡುವ ಪಂಗಡ ಜಗತ್ತಿನಲ್ಲಿ ಮತ್ತೊಂದು ಇರಲಾರದು. (ಪು. xiii)

ಉತ್ತರ: ದಾಸರ ಕೃತಿಗಳನ್ನು ಕೃತಿಚೌರ್ಯ ಮಾಡಿರುವವರು ಯಾರೆಂಬುದನ್ನು ಹಿಂದಿನ ಪುಟಗಳಲ್ಲಿ ನಿರ್ಣಯಿಸಿಕೊಡಲಾಗಿದೆ. (ನೋಡಿರಿ ಶೀರ್ಷಿಕೆ ''ಹರಿದಾಸ ಸಾಹಿತ್ಯವನ್ನು ಹದಗೆಡಿಸಿದವರು ಯಾರು'') ಕೃತಿಚೌರ್ಯ ಎಂದರೇನೆಂಬುದನ್ನು ದಿವಾನರು ಚೆನ್ನಾಗಿ ಅಧ್ಯಯನ ಮಾಡಿ ತಿಳಿಯುವುದು

ಒಳಿತು. ''ಸಸೀತಾಮೂಲರಾಮಾರ್ಚಾ'' ಗ್ರಂಥದಲ್ಲಿ ಉದಾಹರಿಸಿರುವ ದಾಸರ ಕೃತಿಗಳ ಆಕರಗಳನ್ನು ಮುದ್ರಿಸಿದ್ದಾರೆ. ಅವುಗಳಲ್ಲಿ ಶೇಖಡ 90ರಷ್ಟು ಉತ್ತರಾದಿಮಠೇತರರ ಆಕರಗಳೇ ಆಗಿವೆ. ಪಾಪ! ದಿವಾನರಿಗೆ ಅದೆಲ್ಲ ಗಮನಿಸುವಷ್ಟು ಸಮಯವೆಲ್ಲಿರುತ್ತದೆ.

**ಆಕ್ಷೇಪ 4.** ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀವಿಜಯಧ್ವಜರು, ಶ್ರೀಸುಧೀಂದ್ರರು, ಶ್ರೀವಿಬುಧೇಂದ್ರ-ತೀರ್ಥರುಗಳನ್ನು ಹೀಯಾಳಿಸುವ ಆಧಾರ ಗ್ರಂಥಗಳು ಕೆಟ್ಟ ಕಲ್ಪನೆಯ ದಾರದಿಂದ ಸೇರಿಸಿದ್ದು. (ಪು. xiii)

**ಉತ್ತರ:** ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀವಿಜಯಧ್ವಜರು ಮುಂತಾದವರನ್ನು ಹೀಯಾಳಿಸುವ ಯಾವ ಆಧಾರಗ್ರಂಥಗಳು ''ಸಸೀತಾಮೂಲರಾಮಾರ್ಚಾ'' ದಲ್ಲಿ ಉದಾಹರಿಸಲ್ಪಟ್ಟಿವೆ? ದಿವಾನರೇ ಕೆಟ್ಟ ಕಲ್ಪನೆಯ ದಾರದ ಕಗ್ಗಂಟಿನಲ್ಲಿ ಸಿಕ್ಕಿ ಬಿದ್ದಿದ್ದಾರೆ. ನಿರಂತರ ಶ್ರೀಜಯತೀರ್ಥರು, ಶ್ರೀವಿಜಯಧ್ವಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಾಘವೇಂದ್ರಾದಿ ಮಹನೀಯರ ಗ್ರಂಥಗಳನ್ನು ಅವರ ಅಡಿದಾವರೆಗಳಲ್ಲಿ ನಮಿಸಿ ಪಾಠ-ಪ್ರವಚನಗೈವ ಉತ್ತರಾದಿಮಠದವರ ಮೇಲೆ ಈ ರೀತಿ ಕೆಟ್ಟ ಕಲ್ಪನೆಗಳನ್ನು ಆರೋಪಿಸಲು ಮನಸ್ಸಾದರೂ ಈ ದಿವಾನರಿಗೆ ಹೇಗೆ ಬಂತೋ...?

**ಆಕ್ಷೇಪ 5.** ಶ್ರೀವಿದ್ಯಾನಿಧಿಗಳಿಂದ ಆರಂಭವಾದ ಸಂಸ್ಥೆಯು (ಉತ್ತರಾದಿಮಠ) ಅವರಿಗೆ ಏನೂ ಸಂಬಂಧ ಪಡದ ಶ್ರೀಜಯತೀರ್ಥರು, ಶ್ರೀನರಹರಿತೀರ್ಥರು, ಶ್ರೀಪದ್ಮನಾಭತೀರ್ಥರನ್ನು ನಮ್ಮ ತಂದೆ ತಾತ, ಎಂದು ಪದೇ ಪದೇ ಹೇಳಿಕೊಳ್ಳುವುದು ಶೋಭೆಯಲ್ಲ. (ಪು. xiii)

**ಉತ್ತರ:** ಮುಂದಿನ ಜನ್ಮದಲ್ಲಾದರೂ ಅನುವ್ಯಾಖ್ಯಾನ, ಶ್ರೀಮನ್ನ್ಯಾಯಸುಧಾ, ಚಂದ್ರಿಕಾದಿ ಪವಿತ್ರಗ್ರಂಥಗಳನ್ನು ಶ್ರವಣ ಮಾಡುವ ಯೋಗ ಬಂದರೆ ಆಗ ಈ ದಿವಾನರಿಗೆ ಯಾರು ಯಾರಿಗೆ ಹೇಗೆ ಸಂಬಂಧ ಪಡುತ್ತಾರೆಂಬುದರ ಬಗ್ಗೆ ಅರಿವಾಗಬಹುದು. ಶ್ರೀಪರಿಮಳಾಚಾರ್ಯರಂತಹ ಮಹಾವ್ಯಕ್ತಿಗಳು ವಿರಾಜಮಾನರಾದ ಶ್ರೇಷ್ಠ ಸಂಸ್ಥಾನಕ್ಕೆ ದಿವಾನರಾಗಿ ಈ ರೀತಿ ಬರೆದದ್ದು ಅವರಿಗೇ ಶೋಭೆಯಲ್ಲ ಎಂಬುದನ್ನು ವಾಚಕರೇ ತೀರ್ಮಾನಿಸಲಿದ್ದಾರೆ. ಶ್ರೀಜಗನ್ನಾಥದಾಸರೇ ತಮ್ಮ ''ಆನಮಿಪೆ ಗುರುಸಂತತಿಗೆ ಸತತ'' ಎಂಬ ಪದ್ಯದಲ್ಲಿ ಹಂಸನಾಮಕ ಪರಮಾತ್ಮನಿಂದ ಹಿಡಿದು ಪರಂಪರೆಯಾಗಿ ಶ್ರೀಸತ್ಯಸಂಧರವರೆಗೆ ನಮಿಸಿದ್ದಾರೆ. ಈ ದಿವಾನರು ಶ್ರೀಪದ್ಮನಾಭತೀರ್ಥರವರೆಗೆ (ಶ್ರೀವಿದ್ಯಾನಿಧಿಗಳಿಂದ ಹಿಡಿದು) ಏನು ಸಂಬಂಧವಿಲ್ಲವೆನ್ನುತ್ತಾರೆ. ಆದರೆ, ಶ್ರೀಜಗನ್ನಾಥದಾಸರು ಶ್ರೀಮಧ್ವಾಚಾರ್ಯರನ್ನೂ ದಾಟಿ ಹಂಸನಾಮಕ ಪರಮಾತ್ಮನವರೆಗೆ ಉತ್ತರಾದಿಮಠಕ್ಕೆ ಸಂಬಂಧ ಉಂಟೆಂದು ಸಾರಿದ್ದಾರೆ. ದಿವಾನರ ಮಾತನ್ನು ಸರ್ವಮಾನ್ಯರಾದ ಶ್ರೀಜಗನ್ನಾಥದಾಸರ ಮಾತು ಶತಶಃ ಖಂಡಿಸುತ್ತಿದೆ.

ಅದರಂತೆ ಶ್ರೀವಿಜಯದಾಸರು ತಮ್ಮ ''ಸಂತರನು ಸ್ಮರಿಸಿ ಜನರು'' ಎಂಬ ಕೃತಿಯ ಮೊದಲ ನುಡಿಯಲ್ಲಿ ಗುರುಮಧ್ವರಿಂದ ಹಿಡಿದು ರಾಮಚಂದ್ರತೀರ್ಥರ ವರೆಗೆ ಯಾವ ವಿಶೇಷಣಗಳನ್ನು ಉಪಯೋಗಿಸದೇ ಶ್ರೀವಿದ್ಯಾನಿಧಿಗಳಿಗೆ ''ನಂದ ಭಾಸುರ'' ಎಂಬ ವಿಶೇಷಣ ಕೊಡುತ್ತಾ ಹಿಂದಿನ ಎಲ್ಲರಿಗೂ ಸಂಬಂಧಪಟ್ಟವರೆಂದು ದಾಖಲಿಸಿದ್ದಾರೆ. ಆದ್ದರಿಂದ ಯಾರು ಯಾರಿಗೆ ತಂದೆ, ತಾತ ಆಗುತ್ತಾರೆ ಎಂಬುದನ್ನು ಲೇಖಕರು ಮನಗಾಣಬೇಕು. ಇದರಿಂದ ಶ್ರೀವಿದ್ಯಾನಿಧಿಗಳ ಬಗ್ಗೆ ಶ್ರೀರಾಯರ ಮಠದವರು ಸೃಷ್ಟಿಸಿಕೊಂಡ ವಿಪರೀತಕಲ್ಪನೆಯ ಕಥೆಗಳನ್ನು ಸ್ವಯಂ ಶ್ರೀವಿಜಯದಾಸರೇ ತಳ್ಳಿಹಾಕಿದ್ದಾರೆ. (ಶ್ರೀವಿದ್ಯಾನಿಧಿಗಳ ಬಗ್ಗೆ ಹೆಚ್ಚಿನ ವಿವರಣೆಗಳಿಗಾಗಿ ನೋಡಿರಿ ಶೀರ್ಷಿಕೆ ''ಶ್ರೀವಿದ್ಯಾನಿಧಿತೀರ್ಥರು'').

**ಆಕ್ಷೇಪ 6.** ಚೆಂದವಾಗಿ ಮನಮೋಹಕವಾಗಿ ಚುಂಬಕಶಕ್ತಿ ಇರುವ ನಮ್ಮ ಶ್ರೀಮೂಲರಾಮನೆಲ್ಲಿ? ಅದೆಲ್ಲಿ? ಅದರ ನೆರಳಿಗೂ ಸಾಮ್ಯವಿಲ್ಲ. (ಪು. xiii)

**ಉತ್ತರ:** ವಾಚಕರೇ! ಗಮನಿಸಿ ಉತ್ತರಾದಿಮಠದಲ್ಲಿರುವ ಬ್ರಹ್ಮಕರಾರ್ಚಿತ ದಿವ್ಯ ಪ್ರತಿಮೆಯ ಬಗ್ಗೆ ಒಂದು ಸಂಸ್ಥಾನದ ದಿವಾನರೆನಿಸಿಕೊಂಡ ವ್ಯಕ್ತಿ ಬಳಸುವ ಭಾಷೆ ಇದು! ಒಂದು ವೇಳೆ ಅವರ ಪಕ್ಷದಂತೆ ಉತ್ತರಾದಿಮಠದಲ್ಲಿರುವ ಪ್ರತಿಮೆ ಮೂಲರಾಮನಲ್ಲವೆಂದಾದರೂ ಶ್ರೀರಘುನಾಥರು, ಶ್ರೀರಘೂತ್ತಮತೀರ್ಥರು, ಶ್ರೀವಿದ್ಯಾಧೀಶತೀರ್ಥರು, ಶ್ರೀಸತ್ಯವ್ರತತೀರ್ಥರು, ಶ್ರೀಸತ್ಯನಿಧಿಗಳು, ಶ್ರೀಸತ್ಯನಾಥರು, ಶ್ರೀಸತ್ಯಪ್ರಿಯರು, ಶ್ರೀಸತ್ಯಪೂರ್ಣರು, ಶ್ರೀಸತ್ಯವಿಜಯರು, ಶ್ರೀಸತ್ಯಬೋಧರು, ಶ್ರೀಸತ್ಯಸಂಧರು, ಶ್ರೀಸತ್ಯಧರ್ಮರು, ಶ್ರೀಸತ್ಯಜ್ಞಾನರು, ಶ್ರೀಸತ್ಯಧ್ಯಾನರು, ಶ್ರೀಸತ್ಯಪ್ರಮೋದರೇ ಮೊದಲಾದ ಶಕಪುರುಷರು, ಯಾರು ಅನೇಕಾನೇಕಗ್ರಂಥಗಳ ನಿರ್ಮಾಣವನ್ನು ಮಾಡಿ ದ್ವೈತವಾಙ್ಮಯವನ್ನು ಶ್ರೀಮಂತಗೊಳಿಸಿದರೋ, ನೂರಾರು ವಿದ್ವಾಂಸರ, ಟಿಪ್ಪಣಿಕಾರರುಗಳ ಪರಂಪರೆಯನ್ನೇ ನಿರ್ಮಾಣ ಮಾಡಿದರೋ, ಯಾರು ಸಮಕಾಲೀನ ಗ್ರಂಥಕರ್ತೃಗಳಿಂದ, ಹರಿದಾಸರುಗಳಿಂದ ಹಾಡಿ ಹೊಗಳಿಸಿಕೊಂಡಿದ್ದಾರೋ, ಯಾರ ಬಗ್ಗೆ ಅನೇಕಾನೇಕ ವಿಜಯಕಾವ್ಯಗಳು ಬರೆಯಲ್ಪಟ್ಟಿವೆಯೋ, ಯಾರ ಸ್ಮರಣೆ ಮಾತ್ರದಿಂದ ಇಂದಿಗೂ ಭಕ್ತರು ತಮ್ಮ ಕಷ್ಟಗಳನ್ನು ಕಳೆದುಕೊಂಡು ಅಭೀಷ್ಟವನ್ನು ಪಡೆವರೋ ಅಂಥ ಮಹನೀಯರು ಪೂಜಿಸಿದ ಪ್ರತಿಮೆಯನ್ನು ಈ ರೀತಿ ಹೀಯಾಳಿಸುವುದು ದಿವಾನಗಿರಿಗೆ ತಕ್ಕದ್ದಲ್ಲ. ಇದು ವೈಷ್ಣವರು ವರ್ತಿಸುವ ರೀತಿಯಲ್ಲ.

ಇಂದಿಗೂ ನಿರಂತರವಾಗಿ ಉತ್ತರಾದಿಮಠದಲ್ಲಿ ಮೂಲರಾಮನ ದರ್ಶನಕ್ಕೆ, ಆತನ ತೀರ್ಥಪ್ರಸಾದಕ್ಕೆ ಆಸೇತುಹಿಮಾಚಲದವರೆಗೆ ಸಹಸ್ರಾರು ಭಕ್ತಜನರು, ಪಂಡಿತರು, ವಿದ್ವಾಂಸರು, ಸಮಾಜದ ಅತ್ಯುನ್ನತ ಅಧಿಕಾರಿಗಳೂ ಕೂಡ ಹಾತೊರೆಯುತ್ತಾರೆ. ಆತನ ಕ್ಷಣಮಾತ್ರದರ್ಶನಕ್ಕೆ ವರುಷಾನುಗಟ್ಟಲೇ ಕಾಯುತ್ತಾರೆ. ಆತನ ಒಂದು ತುತ್ತು ಪ್ರಸಾದವನ್ನು ತಮ್ಮ ಸ್ಥಾನ-ಮಾನಗಳನ್ನು ಮರೆತು ಎಲ್ಲಿಯೋ ಮೂಲೆಯಲ್ಲೋ, ಬೀದಿಯಲ್ಲೋ ಕುಳಿತು ಭಕ್ತಿಯಿಂದ ಸ್ವೀಕರಿಸುತ್ತಾರೆ. ಒಂದು ಸಾಮಾನ್ಯ ಹಳ್ಳಿ ಇರಲಿ, ಪಟ್ಟಣವಿರಲಿ, ಮುಂಬಯಿ, ಬೆಂಗಳೂರು, ಚೈನ್ನೈ, ಹೈದರಾಬಾದ, ದಿಲ್ಲಿಯಂಥ ಮಹಾನಗರಗಳಿರಲಿ ಸಹಸ್ರಾರು ಜನರು ಆತನ ದರ್ಶನಕ್ಕೆ ಕಾತರರಾಗಿರುತ್ತಾರೆ. ಆತನ ದರ್ಶನಕ್ಕೆ ವರುಷದ 365 ದಿನಗಳಲ್ಲೂ ನೂಕು-ನುಗ್ಗಲು ಸಾಮಾನ್ಯ. ಇದು ಇಂದು ನಿನ್ನೆಯದಲ್ಲ. ಶತಶತಮಾನಗಳಿಂದಲೂ ಈ ತರಹದ ದೃಶ್ಯಗಳನ್ನು ಸಮಕಾಲೀನ ಕವಿಗಳು ತಮ್ಮ ವಿಜಯಕಾವ್ಯಗಳಲ್ಲಿ, ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿದ್ದಾರೆ.

ಇಂಥ ಒಂದು ಭವ್ಯ ಪರಂಪರೆಯ ದಿವ್ಯ ಪ್ರತಿಮೆಗಳನ್ನು ಈ ತರಹದ ಅಸಭ್ಯ ನುಡಿಗಳಿಂದ ತೆಗಳುವುವವರನ್ನು ಏನೆನ್ನಬೇಕೋ? ವಾಚಕರೇ ತೀರ್ಮಾನಿಸಲಿ.

**ಆಕ್ಷೇಪ 7.** ಶ್ರೀರಾಯರ ಪ್ರಾತಃಸಂಕಲ್ಪಗದ್ಯದಲ್ಲಿ ''ಅಸ್ಮದಾದಿಗುರೂಣಾಂ ಶ್ರೀಮದಾನಂದತೀರ್ಥ-ಶ್ರೀಮಚ್ಚರಣಾನಾಂ'' ಎಂಬ ಒಂದೇ ಪದ ಸಾಕು ಯಾರ ಪೂರ್ವಿಕರು ಯಾರು ಎಂಬುದಕ್ಕೆ. (ಪು. xiii)

**ಉತ್ತರ:** ಯಾವ ಪೀಠಗಳಿಗೂ ಶ್ರೀಮದಾನಂದತೀರ್ಥರು ಪೂರ್ವಿಕರಲ್ಲ ಎಂದು ಯಾರು ಯಾರಿಗೆ ಯಾವಾಗ ಹೇಳಿದರು? ನಿರಂತರವಾಗಿ ಶ್ರೀರಾಯರ ಪರಿಮಳಾದಿ ಗ್ರಂಥಗಳ ಪಾಠ-ಪ್ರವಚನ ನಡೆಯುತ್ತಿರುವ ಶ್ರೀಉತ್ತರಾದಿಮಠದಲ್ಲಿ ಈ ರೀತಿ ಹೇಳಲು ಸಾಧ್ಯವಿಲ್ಲ. ''ಅಸ್ಮದಾದಿಗುರೂಣಾಂ ಶ್ರೀಮದಾನಂದತೀರ್ಥಶ್ರೀಮಚ್ಚರಣಾನಾಂ'' ಎಂಬುದು ಎಲ್ಲರಿಗೂ ಸಂಬಂಧಪಟ್ಟ ವಿಷಯ.

ಜಗದ್ಗುರುಗಳಾದ ಶ್ರೀಮದಾನಂದತೀರ್ಥರನ್ನು ಸ್ಮರಿಸದೇ ಇರುವ ವೈಷ್ಣವರೇ ಇಲ್ಲ. ಶ್ರೀಮದಾಚಾರ್ಯರ ಸಿದ್ಧಾಂತವನ್ನು ಒಪ್ಪಿದ ಸಕಲಮಾಧ್ವರಿಗೂ ಅವರ ಸಂಬಂಧ ಉಂಟೇ ಉಂಟು. ಅದನ್ನು ಅಲ್ಲಗಳೆವ ಸಾಹಸವನ್ನು ಯಾರೂ ಮಾಡಲಾರರು.

**ಸ್ಮೃತ್ವಾ ಗುರುಂ ಪೂರ್ವಗುರುಂ ಆದಿಮೂಲಗುರೂನ್ ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥**

ಎಂಬುದಾಗಿ ತಂತ್ರಸಾರದಲ್ಲಿ ಶ್ರೀಮದಾಚಾರ್ಯರು ಆದೇಶಿಸಿದಂತೆ ಜಪ, ಅಧ್ಯಯನಗಳ ಪ್ರಾರಂಭದಲ್ಲಿ ಎಲ್ಲ ಮಾಧ್ವರು ಪ್ರತಿನಿತ್ಯ ಗುರುನಮಸ್ಕಾರ ಮಾಡುವಾಗ ಗುರುಂ = ಗುರುಗಳನ್ನು ''ಶ್ರೀಗುರುಭ್ಯೋ ನಮಃ'', ಪೂರ್ವಗುರುಂ= ಪರಮಗುರುಗಳನ್ನು ''ಶ್ರೀಪರಮಗುರುಭ್ಯೋ ನಮಃ'', ಆದಿಗುರುಂ = ಆದಿಗುರುಗಳನ್ನು ''ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ'' ಮೂಲಗುರುಂ = ಮೂಲಗುರುಗಳನ್ನು ''ಶ್ರೀವೇದವ್ಯಾಸಾಯ ನಮಃ'' ಎಂಬುದಾಗಿ ಸ್ಮರಣೆ ಮಾಡಲು ಆದೇಶ ಮಾಡಿದ್ದಾರೆ. ಇದನ್ನು ಸಂಸ್ಕಾರ ಇರುವ ಪ್ರತಿಯೊಬ್ಬ ಮಾಧ್ವನೂ ತಪ್ಪದೇ ಮಾಡುತ್ತಾನೆ. ಆದ್ದರಿಂದ ಶ್ರೀಮದಾಚಾರ್ಯರು ಪ್ರತಿಯೊಬ್ಬ ಮಾಧ್ವನಿಗೂ ಆದಿಗುರುಗಳು. ಈ ಹಿನ್ನಲೆಯಲ್ಲಿಯೇ ಶ್ರೀರಾಘವೇಂದ್ರಸ್ವಾಮಿಗಳು ಶ್ರೀಮದಾಚಾರ್ಯರಿಗೆ ಈ ಗದ್ಯದಲ್ಲಿ ''ಅಸ್ಮದಾದಿಗುರೂಣಾಂ....'' ಎಂಬ ವಿಶೇಷಣವನ್ನು ನೀಡಿದ್ದಾರೆ ಹೊರತು, ಶ್ರೀಮದಾಚಾರ್ಯರು ನಮಗಷ್ಟೇ ಆದಿಗುರುಗಳು ಎಂಬ ಅರ್ಥದಲ್ಲಿ ಅಲ್ಲ. ಶ್ರೀರಾಘವೇಂದ್ರಸ್ವಾಮಿಗಳ ಈ ಮಾತಿಗೆ ಇಷ್ಟು ಸ್ಪಷ್ಟವಾದ ಅರ್ಥವನ್ನು ಶಾಸ್ತ್ರದ ಸಂಸ್ಕಾರ ಇರುವ ಯಾರಾದರೂ ಹೇಳಬಲ್ಲರು.

ಆದ ಕಾರಣ ಪ್ರಸ್ತುತ ವಿಷಯದಲ್ಲಿ ಈ ವಾಕ್ಯ ಸಾಧಕವಾಗುವುದಿಲ್ಲ. ಈ ದಿವಾನರ ತಲೆಯಲ್ಲಿ ಯಾರೋ ಏನೋ ತುಂಬಿರಬೇಕು. ಶ್ರೀರಾಘವೇಂದ್ರಸ್ವಾಮಿಗಳ ಹೆಸರನ್ನು ಮುಂದೆ ಮಾಡಿ ಜನಕ್ಕೆ ಮೋಸಮಾಡುತ್ತಿರುವ ದಿವಾನರು ''ಶಾಪಾನುಗ್ರಹಶಕ್ತೋಽನ್ಯೋ ರಾಘವೇಂದ್ರಾನ್ನ ವಿದ್ಯತೇ'' ಎಂಬುದನ್ನು ಮರೆತಿರುವಂತಿದೆ.

ಅಲ್ಲದೇ ಶ್ರೀರಾಘವೇಂದ್ರಸ್ವಾಮಿಗಳ ಈ ವಾಕ್ಯದಿಂದ ಮೂ.ಮತೇ ಲೇಖಕರು ಸಾಧಿಸಲು ಹೊರಟಂತೆ ಶ್ರೀಮದಾಚಾರ್ಯರು ಶ್ರೀರಾಘವೇಂದ್ರಸ್ವಾಮಿಗಳಿಗೆ ಹಾಗೂ ಆ ಪರಂಪರೆಯಲ್ಲಿ ಬಂದವರಿಗೆ ಮಾತ್ರ ಆದಿಗುರುಗಳು ಎಂದು ಹೇಳುವುದಾದರೆ ಶ್ರೀವಿಜಯಧ್ವಜರು, ಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು ಮೊದಲಾದ ಮಹಾನುಭಾವರಿಗೆ ಹಾಗೂ ಇನ್ನುಳಿದ ಯಾವ ಮಠದ ಪರಂಪರೆಯವರಿಗೂ ಶ್ರೀಮದಾಚಾರ್ಯರು ಆದಿಗುರುಗಳಲ್ಲ ಎಂದು ಸಾಧಿಸಿದಂತೆ ಆಗುತ್ತದೆ.

ಈ ದಿವಾನರು ಆಕ್ಷೇಪಿಸಿದ ನ್ಯಾಯದಂತೆ ಆಕ್ಷೇಪಿಸುವುದಾದರೆ ಇದೇ ಪ್ರಾತಃಸಂಕಲ್ಪಗದ್ಯದ ''ಸೀತಾಪತೇ ಶ್ರೀರಾಮಚಂದ್ರ'' ಎಂಬ ಒಂದೇ ಒಂದು ವಾಕ್ಯ ಸಾಕು ಶ್ರೀರಾಯರಮಠದಲ್ಲಿ ಶ್ರೀಮೂಲರಾಮ ಇಲ್ಲ ಎಂದು ಸಾಧಿಸಲು. ಮೂಲರಾಮ ರಾಯರ ಮಠದಲ್ಲಿಯೇ ಇದ್ದಿದ್ದರೆ ಶ್ರೀರಾಘವೇಂದ್ರ ಸ್ವಾಮಿಗಳು ''ಸೀತಾಪತೇ ಶ್ರೀಮೂಲರಾಮಚಂದ್ರ'' ಎಂದು ಅನ್ನುತ್ತಿದ್ದರು. ಅಲ್ಲವೇ??!!

(**ವಾಚಕರೇ!** ಮುಂದಿನಮುದ್ರಣಗಳಲ್ಲಿ ಪ್ರಾತಃಸಂಕಲ್ಪಗದ್ಯ ಮುಂತಾದವುಗಳಲ್ಲಿ ''ಶ್ರೀಮೂಲರಾಮಚಂದ್ರ'' ಎಂದು ಸೇರ್ಪಡೆಯಾದರೂ ಆಶ್ಚರ್ಯವಿಲ್ಲ. ಎಚ್ಚರವಿರಲಿ.)

**ಆಕ್ಷೇಪ 8.** ಗೆಜೆಟ್‌ಗೆ ಗೆಜೆಟ್‌ನ ಆಧಾರ. (ಪು. xiv)

**ಉತ್ತರ:** ಗೆಜೆಟ್‌ಗೆ ಗೆಜೆಟ್‌ನ ಆಧಾರ ಎಂದು ಬೀಗಿರುವ ದಿವಾನರು ''ಮೂ.ಮತೇ''ಎಂಬ ಪುಸ್ತಕದಲ್ಲಿ ಛಾಪಿಸಿರುವ ಗೆಜೆಟ್‌ನಲ್ಲಿ ಅವರಿಗೆ ಪೋಷಕವಾಗುವ ಅಂಶಗಳು ಇಲ್ಲ ಎಂಬುದನ್ನೇ ಅರಿತಿಲ್ಲ. ಈ ಗೆಜೆಟ್ ಉತ್ತರಾದಿಮಠದವರಿಗೇ ಪೋಷಕವಾಗಿದೆ. (ನೋಡಿರಿ ಶೀರ್ಷಿಕೆ ''ಸರ್ಕಾರೀ ಗೆಜೆಟ್‌ನ ವಿಮರ್ಶೆ'')

**ಆಕ್ಷೇಪ 9.** ವಿಜಯದಾಸರ ಕಟ್ಟೆಯಲ್ಲಿಲ್ಲದ ಎಲ್ಲಿಂದಲೋ ಬಂದ ಕಾಗದಗಳು. ವಿಜಯರಾಯರ ಕಟ್ಟೆಯಲ್ಲಿ ಪ್ರಸ್ತುತವೂ ಇರುವ ಪ್ರಾಚೀನ ಹಸ್ತಪ್ರತಿಗಳು ಸರಿ ಉತ್ತರವನ್ನೇ ನೀಡಿವೆ. (ಪು. xiv)

**ಉತ್ತರ:** ಇದು ಅತ್ಯಂತ ಬೇಜವಾಬ್ದಾರಿಯ ಹಾರಿಕೆಯ ಹೇಳಿಕೆ. ವಿಜಯದಾಸರ ಕಟ್ಟೆಯಲ್ಲಿಲ್ಲದ ಕಾಗದಗಳೆಂದು ದಿವಾನರು ಹೇಳಿದ ಮಾತ್ರಕ್ಕೆ ಸತ್ಯವಾಗುವುದಿಲ್ಲ. ಶ್ರೀವಿಜಯದಾಸರ ಕಟ್ಟೆಯಲ್ಲಿದ್ದ ಕಾಗದಗಳು ಶ್ರೀವಿಜಯದಾಸರ ಕೃಪೆಯಿಂದ ದಿ.ಹರಿದಾಸರತ್ನಂ ಶ್ರೀಗೋಪಾಲದಾಸರ ಕೈಸೇರಿ ಅದ್ಯಾಪಿ ಬೆಂಗಳೂರಿನ ಆನಂದನಗರವಾಸಿಯಾದ ದಾಸಶಾಸ್ತ್ರನಿಧಿ ಶ್ರೀ ಎಂ.ಟಿ. ಪ್ರಹ್ಲಾದರಾಯರ ಮನೆಯಲ್ಲಿ ಪೂಜೆಗೊಳ್ಳುತ್ತಿವೆ. ಅವುಗಳನ್ನು ನೋಡಿಯೇ ಶ್ರೀಪಾದರಾಜರ ಕೃತಿಯನ್ನು ಮುದ್ರಿಸಲಾಗಿದೆ. ವಿತಂಡದಿಂದ ಅಲ್ಲಗಳೆಯಲು ಒಂದು ಮಿತಿಯಿದೆ. ಈ ದಿವಾನರು ಎಲ್ಲ ರೀತಿಯಲ್ಲಿ ಮಿತಿಮೀರಿದವರು.

**ಆಕ್ಷೇಪ 10.** ಸಂದೇಹ ಉಳಿದಲ್ಲಿ ನಮ್ಮಲ್ಲಿರುವ ಎಲ್ಲ ಆಧಾರಗಳನ್ನು ಒದಗಿಸಲು ಸಿದ್ಧರಿದ್ದೇವೆ. (ಪು. xv)

**ಉತ್ತರ:** ಇವರಲ್ಲಿರುವ ಆಧಾರಗಳು ಎಂತಹವು ಎಂಬುದನ್ನು ಹಿಂದಿನ ಪುಟಗಳಲ್ಲಿ ತೋರಿಸಿಕೊಡಲಾಗಿದೆ. ಯಾವುದೇ ಆಧಾರಗಳನ್ನಾಗಲೀ ಅನೇಕ ದೃಷ್ಟಿಕೋನದಿಂದ ಪರಿಶೀಲಿಸಬೇಕು. ಆಗಲೇ ಸತ್ಯದ ಹುಡುಕಾಟದಲ್ಲಿ ಸಮರ್ಥ ಸಂಶೋಧನೆ ಎಂದೆನಿಸಿಕೊಳ್ಳಲು ಸಾಧ್ಯ. ಆದರೆ ಶ್ರೀರಾಯರ ಮಠದವರು ಪ್ರತಿಬಾರಿಯೂ ಪುಸ್ತಕ ಬರೆಯುವಾಗ ತಪ್ಪುನಿರ್ಣಯಗಳನ್ನು ಹೊಂದಿ ಸಜ್ಜನರ ತಲೆಕೆಡಿಸಿದ್ದಾರೆ. ಕೆಲವೊಮ್ಮೆ ಪ್ರಸಿದ್ಧರಾದ ಡಾ||ಬಿ.ಎನ್.ಕೆ. ಅವರಂಥವರೂ ಸಹ ಏಕದೃಷ್ಟಿಯಿಂದ ಪ್ರವೃತ್ತರಾಗಿ ತಮ್ಮ ಮೂಗಿನ ನೇರಕ್ಕೆ ತಪ್ಪು ನಿರ್ಣಯಗಳನ್ನು ಹೊಂದಿ ಸಜ್ಜನರ ತಲೆಕೆಡಿಸಿದ್ದುಂಟು.

ಮೂ.ಮತೇ ಲೇಖಕರು ಹೇಗೆ ಪೂರ್ವಾಗ್ರಹಪೀಡಿತರಾಗಿ ಆಧಾರಗಳನ್ನು ನೋಡುವ ದೃಷ್ಟಿ ಇಟ್ಟು ಕೊಂಡಿದ್ದಾರೆ ಎಂಬುದರ ಬಗ್ಗೆ ಸದ್ಯಕ್ಕೆ ಒಂದೆರಡನ್ನು ವಾಚಕರ ಮುಂದೆ ಇಡುತ್ತಿದ್ದೇವೆ.-

ಅ) ''ಮೂ.ಮತೇ'' ಪುಸ್ತಕದ ಪುಟ 133ರಲ್ಲಿ ಶ್ರೀಸುಗುಣೇಂದ್ರತೀರ್ಥರ ಕಾಲದಲ್ಲಿ ಮುದ್ರಿಸಿದ ಚರಮಶ್ಲೋಕಗಳ ಪ್ರಾಚೀನತಮ ಕಲ್ಲಚ್ಚಿನ ಮುದ್ರಣದ ಎರಡು ಪುಟಗಳ ನಕಲನ್ನು ಛಾಪಿಸಿದ್ದಾರೆ. ಅದರಲ್ಲಿ ಒಂದು ಪುಟವು ಯತಿಗಳ ಮಾಹಿತಿಯನ್ನು, ಪರಂಪರೆಯನ್ನು ತಿಳಿಸುತ್ತದೆ. ಮತ್ತೊಂದು ಚರಮಶ್ಲೋಕಗಳನ್ನೊಳಗೊಂಡಿದೆ. ಯತಿಗಳ ಮಾಹಿತಿಯನ್ನು ಕೊಡುವ ಆಧಾರವನ್ನು ಸಂಶೋಧನೆಯ ದೃಷ್ಟಿಯಿಂದ ಪರಿಶೀಲಿಸಿದಾಗ ಶ್ರೀಮಜ್ಜಯತೀರ್ಥರ ಮೂಲವೃಂದಾವನವಿರುವ ಸ್ಥಳ ''ಮಳಖೇಡ ಕಾಗಿನಿ ತೀರ'' ಎಂದು ಸ್ಪಷ್ಟವಿರುವುದನ್ನು ಕಾಣಬಹುದಾಗಿದೆ.

**ವಾಚಕರೇ !...** ನೀವೇ ಹೇಳಿ ತಾವೇ ತಮ್ಮ ಮಠದ ಅಧಿಕೃತ ಆಧಾರಗಳೆಂದು ಛಾಪಿಸಿರುವ ದಾಖಲೆಗಳಲ್ಲಿ ಇಷ್ಟು ಸ್ಪಷ್ಟವಾಗಿ ಶ್ರೀಮಜ್ಜಯತೀರ್ಥರ ಮೂಲವೃಂದಾವನ ಮಳಖೇಡ ಕಾಗಿನೀತೀರ ಎಂದಿರುವಾಗ ನವವೃಂದಾವನದಲ್ಲಿರುವ ಶ್ರೀರಘುವರ್ಯರ ವೃಂದಾವನವೇ ಶ್ರೀಮಜ್ಜಯತೀರ್ಥರದ್ದೆಂಬ ಸುಳ್ಳು ಸುದ್ದಿಯನ್ನು

ಹಬ್ಬಿಸಿ ಸಜ್ಜನರ ತಲೆಕೆಡಿಸುತ್ತಿರುವವರು ಯಾರು? ತಾವೇ ತಮ್ಮ ಪ್ರಾಚೀನರಿಗೆ ಧೈರ್ಯದಿಂದ ದ್ರೋಹ ಮಾಡುತ್ತಿರುವ ಇವರು ಉತ್ತರಾದಿಮಠದವರು ಮೋಸಗಾರರು, ಕೃತ್ರಿಮ ಆಧಾರಗಳನ್ನು ಸೃಷ್ಟಿಸುವವರೆಂದು ಆರೋಪಿಸುವುದು ಸರಿಯೇ?

ಆ) ಪುಟ 148ರಲ್ಲಿ ಮುಂಬೈ ಗೆಜೆಟ್ ಛಾಪಿಸಿದ್ದಾರೆ. ಅವರೇ ಆಧಾರವೆಂದು ಒಪ್ಪಿಕೊಂಡಿರುವ ಈ ಗೆಜೆಟ್ ನಲ್ಲಿ Sri Jayateertha ruled for twenty-one years. His vrindavana (tomb) is at Malkhed... ಎಂದು ಸ್ಪಷ್ಟವಾಗಿದೆ.

ಅವರೇ ಛಾಪಿಸಿರುವ ಅವರ ಮಠದ ಆಧಾರಗಳ ಮೇಲೆ ಶ್ರೀಜಯತೀರ್ಥರ ಮೂಲ ವೃಂದಾವನ ಮಳಖೇಡದಲ್ಲಿದೆ ಎಂದು ಮುಂದಿನ ವರುಷದ ಪಂಚಾಂಗಗಳಲ್ಲಿ ಛಾಪಿಸಿ ತಪ್ಪು ಒಪ್ಪಿಕೊಳ್ಳಲು ಸಿದ್ಧರಿದ್ದೇವೆಂದು ಒಪ್ಪುವುದಾದರೆ ಅವರು ಒದಗಿಸುವ ಎಲ್ಲ ಆಧಾರಗಳನ್ನು ಪರಿಶೀಲಿಸಲು ನಾವು ಸಿದ್ಧರಿದ್ದೇವೆ. ಅವರ ಆಧಾರಗಳ ಮೇಲೆ ಅವರಿಗೇ ವಿಶ್ವಾಸವಿಲ್ಲದಿರುವಾಗ ಇನ್ನೊಬ್ಬರಿಗೆ ವಿಶ್ವಾಸಮೂಡಿಸುವುದೆಂತು? ಜನಗಳನ್ನು ಮರುಳು ಮಾಡುವವರು ಎಂದೂ ಪ್ರಾಮಾಣಿಕರಾಗಿರುವುದಿಲ್ಲ ಎಂಬುದು ಇದರಿಂದ ಸ್ಫುಟವಾಗುತ್ತದೆ.

**ವಾಚಕರೇ!...** ಶ್ರೀರಾಯರ ಮಠದ ಕೆಲ ದುರಾಗ್ರಹಿಗಳು ಹೇಗೆ ತಮ್ಮ ಪೂರ್ವಿಕರಿಗೆ ಹಾಗೂ ಸಜ್ಜನರಿಗೆ ಮೋಸಮಾಡುತ್ತಾ ನಡೆದಿದ್ದಾರೆ ಎಂಬುದಕ್ಕೆ ಇದು ಪ್ರತ್ಯಕ್ಷಸಾಕ್ಷಿ. ಇದರಂತೆ ಇನ್ನನೇಕ ಪರಂಪರಾಸಿದ್ಧ ಪ್ರಾಮಾಣಿಕ ವಿಷಯಗಳನ್ನೂ ಅಲ್ಲಗಳೆಯುವ ಸಾಹಸ ಇಂದಿಗೂ ಮಾಡುತ್ತಲೇ ಇದ್ದಾರೆ.

**ಆಕ್ಷೇಪ 11.** ಗಾದೆ ಇದೆ ''ಸುಮ್ಮನಿರಲಾರದವರು ಏನೋ ಬಿಟ್ಟುಕೊಂಡರಂತೆ... ''ಕೆಣಕಬೇಡ ಕೆಣಕಿ ತಿಣಕಬೇಡ'' ಲೇಖಕರ ಶೈಲಿ ಚೆನ್ನಾಗಿದೆ... (ಪು. xv)

**ಉತ್ತರ:** ಒಂದು ಸಂಸ್ಥಾನದ ದಿವಾನರಾಗಿ ಇಂತಹ ಕೆಟ್ಟ ಗಾದೆಗಳನ್ನು ಬರೆದರೆ ಆ ಸಂಸ್ಥಾನಕ್ಕೆ ಅಗೌರವ ಎಂಬುದನ್ನು ಮಾತ್ರ ತಿಳಿಸಬಯಸುತ್ತೇವೆ. ಕೆಣಕಿ ತಿಣುಕಾಡುತ್ತಿರುವವರು ಯಾರೆಂಬುದು ಮೇಲಿನ ವಿವರಣೆಗಳಿಂದ ಹಾಗೂ ಹಿಂದಿನ ಪುಟಗಳಿಂದ ಸ್ಪಷ್ಟವಾಗಿರಬಹುದು.

''ಸಸೀತಾಮೂಲರಾಮಾರ್ಚಾ'' ಪುಸ್ತಕದ ಶೈಲಿ ಚೆನ್ನಾಗಿದೆ ಎಂದು ಒಪ್ಪಿರುವ ದಿವಾನರಿಗೆ ''ಮೂಲರಾಮಸ್ತು ಮನ್ಮತೇ''ಎಂಬ ಪುಸ್ತಕದ ಶೈಲಿ ತೀರಾ ಕೆಳಮಟ್ಟದ್ದಾಗಿದೆ ಎಂದು ತಿಳಿಸುವ ಅಗತ್ಯವೂ ಇಲ್ಲ.

ಆದರೂ, ಇವರ ಶೈಲಿ ಹೇಗಿದೆ ಎಂಬುದಕ್ಕೆ ಕೆಲವನ್ನು ವಾಚಕರ ಮುಂದೆ ಇಡುತ್ತಿದ್ದೇವೆ.

**ಸಸೀತಾಮೂಲರಾಮಾರ್ಚಾದಲ್ಲಿ......**

ಅ) ಶ್ರೀಸತ್ಯಸಂಧರ ಅಷ್ಟಾವಿಂಶತಿ ಮೂರ್ತಿಗಳ ಸ್ತೋತ್ರ ಮುಂದಿಟ್ಟದ್ದಕ್ಕೆ ''ಯಾರೋ ಕುಹಕಿಗಳು ಗುರುದ್ರೋಹಿಗಳು ಸೇರಿಸಿದ್ದಾರೆ'' ಎಂದಿದ್ದಾರೆ.

ಆ) ಶ್ರೀಸತ್ಯವ್ರತರು ಶ್ರೀಮನ್ನ್ಯಾಯಸುಧಾ ಟಿಪ್ಪಣಿಯ ಮಂಗಳಾಚರಣೆಯಲ್ಲಿ ಶ್ರೀಮೂಲರಾಮನನ್ನು ದಾಖಲಿಸಿದ್ದಾರೆ ಎಂಬುದನ್ನು ತಿಳಿಸಿದ್ದಕ್ಕೆ, ಶ್ರೀಮದಾಚಾರ್ಯರ ಸಂಪ್ರದಾಯಕ್ಕೆ ವಿರುದ್ಧ ಎಂದಿದ್ದಾರೆ.

ಇ) ಶ್ರೀಜಗನ್ನಾಥದಾಸರ ''ಆನಮಿಪೆ ಗುರುಸಂತತಿಗೆ'' ಎಂಬ ಕೃತಿ ಮುಂದಿಟ್ಟದ್ದಕ್ಕೆ, ಅದು ಜಗನ್ನಾಥದಾಸರ ವಿಶಾಲ ದೃಷ್ಟಿಕೋನ ಎಂದಿದ್ದಾರೆ.

ಇದು ವಿಮರ್ಶೆಯ ಶೈಲಿಯೇ? ಈ ರೀತಿಯ ನೀರಸ ಹಾರಿಕೆಯ ಬೇಜವಾಬ್ದಾರಿಯ ಆಕ್ಷೇಪಗಳನ್ನು ಯಾರು ಬೇಕಾದರೂ ಮಾಡಬಹುದು. ಒಟ್ಟಿನಲ್ಲಿ ಸ.ಸೀ.ಮೂಲರಾಮಾರ್ಚಾದಲ್ಲಿ ಉದಾಹರಿಸಿರುವ ಯಾವ ಆಧಾರಗಳನ್ನೂ ಸಮರ್ಥರೀತಿಯಲ್ಲಿ ನಿರಾಕರಿಸಲು ದಿವಾನರಿಗಾಗಲಿ, ಮೂ.ಮಠೇ ಲೇಖಕರಿಗಾಗಲಿ ಆಗಿಲ್ಲವೆಂಬುದು ಸತ್ಯವಾಗಿದೆ.

## ಮೂ.ಮಠೇ ಪುಸ್ತಕದ 2ನೇ ಅಧ್ಯಾಯದಲ್ಲಿ ಮೂಡಿಬಂದ ಸಂದೇಹಗಳಿಗೆ ಉತ್ತರ

**ಸಂದೇಹ 1.** ದೇಶ, ಕಾಲ, ವ್ಯಕ್ತಿ, ಕೇಂದ್ರಗಳಿಗೆ ಬದ್ಧವಾಗದ ಒಂದು ಧಾರ್ಮಿಕ ಸಂಸ್ಥೆ ಅಸ್ತಿತ್ವದಲ್ಲಿರಲು ಸಾಧ್ಯವೇ? (ಪುಟ 45)

**ಉತ್ತರ:** ದೇಶ, ಕಾಲ, ವ್ಯಕ್ತಿ, ಕೇಂದ್ರಗಳಿಗೆ ಒಂದು ಧಾರ್ಮಿಕ ಸಂಸ್ಥೆ ಬದ್ಧವಾಗಿರಲೇಬೇಕೆಂದು ಇಲ್ಲದಿದ್ದಲ್ಲಿ ಅಸ್ತಿತ್ವದಲ್ಲಿರಲು ಸಾಧ್ಯವೇ ಇಲ್ಲವೆಂಬ ಊಹೆಯನ್ನು ತಲೆಯಲ್ಲಿಟ್ಟುಕೊಂಡು ಪ್ರಸಕ್ತವಾಗದ ಇತರ ಮಠಗಳನ್ನು ಉಲ್ಲೇಖಿಸಿ ಅವರಿಗೂ ಉತ್ತರಾದಿಮಠದ ಮೇಲೆ ವಿಪರೀತ ಭಾವನೆ ಹುಟ್ಟುವಂತೆ ಬರೆದಿರುವುದು ಖಂಡನೀಯವಾಗಿದೆ. ನೀಚಮಟ್ಟದ ರಾಜಕೀಯವಾಗಿದೆ.

**ದೇಶ** – ಶ್ರೀಮದಾಚಾರ್ಯರು ತಮ್ಮ ಶಿಷ್ಯರಿಗೆ ಸಂಸ್ಥಾನಗಳನ್ನು ನಿರ್ಮಿಸಿ ತಾವು ಪೂಜಿಸಿದ ಪ್ರತಿಮೆಗಳನ್ನು ಕೊಟ್ಟ ವಿಷಯ ಹಾಗೂ ಅವರಿಗೆ ನೀಡಿದ ಆದೇಶಗಳು ಸರ್ವವಿದಿತ. ಅಷ್ಟಮಠದ ಯತಿಗಳಿಗೆ ವಿಶೇಷವಾಗಿ ಉಡುಪಿಯಲ್ಲಿ ಶ್ರೀಕೃಷ್ಣನ ಪೂಜೆಯನ್ನು ಮತ್ತು ಸಿದ್ಧಾಂತದ ಪ್ರಚಾರದ ಕಾರ್ಯವನ್ನು ವಹಿಸಿಕೊಟ್ಟರು. ಶ್ರೀಪದ್ಮನಾಭತೀರ್ಥರಿಗೆ ಒಂದು ದೇಶ(ಪ್ರದೇಶ)ವನ್ನು ಕೇಂದ್ರವನ್ನಾಗಿಸಿ ಕೊಡದೆ ಇಡೀ ಕರ್ಮಭೂಮಿಯ ಉದ್ದಗಲಕ್ಕೂ ಸಂಚರಿಸಿ ಸಿದ್ಧಾಂತ ಪ್ರಚಾರ ಮಾಡಲು ಆದೇಶಿಸಿದ್ದು ಇತಿಹಾಸ. ಇದನ್ನು ರಾಯರಮಠದವರೂ ಒಪ್ಪಿದ್ದಾರೆಂಬುದು ಗಮನಾರ್ಹ. ಇದಕ್ಕೆ ಅನೇಕ ಆಧಾರಗಳುಂಟು. (ಕೈಫಿಯತ್ತುಗಳು, ಸಂಪ್ರದಾಯಪದ್ಧತಿ ಮುಂತಾದವುಗಳು) ಇದು ಇತ್ತೀಚಿಗೆ ಬದಲಾಗಿರಬಹುದು. ಕೆಲ ಅಪವಾದಗಳಿರುವುದೂ ಉಂಟು. ಆದರೆ ಸತ್ಯ ಸತ್ಯವೇ. ''2/3 of Madhvas are Uttaradimath disciples...'' ಎಂದು ಗೆಜೆಟ್ ಹೇಳುತ್ತಿರುವುದು. ಸಮಸ್ತ ಭಾರತದ ಉದ್ದಗಲಕ್ಕೂ ಉತ್ತರಾದಿಮಠದ ಶಿಷ್ಯರಿರುವುದು ಪ್ರತ್ಯಕ್ಷ ಸಾಕ್ಷಿ. ಈ ಅರ್ಥದಲ್ಲಿ ಉತ್ತರಾದಿಮಠ ಒಂದು ಪ್ರದೇಶಕ್ಕೆ ಸೀಮಿತವಾಗಿಲ್ಲ.

**ಕಾಲ** – ವೈಷ್ಣವ ಸಿದ್ಧಾಂತ ಅನಾದಿ ಸಿದ್ಧವಾದುದು. ಅದಕ್ಕೆ ಕಾಲದ ಮಿತಿ ಇಲ್ಲ. ಅದನ್ನು ಸಾರುತ್ತಾ ಬರುವ ಪೀಠವೂ ಕಾಲಕ್ಕೆ ಸೀಮಿತವಾಗಲು ಸಾಧ್ಯವಿಲ್ಲ. ಅನಾದಿತಃ ಸತ್ಸಂಪ್ರದಾಯಪರಂಪರಾಪ್ರಾಪ್ತ ಶ್ರೀಮದ್ವೈಷ್ಣವಸಿದ್ಧಾಂತ ಎಂಬುದು ಎಲ್ಲರೂ ಒಪ್ಪಿದ ವಿಷಯವಾಗಿದೆ.

**ಕೇಂದ್ರ** – ಇಡೀ ದೇಶ ಸಂಚಾರ ಮಾಡುತ್ತಾ ಸಿದ್ಧಾಂತ ಪ್ರಚಾರಗೈಯ್ಯುವ ಸಂಸ್ಥಾನಕ್ಕೆ ಎಲ್ಲ ಸ್ಥಳಗಳೂ ಕೇಂದ್ರಗಳೇ ಹೊರತು ಒಂದು ನಿರ್ದಿಷ್ಟ ಕೇಂದ್ರವಿಲ್ಲ.

**ಗೋತ್ರ-ವಂಶ-ವ್ಯಕ್ತಿ** – ಶ್ರೀಉತ್ತರಾದಿಮಠ ಒಂದು ಗೋತ್ರದಲ್ಲಿರುವ ವ್ಯಕ್ತಿಗಳಿಗೆ ಮಾತ್ರ ಸೀಮಿತವಲ್ಲ. ಮಹಾಪೀಠಕ್ಕೆ ಅರ್ಹತೆಯುಳ್ಳ ವಿವಿಧ ಗೋತ್ರ, ಮನೆತನ, ದೇಶಗಳಿಂದ ಬಂದ ವ್ಯಕ್ತಿಗಳು ಪೀಠವನ್ನು ಅಲಂಕರಿಸಿ ಸಮರ್ಥವಾಗಿ ಹರಿವಾಯುಗಳಿಗೆ ಸಮ್ಮತವಾಗುವ ರೀತಿಯಲ್ಲಿ ಆಳಿದ್ದಾರೆ. ಆದ್ದರಿಂದ ಒಂದು ಗೋತ್ರ-ವಂಶಕ್ಕೆ ಸೀಮಿತವಲ್ಲ ಎಂದು ಹೇಳಲಾಗಿದೆ.

ಪರಂಪರೆಯ ವೈಲಕ್ಷಣ್ಯವನ್ನು ಹೇಳಿಕೊಳ್ಳುವುದು ತಪ್ಪೇ? ಕೆಲ ವೈಲಕ್ಷಣ್ಯಗಳು ಇತರ ಪೀಠಗಳಲ್ಲುಂಟು. ''ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಡುವ ಮಠ ಉತ್ತರಾದಿಮಠ'' ಎಂದು ಘಂಟಾಘೋಷವಾಗಿ ಹೇಳಿದವರು ಬಾಳಗಾರು ಮಠಾಧೀಶರಾದ ಶ್ರೀರಘುಮಾನ್ಯರು, ಶ್ರೀಭಂಡಾರುಕೇರಿ ಹಾಗೂ ಪಲಿಮಾರು ಮಠಾಧೀಶರಾದ ಶ್ರೀವಿದ್ಯಾಮಾನ್ಯರು ಮತ್ತು ಅಧುನಾ ಭಂಡಾರಕೇರಿ ಮಠದ ಪೀಠಾಧಿಪತಿಗಳಾದ ಶ್ರೀವಿದ್ಯೇಶತೀರ್ಥರು. ಹಾಗಾದರೆ ಇತರ ಮಠಗಳು ಉತ್ತರ ಕೊಡಲಾರದ ಮಠಗಳೆಂದು ತೆಗಳಿದ್ದಾರೆಂದು ಅರ್ಥೈಸಬೇಕೇ? ಪ್ರಾಯಃ ದಿ.ಬಿ.ಎನ್.ಕೆ. ರವರಿದ್ದಿದ್ದರೆ ಇದಕ್ಕೂ ಗೇಲಿ ಮಾಡದೆ ಬಿಡುತ್ತಿರಲಿಲ್ಲವೆಂದು ಕಾಣುತ್ತದೆ. ಶ್ರೀಉತ್ತರಾದಿಮಠದ ಪರಂಪರೆಯಲ್ಲಿರುವ ಗುಣಗಳನ್ನು (ಸಜ್ಜನರಿಂದ ಅನುಮೋದಿತ) ತಿಳಿಸುವುದರಲ್ಲಿ ತಾತ್ಪರ್ಯವೇ ಹೊರತು ಇತರರಲ್ಲಿ ಆ ಗುಣಗಳು ಇಲ್ಲವೆಂದು ಹೇಳುವ ಅಭಿಪ್ರಾಯವಲ್ಲ. ಅದರಂತೆ ಶ್ರೀರಾಯರಮಠವು ''ವಿದ್ಯಾಮಠ'' ಎಂದು ತಮ್ಮ ಮಠವನ್ನು ಹೇಳಿಕೊಂಡ ಮಾತ್ರಕ್ಕೆ, ಇತರ ಮಾಧ್ವಮಠಗಳನ್ನು ವಿದ್ಯೆ ಇಲ್ಲದೇ ಇರುವ ಮಠಗಳೆಂಬುದಾಗಿ ನಿಂದಿಸಿದ್ದಾರೆ ಎಂದು ಅಭಿಪ್ರಾಯ ಪಡಬೇಕೇ?

ಪರಮಹಂಸರ ಪರಮಧರ್ಮವಾದ ನಿತ್ಯನಿರಂತರ ಪಾಠ-ಪ್ರವಚನ, ಪರಮತಖಂಡನ, ಸಿದ್ಧಾಂತಪ್ರಚಾರ, ಸಜ್ಜನೋದ್ಧಾರದ ಪರಂಪರೆಯೇ ಉತ್ತರಾದಿಮಠವೆಂದು ಹೇಳಿಕೊಳ್ಳಲು ಹಿಂಜರಿಯಬೇಕೆ? ಇಡೀ ದೇಶ ಕೊಂಡಾಡುತ್ತಿರುವಾಗ ಇವರಿಗೇಕೆ ವಿಪರೀತ ಕಲ್ಪನೆ? ''ತದ್ಭಕ್ತದ್ವೇಷ ಏವ ಚ'' ಎಂಬ ದೋಷ, ಶ್ರೀಉತ್ತರಾದಿಮಠದ ಪರಂಪರೆಯಲ್ಲಿ ಬಂದ ಮೂಲಸೀತಾರಾಮರ ಪೂಜೆಯನ್ನು ಯಾವ ಅಡ್ಡಿ ಆತಂಕಗಳಿಲ್ಲದೆ ನೆರವೇರಿಸಿದ ಶ್ರೀವಿದ್ಯಾನಿಧಿಗಳನ್ನು ಹಾಗೂ ಶ್ರೀರಘುನಾಥತೀರ್ಥರನ್ನು , ಅನೇಕ ಶ್ರೀಮಠದ ಟಿಪ್ಪಣಿಕಾರರ ಹೆಸರನ್ನೂ ತೆಗೆದುಕೊಳ್ಳಲು ಹಿಂಜರಿಯುವವರಿಗೇ ಸಲ್ಲುತ್ತದೆ. ನಿರಂತರ ಎಲ್ಲ ಮಠದ ಟಿಪ್ಪಣಿಕಾರರನ್ನು ಎಲ್ಲ ಮಠದ ಶಿಷ್ಯರಿಗೂ ಪಾಠ ಹೇಳುವಾಗ ಪ್ರತಿನಿತ್ಯ ಸ್ಮರಿಸಿ ಪಾಠ ಪ್ರವಚನ ಪ್ರಾರಂಭಿಸುವ ಉತ್ತರಾದಿಮಠದ ಶಿಷ್ಯರಿಗಲ್ಲ ಎಂಬುದನ್ನು ಲೇಖಕರು ಮನಗಾಣಬೇಕಿದೆ.

**ಸಂದೇಹ 2.** ಪಾದೇ ದ್ವಿರದಸಂಯುತಾ ಎಂದರೇನು? ದ್ವಿರದ ಎಂದರೇನು? ದ್ವಿರದ ಎಂಬ ಶಬ್ದಕ್ಕೆ ಗೆಜ್ಜೆ ಅಥವಾ ಕಡಗ ಎಂಬ ಅರ್ಥ ಯಾವ ಕೋಶದಲ್ಲೂ ಕಂಡುಬರುವುದಿಲ್ಲ. (ಪುಟ 48-50)

**ಉತ್ತರ:** ರಾಯರ ಮಠದ ಅಧಿಕೃತ ಲೇಖಕರಾದ ದಿ. ಶ್ರೀ ರಾಜಾ ಎಸ್. ಗುರುರಾಜಾಚಾರ್ಯರೇ 'ದ್ವಿರದ' ಎಂಬುದಕ್ಕೆ 'ಕಡಗ, ಕಂಕಣ' ಎಂಬ ಅರ್ಥವನ್ನು ಮಾಡಿದ್ದಾರೆ. ಈ ಅರ್ಥವೇ ರಾಯರ ಮಠದ ಸಾಂಪ್ರದಾಯಿಕ ಅರ್ಥವೂ ಆಗಿದೆ. ಆದ್ದರಿಂದ ಲೇಖಕರು ಉತ್ತರಾದಿಮಠದವರನ್ನು ಆಕ್ಷೇಪಿಸುವ ಬದಲು ಈ ಪ್ರಶ್ನೆಯನ್ನು ರಾಯರ ಮಠದ ವಿದ್ವಾಂಸರಿಗೇ ಕೇಳುವುದು ಒಳಿತು. ಇದರ ಬಗ್ಗೆ ಹೆಚ್ಚಿನ ವಿಸ್ತಾರವಾದ ವಿಮರ್ಶೆಯನ್ನು 'ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯ ವಿಮರ್ಶೆ' ಎಂಬ ಶೀರ್ಷಿಕೆಯ ಅಡಿಯಲ್ಲಿ ಮಾಡಿದ್ದೇವೆ.

**ಸಂದೇಹ 3.** ಶ್ರೀಪಾದರಾಜರು ಎಂದವರು ಯಾರು? ಎಂಬ ಶೀರ್ಷಿಕೆಯ ಅಡಿಯಲ್ಲಿ ಅನೇಕ ಮಾತುಗಳನ್ನು ಹೇಳುತ್ತಾ ''ತೂಗಿರೋ ರಾಮನ ಕೃತಿ ಶ್ರೀಪಾದರಾಜರು ರಚಿಸಿರುವರೆಂದು ನಂಬುವುದೇ ಸಾಧ್ಯವಿಲ್ಲದಿರುವಾಗ ಮೋಹನದಾಸರ ಮೊಮ್ಮಕ್ಕಳಾದ ವೆಂಕೋಬದಾಸರ ಹಸ್ತಲಿಖಿತ ಪ್ರತಿ ಎಂದು ನಂಬುವುದಾದರೂ ಹೇಗೆ?. ಪ್ರಾಸಗಳಿಲ್ಲ, ಸಪ್ಪೆಶೈಲಿ.....ಇತ್ಯಾದಿಯಾಗಿ ವಿಮರ್ಶಿಸಿದ್ದಾರೆ (ಪುಟ 51 ರಿಂದ 55) (ಜೊತೆಗೆ ಶ್ರೀಪಾದರಾಜಮಠಾಧೀಶರ ಸ್ವಂತ ಅಭಿಪ್ರಾಯವನ್ನೂ ಛಾಪಿಸಿದ್ದಾರೆ.)

**ಉತ್ತರ:** ಸ.ಸೀತಾ.ಮೂಲದಲ್ಲಿ ಮುದ್ರಿಸಿದ ''ತೂಗಿರೋ ರಾಮನ'' ಕೃತಿ ದಿ.ಶ್ರೀಹರಿದಾಸರತ್ನಂ ಗೋಪಾಲದಾಸರು ಶ್ರೀವಿಜಯದಾಸರ ಕಟ್ಟೆಯಿಂದ ಸಂಗ್ರಹಿಸಿದ್ದು. ಶ್ರೀವಿಜಯದಾಸರ ಕಟ್ಟೆಯಲ್ಲಿದ್ದ ಈ ಕೃತಿಯನ್ನೊಳಗೊಂಡ ಅನೇಕ ಮೂಲ ಹಸ್ತಪ್ರತಿಗಳನ್ನು ಇಂದಿಗೂ ಅವರ ಶಿಷ್ಯರಾದ ಬೆಂಗಳೂರಿನ ಎಂ.ಟಿ.ಪ್ರಹ್ಲಾದರಾಯರ ಮನೆಯಲ್ಲಿ ಪೂಜೆಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

ಒಂದು ಪ್ರಾಚೀನಕೃತಿಯನ್ನು ಯಾವ ಆಧಾರವಿಲ್ಲದೆ ಧೈರ್ಯವಾಗಿ ನಿರಾಕರಣೆ ಮಾಡುವ ಸಾಹಸ ಮಾಡಿದ್ದಾರೆ. 200 ವರ್ಷಗಳ ಹಿಂದೆ ಯಾರೋ ರಚನೆ ಮಾಡಿ ರಂಗವಿಠ್ಠಲ ಎಂಬ ಅಂಕಿತ ಇಟ್ಟಿದ್ದಾರೆಂದು ಬರೆಯುತ್ತಾ ಇದುವರೆಗೆ ''ಈ ಕೃತಿ ಬೆಳಕಿಗೆ ಯಾಕೆ ಬರಲಿಲ್ಲ''ವೆಂಬ ಸಮಸ್ಯೆಗೆ ಮೂ.ಮತೇ ಲೇಖಕರು ಸಿಲುಕಿಕೊಂಡಿದ್ದಾರೆ. ಕೃತ್ರಿಮವೆಂದು, ತಿರಸ್ಕರಿಸಲು ಯೋಗ್ಯವಾಗಿದೆ ಎಂದು, ತಾವೇ ನಿರ್ಣಯ ಮಾಡಿಕೊಂಡಿದ್ದಾರೆ. ಇದಕ್ಕೆ ಶ್ರೀವಿಜ್ಞಾನನಿಧಿತೀರ್ಥರ ಒಕ್ಕಣಿಕೆ ಬೇರೆ ಇದೆ.

ಎಂತಹ ಹಾಸ್ಯಾಸ್ಪದ ! ತಾವು ಏನು ತೋರಿಸಿದರೂ ಅದು ಪ್ರಾಚೀನ, ಸತ್ಯ, ಸಂಶೋಧಕರಿಂದ ಅನುಮೋದಿತ, ಪ್ರಾಸ-ಅನುಪ್ರಾಸಗಳಿಂದ ಕೂಡಿದ್ದು. ಉತ್ತರಾದಿಮಠದವರು ಏನು ಮುಂದಿಟ್ಟರೂ ಕೃತ್ರಿಮ!.

❖ ಶ್ರೀವಿಜ್ಞಾನನಿಧಿಗಳು ''ಇದು ಶ್ರೀಪಾದರಾಜರ ಕೃತಿ ಅಲ್ಲ'' ಎಂದು ಬರೆದಾಕ್ಷಣ ಆ ಹೇಳಿಕೆ ಸತ್ಯವಾಗಬೇಕಾಗಿಲ್ಲ. ಅವರು ಯಾವ ಸಂಶೋಧನೆ ನಡೆಸದೆ ಅಲ್ಲಗಳೆದಿದ್ದಾರೆ. ಇದು ಆಧಾರವೇ? ಮಹಾನುಭಾವರಾದ ಶ್ರೀಶ್ರೀಪಾದರಾಜರಿಗೆ ''ಸುರನಾಥಪುರಕ್ಕೆ ಹೊರಡುವಾಗ ಪುಷ್ಪವನ್ನು ಅನುಗ್ರಹಿಸಿದವರು'' ಎಂದು ಶ್ರೀರಘುನಾಥತೀರ್ಥರನ್ನು ಹಾಡಿ ಹೊಗಳಿದವರು ಮಹಾನುಭಾವರಾದ ಶ್ರೀವ್ಯಾಸರಾಜರು. ಅದರಂತೆ ಶ್ರೀಪಾದರಾಜಮಠದವರೇ ಆದ ಶ್ರೀಶ್ರೀನಿಧಿತೀರ್ಥರೇ ಮೊದಲಾದವರೂ ಇದನ್ನು ಉಲ್ಲೇಖಿಸಿದ್ದಾರೆ. ಇವೆಲ್ಲವನ್ನು ಕಡೆಗಣಿಸಿ ತಮ್ಮ ಪೂರ್ವಿಕರ ಹೇಳಿಕೆಗಳಿಗೆ ವಿರುದ್ಧವಾಗಿ ಶ್ರೀರಘುನಾಥತೀರ್ಥರನ್ನು ''ಬಿಡಿ ಸಂನ್ಯಾಸಿಗಳಂತೆ ಸಂಚರಿಸುತ್ತಿದ್ದ'' ಎಂಬುದಾಗಿ ಉಲ್ಲೇಖಿಸಿರುವುದು ಶ್ರೀವಿಜ್ಞಾನನಿಧಿಗಳ ಸಾಹಸವಲ್ಲದೇ ಮತ್ತೇನು?

ಉತ್ತರಾದಿಮಠವನ್ನು ಹೀಯಾಳಿಸುತ್ತ ಅದರ ಪರಂಪರೆಯನ್ನೇ ಪ್ರಶ್ನಿಸಿದ ಗುರುಚರಿತೆ ಎಂಬ ಪುಸ್ತಕದ ಆಂಗ್ಲ ಅನುವಾದಕ್ಕೆ ಶ್ರೀವಿಜ್ಞಾನನಿಧಿಗಳು ಮುನ್ನುಡಿಯನ್ನು ಕೊಟ್ಟಿದ್ದಾರೆ. ಅಲ್ಲಿ "The translator of this book should not rest satisfied with this book only, but should strive to publish more such books frequently and continuously till all the false propaganda is stopped and thereby enable the deserving souls to reach goal of eternal happiness"

(ಎಲ್ಲಿಯವರೆಗೆ ಈ ತರಹದ ತಪ್ಪು ಪ್ರಚಾರಗಳು ನಿಲ್ಲುವುದಿಲ್ಲವೋ ಅಲ್ಲಿಯವರೆಗೆ ಈ ಪುಸ್ತಕದ ಅನುವಾದಕರು ಇಷ್ಟಕ್ಕೇ ತೃಪ್ತರಾಗಿ ನಿಲ್ಲಿಸದೇ ಇದೇ ತರಹದ ಪುಸ್ತಕಗಳನ್ನು ನಿರಂತರವಾಗಿ ಮೇಲಿಂದ ಮೇಲೆ ಪ್ರಕಾಶಿಸುತ್ತಿರಬೇಕು. ಅದರಿಂದ ಯೋಗ್ಯ ಜೀವರು ಮುಕ್ತಿಯನ್ನು ಪಡೆಯಲು ಅರ್ಹರಾಗುತ್ತಾರೆ) ಎಂದು ಅಪ್ಪಣೆ ಕೊಡಿಸಿದ್ದಾರೆ. ಒಂದು ಪ್ರಸಿದ್ಧವಾದ ಮಠದ (ಉತ್ತರಾದಿಮಠದ) ಬಗ್ಗೆ ಹೀಗೆ ಹೇಳುವುದು ಸರಿಯೇ? ಸಾಹಸವಲ್ಲವೇ?

❖ ಶ್ರೀಶ್ರೀಪಾದರಾಜರ ''ತೂಗಿರೋ ರಾಮನ'' ಕೃತಿಯ ಹಸ್ತಪ್ರತಿಯನ್ನು ಸಸೀತಾಮೂಲರಾಮಾರ್ಚಾ ಪುಸ್ತಕದಲ್ಲಿ ಮುದ್ರಿಸಿದ್ದಾರೆ. ಮೂಲಪ್ರತಿ ಎಲ್ಲಿದೆ ಎಂಬುದನ್ನು ತಿಳಿಸಲಾಗಿದೆ. ಸತ್ಯಶೋಧನೆಯಲ್ಲಿ ನಿಜವಾಗಿ ಆಸಕ್ತಿ ಇದ್ದರೆ ಶೋಧನೆಯ ಕಾರ್ಯ ಪ್ರಾಮಾಣಿಕವಾಗಿ ಆಗಲಿ. ನಂತರ ನಂಬುವುದು ಬಿಡುವುದು.

ಅನೇಕ ವರ್ಷ ಅಜ್ಞಾತದಲ್ಲಿದ್ದ ಶ್ರೀಜಿತಾಮಿತ್ರರ ಕುರಿತಾದ ಶ್ರೀಪಾದರಾಜರಿಂದ ರಚಿತವಾದ ''ವಂದನೆ ಮಾಡಿರೈ....'' ಎಂಬ ಕೃತಿ ಮೈಸೂರು ವಿಶ್ವವಿದ್ಯಾನಿಲಯದಿಂದ ಡಾ।। ವರದರಾಜರಾವ್ ಅವರ ಸಂಪಾದಕತ್ವದಲ್ಲಿ ಸಂಶೋಧಿತವಾಗಿ ''ಶ್ರೀಪಾದರಾಜರ ಕೃತಿಗಳು'' ಎಂಬ ಪುಸ್ತಕ (ಪುಟ 62-63) ಹೊರಬಂದಮೇಲೆ ರಾಯರ ಮಠದವರು ಇದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿಲ್ಲವೇ? ಪ್ರಕಟನೆಗಿಂತ ಮುಂಚೆ ಈ ಕೃತಿಯು ಬೆಳಕಿಗೇಕೆ ಬಂದಿರಲಿಲ್ಲ ಎಂದು ಕೇಳಿದರೆ ಉತ್ತರವಿದೆಯೇ?

ತಮಗೆ ಅನುಕೂಲವಾದದ್ದೆಲ್ಲ ಸುಂದರ ಮನೋಹರ ಶೈಲಿ ಪ್ರತಿಕೂಲವಾದದ್ದೆಲ್ಲ ಸಪ್ಪೆ ಶೈಲಿ. ಅಲ್ಲವೇ? ಪೀಠಾಧಿಪತಿಗಳ ಮಾತನ್ನು ಮುಂದೆ ಮಾಡಿ ಸಾಮಾನ್ಯ ಜನರನ್ನು ಮರಳುಗೊಳಿಸಬಹುದು. ವಿದ್ವಜ್ಜನರನ್ನಲ್ಲ, ಸಂಶೋಧಕರನ್ನಲ್ಲ, ವಿಮರ್ಶಕರನ್ನಲ್ಲ.

**ಸಂದೇಹ 4.** ಮುದ್ದುವಿಠ್ಠಲರ ಸುಳಾದಿಯು ಪ್ರಾಸಾನುಪ್ರಾಸಗಳ ಅನಿಯತತೆ, ಅರ್ಥಸುಭಗತೆಯ ರಾಹಿತ್ಯ ಮುಂತಾದ ದೋಷಗಳಿಂದ ಗ್ರಸ್ತವಾಗಿದೆ. ಇದರ ಪ್ರಾಮಾಣ್ಯ ಶಂಕಾಸ್ಪದವೇ ಸರಿ. ಮುದ್ದುವಿಠ್ಠಲರು ಅಕ್ಷೋಭ್ಯತೀರ್ಥರ ಕಾಲದವರೇ? ಪ್ರಾಚೀನರಾದರೆ ಪ್ರಸಿದ್ಧಿಯೇಕಿಲ್ಲ? (ಪುಟ 56)

**ಉತ್ತರ:** ಮುದ್ದುವಿಠ್ಠಲರ ಸುಳಾದಿಯನ್ನು ಮುದ್ರಿಸಿದ್ದು ರಾಯರ ಮಠದವರು. ಅವರ ಮಠದ ದಾಖಲೆಗಳ ಆಧಾರದಲ್ಲಿ ಅಧಿಕೃತವಾಗಿ ಅವರ ಶ್ರೀಗಳ ಆಜ್ಞಾಪ್ರಕಾರ ರಚಿಸಿರುವ ''ಶ್ರೀಮೂಲರಾಮ'' ಪುಸ್ತಕದಲ್ಲಿ ಈ ಕೃತಿಯು ಪ್ರಕಟವಾಗಿದೆ. ಈ ಸುಳಾದಿಯಲ್ಲಿ ಅವರಿಗೇನೇನು ಅರ್ಥವಾಗಿಲ್ಲ ಎಂಬುದರ ಬಗ್ಗೆ ಸ್ಪಷ್ಟೀಕರಣವನ್ನು ಕೊಡಲು ಅವರ ಅಧಿಕೃತ ಲೇಖಕರು ಈಗ ಇಲ್ಲ. ಅವರ ಮಠದ ದಾಖಲೆಗಳಲ್ಲೇನಾದರೂ ಈ ಸುಳಾದಿಗೆ ಹೊಸ ವ್ಯಾಖ್ಯಾನದ ವಾಕ್ಯಗಳು ಸಿಗಬಹುದು. ಯಾಕೆ ಈ ಕೃತಿಯು ಪ್ರಸಿದ್ಧಿ ಇಲ್ಲ ಎಂಬುದರ ಬಗ್ಗೆ ಹಾಗೂ ದಿವಂಗತರು ಪ್ರಸಿದ್ಧಿ ಪಡಿಸಿದ್ದರ ಬಗ್ಗೆ, ಅವರಲ್ಲೇ ಏನಾದರೂ ಮಾಹಿತಿ ಇರಬಹುದು. ಅವರ ಶಂಕೆ ನೀಗಬಹುದು. ಇಲ್ಲದಿದ್ರೆ ಅನಧಿಕೃತವಾಗುವ ಸಂಭವವಿದೆ. ಈ ಮುದ್ದು ವಿಠ್ಠಲರು ಶ್ರೀಅಕ್ಷೋಭ್ಯತೀರ್ಥರಿಂದ ಉಪದೇಶಪಡೆದವರೆಂದು ತಾವೇ ತಮ್ಮ ಕೃತಿಯಲ್ಲಿ ಹೇಳಿಕೊಂಡಿದ್ದಾರೆ. ಶ್ರೀವಿಜಯದಾಸರು ಹಾಗೂ ಅವರ ತಮ್ಮ ಶ್ರೀಹಯವದನವಿಠ್ಠಲರು ಈ ಮುದ್ದುವಿಠ್ಠಲರ ಬಗ್ಗೆ (ಆದ್ಯರು) ಉಲ್ಲೇಖಿಸಿರುವುದನ್ನು ಕಾಣಬಹುದಾಗಿದೆ. ಹೀಗಾಗಿ ಶಂಕೆಗೆ ಕಾರಣವಿಲ್ಲ. ಇವರ ಬಗ್ಗೆ ಹೆಚ್ಚಿನವಿವರಗಳನ್ನು ಈ ಹಿಂದೆ ನೀಡಲಾಗಿದೆ. (ನೋಡಿರಿ ಶೀರ್ಷಿಕೆ - ಬಣ್ಣಚಿತ್ರಗಳ ಬಯಲಾಟ, ಉಪಶೀರ್ಷಿಕೆ - ಮುದ್ದುವಿಠ್ಠಲರ ಸ್ವಪ್ನನುಡಿ.)

**ಸಂದೇಹ 5.** ಮೂಲರಾಮಪ್ರತಿಮೆ ವಾಸಿಷ್ಠರಾಮಾಯಣದ ಪ್ರಕಾರ ಸ್ವಯಂವ್ಯಕ್ತ. ಹರಿದಾಸರ ಹಾಗೂ ಅರ್ಚಾಗತಿಕ್ರಮದ ಪ್ರಕಾರ ವಿಶ್ವಕರ್ಮನಿಂದ ರಚಿತ. ಹೀಗಿರುವಾಗ ಮೂಲರಾಮದೇವರ ಎಡಪಾದದಲ್ಲಿ ಬ್ರಹ್ಮನಿರ್ಮಿತ ನೂಪುರವಿದೆ ಎಂಬ ಪೂರ್ಣಬೋಧಗುರುವಂಶಕಥಾಕಲ್ಪತರು ಕಾವ್ಯದ ಹೇಳಿಕೆಗೆ ಅರ್ಥವೇನು? (ಪುಟ 57)

**ಉತ್ತರ:** ಗುರುವಂಶಕಥಾಕಲ್ಪತರುವಿನ 3ನೇ ಸರ್ಗದ 35ನೇ ಶ್ಲೋಕದಲ್ಲಿರುವ ''ಬ್ರಹ್ಮನಿರ್ಮಿತನೂಪುರಃ'' ಎಂಬಲ್ಲಿಯ ಬ್ರಹ್ಮನಿರ್ಮಿತ ಎಂಬುದನ್ನು ಮನಬಂದಂತೆ ಎಳೆದಾಡುತ್ತ ಗೊಂದಲಕ್ಕೆ ಸಿಕ್ಕಿಕೊಂಡಿದ್ದಾರೆ ಮೂ.ಮತೇ. ಲೇಖಕರು. ಅಲ್ಲದೇ ಅವರೇ ಪುಟ 131ರಲ್ಲಿ (ಮೂ.ಮತೇ) ಆಧಾರವಾಗಿ ಕೊಟ್ಟಿರುವ ಅವರ ಪೂರ್ವಿಕರಿಂದ ಸಂಗ್ರಹಿಸಲ್ಪಟ್ಟ ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯಲ್ಲೂ ಸ್ವಯಂವ್ಯಕ್ತವೆಂದೇ ಇದೆ. ಹೀಗಾಗಿ ಅತ್ಯಂತ ಪ್ರಾಚೀನವಾದ ವಾಸಿಷ್ಠ ಮತ್ತು ವಾಸಿಷ್ಠೋತ್ತರರಾಮಾಯಣಗಳಿಗೆ ಅರ್ವಾಚೀನವಾದ ಅರ್ಚಾಗತಿಕ್ರಮ ಮತ್ತು ದಾಸರ ಪದಗಳು ವಿರುದ್ಧವಾಗಿವೆ ಎಂದು ಅವರೇ ಒಪ್ಪಿದಂತಾಯಿತು. ವಿಶ್ವಕರ್ಮನಿರ್ಮಿತ, ಸ್ವಯಂವ್ಯಕ್ತ, ಬ್ರಹ್ಮನಿರ್ಮಿತನೂಪುರ ಈ ವಿಷಯಗಳನ್ನು ಹೀಗೆ ತಿಳಿಯಬಹುದು-

ಬ್ರಹ್ಮದೇವರ ಆಜ್ಞೆಯಂತೆ ವಿಶ್ವಕರ್ಮನು ಸುಂದರವಾದ ಶ್ರೀಮೂಲರಾಮ ಪ್ರತಿಮೆಯನ್ನು ನಿರ್ಮಿಸಿದ್ದನು. ಆದ್ದರಿಂದ ಅದು ವಿಶ್ವಕರ್ಮನಿರ್ಮಿತ.

ಬ್ರಹ್ಮದೇವರು ತಾವು ಪೂಜಿಸುವುದಕ್ಕಾಗಿ ಆ ಮೂಲರಾಮ ಪ್ರತಿಮೆಯನ್ನು ಸ್ಮರಿಸಿದಾಕ್ಷಣ ಅವರ ಮುಂದೆ ಆ ಪ್ರತಿಮೆಯು ಸ್ವಯಂವ್ಯಕ್ತವಾಯಿತು. ವಾಸಿಷ್ಠರಾಮಾಯಣದಲ್ಲಿ ಪ್ರತಿಮೆಯನ್ನೇ ''ಸ್ವಯಂವ್ಯಕ್ತಾ'' ಎಂಬುದಾಗಿ ಹೇಳಿದ್ದಾರೆ. ಅಲ್ಲದೇ ಆ ಪ್ರತಿಮೆಯಲ್ಲಿ ಭಗವಂತನು ಸ್ವಯಂ ತಾನೇ ತನ್ನ ಇಚ್ಛೆಯಿಂದಲೇ ವ್ಯಕ್ತನಾದನು. ಇತರರು ಮಾಡಿದ ಆವಾಹನಾದಿಗಳಿಂದ ಆ ಪ್ರತಿಮೆಯಲ್ಲಿ ಭಗವಂತನ ಸನ್ನಿಧಾನ ಬಂದದ್ದಲ್ಲ. ಈ ಅರ್ಥಗಳಲ್ಲಿ ಅದನ್ನು ಸ್ವಯಂವ್ಯಕ್ತ ಎಂದೂ ವ್ಯವಹರಿಸಲಾಗಿದೆ. ಆದ್ದರಿಂದ ಪ್ರತಿಮೆಯು ವಿಶ್ವಕರ್ಮನಿರ್ಮಿತ ಹಾಗೂ ಸ್ವಯಂವ್ಯಕ್ತ ಎಂಬ ಮಾತಿಗೆ ವಿರೋಧವಿಲ್ಲ. ಈ ಪ್ರತಿಮೆಯಲ್ಲಿ ಸನ್ನಿಹಿತನಾದ ಭಗವಂತನ ಸೇವೆಯನ್ನು ಮಾಡುವ ಉದ್ದೇಶದಿಂದ ಆ ಪ್ರತಿಮೆಗೆ ಬ್ರಹ್ಮದೇವರು ನೂಪುರವನ್ನು ಸ್ವಯಂ ತಾವೇ ನಿರ್ಮಿಸಿದರು. ಹೀಗೆ ತಿಳಿದು ಕೊಂಡರೆ ಯಾವುದೇ ಗೊಂದಲಕ್ಕೆ ಅವಕಾಶವಿಲ್ಲ.

ಇಲ್ಲದಿದ್ದರೆ ಸ್ವಯಂವ್ಯಕ್ತ ಹಾಗೂ ವಿಶ್ವಕರ್ಮನಿರ್ಮಿತ ಎಂಬ ಎರಡು ವಿರುದ್ಧ ಮಾತುಗಳ ವಿರೋಧ ರಾಯರ ಮಠದವರಿಗೂ ತಪ್ಪಿದ್ದಲ್ಲ.

**ಸಂದೇಹ 6.** ಶ್ರೀಪಾದರಾಜರ ಕೃತಿ, ಮುದ್ದುವಿಠ್ಠಲರ ಸುಳಾದಿ, ಗುರುವಂಶಕಥಾಕಲ್ಪತರುಕಾವ್ಯ, ವಾಸಿಷ್ಠರಾಮಾಯಣ ಇವುಗಳಲ್ಲಿರುವ ದ್ವಿರದ, ನೂಪುರ, ಕಿರುಗೆಜ್ಜೆ, ವೀರಕಂಕಣ ಎಂಬ ಉಲ್ಲೇಖಗಳು ಪರಸ್ಪರ ವಿರುದ್ಧವಾಗಿವೆ. (ಪುಟ 58)

**ಉತ್ತರ:** ಶ್ರೀಶ್ರೀಪಾದರಾಜರ ಕೃತಿ, ಮುದ್ದುವಿಠ್ಠಲರ ಸುಳಾದಿ, ಗುರುವಂಶಕಥಾಕಲ್ಪತರು ಕಾವ್ಯ, ವಾಸಿಷ್ಠರಾಮಾಯಣ ಇವುಗಳಲ್ಲಿ ಯಾವ ವಿರೋಧವೂ ಇಲ್ಲ.

❖ **ಎಡಗಾಲಿನಲ್ಲಿ ನೂಪುರ** – ಗುರುವಂಶಕಥಾಕಲ್ಪತರು ಕಾವ್ಯದಲ್ಲಿ ಉಲ್ಲೇಖಿಸಲಾದ ''ಭಾತಿ ಯಸ್ಯಾಸ್ಸವ್ಯಪಾದೇ ಬ್ರಹ್ಮನಿರ್ಮಿತನೂಪುರಃ । ಮಾಣಿಕ್ಯೇತಃ ಸ್ವರ್ಣಮಯಃ..'' ಎನ್ನುವುದನ್ನೇ

ಶ್ರೀಪಾದರಾಜರು ''ಮ್ಯಾಲೆ ಪೊನ್ನಂದಿಗೆ'' ಎಂದು, ಮುದ್ದುವಿಠ್ಠಲರು ''ಎಡದ ಕಾಲಿನಲ್ಲಿ ಸ್ವರ್ಣದಂದಿಗೆ'' ಎಂದು ವರ್ಣಿಸಿದ್ದಾರೆ. (ಅಂದುಗೆ-ಅಂದಿಗೆ ಎಂಬ ಶಬ್ದಕ್ಕೆ ''ನೂಪುರ'' ಎಂಬ ಅರ್ಥ ಕನ್ನಡಕೋಶಗಳಲ್ಲಿ ಇದೆ. ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು' ಸಂ. 1, ಪುಟ 42)

- **ಕಾಲುಗಳಲ್ಲಿ ಗೆಜ್ಜೆ** – ಮುದ್ದುವಿಠ್ಠಲರ ಗೆಜ್ಜೆ ಘಲಿವಾರಂದಿಗೆ ಎನ್ನುವಲ್ಲಿ ಇರುವ ''ಗೆಜ್ಜೆ'' ಹಾಗೂ ಶ್ರೀಪಾದರಾಜರ ''ಕಾಲಲಿ ಕಿರುಗೆಜ್ಜೆ'' ಇವೆರಡೂ ಒಂದೇ ಅಭಿಪ್ರಾಯದಲ್ಲಿ ಇದೆ.
- **ಎಡಗಾಲಿನಲ್ಲಿ ವೀರಕಂಕಣ (ಕಡಗ)** – ವಾಸಿಷ್ಠರಾಮಾಯಣದಲ್ಲಿ ಉಕ್ತವಾದ ''ಪಾದೇ ಬಿ(ದ್ವಿ)ರದ ಸಂಯುತಾ'' ಹಾಗೂ ಗು.ಕಥಾಕಲ್ಪತರುವಿನಲ್ಲಿ ವರ್ಣಿಸಲ್ಪಟ್ಟ ''ವಾಮಜಂಘಾಲಸದ್ವೀರಕಂಕಣ'' ಮುದ್ದುವಿಠ್ಠಲರ ಗೆಜ್ಜೆ ಘಲಿವಾರಂದಿಗೆ ಎನ್ನುವಲ್ಲಿ ಇರುವ ಅಂದಿಗೆ ಈ ಎಲ್ಲವೂ ಒಂದೇ ವಸ್ತುವನ್ನು ಹೇಳುತ್ತಿವೆ. (ಅಂದುಗೆ-ಅಂದಿಗೆ ಎಂಬ ಶಬ್ದಕ್ಕೆ ''ಕಾಲ ಕಡಗ'' ಎಂಬ ಅರ್ಥ ಕನ್ನಡಕೋಶಗಳಲ್ಲಿ ಇದೆ. ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು' ಸಂಪುಟ 1, ಪುಟ 42)

ಆದ್ದರಿಂದ ವಾಸಿಷ್ಠರಾಮಾಯಣ, ಮುದ್ದುವಿಠ್ಠಲರ ಕೃತಿ, ಶ್ರೀಪಾದರಾಜರ ರಚನೆ ಹಾಗೂ ಗುರುವಂಶಕಥಾಕಲ್ಪತರು ಇವುಗಳಲ್ಲಿ ಪರಸ್ಪರ ಯಾವ ವಿರೋಧಕ್ಕೆ ಅವಕಾಶ ಇಲ್ಲ.

**ಸಂದೇಹ 7.** ಮೂಲರಾಮಪ್ರತಿಮೆಯಂತೆ ಮೂಲಸೀತಾಪ್ರತಿಮೆಯೂ ಶುದ್ಧ ತಾಮ್ರಮಯವಾಗಿರಬೇಕಲ್ಲವೇ? ಸೀತಾಪ್ರತಿಮೆ ಮತ್ತು ಪೀಠಗಳು ಭಿನ್ನಲೋಹದ್ದಾಗಿರುವುದು ಶಿಲ್ಪಶಾಸ್ತ್ರಸಮ್ಮತವೇ?

**ಉತ್ತರ:** ಮೂಲರಾಮಸ್ತು ಮನ್ಮತೇ ಲೇಖಕರು ''ಶ್ರೀಮೂಲರಾಮನ ಪ್ರತಿಮೆಯ ಲಕ್ಷಣವೇ ಶ್ರೀಮೂಲಸೀತಾಪ್ರತಿಮೆಯ ಲಕ್ಷಣವೂ ಆಗಿರಬೇಕು ಎಂದು ತಾವೇ ನಿರ್ಣಯ ಮಾಡಿಕೊಂಡಿದ್ದಾರೆ. ಮೂಲ ದಾಖಲೆಗಳು ಆಧಾರಗಳು ಸ್ಪಷ್ಟಪಡಿಸಿದ ಲಕ್ಷಣಗಳ ಮೇಲೆ ವಿಮರ್ಶೆ ನಡೆಯಬೇಕೇ ವಿನಹ ಕೇವಲ ಊಹೆಗಳಿಂದಲ್ಲ. ಅಥವಾ ಸ್ವಮತೀಯರ ಗ್ರಂಥಗಳಿಂದಲ್ಲ. ಸ್ವಮತೀಯ ಗ್ರಂಥಗಳಲ್ಲಿ ಪ್ರಮಾಣಗಳನ್ನೇನಾದರೂ ಉದಾಹರಿಸಿದ್ದರೆ ಗ್ರಾಹ್ಯವಾಗುತ್ತದೆ. ಇಲ್ಲದಿದ್ದರೆ ಸ್ವಮತೀಯರಿಗಷ್ಟೇ ವಿಶ್ವಾಸಾರ್ಹವಾಗುತ್ತದೆ.

ಇವರಿಗೆ ದೊರೆತ ಶಿಲ್ಪ ಶಾಸ್ತ್ರ ಗ್ರಂಥದ ಆಧಾರದ ಮೇಲೆಯೇ ಪ್ರತಿಮೆಗಳಿರಬೇಕೆಂಬ ಆಗ್ರಹ ಸರಿಯಲ್ಲ. ಪ್ರತ್ಯಕ್ಷವಿರುವ ಪ್ರತಿಮೆಗಳನ್ನು ಕುತರ್ಕಗಳಿಂದ ಅಲ್ಲಗಳೆಯವ ರೀತಿ ನಿಜಕ್ಕೂ ಆಶ್ಚರ್ಯ. ಮೂಲಸೀತಾರಾಮರ ಪ್ರತಿಮೆಗೆ ಕರ್ಣತಃ ವರ್ಣತಃ ಪೀಠತಃ ಪರಿಮಾಣತಃ ಸಾಮ್ಯವನ್ನು ತಿಳಿಸುತ್ತಿರುವ ಗ್ರಂಥ ಅರ್ಚಾಗತಿಕ್ರಮ. ಅದಕ್ಕನುಸಾರವಾಗಿ ಇಂದಿನವರೆಗೂ ಮೂಲಸೀತಾದೇವಿಯರ ಪ್ರತಿಮೆ ಉತ್ತರಾದಿಮಠದಲ್ಲಿ ಇದೆ ಎಂದು ರಾಯರಮಠದವರು ಒಪ್ಪುತ್ತ ಬಂದಿರುತ್ತಾರೆ. ಆದರೆ ಉತ್ತರಾದಿಮಠದಲ್ಲಿರುವ ಸೀತಾದೇವಿಯರ ಪ್ರತಿಮೆ ಹಿತ್ತಾಳೆ ಬಣ್ಣದ್ದಾಗಿದೆ ಎಂದು ತಿಳಿದ ಬಳಿಕ ತಾವೇ ಗೊಂದಲಕ್ಕೆ ಸಿಲುಕಿ ಉತ್ತರಾದಿಮಠದಲ್ಲಿರುವ ಮೂಲಸೀತಾದೇವಿಯನ್ನೂ ಈಗ ಅಲ್ಲಗಳೆವ ಸಾಹಸ ಮಾಡುತ್ತಿದ್ದಾರೆ. ಈ ಬಗ್ಗೆ ಸಜ್ಜನರು ಎಚ್ಚರದಿಂದಿರಬೇಕೆಂದು ಮಾತ್ರ ತಿಳಿಸಬಯಸುತ್ತೇವೆ.

ಸೀತಾ-ರಾಮಪ್ರತಿಮೆಗಳಲ್ಲಿ ಸಾಮ್ಯವನ್ನು ಉಭಯ ಸಮ್ಮತವಾದ ವಾಸಿಷ್ಠರಾಮಾಯಣ ಉಲ್ಲೇಖಿಸಿಲ್ಲ. ಹೀಗಿರುವಾಗ ಕಿರೀಟ ಯಾಕಿಲ್ಲ? ಪೀಠಸಾಮ್ಯವೇಕಿಲ್ಲ? ಮೂರು ಕಡೆ ಸೊಟ್ಟ ಯಾಕಿಲ್ಲ? ಉದ್ದ ಕಿವಿ ಯಾಕಿಲ್ಲ? ಎಂಬೆಲ್ಲ ಪ್ರಶ್ನೆಗಳಿಗೆ ಸಾಮ್ಯ ಹೇಳುವವರೇ ಉತ್ತರ ಕೊಡಬೇಕೇ ಹೊರತು ಉತ್ತರಾದಿಮಠದವರಲ್ಲ.

ಹೆಚ್ಚಿನ ವಿಷಯಗಳಿಗೆ ನೋಡಿರಿ- ಶೀರ್ಷಿಕೆ ''ಬಣ್ಣಚಿತ್ರಗಳ ಬಯಲಾಟ''

**ಸಂದೇಹ 8:** ಆಚಾರ್ಯದತ್ತವಾದ ಎಲ್ಲಾ ಪ್ರತಿಮೆಗಳಿಗೆ ಮತ್ತು ಮೂಲರಾಮಪ್ರತಿಮೆಗೆ ಕಿರೀಟವಿರುವಾಗ ಮೂಲಸೀತಾಪ್ರತಿಮೆಗೆ ಕಿರೀಟವೇಕಿಲ್ಲ?

**ಉತ್ತರ:** ❖ ಪ್ರಶ್ನೆಯ ಅಭಿಪ್ರಾಯ ಏನು? ಶ್ರೀಮದಾಚಾರ್ಯರಿಂದ ದತ್ತವಾದ ಎಲ್ಲಾ ಪ್ರತಿಮೆಗಳು ಒಂದೇ ತರಹ ಇರಬೇಕು ಎಂದು ಅಭಿಪ್ರಾಯವೇ?

ಹಾಗಿದ್ದರೆ ಆಚಾರ್ಯಪ್ರದತ್ತವಾದ ಎಲ್ಲಾ ಪ್ರತಿಮೆಗಳು ಒಂದೇ ಲೋಹ, ಒಂದೇ ಅಳತೆ, ಒಂದೇ ಬಣ್ಣದ್ದು ಎಲ್ಲಿದೆ? ಹಾಗೆ ಹೇಳಲು ಸಾಧ್ಯವೇ ಇಲ್ಲ. ಪ್ರತ್ಯಕ್ಷಕ್ಕೆ ವಿರುದ್ಧ. ಎಲ್ಲ ಪ್ರತಿಮೆಗಳಲ್ಲಿ ಬೇರೆ ಬೇರೆ ವ್ಯತ್ಯಾಸ ಹಾಗೂ ವಿಶೇಷತೆ ಇರುವಂತೆ ಈ ಪ್ರತಿಮೆಗಳಲ್ಲಿಯೂ ಇದೆ.

❖ ರಾಮ ಸೀತೆಯರ ಕೀರಿಟ ಒಂದೇ ತರಹ ಇರಬೇಕು ಎಂದು ಅಭಿಪ್ರಾಯವೇ?

ಪುರುಷದೇವತೆಯ ಕಿರೀಟ ಹಾಗೂ ಸ್ತ್ರೀದೇವತೆಯ ಕಿರೀಟಕ್ಕೆ ವ್ಯತ್ಯಾಸವನ್ನೂ ಶಿಲ್ಪಶಾಸ್ತ್ರವು ವಿಧಿಸಿದೆ. ಅಲ್ಲದೆ ಪ್ರತ್ಯಕ್ಷವಾಗಿಯೂ ಅನೇಕ ಕಡೆಗೆ ಜೋಡಿ ಪ್ರತಿಮೆಗಳಲ್ಲಿ ಈ ತರಹದ ಕಿರೀಟ ವ್ಯತ್ಯಾಸವನ್ನು ಕಾಣಬಹುದು. ಸ್ವಯಂ ಆಚಾರ್ಯ ಪ್ರದತ್ತವಾದ ಭಂಡಾರಕೇರಿ ಮಠದ ಹಾಗೂ ಭೀಮಸೇತು ಮುನಿವೃಂದ ಮಠದ ರಾಮಸೀತೆಯರ ಕಿರೀಟದಲ್ಲಿ ವ್ಯತ್ಯಾಸ ಇರುವುದನ್ನು ಸ್ಪಷ್ಟವಾಗಿ ನೋಡಬಹುದು.

❖ ರಾಮನಿಗೆ ಕಿರೀಟ ಇದ್ದಮಾತ್ರಕ್ಕೆ ಸೀತೆಗೂ ಕಿರೀಟ ಇರಬೇಕು ಅಂತ ನಿಯಮವೇ? ಈ ನಿಯಮಕ್ಕೂ ಶಿಲ್ಪಶಾಸ್ತ್ರದಲ್ಲಿ ಅಪವಾದಗಳಿವೆ. ಪ್ರತ್ಯಕ್ಷದಲ್ಲಿಯೂ ಈ ತರಹದ ಅಪವಾದಗಳನ್ನು ನೋಡಬಹುದು. ಅಲ್ಲದೇ ಈ ಹಿಂದೆ ತಿಳಿಸಿದಂತೆ ಮೂಲಸೀತಾರಾಮಪ್ರತಿಮೆಗಳು ಕೇವಲ ಆಚಾರ್ಯಪ್ರದತ್ತವಾದದ್ದು ಮಾತ್ರವಲ್ಲ. ಇವುಗಳು ಚತುರ್ಮುಖ ಬ್ರಹ್ಮಕರಾರ್ಚಿತವಾದ ಚತುರ್ಯುಗಮೂರ್ತಿಗಳು. ಕಾರಣ ಇತರ ಮೂರ್ತಿಗಳಲ್ಲಿರುವ ಲಕ್ಷಣಗಳು ಇಲ್ಲಿ ಇರಬೇಕೆಂದು ಆಗ್ರಹಿಸುವುದು ಸರಿಯಲ್ಲ.

ಹೆಚ್ಚಿನ ವಿಷಯಗಳಿಗೆ ನೋಡಿರಿ- ಶೀರ್ಷಿಕೆ ''ಬಣ್ಣಚಿತ್ರಗಳ ಬಯಲಾಟ''

**ಸಂದೇಹ 9:** ವಾಸಿಷ್ಠರಾಮಾಯಣದ ಹಸ್ತಪ್ರತಿಯಲ್ಲಿರುವ ಸೀತಾಲಕ್ಷಣದ ಶ್ಲೋಕಗಳನ್ನು ಮುದ್ರಿಸದಿರಲು ಕಾರಣವೇನು? ಗುರುವಂಶಕಥಾಕಲ್ಪತರುವಿಗಿಂತ ಪ್ರಾಚೀನಪ್ರಮಾಣಗಳಿವೆಯೇ? ಗುರುವಂಶಕಥಾಕಲ್ಪತರು ಪ್ರಮಾಣವಾಗುವುದಾದರೆ ಅರ್ಚಾಗತಿಕ್ರಮ ಏಕೆ ಪ್ರಮಾಣವಲ್ಲ?

**ಉತ್ತರ:** ಈಗ ಉಪಲಬ್ಧವಿರುವ ವಾಸಿಷ್ಠರಾಮಾಯಣದಲ್ಲಿ ಮೂಲಸೀತಾ ಪ್ರತಿಮೆಯ ಲಕ್ಷಣವನ್ನು ವರ್ಣಿಸುವ ಶ್ಲೋಕಗಳು ಉಪಲಬ್ಧವಾಗಿಲ್ಲ. ಆದ್ದರಿಂದ ಉಲ್ಲೇಖಿಸಿಲ್ಲ.

ಶ್ರೀಸತ್ಯಬೋಧತೀರ್ಥರ ಕಾಲದಲ್ಲಿ ರಚಿತವಾದ ಗುರುವಂಶಕಥಾಕಲ್ಪತರುವಿನಲ್ಲಿ ''ಮಾರ್ಕಂಡೇಯಪುರಾಣ'' ಊವಾಸಿಷ್ಠರಾಮಾಯಣ'' ಹಾಗೂ ''ಪುಷ್ಕರ'' ಎಂಬ ಪ್ರಾಚೀನ ಗ್ರಂಥಗಳನ್ನು ಆಧಾರವಾಗಿ ಉದಾಹರಿಸಿದ್ದಾರೆ. ಹೀಗಾಗಿ ಕವಿಗಳು ಉತ್ತರಾದಿಮಠದವರೇ ಆದರೂ ತಮ್ಮ ಪ್ರಾಮಾಣಿಕತೆಯನ್ನು ಪ್ರತಿಬಿಂಬಿಸಿರುವುದು ಸ್ಪಷ್ಟ. ಆ ಆಕರ ಗ್ರಂಥಗಳನ್ನು ಶೋಧಿಸುವುದು ನಮ್ಮ ಕೆಲಸವೇ ಹೊರತು ಮನಬಂದಂತೆ ಆಕ್ಷೇಪಿಸುವುದಲ್ಲ.

ಅದೇ ಕಾಲಕ್ಕೆ ರಚಿತವಾದ ಶ್ರೀವಾದೀಂದ್ರರದ್ದೆಂದು ಹೇಳುವ ಅರ್ಚಾಗತಿಕ್ರಮದಲ್ಲಿ ಯಾವುದೇ ಆಧಾರಗಳನ್ನು ನೀಡಲಾಗಿಲ್ಲ. ಈ ಗ್ರಂಥಕ್ಕೆ ಮೂಲ ಯಾವುದು? ನಿರಾಧಾರವಾಗಿದ್ದರೂ ಅವರ

ಮಾತೇ ಸ್ವಯಂ ಪ್ರಮಾಣ ಎಂದು ಒಪ್ಪಲು ಸಿದ್ಧರಾದ ರಾಯರ ಮಠದವರು ಅನೇಕ ಮೂಲ ಆಧಾರ ಸಹಿತವಾದ ಗುರುವಂಶಕಥಾಕಲ್ಪತರುವಿನ ಮಾತುಗಳನ್ನು ಒಪ್ಪಲೇ ಬೇಕಾದ ಅನಿವಾರ್ಯತೆ ಉಂಟು. ಅರ್ಚಾಗತಿಕ್ರಮ ಪ್ರಮಾಣವಾಗುವುದಾದರೆ ಗುರವಂಶಕಥಾಕಲ್ಪತರು ಏಕೆ ಪ್ರಮಾಣವಲ್ಲ? ಎಂದು ಕೇಳಬಹುದಲ್ಲವೇ?

**ಸಂದೇಹ 10.** ಉತ್ತರಾದಿಮಠದ ಎಲ್ಲ ಕಾವ್ಯಗಳು ಸ್ವಮಠೀಯ ಶಿಷ್ಯಭಕ್ತರಿಂದ ರಚಿಸಲ್ಪಟ್ಟವುಗಳೇ ಹೊರತು ಪರಮತೀಯನಾದ ಸೋಮನಾಥಕವಿವಿರಚಿತ ಶ್ರೀವ್ಯಾಸಯೋಗಿಚರಿತ್ರೆ, ಪರಮಠೀಯ ಮಧ್ವಕವಿವಿರಚಿತ ಶ್ರೀವಿಜಯೀಂದ್ರವಿಜಯದಂತೆ ಮತ - ಮಠಾತೀತ ವಲಯದಿಂದ ಬಂದವುಗಳೇನಲ್ಲ.

**ಉತ್ತರ:** ಇದೆಂತಹ ವಿಚಿತ್ರ ಆರೋಪ? ಹೀಗೆ ಹೇಳುವುದಾದರೆ ಶ್ರೀಮದಾಚಾರ್ಯರ ಬಗ್ಗೆ ದಾಖಲಿಸುವ ಸುಮಧ್ವವಿಜಯವನ್ನು ಮಠಾತೀತ ವಲಯದಿಂದ ಬಂದದ್ದಲ್ಲ ಎಂದು ಕಡೆಗಣಿಸಾಲುಗುತ್ತದೆಯೇ? ಶ್ರೀರಾಘವೇಂದ್ರಸ್ವಾಮಿಗಳ ಬಗ್ಗೆ ತಿಳಿಸಿಕೊಡುವ ಶ್ರೀರಾಘವೇಂದ್ರವಿಜಯವು ಮಠಾತೀತವಲಯದಿಂದ ಬಂದಿಲ್ಲ ಎಂದು ಬದಿಗೊತ್ತಲಾಗುತ್ತದೆಯೇ?

ಒಂದು ಕಾವ್ಯ ಅಥವಾ ದಾಖಲೆಯಲ್ಲಿರುವ ವಿಷಯಗಳ ಸತ್ಯಾಸತ್ಯತೆಯನ್ನು ನಿರ್ಣಯಿಸಿಕೊಳ್ಳುವುದಕ್ಕೆ ಕೆಲವು ಕ್ರಮಗಳುಂಟು. ಇತರ ಸಂವಾದಿ-ವಿಸಂವಾದಿ ಪ್ರಮಾಣಗಳನ್ನು ಅವಲೋಕಿಸಿ ಅವುಗಳಲ್ಲಿ ಯಾವುದು ಪ್ರಬಲ? ಯಾವುದು ದುರ್ಬಲ? ಯಾವುದು ಸಾವಕಾಶ? ಯಾವುದು ನಿರವಕಾಶ? ಯಾವುದು ಸಾಧಾರ? ಯಾವುದು ನಿರಾಧಾರ? ಇತ್ಯಾದಿಗಳನ್ನು ವಿಮರ್ಶೆ ಮಾಡಿ ಆ ವಿಷಯದ ಸತ್ಯತೆಯನ್ನು ನಿರ್ಧಾರ ಮಾಡಿಕೊಳ್ಳಬೇಕು. ಹೊರತು, ಆ ಕಾವ್ಯವನ್ನು ಅವರ ಶಿಷ್ಯರು, ಅವರ ಮಠದವರು ಬರೆದಿದ್ದರೆ ಅದು ಅಪ್ರಮಾಣ. ಮಹತ್ತ್ವ ಇಲ್ಲದ್ದು. ಬೇರೆಯವರ ಶಿಷ್ಯರು, ಬೇರೆ ಮಠದವರು ಬರೆದಿದ್ದರೆ ಅದು ಪ್ರಮಾಣ. ಹೆಚ್ಚು ಮಹತ್ತ್ವ ಉಳ್ಳದ್ದು ಎಂದು ಹೇಳುವುದು ಸರ್ವಥಾ ಸರಿ ಅಲ್ಲ.

ಅಲ್ಲದೇ, ಶ್ರೀಜಯತೀರ್ಥರ ಮೂಲಬೃಂದಾವನದ ಸ್ಥಳದ ಬಗ್ಗೆ, ಶ್ರೀಪಾದರಾಜರಿಗೆ ಬಿರುದು ಶ್ರೀರಘುನಾಥತೀರ್ಥರೇ ಕೊಟ್ಟ ಬಗ್ಗೆ, ಟಿಪ್ಪಣಿಕಾರರಾದ ಶ್ರೀನಿವಾಸಾಚಾರ್ಯರಿಗೆ ಶ್ರೀರಾಯರು ''ತೀರ್ಥ''ಎಂಬ ಬಿರುದು ಕೊಟ್ಟ ಬಗ್ಗೆ, ಕೃಷ್ಣದ್ವೈಪಾಯನರು ರಾಯರಿಗೆ ಆಯುಷ್ಯ ತಿಳಿಸಿದ ಬಗ್ಗೆ, ಇರುವ ದಾಖಲೆಗಳು ಮತ ಮಠಾತೀತ ವಲಯದಿಂದ ಬಂದ ದಾಖಲೆಗಳಾಗಿವೆ ಎಂಬುದರ ಬಗ್ಗೆ ಕಣ್ಣು ತೆರೆಸಬೇಕೆ? ಈ ವಿಷಯಗಳ ಬಗ್ಗೆ ಶ್ರೀರಾಯರ ಮಠದ ಅಧಿಕೃತಲೇಖಕರಾದ ದಿ.ಹೆಚ್. ಕೆ. ವೇದವ್ಯಾಸಾಚಾರ್ಯರೇ ''ಗುರುಚರಿತೆ''ಯಲ್ಲಿ ಅವರ ಮಠದ ದಾಖಲೆಗಳ, ಶಾಸನಗಳ ಆಧಾರದ ಮೇಲೆ ಎಲ್ಲಿ ಯಾವ ಸ್ಥಳದಲ್ಲಿ ಹೇಗೆ ಯಾವ ರೀತಿಯ ಮಾತುಕತೆಗಳಾದವು ಎಂಬೆಲ್ಲ ವಿಷಯಗಳನ್ನು ಸಾಧಾರವಾಗಿ ಬರೆದದ್ದರಿಂದ ಮುಂದಿನ ವರ್ಷದಿಂದ ಪಂಚಾಂಗದಲ್ಲಿ ಮಳಖೇಡ ಎಂಬ ತಿದ್ದುಪಡಿಮಾಡಲು ಸಿದ್ಧರಿದ್ದಾರಾ? ಲೇಖನಿ ಇದೆ, ದುಡ್ಡಿದೆ ಎಂದಾಕ್ಷಣ ಬರೆದದ್ದೆಲ್ಲ ಸತ್ಯವೆಂಬ ಭ್ರಮೆಯಿಂದ ಹೊರಗೆ ಬಂದು ವಿಮರ್ಶಿಸುವುದು ಲೇಸು. ಅವರೇ ಕೊಟ್ಟ ಪ್ರಮಾಣಗಳ ಗತಿಯೇನು? ಅವರ ಹಿರಿಯರು (ಅಧಿಕೃತ ಲೇಖಕರು) ಬರೆದದ್ದೆಲ್ಲಾ ಸುಳ್ಳಿನ ಕಂತೆಯೇ?

(ಕಾಶೀಮಠದ ದಾಖಲೆ ಮತ್ತು ಇನ್ನಿತರದಾಖಲೆಗಳ ಬಗ್ಗೆ ಹೆಚ್ಚಿನ ವಿವರಗಳಿಗೆ ನೋಡಿರಿ ''ಹೆಚ್ಚಿನ ಆಧಾರಗಳು'')

ವಾಚಕರೇ ! ಗಮನಿಸಿ... ಇದೇ ಗುರುಚರಿತೆಯನ್ನು ಪುನಃ ಮುದ್ರಣ ಮಾಡುವಾಗ ಮತ್ತು ಆಂಗ್ಲದಲ್ಲಿ ತರ್ಜುಮೆ ಮಾಡಿ ಪ್ರಕಟಿಸುವಾಗ ಮೇಲಿನ ವಿಷಯಗಳುಳ್ಳ ಪುಟಗಳನ್ನು ಕಿತ್ತುಹಾಕಿದ್ದಾರೆ. ಅವರೇ ಅವರ ಹಿರಿಯರಿಗೆ ದ್ರೋಹ ಮಾಡಿದ್ದಾರೆ. ಅಷ್ಟೇ ಅಲ್ಲದೇ ರಾಯರ ಮಠದ ಶ್ರೀವಿಜಯೀಂದ್ರರಿಂದಲೇ ಪ್ರವರ್ತಿತವಾದ ಶ್ರೀಕಾಶೀಮಠದ (ಗೌಡಸಾರಸ್ವತಮಠ) ದಾಖಲೆಗಳಲ್ಲಿ ಶ್ರೀಉತ್ತರಾದಿಮಠವೇ ಮೂಲಮಠ ಮತ್ತು ಕುಂಭಕೋಣಮಠ ಶ್ರೀವಿಬುಧೇಂದ್ರರಿಂದ ಆರಂಭವಾದದ್ದು ಎಂದಿರುವುದರಿಂದ ಈ ಮಠಾತೀತ ವಲಯದ ದಾಖಲೆಯನ್ನು (ತಾಮ್ರಶಾಸನವನ್ನು) ಅವರು ಒಪ್ಪಬೇಕಾಗುವುದು.

ಸ.ಸೀ.ಮೂ. ಕೃತಿಯಲ್ಲಿ ಶ್ರೀಜನಾರ್ದನಸೂರಿಗಳು ರಚನೆ ಮಾಡಿರುವ ವಿದ್ಯಾಧೀಶವಿಜಯ ಕಾವ್ಯದ ಕೆಲವು ಶ್ಲೋಕಗಳನ್ನು ಶ್ರೀವಿದ್ಯಾಧೀಶತೀರ್ಥರು ಮೂಲರಾಮನ ಪೂಜೆಯನ್ನು ಮಾಡಿದ ವಿಷಯದಲ್ಲಿ ಪ್ರಮಾಣ ಎಂಬುದಾಗಿ ಉದಾಹರಿಸಿದ್ದಾರೆ. ಇದರ ಮೇಲೆ ಮೂ.ಮತೇ ಲೇಖಕರು ಈ ಕೆಳಗಿನಂತೆ ಆಕ್ಷೇಪಿಸಿದ್ದಾರೆ–

**ಸಂದೇಹ 11.** ಶ್ರೀವಿದ್ಯಾಧೀಶರು ವೃಂದಾವನಸ್ಥರಾಗುವ ಸಮಯಕ್ಕೆ ಕವಿಗಳಿಗೆ ಕೇವಲ ಹತ್ತು ವರ್ಷಗಳು. ಶ್ರೀವ್ಯಾಸನಕೆರೆ ಪ್ರಭಂಜನಾಚಾರ್ಯರು ದ್ವೈತಮತಕ್ಕೆ ಶ್ರೀರಾಘವೇಂದ್ರಮಠದ ಕೊಡುಗೆ ಎನ್ನುವ ಪುಸ್ತಕದಲ್ಲಿ '' ಶ್ರೀವಿದ್ಯಾಧೀಶವಿಜಯದಲ್ಲಿ ವಾದೀಂದ್ರನೆಂಬ ವಾದಿಯನ್ನು ಜಯಿಸಿದ ಉಲ್ಲೇಖವಿದೆ. ಅದರ ವ್ಯಾಖ್ಯಾನದಲ್ಲಿ ಆ ವಾದೀಂದ್ರರು ಶ್ರೀಸುಧೀಂದ್ರಮಠದ ವಾದೀಂದ್ರರೆಂದು ಹೇಳಲಾಗಿದೆ. ಆದರೆ ವಿದ್ಯಾಧೀಶರಿಗೂ ವಾದೀಂದ್ರರಿಗೂ ಒಂದು ಶತಮಾನದಷ್ಟು ಅಂತರವಿದ್ದು ಅವರ ಭೇಟಿಗೆ ಆಸ್ಪದವಿಲ್ಲದಾಗಿ ವ್ಯಾಖ್ಯಾನದ ಆ ಭಾಗವು ಅಪ್ರಾಮಾಣಿಕವಾಗಿದೆ'' ಎಂದು ಶೋಧಿಸಿ ಪ್ರಕಟಿಸಿದ್ದಾರೆ. ಈ ಸಂಶಯಗಳಿಗೆ ಉತ್ತರಗಳು ಸಿಗುವುದೇ ಇಲ್ಲವಾಗಿದೆ. (ಪುಟ. 70)

ಉತ್ತರ: ಅ) ಕ್ರಿ.ಶ. 1620 ರಿಂದ 1670 ರ ಅವಧಿಯಲ್ಲಿ ರಚಿಸಲಾದ ಎಂದು ಸ.ಸೀ.ಮೂ.ದಲ್ಲಿ ಬರೆದದ್ದನ್ನು, ಕವಿಗಳಾದ ಶ್ರೀಜನಾರ್ದನಸೂರಿಗಳ ಕಾಲ ಎಂದು ತಾವೇ ತಪ್ಪು ಅರ್ಥ ಮಾಡಿಕೊಂಡು ಆಕ್ಷೇಪಿಸಿದ್ದಾರೆ. ಆದರೆ ಕೊಟ್ಟಿರುವ ಕಾಲದ ಅವಧಿಯು ಕಾವ್ಯರಚನೆಗೊಂಡ ಕಾಲವಾಗಿದೆ. ಹೀಗಾಗಿ ಮೂ.ಮತೇ ಲೇಖಕರು ಹೇಗಾದರೂ ಆಕ್ಷೇಪಿಸಬೇಕೆಂಬುದೇ ತಮ್ಮ ಧ್ಯೇಯ ಎಂದು ತಾವೇ ತೋರಿಸಿಕೊಂಡಿದ್ದಾರೆ. ಇದು ವಿತಂಡವಲ್ಲದೇ ಮತ್ತೇನು?

ಆ) ಡಾ॥ ಪ್ರಭಂಜನಾಚಾರ್ಯರು ಸಂಶೋಧಿಸಿ ಪ್ರಕಟಿಸಿರುವ ವಿಷಯ ಸ್ವಾಗತಾರ್ಹವಾಗಿದೆ. ''ವ್ಯಾಖ್ಯಾನದ ಆ ಭಾಗವು ಅಪ್ರಾಮಾಣಿಕ ಎಂದು ಬರೆದಿದ್ದಾರೆಯೇ ಹೊರತು ಸಂಪೂರ್ಣ ಕಾವ್ಯವನ್ನಲ್ಲ. ಒಂದು ಶತಮಾನದಷ್ಟು ಅಂತರವಿದ್ದು (ಶ್ರೀವಿದ್ಯಾಧೀಶರಿಗೂ ಶ್ರೀವಾದೀಂದ್ರರಿಗೂ) ಭೇಟಿಗೆ ಆಸ್ಪದವಿಲ್ಲದ ವಿಷಯವನ್ನು ಕವಿಗಳಾದ ಶ್ರೀಜನಾರ್ದನ ಸೂರಿಗಳು ಬರೆದಿರಲು ಸಾಧ್ಯವೇ ಇಲ್ಲ. ಯಾಕೆಂದರೆ ಕವಿಗಳೇ ಅದೇ ಕಾವ್ಯದಲ್ಲಿ ಶ್ರೀವಿದ್ಯಾಧೀಶರು ತಂಜಾವೂರಿಗೆ ಹೋಗಿ ಅಲ್ಲಿದ್ದ ಶ್ರೀಸುಧೀಂದ್ರತೀರ್ಥರನ್ನು ಭೇಟಿಯಾಗಿ ಕುಶಲ ವಾರ್ತೆಗೈದದ್ದನ್ನು ಉಲ್ಲೇಖಿಸಿದ್ದಾರೆ.

**ಶ್ರೀರಂಗಾತ್ ಸ ನಿರೀಯ ತಂಜನಗರೀರಮ್ಯೋಪವನ್ಯಾಮಿತಃ**
**ತತ್ರತ್ಯೈ ರಘುನಾಥಪಾರ್ಥಿವಮುಖ್ಯೈರಭ್ಯರ್ಚಿತಃ ಸಾದರಮ್ ।**
**ಸಂಭಾವ್ಯಾಥ ಸುಧೀಂದ್ರಯೋಗಿತಿಲಕಂ ಶ್ರೀಕುಂಭಕೋಣಾದಿಕ**
**ಗ್ರಾಮೇಷ್ವಾನಮದಿಂದಿರಾಪ್ರಣಯಿನಂ ಮೋದೇನ ನಾಣೇಯಸಾ ॥ ಸ.8 ಶ್ಲೋ.70**

''ಶ್ರೀವಿದ್ಯಾಧೀಶರು ಇಕ್ಕೇರಿ ಗ್ರಾಮದಲ್ಲಿದ್ದಾಗ ರಂಗೋಜಿ ಭಟ್ಟನೊಡನೆ ''ದರ್ಶನಾದಭ್ರಶಿರಸಃ'' ಎಂಬ ಶ್ಲೋಕದ ಮೇಲೆ ವಾಕ್ಯಾರ್ಥಮಾಡಿ ಸೋಲಿಸಿದರು. ಇದೇ ಸಮಯದಲ್ಲಿ ವಾದೀಂದ್ರನೆಂಬ ರಂಗೋಜಿಭಟ್ಟನ ಶಿಷ್ಯನಿಗೂ ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಮ್ಮಂದಿರಾದ ಗುರುರಾಜರಿಗೂ ವಾಕ್ಯಾರ್ಥವಾಯಿತು. ಇದರ ವಿವರಗಳು ''ವಾದೀಂದ್ರಧಿಕ್ಕಾರ'' ಎಂಬ ಹಸ್ತಲಿಖಿತ ಪುಸ್ತಕದಲ್ಲಿ ಬರೆದಿಡಲ್ಪಟ್ಟಿವೆ'' ಎಂದು ಖ್ಯಾತ ಸಂಶೋಧಕರಾದ ಪ್ರೊ.ಕೆ.ಟಿ.ಪಾಂಡುರಂಗೀಯವರು ಸಂಶೋಧಿಸಿ ಪ್ರಕಟಿಸಲಾದ ಅಣುವಿದ್ಯಾಧೀಶವಿಜಯದ ಪುಟ x, xi ರಲ್ಲಿ ಸ್ಪಷ್ಟವಾಗಿದೆ. ಕಾಲಾಂತರದಲ್ಲಿ ಹಸ್ತಪ್ರತಿಮಾಡುವಾಗ ಶ್ರೀಸುಧೀಂದ್ರಮಠದ ವಾದೀಂದ್ರರು ಎಂದು ಸೇರಿರಬೇಕು. ಹೀಗಾಗಿ ಈ ವಾಕ್ಯ ಪ್ರಕ್ಷಿಪ್ತವೆಂದು ಒಪ್ಪಬೇಕಾಗುವುದು. ಇಷ್ಟರಿಂದಲೇ ಐತಿಹಾಸಿಕ ಸಮಕಾಲೀನ ಕಾವ್ಯವನ್ನು ಅಲ್ಲಗಳೆವುದು ಸರಿಯಲ್ಲ. ಈ ಕಾವ್ಯ ಅರ್ಚಾಗತಿಕ್ರಮ ಹಾಗೂ ವಿಜಯೀಂದ್ರವಿಜಯ ಕಾವ್ಯಗಳಿಗಿಂತ ಪ್ರಾಚೀನವಾದ್ದರಿಂದ ಹೇಗಾದರೂ ಮಾಡಿ ಅಲ್ಲಗಳೆಯಬೇಕೆಂಬುದೇ ಮೂ.ಮಠೇ ಲೇಖಕರ ಹುನ್ನಾರವಾಗಿದೆ ಎನ್ನದೇ ಗತಿಯಿಲ್ಲ.

ಇ) ಅಲ್ಲದೇ ಈ ಕಾವ್ಯದ ಬಗ್ಗೆ ಇದರ ವ್ಯಾಖ್ಯಾನದ ಬಗ್ಗೆ ಮಹಾನ್ ಟಿಪ್ಪಣೀಕಾರರಾದ ಶ್ರೀಸತ್ಯಧರ್ಮತೀರ್ಥರು ತಮ್ಮ ಭಾಗವತ ಟಿಪ್ಪಣಿಯಲ್ಲಿ ''ಚಕ್ರೇ ಶಿತಾರ್ಪಣ ಮಹೋತ್ಸವ ಮನ್ವಗಾ ಇತಿ ಶ್ರೀವಿದ್ಯಾಧೀಶವಿಜಯವ್ಯಾಖ್ಯಾನೇ..'' 8.9.13 ಎಂಬುದಾಗಿ ಉಲ್ಲೇಖಿಸುತ್ತಾರೆ ಎಂದ ಮೇಲೆ ಈ ಕಾವ್ಯದ ಮತ್ತು ಅದರ ವ್ಯಾಖ್ಯಾನದ ಪ್ರಾಮಾಣಿಕತೆ ಬಗ್ಗೆ ಎರಡು ಮಾತಿಲ್ಲ.

**ಸಂದೇಹ 12.** ಸತ್ಯನಿಧಿವಿಲಾಸದಲ್ಲಿ ಶ್ರೀರಘುನಾಥತೀರ್ಥರನ್ನು ವರ್ಣಿಸಿದ ಕವಿಗಳು ಅವರ ಗುರುಗಳಾದ ವಿದ್ಯಾನಿಧಿಗಳಿಗೆ ಮೂಲರಾಮನ ಪೆಟ್ಟಿಗೆಯು ಬಂದಿರುವ ಮುಖ್ಯವಾದ ವಿಷಯ ಬಿಡಲು ಕಾರಣವೇನು? ಮೂಲರಾಮದೇವರನ್ನು ಆ ಮಠದ ಯಾವುದೇ ಸಂನ್ಯಾಸಿಗಳು ಪೂಜಿಸಿರುವುದನ್ನು ಸತ್ಯನಿಧಿವಿಲಾಸದಲ್ಲಿ ವರ್ಣಿಸಿಲ್ಲವೇಕೆ? (ಪುಟ. 71)

**ಉತ್ತರ:** ಈ ತರಹದ ಆಕ್ಷೇಪಗಳನ್ನು ರಾಯರ ಮಠದ ಕಾವ್ಯಗಳಲ್ಲಿ ಪುಷ್ಕಳವಾಗಿ ಎತ್ತಿ ತೋರಿಸಬಹುದು. ಶ್ರೀರಾಘವೇಂದ್ರವಿಜಯದಲ್ಲಿ ಮೂಲರಾಮ ಎಂಬ ಶಬ್ದ ಎಷ್ಟು ಬಾರಿ ಬಂದಿದೆ? ಒಂದು ಬಾರಿಯೂ ಬಂದಿಲ್ಲ ಎಂಬುದೇ ಆಶ್ಚರ್ಯ. ಅದೇ ರಾಘವೇಂದ್ರವಿಜಯದಲ್ಲಿ ಶ್ರೀಪದ್ಮನಾಭತೀರ್ಥಾದಿಗಳನ್ನು ವರ್ಣಿಸಿರುವ ಕವಿಗಳು ಶ್ರೀರಘುನಂದರ ಬಗ್ಗೆ ಹಾಗೂ ಅವರು ತಿರುಗಿ ರಾಮನನ್ನು ಸಂಸ್ಥಾನಕ್ಕೆ ತಂದ ಮುಖ್ಯ ವಿಷಯದ ಬಗ್ಗೆ ಚಕಾರವೆತ್ತದಿರಲು ಕಾರಣವೇನು? ಶ್ರೀವಿಜಯೀಂದ್ರರೇ ಮೊದಲಾದವರನ್ನು ವಿಶೇಷವಾಗಿ ವರ್ಣಿಸಿರುವ ಕವಿಗಳು ಶ್ರೀರಘುನಂದನರ ಬಗ್ಗೆ ಒಂದು ಶ್ಲೋಕದಿಂದಲೂ ಪೂರ್ಣ ವರ್ಣಿಸದೇ ಒಂದೇ ಶಬ್ದದಲ್ಲಿ ಸೂಕ್ಷ್ಮವಾಗಿ ಹೇಳಿದ್ದರ ರಹಸ್ಯವೇನು? ಅಂತ ತಿರುಗಿ ಪ್ರಶ್ನಿಸಿದರೆ ಉತ್ತರವಿದೆಯೇ? ಶ್ರೀನರಹರಿತೀರ್ಥರು ಗಜಪತಿರಾಜನ ಆಸ್ಥಾನದಿಂದ ಮೂಲಪ್ರತಿಮೆಗಳನ್ನು ತಂದ ಘಟನೆಯನ್ನು ತಿಳಿಸುವಾಗಲೂ ರಾಘವೇಂದ್ರವಿಜಯಕಾರರು ಮೂಲಸೀತಾ ಪ್ರತಿಮೆ ಬಗ್ಗೆ ಚಕಾರ ಎತ್ತದೆ ಕೇವಲ ರಾಮಪ್ರತಿಮೆ ತಂದರು ಎಂದು ತಿಳಿಸಿದ್ದೇಕೆ? ಅದೇ ರಾಘವೇಂದ್ರವಿಜಯದಲ್ಲಿ ಶ್ರೀಮದಾಚಾರ್ಯರು ಶ್ರೀಪದ್ಮನಾಭತೀರ್ಥರಿಗೆ, ಶ್ರೀರಘುನಂದನರು ಶ್ರೀಸುರೇಂದ್ರರಿಗೆ, ಶ್ರೀಸುರೇಂದ್ರರು ಶ್ರೀವಿಜಯೀಂದ್ರರಿಗೆ ಶ್ರೀಮೂಲರಾಮಾದಿಸಂಸ್ಥಾನದ್ಯೋತಕವಾದ ಪ್ರತಿಮೆಗಳನ್ನು ಪ್ರದಾನ ಮಾಡಿದ್ದರ ಬಗ್ಗೆ ಏಕೆ ಉಲ್ಲೇಖಿಸಲಿಲ್ಲ?

ಸತ್ಯನಿಧಿವಿಲಾಸದಲ್ಲಿ ಮತ್ತು ಸರ್ವತೋವಿಲಾಸ ಎಂಬ ಪ್ರಾಚೀನವಾದ ವ್ಯಾಖ್ಯಾನದಲ್ಲಿಯೂ ಮೂಲರಾಮನ ಉಲ್ಲೇಖವಿರುವುದನ್ನು ಗಮನಿಸಬಹುದು. ( ಈ ವ್ಯಾಖ್ಯಾನವನ್ನು ಶ್ರೀಸತ್ಯಾನಾಥತೀರ್ಥರ ಶಿಷ್ಯರಾದ ಲಕ್ಷ್ಮೀಶ್ವರ ನರಸಿಂಹಾಚಾರ್ಯರು ರಚನೆ ಮಾಡಿದ್ದಾರೆ. ಆದ್ದರಿಂದ ಈ ವ್ಯಾಖ್ಯಾನವು ಕಾವ್ಯರಚನೆಯಾದ ಅತಿಸಮೀಪ ಕಾಲದಲ್ಲಿಯೇ ರಚನೆಯಾಗಿದೆ ಎಂದು ಸಿದ್ಧವಾಗುತ್ತದೆ.) ಇದಲ್ಲದೇ ಉತ್ತರಾದಿಮಠದ ಇನ್ನನೇಕ ಐತಿಹಾಸಿಕ ಕಾವ್ಯಗಳಲ್ಲಿ ಮೂಲರಾಮನ ಉಲ್ಲೇಖ ಸ್ಪಷ್ಟವಾಗಿ ಇದೆ.

**ಸಂದೇಹ 13:** ಪ್ರತಿಮೆಗಳ ಸಂಖ್ಯೆಗಳ ವಿಷಯದಲ್ಲಿ ಶ್ರೀಸತ್ಯಾಭಿನವರಿಗೂ, ಶ್ರೀಸತ್ಯಸಂಧರಿಗೂ, ಶ್ರೀಸತ್ಯನಿಧಿ-ವಿಲಾಸಕಾರರಿಗೂ ಪರಸ್ಪರ ವಿರೋಧವುಂಟು. (ಪುಟ.72)

**ಉತ್ತರ:** ಶ್ರೀಸತ್ಯನಿಧಿವಿಲಾಸಕಾರರು ಮತ್ತು ಶ್ರೀಸತ್ಯಾಭಿನವತೀರ್ಥರು ಶ್ರೀಪದ್ಮನಾಭತೀರ್ಥರಿಗೆ ಶ್ರೀಮದಾಚಾರ್ಯರಿಂದ 8 ಮೂರ್ತಿಗಳು ಪ್ರಾಪ್ತವಾಯಿತು ಎಂದು ಹೇಳಿದ್ದಾರೆ. ಶ್ರೀಸತ್ಯಸಂಧತೀರ್ಥರು 28 ಮೂರ್ತಿಗಳ ಉಲ್ಲೇಖವನ್ನು ಮಾಡಿದ್ದಾರೆ.

ಬ್ರಹ್ಮಕರಾರ್ಚಿತವಾದ ಶ್ರೀಮೂಲರಾಮ, ಶ್ರೀಮೂಲಸೀತಾ, ಸಂಸ್ಥಾನಪ್ರತಿಮೆಯಾದ ಶ್ರೀದಿಗ್ವಿಜಯ ರಾಮ ಹಾಗೂ ಶ್ರೀಮನ್ನಾರಾಯಣ-ವೇದವ್ಯಾಸದೇವರಿಂದ ಪ್ರದತ್ತವಾದದ್ದು 5 ವ್ಯಾಸಮುಷ್ಟಿಗಳು. ಈ ಕಾರಣಕ್ಕಾಗಿ ಈ 8 ಭಗವದಧಿಷ್ಠಾನಗಳನ್ನು ವಿಶಿಷ್ಟ ಎಂದು ವಿವಕ್ಷೆಮಾಡಿ ಸತ್ಯನಿಧಿವಿಲಾಸದಲ್ಲಿ ಹೇಳಿದ್ದಾರೆ. ಅದನ್ನೇ ಸತ್ಯಾಭಿನವರೂ ಉದಾಹರಿಸಿದ್ದಾರೆ.

ಇನ್ನು ಶ್ರೀಸತ್ಯಸಂಧತೀರ್ಥರು ಮಹಾಸಂಸ್ಥಾನದಲ್ಲಿ ಪರಂಪರಾಗತವಾಗಿ ಪೂಜೆಗೊಳ್ಳುತ್ತಿರುವ ಎಲ್ಲ ವಿಶಿಷ್ಟ ಭಗವದಧಿಷ್ಠಾನಗಳನ್ನು ತಿಳಿಸುವ ಉದ್ದೇಶ್ಯದಿಂದ 28 ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಈ ಮೂರೂ ಮಹನೀಯರಿಗೂ ಯಾವುದೇ ವಿರೋಧಗಳು ಬರುವುದಿಲ್ಲ.

ಹೀಗೆ ವಿವಕ್ಷಾ ವಿಶೇಷದಿಂದ ನಿರೂಪಣೆ ಮಾಡುವ ಪದ್ಧತಿಗಳು ಶಾಸ್ತ್ರ ಹಾಗೂ ವ್ಯವಹಾರದಲ್ಲಿ ಕಂಡಿದೆ. ಒಂದು ಸ್ಥಾನದಲ್ಲಿ, ಒಬ್ಬ ವ್ಯಕ್ತಿಯಲ್ಲಿ ಒಂದು ವಸ್ತು ಒಂದು ಗುಣ ಇದೆ ಎಂದು ಹೇಳಿದಾಗ ಇತರ ವಸ್ತುಗಳು ಉಳಿದ ಗುಣಗಳು ಇಲ್ಲ ಎಂದು ಅರ್ಥಮಾಡಲು ಬರುವುದಿಲ್ಲ. ಹಾಗೆ ಮಾಡುವುದಾದರೆ-

1) ವಿಜ್ಞಾನಮಾನಂದಂ ಬ್ರಹ್ಮ ಎಂಬುದಾಗಿ ಒಂದು ಶ್ರುತಿ, ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಎಂಬುದಾಗಿ ಇನ್ನೊಂದು ಶ್ರುತಿ ಹೇಳುತ್ತಿದೆ. ಒಂದು ಶ್ರುತಿಯಲ್ಲಿ ಆನಂದವನ್ನು ಹೇಳಿದ್ದಾರೆ. ಆನಂತ್ಯವನ್ನು, ಸತ್ಯತ್ವವನ್ನು ಹೇಳಿಲ್ಲ. ಇನ್ನೊಂದು ಶ್ರುತಿಯಲ್ಲಿ ಆನಂದವನ್ನು ಹೇಳಿಲ್ಲ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿದೆ ಎನ್ನಬೇಕೆ?

2) ರಾಘವೇಂದ್ರವಿಜಯದಲ್ಲಿ ಗಜಪತಿ ಕೋಶಾಗಾರದಿಂದ ಶ್ರೀನರಹರಿತೀರ್ಥರು ರಾಮನ ಪ್ರತಿಮೆಯನ್ನು ತಂದದ್ದನ್ನು ಮಾತ್ರ ಉಲ್ಲೇಖಿಸಿದ್ದಾರೆ. ಹಾಗೆಂದಾಕ್ಷಣ ಸೀತಾಪ್ರತಿಮೆ ತಂದಿಲ್ಲ ಎಂದರ್ಥವೇ?

3) ತಿರುಪತಿಯಲ್ಲಿ ವೆಂಕಪ್ಪ, ಮಂಚಾಲಿಯಲ್ಲಿ ರಾಘಪ್ಪ ಎಂಬ ಪ್ರಸಿದ್ಧ ಲೋಕಸಿದ್ಧವಾದ ಉಕ್ತಿಗೆ ತಿರುಪತಿಯಲ್ಲಿ ವೆಂಕಟೇಶದೇವರು ಮಾತ್ರ ಇದ್ದಾರೆ ವರಾಹ ಮೊದಲಾದ ದೇವರು ಇಲ್ಲ ಎಂದಾಗಲಿ, ಮಂತ್ರಾಲಯದಲ್ಲಿ ರಾಘವೇಂದ್ರಸ್ವಾಮಿಗಳು ಮಾತ್ರ ಇದ್ದಾರೆ ಪ್ರಾಣದೇವರು, ವಾದೀಂದ್ರರು ಮಂಚಾಲಮ್ಮ ಮೊದಲಾದವರು ಇಲ್ಲ ಎಂದಾಗಲಿ ಅರ್ಥವಾಗುತ್ತದೆಯೇ?

ಹೀಗೆ ಯಾರೂ ತಿಳಿಯುವುದಿಲ್ಲ. ಹಾಗಾದರೆ ಯಾವುದೋ ಒಂದು ವಿಶಿಷ್ಟ ವಿವಕ್ಷೆಯಿಂದ ಇವುಗಳನ್ನು ಹೇಳಿದ್ದಾರೆ ಎಂದೇ ಅರ್ಥ ಮಾಡುತ್ತಾರೆ. ಅದೇ ರೀತಿಯಾಗಿ ಒಂದು ವಿಶಿಷ್ಟ ವಿವಕ್ಷೆಯನ್ನು ಇಟ್ಟುಕೊಂಡು ಶ್ರೀಸತ್ಯನಿಧಿವಿಲಾಸಕಾರರು, ಹಾಗೂ ಶ್ರೀಸತ್ಯಾಭಿನವರು, ಶ್ರೀಸತ್ಯಸಂಧರು ಹೇಳಿದ್ದಾರೆ ಎಂದು ತಿಳಿಯಬೇಕು.

**ಸಂದೇಹ 14.** ಅನಾದಿಸಂಪ್ರದಾಯದಂತೆ ಮಸ್ತಕದಲ್ಲಿ ಸಾಲಿಗ್ರಾಮವನ್ನಿಟ್ಟು ಅಭಿಷೇಕ ಮಾಡಿ ಪೀಠದಲ್ಲಿ ಶಿಷ್ಯನನ್ನು ಸ್ಥಾಪಿಸುವುದೇ ಮುಖ್ಯ ಕಾರ್ಯ. ಈ ರೀತಿ ವಿದ್ಯಾನಿಧಿಗಳಿಗೆ ನಡೆಯಿತೇ?

''**ಪಶ್ಚಾತ್ ವಿದ್ಯಾನಿಧಿಮುನೀಶ್ವರಃ । ಶ್ರೀರಾಮಚಂದ್ರತೀರ್ಥಸ್ಯ ವೃಂದಾವನಸುಸನ್ನಿಧೌ ॥ ಸ್ವಸ್ಯ ದಕ್ಷಿಣಹಸ್ತೇನ ಶಂಖತೋಯೇನ ಸತ್ತಮಃ । ಸ್ವಯಂ ಪಟ್ಟಾಭಿಷಿಚ್ಯಾಥ...**'' ಎಂದು ಗುರುಚರ್ಯಾದಲ್ಲಿ ಹೇಳಲಾಗಿದೆ. ಆದ್ದರಿಂದ ವಿದ್ಯಾನಿಧಿಗಳಿಗೆ ಮೂಲರಾಮಾದಿ ಪ್ರತಿಮೆಗಳು ಪೂಜಾರ್ಥವಾಗಿ ಸ್ವೀಕರಿಸುವ ಅಧಿಕಾರ ಒದಗಿ ಬಂದಿತು ಎಂಬುದು ಎಷ್ಟರ ಮಟ್ಟಿಗೆ ಸಾಧ್ಯವಾದೀತು? ಪರಂಪರಾವಿಚ್ಛಿತ್ತಿ ಎಂಬುದು ಅವರ ಗ್ರಂಥದಲ್ಲೇ ದಾಖಲಾಗಿಲ್ಲವೇ? (ಪುಟ 73)

ಉತ್ತರ: ಅ. ಈ ಅನಾದಿಸಂಪ್ರದಾಯಕ್ಕೆ ಅಪವಾದಗಳೇ ಇಲ್ಲವೆಂದು ಇವರ ನಿರ್ಣಯವೋ? ಹಾಗಾದರೆ ಶ್ರೀರಾಯರ ಮಠದ ಹಿಂದಿನ ಪೀಠಾಧಿಪತಿಗಳಿಗೆ (ಶ್ರೀಸುಯತೀಂದ್ರತೀರ್ಥರಿಗೆ) ಯಾವಾಗ ಯಾರಿಂದ ಎಲ್ಲಿ ಅಭಿಷೇಕವಾಗಿ ಅವರು ಅವರ ಶ್ರೀರಾಮನನ್ನು ಮುಟ್ಟಿದರು? ಅಧಿಕಾರ ಹೇಗೆ ಬಂದಿತು?



ಈ ಚಿತ್ರದಲ್ಲಿ ಶ್ರೀಸುಯತೀಂದ್ರತೀರ್ಥರು ಶ್ರೀರಾಯರ ಮೂಲ ವೃಂದಾವನದ ಎದುರಿಗೆ ತಾವೇ ತಮ್ಮ ಸ್ವಹಸ್ತದಿಂದ ಅಭಿಷೇಕ ಮಾಡಿಕೊಳ್ಳುತ್ತಿದ್ದಾರೆ. (04-07-2006). ಬೇರೊಬ್ಬ ಗೃಹಸ್ಥರು ಅವರ ಗುರುಗಳ ಬಲಗೈಯಲ್ಲಿರುವ ಶಂಖದಲ್ಲಿ ಅಭಿಷೇಕದ ಜಲ ಹಾಕುತ್ತಿರುವುದನ್ನು ಸ್ಪಷ್ಟ ಕಾಣಬಹುದಾಗಿದೆ.

ಆ. ಶ್ರೀಧೀರೇಂದ್ರತೀರ್ಥರು ಕುಂಭಕೋಣದಲ್ಲಿ ಶ್ರೀವಿಜಯೀಂದ್ರತೀರ್ಥರ ವೃಂದಾವನದ ಮುಂದೆ ತಾವೇ ಸ್ವಯಂ ಆಶ್ರಮವನ್ನು ತೆಗೆದುಕೊಂಡು ನಂತರ ಕೆಲ ದಿನ ಸಂಸ್ಥಾನದ ಪ್ರತಿಮೆಗಳನ್ನು ಪೂಜಿಸಿದರು ಎಂದು ರಾಯರಮಠದ ಪರಂಪರೆಯವರು ಹೇಳುತ್ತಾರಲ್ಲಾ? ಗುರುಚರಿತೆಯಲ್ಲೂ ಇದನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ.

ಇ. 'ಗುರುಚರ್ಯಾ' ಎಂಬ ಗ್ರಂಥದ ಮೂಲಪ್ರತಿ ನಂಜನಗೂಡಿನಲ್ಲಿದೆ ಎಂದು ದಿ|| ಬಿ.ಎನ್.ಕೆ.ರವರೇ ತಿಳಿಸಿದ್ದಾರೆ. ಅದರ ಆಧಾರದಲ್ಲಿಯೇ ಬಿ.ಎನ್.ಕೆ ಅವರು ಉತ್ತರಾದಿಮಠದ ಮೇಲೆ ಅನೇಕ ಆಕ್ಷೇಪಗಳನ್ನು ಮಾಡಿದ್ದಾರೆ. ಅವರನ್ನು ಅನುಸರಿಸಿ ಶ್ರೀರಾಯರಮಠದವರೂ ಆ ಗ್ರಂಥವನ್ನು ಪ್ರಮಾಣ ಎಂದು ಒಪ್ಪುವುದಾದರೆ ಗುರುಚರ್ಯಾದಲ್ಲಿ ರಾಯರಮಠದವರಿಗೆ ಬಾಧಕವಾಗುವ ಅನೇಕ ವಿಷಯಗಳನ್ನು (ಬಿ.ಎನ್.ಕೆ.ರವರೂ ಸೇರಿ) ಮುಚ್ಚಿಟ್ಟಿರುವುದೇಕೆ? ಗುರುಚರ್ಯಾ ಮೂಲರಾಮಪ್ರತಿಮೆಯ ಬಗ್ಗೆ ಏನು ಹೇಳುತ್ತಿದೆ ಎಂದು ಜನರ ಮುಂದಿಡಲು ಹಿಂಜರಿಕೆ ಯಾಕೆ? ತಮಗೆ ಬೇಕಾದ ವಿಷಯ ಮಾತ್ರ ಸ್ವೀಕರಿಸಿ ಜೀರ್ಣಿಸಿಕೊಳ್ಳಲಾಗದ ವಿಷಯ ಬಿಟ್ಟು ಬಿಡುವುದನ್ನು ಮೊದಲಿನಿಂದಲೂ ಮಾಡಿಕೊಂಡು ಬಂದಿರುವುದನ್ನು 1949 ರಲ್ಲಿಯೇ ''ಮಧ್ವಾಚಾರ್ಯರ ಮೂಲಸಂಸ್ಥಾನ'' ಎಂಬ ಪುಸ್ತಕದಲ್ಲಿ ಶ್ರೀಕಟ್ಟಿ ಮಾಧವಾಚಾರ್ಯರು ಸ್ಪಷ್ಟ ತೋರಿಸಿದ್ದಾರೆ. ಅದೇ ಜಾಡಿನಲ್ಲಿ ಮುಂದುವರೆಯುವವರಿಗೆ ಹೇಳುವುದೇನು?

ಇದೇ ಗುರುಚರ್ಯಾ ಗ್ರಂಥದಲ್ಲಿ ಅವರಿಗೆ ಬಾಧಕವಾದ್ದರಿಂದ ಮುಚ್ಚಿಟ್ಟಿರುವ ಕೆಲ ಅಂಶಗಳು, ವಿಷಯಗಳು ಹೀಗಿವೆ–

1. ಸದಾಚಾರಸಂಪನ್ನರಾದ, ಅತ್ಯಂತ ಬುದ್ಧಿವಂತರಾದ, ವಿಶ್ವಸನೀಯರಾದ, ಪೀಠಕ್ಕೆ ಅರ್ಹರಾದ, ತುಳುದೇಶದವರಾದ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರ ಶಿಷ್ಯರಾಗಿದ್ದರು.

**ತದಾಽಸ್ಮನ್ನಿಕಟೇ ಗ್ರಂಥವ್ಯಾಸಂಗಾರ್ಥಂ ಸಮಾಗತಃ ।**
**ಸದಾಚಾರಾದಿಸಂಪನ್ನೋ ತುಳವೋ ಬುದ್ಧಿಮಾನಪಿ ।**
**ವಿಶ್ವಾಸವಾನಯಂ ವಿದ್ಯಾನಿಧಿಃ ಸಂಸ್ಥಾನಮರ್ಹತಿ ॥**

2. ಶ್ರೀವೇದವ್ಯಾಸತೀರ್ಥರಲ್ಲಿ ಆಶ್ರಮ ಸ್ವೀಕರಿಸಿದ ಶ್ರೀನಾರಾಯಣಯತಿ ಎಂಬ ಬಿಡಿ ಸನ್ಯಾಸಿಗಳು ದುಂಡುಪೀಠ ಇರುವ ಎರಡು ರಾಮಪ್ರತಿಮೆಯನ್ನು ಬಂಕಾಪುರದಲ್ಲಿ ಮಾಡಿಸಿ ಒಂದನ್ನು ತಿಮ್ಮಣ್ಣ ಭಟ್ಟ ಎಂಬುವವರಿಗೆ ಕೊಟ್ಟು ಒಂದನ್ನು ತಾವೇ ಪೂಜಿಸುತ್ತಿದ್ದರು.

ಗುರುದ್ರೋಹ ಮಾಡಿದ ಕಾರಣ ಶ್ರೀವೇದವ್ಯಾಸತೀರ್ಥರಿಂದ ಬಹಿಷ್ಕೃತರಾದ ಅವರು ದಂಡಪಲ್ಲಟ ಮಾಡಿ ಶ್ರೀಸುಧೀಂದ್ರತೀರ್ಥರ ಶಿಷ್ಯರಾದರು. ಆಗ ಶ್ರೀಸುಧೀಂದ್ರತೀರ್ಥರು ನಾರಾಯಣಯತಿಗಳಲ್ಲಿದ್ದ ರಾಮಪ್ರತಿಮೆಯನ್ನು ತಮಗೆ ನೀಡಲು ತಿಳಿಸಿದರು. ಅಲ್ಲದೇ ''ಶ್ರೀಮೂಲರಾಮಪ್ರತಿಮೆಯನ್ನೇ ನಾವು ತರೆಸಿದ್ದೇವೆ ಎಂದು ಹೇಳುತ್ತೇವೆ. ನೀವೂ ಹಾಗೇ ಹೇಳಿರಿ'' ಎಂದು ತಿಳಿಸಿದರು.

ಈ ನಾರಾಯಣಯತಿಗಳು ಕೃತ್ರಿಮರಾಮಪ್ರತಿಮೆ ಮಾಡಿಸಿದಾಗ ಆ ಯತಿಗಳನ್ನು ಶ್ರೀಉತ್ತರಾದಿಮಠದ ಶ್ರೀವೇದವ್ಯಾಸತೀರ್ಥರು ಪೆನಗೊಂಡೆಯ ವೆಂಕಟಪತಿರಾಜನ ಸಂಮುಖದಲ್ಲಿ ನಿರ್ಬಂಧಿಸಿದರು. ಆಗ ಆ ಯತಿಗಳು ತಾವು ಮಾಡಿದ ತಪ್ಪನ್ನು ಒಪ್ಪಿಕೊಂಡು ತಾವು ಆ ಕೃತ್ರಿಮ ರಾಮಪ್ರತಿಮೆಯನ್ನು ಶ್ರೀಸುಧೀಂದ್ರರಿಗೆ ಕೊಟ್ಟ ಮೊದಲಾದ ವಿಷಯಗಳನ್ನು ಯಥಾಸ್ಥಿತವಾಗಿ ಹೇಳಿದರು.

ವೇದವ್ಯಾಸಸುತೀರ್ಥೋऽಥ ಮಹಾಸಂಸ್ಥಾನಕಾರಕಃ ।
ಕುರ್ವನ್ ಸಂಸ್ಥಾನಕೃತ್ಯಾಣಿ ಪೇನಂಗೊಂಡೀಮುಪಾಗಮತ್ ॥

ತದೇತೇಷ್ವೇವ ಸನ್ನ್ಯಾಸಮಾಪ್ತೋ ನಾರಾಯಣಾಹ್ವಯಃ ।
ಸನ್ನ್ಯಾಸೀ ವೃತ್ತಪೀಠೇ ದ್ವೇ ತಾಮ್ರೇ ಸುಪ್ರತಿಮೇ ಸ್ವಯಮ್ ।

ಬಂಕಾಪುರೇ ಕಾರಯಿತ್ವಾ .......
ತಯೋಃ ತಿಮ್ಮಣ್ಣ ಭಟ್ಟಸ್ಯ ಮಾಳಗೀತ್ಯುಪನಾಮಿನಃ ।
ಏಕಾಂ ದತ್ವಾ ತಯೋರ್ಮಧ್ಯೇ ಸ್ವಂ ಗೃಹೀತ್ವಾ ಪರಾಂಗತಃ ॥

ಪೂಜಯನ್ ಏಕಶಿಷ್ಯೇಣ ಸಹಿತೋ ರಾಯಚೂರಕೇ ।
ಮುರಾರ್ಯಾಚಾರ್ಯೋ ಬಹಿಷ್ಕಾರರಾಯಸಂ ಪೆನಗುಂಡಿತಃ ।

ವೇದವ್ಯಾಸಸ್ವಾಮಿನಾಂ ಸ ಆನಯಿತ್ವಾ ಪ್ರಭಾತಕೇ ।
.....................

ಸುಧೀಂದ್ರಾಂತಿಕಮಾಗತ್ಯ ದಂಡಂ ವ್ಯತ್ಯಸ್ಯ ತೇನ ಹಿ ।
ಶಿಷ್ಯೋऽಸ್ಮೀತ್ಯಬ್ರವೀತ್ ತಂ ತು ಸುಧೀಂದ್ರೋ ವೀಕ್ಷ್ಯ ತದ್ಗತಾಮ್ ।

ರಾಮಾರ್ಚಾಂ ಲಿಪ್ಸಮಾನಃ... ....................

ಅಸ್ಮಾಕಂ ದೇಹಿ ತಾಂ ಮೂಲರಾಮೋऽಸ್ಮಾಭಿರಯಂ ನನು ।
ಸಮಾನೀಯತ ಇತ್ಯೇವಂ ಅಭಿಧಾಸ್ಯಾಮಹೇ ವಯಮ್ ।

ತ್ವಮಪ್ಯೇವಂ ವದೇತ್ಯುಕ್ತ್ವಾ ತರ್ಹ್ಯೇವಂ ದ್ರೋಹಮಾಪತೇತ್ ।
..................

ನಾರಾಯಾಣಾಖ್ಯಭಿಕ್ಷುಸ್ತು ಶ್ವಿತ್ರೀ ಸರ್ವಾಂಗತೋऽಭವತ್ ।
ವೇದವ್ಯಾಸಸುತೀರ್ಥಸ್ತು ರಾಯಚೂರೇ ತದಾಭವತ್ ॥

ತತ್ರಾಗತಃ ಸ ಸನ್ನ್ಯಾಸೀ ಶ್ರೀಪಾದಾಗ್ರೇ ಯಥಾಸ್ಥಿತಮ್ ।
.............

3. ಈ ನಾರಾಯಣಯತಿಗಳು ಸಾಧಾರಣವಾದ ಒಂದು ರಾಮಪ್ರತಿಮೆ ಮಾಡಿಸಿದಾಗ ಆ ಪ್ರತಿಮೆ ಭಕ್ತರಿಗೆ ಪ್ರಾಚೀನವೆಂದು ಕಾಣಿಸಬೇಕೆಂಬ ಉದ್ದೇಶದಿಂದ ರಂಗೋಲಿಯಿಂದ ತಿಕ್ಕಿ ಹಳೆಯ ಪ್ರತಿಮೆ ಎಂದನಿಸುವಂತೆ ಮಾಡಲಾಯಿತು.

ರಾಯಚೂರಗ್ರಾಮವಾಸೀ ನಾರಯಣಯತೇಃ ಪುರಾ ।
ಭವತ್ಸಂಬಂಧಿನೋ ರಾಮಪ್ರತಿಮಾಂ ತಂ ಪ್ರಲೋಭಯನ್ ।

ಸಾಧಾರಣೀಂ ಸಮಾಧಾಯ ರಂಗವಲ್ಯಾದಿಚೂರ್ಣಕೈಃ ।
ಘರ್ಷಯಿತ್ವಾ ಮುಹುಃ ಸಮ್ಯಕ್ ಪುರಾತನ್ಯನುಕಾರಿಣೀ ।
ಕಾರಯಿತ್ವಾ .....

4. ಶ್ರೀವಾದಿರಾಜರಿಗೆ ಈ ವಿಷಯ ತಿಳಿಯಲು ಅವರು ಶ್ರೀಸುಧೀಂದ್ರರಿಗೆ ಹೀಗೆ ಮಾಡುವುದು ಸರಿಯಲ್ಲ ಎಂದು ಹೇಳಿದಾಗ ಅವರಿಬ್ಬರಲ್ಲಿ ವೈಮನಸ್ಯ ಉಂಟಾಯಿತು. ಆಗ ಶ್ರೀವಾದಿರಾಜರ ಕೀರ್ತನೆಗಳನ್ನು ಅವರ ಮಠದಲ್ಲಿ ಇನ್ನು ಮುಂದೆ ಹಾಡಬಾರದೆಂಬ ಅಪ್ಪಣೆಯನ್ನು ಶ್ರೀಸುಧೀಂದ್ರರು ಹೊರಡಿಸಿದರು.

5. ಶ್ರೀಪಾದರಾಜರೆಂಬ ಬಿರುದನ್ನು ಶ್ರೀಲಕ್ಷ್ಮೀನಾರಾಯಣಯತಿಗಳಿಗೆ ಕೊಟ್ಟವರು ಉತ್ತರಾದಿಮಠದ ಶ್ರೀರಘುನಾಥತೀರ್ಥರು

6. ಉತ್ತರಾದಿಮಠದ ಶ್ರೀವೇದನಿಧಿಗಳು ಶ್ರೀರಾಘವೇಂದ್ರಸ್ವಾಮಿಗಳನ್ನು ಭೇಟಿಯಾದ (ವಿವರಣೆ ಕೊಟ್ಟಿದ್ದಾರೆ) ಮತ್ತು ಆ ಸಮಯದಲ್ಲಿ ಸ್ವಯಂ ಶ್ರೀರಾಘವೇಂದ್ರಸ್ವಾಮಿಗಳೇ ಶ್ರೀವೇದನಿಧಿಗಳಿಗೆ ಉತ್ತರಾದಿಮಠದಲ್ಲೇ ಶ್ರೀಮೂಲರಾಮನಿರುವನೆಂದು ಬರೆದು ಕೊಟ್ಟ ಪತ್ರ ಅದ್ಯಾಪಿ ಶ್ರೀಸತ್ಯಸಂಧಮಠದಲ್ಲಿದೆ.

**ಇತ್ಯಾದಿ ಉಲ್ಲೇಖಗಳು ಈ ಕೃತಿಯಲ್ಲಿವೆ.**

**ವಾಚಕರೇ ! ಗಮನಿಸಿ...** ಈ ''ಗುರುಚರ್ಯಾ'' ಗ್ರಂಥದ ಬಗ್ಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ. ಡಾ|| ಬಿ.ಎನ್.ಕೆ.ಯವರು ನಂಜನಗೂಡು ಶ್ರೀರಾಯರ ಮಠದ ಗ್ರಂಥಾಲಯದಲ್ಲಿದ್ದ ಈ ಕೃತಿಯ ಕೆಲ ಅಂಶಗಳನ್ನು ಸ್ವಹಸ್ತದಿಂದ ಪ್ರತಿಮಾಡಿಕೊಂಡಿದ್ದಾರೆ. ಅದರ ನಕಲು ಪ್ರತಿಯನ್ನು ಮುಂದೆ ಕಾಣಬಹುದಾಗಿದೆ. ಅದರಲ್ಲಿರುವ ಮೇಲಿನ ಅಂಶಗಳನ್ನು ಹೊರಗೆಡಹುವ ಅನಿವಾರ್ಯತೆ ಬಂದಿದ್ದರಿಂದ ಕೆಲ ಅಂಶಗಳನ್ನು ಇಲ್ಲಿ ಬಹಿರಂಗ ಪಡಿಸಿದ್ದೇವೆ.

ಆದ್ದರಿಂದ ಗುರುಚರ್ಯಾ ಎಂಬ ಕೃತಿಯ ಮೇಲೆ ಸಂಪೂರ್ಣ ಭಾರ ಹಾಕಿ ಶ್ರೀಉತ್ತರಾದಿಮಠದ ಮೇಲೆ ಆಕ್ಷೇಪ ಮಾಡುವುದಾದರೆ ಅದೇ ಕೃತಿಯಲ್ಲಿ ಬಂದಿರುವ ಶ್ರೀರಾಯರಮಠದ ಕೀರ್ತಿಗೆ ಕುಂದು ತರುವಂತಹ ಅಂಶಗಳನ್ನು ರಾಯರಮಠದವರು ಎದುರಿಸಬೇಕಾಗುತ್ತದೆ.

Source material for HDSV

(8)

गुरुचर्या
(ANONYMOUS)
GURUCARYA

History of Pontiffs of Uttaradi Mutt
upto SATYANIDHI TIRTHA
(1638-1648)
Transcribed from a Paper MSS.
preserved in the Nanjangud
Mutt Library,
lent by Sri H.H. Suyamindra Tirtha
recopied from faded first copy
prepared while at Annamalai University

B.N.K. Sharma
Yugadi Day 11th April '94

Text used while writing my
History of Dvaita School of Vedanta
& its Literature
re. life of Pontiffs of
Uttaradi Mutt

Author appears to have lived in the time
of Satyasandha (d. 1794) as he
refers to Satyasandha Matha (Twice)

ಡಾ|| ಬಿ.ಎನ್.ಕೆ. ಶರ್ಮಾರವರ ಗುರುಚರ್ಯಾ ಕೃತಿಯ ಕೈಬರಹದ ನಕಲು.

**ಸಂದೇಹ 15.** ವಾಯುದೇವರ ಅವತಾರರಾದ ಮಧ್ವರು ಮೂಲರಾಮನನ್ನು ಆಕಾಶದಲ್ಲಿ ಹಾರಿ ಬರುವಂತೆ ಅಥವಾ ಗಜಪತಿಭಂಡಾರದಿಂದ ಅದೃಶ್ಯವಾಗಿ ತಮ್ಮ ಹತ್ತಿರ ಪ್ರತ್ಯಕ್ಷವಾಗುವಂತೆ ತರಿಸುಕೊಳ್ಳುವ ಸಾಮರ್ಥ್ಯವಿದ್ದರೂ ಹಾಗೆ ಮಾಡಲಿಲ್ಲ. ನರಹರಿತೀರ್ಥರನ್ನು ಕಳುಹಿಸಿಯೇ ಮೂಲರಾಮಪ್ರತಿಮೆ ಸಂಪಾದಿಸಿದರು. ವಿದ್ಯಾನಿಧಿಗಳ ಮಹಾಮಹಿಮೆಗೆ ಮೂಲರಾಮ ಭೂಮಿ ಭೇದಿಸಿಕೊಂಡು ಬಂದು ನಿಂತ ಎಂದರೆ ವಿದ್ಯಾನಿಧಿಗಳು ಮಧ್ವರನ್ನು ಮೀರಿದ ಮಹಾಮಹಿಮೆ ಉಳ್ಳವರೆಂದು, ಮಧ್ವರಿಗಿಂತ ಅತ್ಯಂತ ಅತಿಶಯಭಕ್ತಿಯುಕ್ತರೆಂದೂ ಹೇಳಿದಂತಾಯಿತು....... ಮೂಲಗುರುಗಳಾದ ಮಧ್ವಾಚಾರ್ಯರಿಗೆ ಅವಮಾನ ಮಾಡುವ ಸ್ಥಿತಿಯಾಗಲಿಲ್ಲವೇ? (ಪುಟ.73)

**ಉತ್ತರ:** ಯಾರಿಗೆ ಯಾವ ಘಟನೆಗಳಿಂದ ಅವಮಾನವಾಗುತ್ತದೆ ಎಂಬುದನ್ನು ಇವರಿಂದಲೇ ತಿಳಿಯಬೇಕು. ಶ್ರೀಮಧ್ವಾಚಾರ್ಯರು ತೋರದಿರುವ ಅತಿಮಾನುಷ ಮಹಿಮೆಗಳು ಅವರ ಪರಂಪರೆಯಲ್ಲಿ ಬಂದ ಅನೇಕ ಮಠದ ಪೀಠಾಧಿಪತಿಗಳು ತೋರಿಸಿದ್ದನ್ನು ಕಾಣುತ್ತೇವೆ. ಹೀಗಾಗಿ ಅವರೆಲ್ಲರೂ ಶ್ರೀಮಧ್ವಾಚಾರ್ಯರಿಗೆ ಅವಮಾನ ಮಾಡಿದಂತೆಯೇ? ಆಹಾ ಈ ಕಲ್ಪನೆಗಳಿಗೆ ಏನನ್ನಬೇಕು? ಶ್ರೀವಿದ್ಯಾನಿಧಿಗಳು ಶ್ರೀಮಧ್ವಾಚಾರ್ಯರನ್ನು ಮೀರಿದ ಮಹಾಮಹಿಮರೆಂದು ಯಾರು? ಎಲ್ಲಿ ಯಾವಾಗ ಹೇಳಿದರು?

ಬ್ರಹ್ಮಾದಿಗಳು ಅದ್ಭುತ ಸ್ತೋತ್ರಗಳನ್ನು ಮಾಡಿದ್ದರೂ ಪ್ರಹ್ಲಾದರಾಜರ ಸ್ತೋತ್ರಕ್ಕೆ ಒಲಿದ ಶ್ರೀನರಸಿಂಹ. ಇದು ಬ್ರಹ್ಮಾದಿಗಳಿಗೆ ಅವಮಾನವೇ?

ಮುಸುಲ್ಮಾನ ರಾಜ ತಂದಿಟ್ಟ ಮಾಂಸಾದಿಗಳನ್ನು ಹೂವು ಹಣ್ಣುಗಳನ್ನಾಗಿ ಮಾಡಿ ತೋರಿದ ಶ್ರೀಮಂತ್ರಾಲಯ ಸ್ವಾಮಿಗಳು ಶ್ರೀಮಧ್ವಾಚಾರ್ಯರನ್ನು ಮೀರಿಸಿದರೆಂದರ್ಥವೇ?

ಶ್ರೀಮದಾಚಾರ್ಯರ ಕಾಲದಲ್ಲಿ ಅವರ ಪುಸ್ತಕಗಳನ್ನು ಪದ್ಮತೀರ್ಥ ಎಂಬುವವನು ಅಪಹರಣ ಮಾಡಿದಾಗ ಶ್ರೀಮದಾಚಾರ್ಯರು ಅವನಿದ್ದಲ್ಲಿಗೆ ಹೋಗಿ ಅವನನ್ನು ತಡೆದು ವಾದದದಲ್ಲಿ ಸೋಲಿಸಿ ಆ ಪುಸ್ತಕಗಳನ್ನೆಲ್ಲಾ ಜಯಸಿಂಹ ರಾಜನ ಸಹಾಯದಿಂದ ಮರಳಿ ಪಡೆದರು ಎಂಬ ಕಥೆಯನ್ನು ಶ್ರೀಸುಮಧ್ವವಿಜಯದಲ್ಲಿ ಕಾಣುತ್ತೇವೆ. ಆದರೆ ಶ್ರೀವಿಜಯೀಂದ್ರತೀರ್ಥರ ಕಾಲದಲ್ಲಿ ಇಂಥದ್ದೇ ಗ್ರಂಥಾಪಹರಣದ ಪ್ರಸಂಗ ನಡೆದಾಗ ಶ್ರೀವಿಜಯೀಂದ್ರತೀರ್ಥರು ತಾವು ಇದ್ದಲ್ಲಿಯೇ ಇದ್ದು ತಮ್ಮ ಅದ್ಭುತವಾದ ಆಕರ್ಷಣವಿದ್ಯೆಯಿಂದ ಆ ಗ್ರಂಥದ ಪೆಟ್ಟಿಗೆಯನ್ನು ಮರಳಿ ಪಡೆಯುತ್ತಾರೆ. ಈ ಘಟನೆಯನ್ನು ಅಜಯ್ಯವಿಜಯೀಂದ್ರರು ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಹಾಗಾದರೆ ಶ್ರೀವಿಜಯೀಂದ್ರರು ಶ್ರೀಮದಾಚಾರ್ಯರು ತೋರಿಸದಿರುವ ಆಕರ್ಷಣ ವಿದ್ಯೆಯನ್ನು ತೋರಿಸಿದ್ದರಿಂದ ಶ್ರೀಮದಾಚಾರ್ಯರಿಗಿಂತ ದೊಡ್ಡವರೇ? ಶ್ರೀಮದಾಚಾರ್ಯರಿಗೆ ಅವಮಾನ ಮಾಡಿದಂತಾಯಿತೇ? ಯಾವ ಬುದ್ಧಿವಂತನೂ ಹಾಗೆ ತಿಳಿಯಲಾರ. ತಲೆಯಲ್ಲಿದ್ದದ್ದೆಲ್ಲ ಮತ್ತೊಬ್ಬರ ಮೇಲೆ ಹೇರುವುದೇ ವಿಮರ್ಶೆಯಾಗುವುದಿಲ್ಲ.

ಆದ ಕಾರಣ ಶ್ರೀವಿದ್ಯಾನಿಧಿತೀರ್ಥರ ಪ್ರಾರ್ಥನೆಗೆ ಭೂಮಿ ಬಿರಿದು ಶ್ರೀಮೂಲರಾಮದೇವರ ಪೆಟ್ಟಿಗೆ ಮೇಲೆ ಬಂದ ಘಟನೆ ಶ್ರೀಮದಾಚಾರ್ಯರಿಗೆ ಯಾವ ವಿಧದಲ್ಲೂ ಅವಮಾನ ಮಾಡಿದಂತೆ ಸರ್ವಥಾ ಆಗುವುದಿಲ್ಲ. ಈ ಎಲ್ಲ ಮಹನೀಯರು ಶ್ರೀಮದಾಚಾರ್ಯರ ಅನುಗ್ರಹದಿಂದಲೇ ಈ ಎಲ್ಲ ವಿಶಿಷ್ಟ ಮಹಿಮೆಗಳನ್ನು ತೋರಿಸಿದ್ದು ಎಂಬುದನ್ನು ಮರೆಯಲಾಗದು.

**ಸಂದೇಹ 16.** ಶ್ರೀಸತ್ಯಸಂಧರ ''ಅಷ್ಟಾವಿಂಶತಿಮೂರ್ತೀನಾಂ ಸ್ತುತಿಃ'' ಎನ್ನುವ ಕೃತಿಯಲ್ಲಿ ಬಲಮುರಿಶಂಖ, ಅಕ್ಷಯಪಾತ್ರೆ, ಬಾಣಗಳು ಇವು ಮೂರ್ತಿಗಳೇ? ಮಧ್ವಾಚಾರ್ಯಕರಾರ್ಚಿತ ದಿಗ್ವಿಜಯರಾಮನನ್ನು ಮೊದಲು ಸ್ತುತಿಸಿ ಬ್ರಹ್ಮಕರಾರ್ಚಿತ ಮೂಲರಾಮದೇವರ ಸ್ತುತಿಯನ್ನು ಎರಡನೆಯದನ್ನಾಗಿ ಏಕೆ ಮಾಡಿದ್ದಾರೆ? ಮತ್ತು ಈ ಎರಡಕ್ಕೂ ''ಪೂರ್ಣಧಿಯಾರ್ಚಿತಮ್'' ಎಂದು ಏಕೆ ಕರೆದಿದ್ದಾರೆ. ಬ್ರಹ್ಮ-ವಾಯುಗಳ ಒಂದು ಕಲ್ಪ ಸಾಧನದ ವ್ಯತ್ಯಾಸದ ತಾರತಮ್ಯವನ್ನು ಮೀರಿದಂತಾಗುವುದಿಲ್ಲವೇ? (ಪುಟ.74ರಿಂದ)

ಉತ್ತರ: ಅಷ್ಟಾವಿಂಶತಿಮೂರ್ತಿಸ್ತುತಿಯ ಬಗ್ಗೆ ಇವರ ಸಂದೇಹಗಳೇ ಅರ್ಥವಾಗದಂತಿವೆ. ಈ ಕೃತಿಯ ಹೆಸರು ''ಅಷ್ಟಾವಿಂಶತಿಸ್ತುತಿಃ'' ಎಂದು. ಸ್ತೋತ್ರವನ್ನು ರಚಿಸಿರುವ ಶ್ರೀಸತ್ಯಸಂಧತೀರ್ಥರೇ ಕೊನೆಯಲ್ಲಿ ''ಶಿಷ್ಟಶ್ರೀಸತ್ಯಬೋಧೇಷ್ಟಪ್ರದಾಷ್ಟಾವಿಂಶತಿಸ್ತುತಿಃ'' ಎಂಬುದಾಗಿ ತಿಳಿಸಿದ್ದಾರೆ. ಅಷ್ಟಾವಿಂಶತಿಮೂರ್ತಿಸ್ತುತಿ ಎಂಬುದಾಗಿ ಹೇಳಿಲ್ಲ. ಆದ್ದರಿಂದ ಭಗವನ್ಮೂರ್ತಿಗಳ ಜೊತೆಗೆ ಭಗವಂತನ ಆಯುಧಗಳು, ಭಗವತ್ಪೂಜಾಸಾಧನಗಳು, ಭಗವಂತನ ವಿಶೇಷ ಸನ್ನಿಧಾನೋಪೇತವಾದ ವಸ್ತುಗಳು ಇವುಗಳನ್ನೂ ಸ್ತುತಿಸಿದ್ದಾರೆ. ಇನ್ನು ಅಷ್ಟಾವಿಂಶತಿಮೂರ್ತಿಸ್ತುತಿ ಎಂದು ಇಟ್ಟುಕೊಂಡರೂ ಯಾವ ಸಮಸ್ಯೆ ಇಲ್ಲ. ಪ್ರತಿಮಾ ಸ್ಥಾನೀಯಗಳೆಂದರೆ ಯಾವುದು ಬೇಕಾದರೂ ಆಗಬಹುದು. ಬಲಮುರಿಶಂಖ ಇದು ಪ್ರತಿಮಾಸ್ಥಾನೀಯವಲ್ಲವೇ? ಉದ್ಧರಣೆ ಅರ್ಘ್ಯ ಪಾತ್ರೆಯಂತೆ ಕೇವಲ ಬಳಸುವ ಸಾಧನಗಳೇ? ಪೂಜಾಸಾಧನಗಳನ್ನೂ ಪ್ರತಿಮೆ ಎಂಬುದಾಗಿ ಶಾಸ್ತ್ರದಲ್ಲಿ ಕರೆದಿದ್ದಾರೆ. ಗಂಧರ್ವತಂತ್ರದ ಈ ಮಾತನ್ನು ಗಮನಿಸಿ–

**ಪೂಜೋಪಕರಣಸ್ಯಾಪಿ ದೇವತ್ವಮಿಹ ಜಾಯತೇ ।**
**ಸರ್ವೇಷಾಂ ದೇವತಾದೃಷ್ಟ್ಯಾ ಜಾಯತೇ ಶುದ್ಧತಾಪಿ ಚ ॥ 13.5 ॥**

ಪಾದುಕೆಗಳೂ ಪ್ರತಿಮಾಸ್ಥಾನವನ್ನೇ ಹೊಂದುತ್ತವೆ ಎಂಬುದನ್ನು ಶ್ರೀಸತ್ಯಧರ್ಮರ ಗುರುಪಾದುಕಾ ಸ್ತೋತ್ರ ತಿಳಿಸಿಕೊಟ್ಟಿದೆ.

ಶ್ರೀಮಟ್ಟೀಕಾಕೃತ್ಪಾದರ, ಶ್ರೀರಘೂತ್ತಮರ, ಶ್ರೀರಾಘವೇಂದ್ರರ ಮೂಲವೃಂದಾವನದ ಸಂಪರ್ಕ ಮಾತ್ರದಿಂದ ಮೃತ್ತಿಕೆಯೇ ಇಂದು ಊರೂರುಗಳಲ್ಲಿ ಪೂಜೆಗೊಳ್ಳುತ್ತಿರುವಾಗ (ಮೃತ್ತಿಕಾವೃಂದಾವನಗಳ ರೂಪದಲ್ಲಿ) ಶ್ರೀಮದಾಚಾರ್ಯರ ಕರಸ್ಪರ್ಶವಾದ ವಸ್ತುಗಳು ಪ್ರತಿಮಾಸ್ಥಾನವನ್ನು ಹೊಂದಲಾರವೇ?

ಶ್ರೀನರಹರಿತೀರ್ಥರು ಶ್ರೀಮೂಲರಾಮದೇವರನ್ನು ಕಳಿಂಗದೇಶದಿಂದ ತಂದು ಶ್ರೀಮದಾಚಾರ್ಯರಿಗೆ ಸಮರ್ಪಿಸುವುದಕ್ಕಿಂತಲೂ ಮೊದಲು ಶ್ರೀದಿಗ್ವಿಜಯರಾಮದೇವರೇ ಸಂಸ್ಥಾನದ ಮುಖ್ಯ ಪ್ರತಿಮೆಯಾಗಿತ್ತು. ಅದನ್ನೇ ಶ್ರೀಮದಾಚಾರ್ಯರು ನಿತ್ಯವೂ ಪೂಜಿಸುತ್ತಿದ್ದರು. ಆದ್ದರಿಂದ ಅದನ್ನು ಮೊದಲು ಸ್ತುತಿಸಿದ್ದಾರೆ. ನಂತರ ಶ್ರೀನರಹರಿತೀರ್ಥರು ಶ್ರೀಮೂಲಸೀತಾರಾಮಪ್ರತಿಮೆಗಳನ್ನು ತಂದು ಸಮರ್ಪಿಸಿದ ಮೇಲೆ ಅವುಗಳನ್ನು ಶ್ರೀಮದಾಚಾರ್ಯರು ಪೂಜಿಸಿದ್ದಾರೆ. ಆದ್ದರಿಂದ ಅವುಗಳನ್ನು ಅನಂತರ ಸ್ತುತಿಸಿದ್ದಾರೆ.

ಶ್ರೀದಿಗ್ವಿಜಯರಾಮಪ್ರತಿಮೆ ಹಾಗೂ ಶ್ರೀಮೂಲರಾಮಪ್ರತಿಮೆ ಈ ಎರಡನ್ನೂ ''ಪೂರ್ಣಧಿಯಾರ್ಚಿತಮ್'' ಎಂದು ಕರೆದದ್ದು ಅತ್ಯಂತ ಔಚಿತ್ಯಪೂರ್ಣವಾಗಿದೆ. ''ಪೂರ್ಣಜ್ಞಾನ'' ಉಳ್ಳವರು ಎಂಬ ಅರ್ಥವುಳ್ಳ ''ಪೂರ್ಣಧೀ'' ಎಂಬ ಯೌಗಿಕಶಬ್ದವನ್ನು ಶ್ರೀಸತ್ಯಸಂಧತೀರ್ಥರು ಪ್ರಯೋಗಿಸಿದ್ದಾರೆ.

''ಪೂರ್ಣಧಿಯಾರ್ಚಿತಮ್'' ಎಂದರೆ ಪೂರ್ಣಜ್ಞಾನವುಳ್ಳವರಿಂದ ಅರ್ಚಿತವಾದದ್ದು ಮೂಲರಾಮಪ್ರತಿಮೆ ಎಂದು ಅರ್ಥವಾಗುತ್ತದೆ. ಶ್ರೀಮದಾಚಾರ್ಯರು, ಬ್ರಹ್ಮದೇವರು ಇಬ್ಬರೂ ಪೂರ್ಣಜ್ಞಾನ ಇರುವವರು. ಅಲ್ಲದೇ ಮುಖ್ಯವಾಗಿ ಪೂರ್ಣಜ್ಞಾನ ಉಳ್ಳವನು ಶ್ರೀಹರಿಯೇ. ಅದರಂತೆ ಲಕ್ಷ್ಮೀದೇವಿಯೂ ಪೂರ್ಣಜ್ಞಾನ ಉಳ್ಳವಳು. ಹೀಗಾಗಿ ಶ್ರೀಮೂಲರಾಮ ಪ್ರತಿಮೆ ''ಪೂರ್ಣಧಿಯಾರ್ಚಿತಮ್'' ಎಂದರೆ ಶ್ರೀರಾಮಕರಾರ್ಚಿತ, ಸೀತಾಕರಾರ್ಚಿತ, ಬ್ರಹ್ಮಕರಾರ್ಚಿತ ಹಾಗೂ ಮಧ್ವಕರಾರ್ಚಿತ ಎಂಬ ಎಲ್ಲ ಅರ್ಥಗಳನ್ನು ಸಂಗ್ರಹಿಸಬಹುದಾದ ''ಪೂರ್ಣಧಿಯಾ'' ಎಂಬ ಶಬ್ದವನ್ನು ಶ್ರೀಸತ್ಯಸಂಧತೀರ್ಥರು ಬಳಸಿದ್ದಾರೆ.

ಶ್ರೀದಿಗ್ವಿಜಯರಾಮದೇವರನ್ನು ಸ್ತುತಿಸುವಾಗ ಶ್ರೀಮದಾಚಾರ್ಯಕರಾರ್ಚಿತ ಎಂಬ ಅರ್ಥದಲ್ಲಿ ''ಪೂರ್ಣಧಿಯಾ'' ಎಂಬ ಶಬ್ದವನ್ನು ಉಪಯೋಗಿಸಿದ್ದಾರೆ. ಆದ್ದರಿಂದ ಎರಡೂ ಕಡೆಗೆ ಶ್ರೀಸತ್ಯಸಂಧರು ಪೂರ್ಣಧಿಯಾ ಎಂದು ಬಳಸಿದ್ದು ಅತ್ಯಂತ ಸಮಂಜಸವೇ ಆಗಿದೆ.

ಅಲ್ಲದೇ, ''ಪೂರ್ಣಧೀ'' ಎನ್ನುವುದಕ್ಕೆ ಶ್ರೀಮದಾಚಾರ್ಯರು ಎಂಬ ಒಂದೇ ಅರ್ಥವನ್ನು ಮಾಡಿದರೂ ಯಾವ ಬಾಧಕವಿಲ್ಲ. ಮೂಲರಾಮಪ್ರತಿಮೆಯನ್ನು ''ಬ್ರಹ್ಮಕರಾರ್ಚಿತ''ಎಂದು ಘೋಷಿಸುವ ರಾಯರಮಠದವರೂ ಸಹ ''ರಾಮಕರಾರ್ಚಿತ'' ಎಂಬುದನ್ನು ಅಲ್ಲಗಳೆಯುವುದಿಲ್ಲ. ಹಾಗೆಯೇ ಪೂರ್ಣಧಿಯಾರ್ಚಿತ ಎಂಬ ಶ್ರೀಸತ್ಯಸಂಧರ ಮಾತು ಬ್ರಹ್ಮಕರಾರ್ಚಿತ ಎಂಬುದನ್ನು ಅಲ್ಲಗಳೆಯುತ್ತಿಲ್ಲ.

ಶ್ರೀಮದಾಚಾರ್ಯರು ಉಪನಿಷದ್ಭಾಷ್ಯಗಳಲ್ಲಿ ಬ್ರಹ್ಮ ಶಬ್ದ ಇದ್ದಲ್ಲಿ ವಾಯುವನ್ನು ವಾಯು ಶಬ್ದವಿದ್ದಲ್ಲಿ ಬ್ರಹ್ಮನನ್ನು ತೆಗೆದುಕೊಳ್ಳಬೇಕೆಂದು ಅನೇಕ ಕಡೆ ತಿಳಿಸಿಕೊಟ್ಟಿದ್ದಾರೆ.

ತಾರತಮ್ಯಜ್ಞಾನವನ್ನು ಶ್ರೀಸತ್ಯಸಂಧತೀರ್ಥರಿಗೆ ತಿಳಿಸಹೊರಟ ಲೇಖಕರಿಗೇ ಬುದ್ಧಿಭ್ರಮಣೆಯಾಗಿರಬೇಕು.

**ಸಂದೇಹ 17.** ಉತ್ತರಾದಿಮಠದ ಸಂಪ್ರದಾಯಪದ್ಧತಿಯಲ್ಲಿ ಎರಡು ಧನುಸ್ಸುಗಳೂ ಸೇರಿವೆ. ಹಾಗಾದರೆ 28 ಸಂಖ್ಯೆ ವ್ಯತ್ಯಾಸಗೊಳ್ಳುತ್ತದೆಯಲ್ಲವೇ? (ಪುಟ. 77)

**ಉತ್ತರ:** ''ಸಂಪ್ರದಾಯಪದ್ಧತಿ'' ಯಲ್ಲಿ ಧನುಸ್ಸುಗಳನ್ನು ಸೇರಿಸಿದಾಕ್ಷಣ ಅವು 28 ಮೂರ್ತಿಗಳಲ್ಲಿ ಸೇರಿವೆ ಎಂದು ನಿರ್ಣಯಕ್ಕೆ ಬರಬೇಕೇ? ಪ್ರಾಚೀನ ಗ್ರಂಥವಾದ ಶ್ರೀಸತ್ಯಸಂಧರ ಸ್ತುತಿಗೆ ಅನುಗುಣವಾಗಿ ಅರ್ವಾಚೀನ ಗ್ರಂಥಗಳಿಗೆ ವಿರೋಧ ಬರದಂತೆ ಅರ್ಥೈಸಬೇಕೇ ವಿನಹ ಗ್ರಂಥಗಳನ್ನೇ ಅಪ್ರಾಮಾಣಿಕ ಎಂದು ಅಲ್ಲಗಳೆಯಬಾರದು.

''ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ'' ಎಂದು ನಾರಾಯಣಪಂಡಿತಾಚಾರ್ಯರು ತಿಳಿಸಿದಂತೆ ಶ್ರೀಮದಾಚಾರ್ಯರು ನಾನಾಸ್ತೋತ್ರಸುಭಾಷಿತಗಳನ್ನು ರಚಿಸಿದ್ದರೂ ಸರ್ವಮೂಲಗಳ ಸಂಖ್ಯೆ 37 ಎಂದು ಅನೇಕ ಮಹನೀಯರು ಸ್ತೋತ್ರ ಮಾಡಿದ್ದರ ಪ್ರಸಿದ್ಧಿ ಇದೆ. ಹಾಗೆಯೇ ಸಂಪ್ರದಾಯಪದ್ಧತಿಯಲ್ಲಿ ಎರಡು ಧನುಸ್ಸುಗಳನ್ನು ಹೆಚ್ಚಾಗಿ ಹೇಳಿದ್ದರೂ 28 ಎಂದು ಸಂಪ್ರದಾಯದಲ್ಲಿ ಪ್ರಸಿದ್ಧಿ ಇದೆ ಎಂಬುದಾಗಿ ತಿಳಿಯಬಹುದಾಗಿದೆ. ಆಧಾರವಿಲ್ಲದೆ ಗುರುದ್ರೋಹವೆಂದು ಆರೋಪಿಸುವುದು ಅತಿರೇಕದ ಪರಾಕಾಷ್ಠತೆಯೇ ಸರಿ.

ಅಲ್ಲದೇ, ಶ್ರೀಸತ್ಯಸಂಧತೀರ್ಥರು ಎರಡು ಬಾಣಗಳ ಉಲ್ಲೇಖವನ್ನು ಮಾಡಿದ್ದಾರೆ. ಬಾಣಗಳನ್ನು ಹೇಳಿದ್ದರಿಂದ ಎರಡು ಬಿಲ್ಲುಗಳನ್ನೂ ಉಪಲಕ್ಷಣಯಾ ಸ್ವೀಕಾರ ಮಾಡಲು ಬರುತ್ತದೆ. ಆದ್ದರಿಂದ ಸಂಪ್ರದಾಯಪದ್ಧತಿಯಲ್ಲಿ ಹೇಳಿದ 30 ಸಂಖ್ಯೆಗೆ ಯಾವ ವಿರೋಧವೂ ಬರುವುದಿಲ್ಲ.

ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ಶ್ರೀರಾಮದೇವರ ಧ್ಯಾನಶ್ಲೋಕವಾದ ''ಶ್ಯಾಮಂ ರವೀಂದು..'' ಎಂಬ ಶ್ಲೋಕದಲ್ಲಿ ''ಜ್ಞಾನಂ ಶರಂ ಚ ದಧತಮ್'' ಎಂಬುದಾಗಿ ಬಾಣವನ್ನು ಧರಿಸಿದ ರಾಮನ ರೂಪವನ್ನು ತಿಳಿಸಿದ್ದಾರೆ. ಶ್ರೀಮದಾಚಾರ್ಯರು ಬಾಣವನ್ನು ಮಾತ್ರ ವರ್ಣಿಸಿದ್ದರೂ ಎಡಗೈಯಲ್ಲಿ ಬಿಲ್ಲನ್ನೂ ಧರಿಸಿದ್ದಾನೆ ಎಂಬುದಾಗಿ ಉಪಲಕ್ಷಣಯಾ ಸ್ವೀಕರಿಸಬೇಕು ಎಂದು ವ್ಯಾಖ್ಯಾನಕಾರರು ತಿಳಿಸುತ್ತಾರೆ.

ಈ ವಾಕ್ಯಕ್ಕೆ ವ್ಯಾಖ್ಯಾನಮಾಡುತ್ತಾ ಶ್ರೀರಘುನಾಥತೀರ್ಥರು ತತ್ತ್ವಕಣಿಕಾದಲ್ಲಿ ''ವಾಮೇನ ಧನುರಿತ್ಯರ್ಥಾತ್ ಸಿದ್ಧ್ಯತಿ'' ಎಂದು, ಶ್ರೀಛಲಾರೀ ಶೇಷಾಚಾರ್ಯರು ''ವಾಮಕರೇ ಧನುರ್ಧರಂ ಇತ್ಯಪಿ ಜ್ಞೇಯಮ್'' ಎಂದು ತಿಳಿಸಿದ್ದಾರೆ.

ಇದರಂತೆಯೇ ಶ್ರೀಸತ್ಯಸಂಧರ ಮಾತಿಗೂ ಅರ್ಥಮಾಡಿದರೆ ಯಾವ ವಿರೋಧವೂ ಇಲ್ಲ.

**ಸಂದೇಹ 18.** ಮೂಲರಾಮಪ್ರತಿಮೆ ಸ್ವಯಂವ್ಯಕ್ತವೇ? ಎಂದು ಪ್ರಶ್ನೆ ಮಾಡಿಕೊಂಡು ಏಳು ರೀತಿಯಲ್ಲಿ ಅಸಂಬದ್ಧ ವಿಕಲ್ಪಗಳನ್ನು ಮಾಡಿದ್ದಾರೆ. (ಪುಟ. 78)

**ಉತ್ತರ:** ಸ್ವಯಂವ್ಯಕ್ತವೆಂದರೇನು? ಎನ್ನುವುದನ್ನು ಅನೇಕರೀತಿಯಲ್ಲಿ ತಾವೇ ಕಲ್ಪಿಸಿಕೊಂಡು ವೃಥಾ ವಿಕಲ್ಪಗಳನ್ನು ಮಾಡುತ್ತಾ ಜನಗಳನ್ನು ಮರಳು ಮಾಡುವುದನ್ನು ಮುಂದುವರೆಸಿದ್ದಾರೆ.

ಮೂಲರಾಮಪ್ರತಿಮೆ ಸ್ವಯಂವ್ಯಕ್ತವೇ? ಎಂದು ಪ್ರಶ್ನೆ ಮಾಡಿಕೊಂಡು ''ವಾಸಿಷ್ಠರಾಮಾಯಣ'' ದಲ್ಲಿರುವ ''ಸ್ವಯಂವ್ಯಕ್ತ'' ಎಂಬ ಉಕ್ತಿಗೆ ಬದಲಾಗಿ ಇತರ ಆಕರಗಳಲ್ಲಿ ವಿಶ್ವಕರ್ಮನಿರ್ಮಿತ ಎಂದಿದೆ'' ಎಂದು ಮೂ.ಮಠೇ ಲೇಖಕರು ಬರೆದಿದ್ದಾರೆ. ಇದರಿಂದ ತಾವೇ ಆಧಾರವೆಂದು ಉದಾಹರಿಸಿದ ಮೂಲ ಆಕರವಾದ ವಾಸಿಷ್ಠರಾಮಾಯಣಕ್ಕೆ ಅರ್ಚಾಗತಿಕ್ರಮ ವಿರುದ್ಧವಾಗಿ ಹೇಳುತ್ತಿದೆ ಎಂದು ಒಪ್ಪಿಕೊಂಡಂತಾಯಿತು. ಸಾಲದ್ದಕೆ ''ಸಸೀತಾಮೂಲರಾಮಾರ್ಚಾ''ದಲ್ಲಿ ಕೊಟ್ಟಿರುವ ವಾಸಿಷ್ಠರಾಮಾಯಣದ ಪ್ರಾಚೀನಹಸ್ತಪ್ರತಿ ಅನುಮಾನಾಸ್ಪದವಾಗಿದೆ ಎಂದು ಹೇಳುತ್ತಾ ತಾವು ವಾಸಿಷ್ಠೋತ್ತರರಾಮಾಯಣದ ಹಸ್ತಪ್ರತಿಯನ್ನು ಕೊಟ್ಟಿದ್ದಾರೆ. ತಮಾಷೆಯೆಂದರೆ ಈ ಎರಡೂ ಪ್ರತಿಗೂ ಏನೂ ವ್ಯತ್ಯಾಸವಿಲ್ಲದಿರುವುದು. ಅವರು ಕೊಟ್ಟ ವಾಸಿಷ್ಠೋತ್ತರರಾಮಾಯಣದಲ್ಲೂ (ಪುಟ 131) ಮೂಲರಾಮ ''ಸ್ವಯಂವ್ಯಕ್ತ'' ಎಂದೇ ಇದೆ.

ಅಲ್ಲದೇ, ಶ್ರೀಮೂಲರಾಮಪ್ರತಿಮೆ ಸ್ವಯಂವ್ಯಕ್ತವಲ್ಲ ವಿಶ್ವಕರ್ಮನಿರ್ಮಿತ ಎಂದು ಸಾಧಿಸುವುದರಿಂದ ಶ್ರೀಮೂಲರಾಮಪ್ರತಿಮೆ ರಾಯರ ಮಠದಲ್ಲಿ ಇದೆ ಎಂದು ಸಿದ್ಧವಾಗುವುದಿಲ್ಲ. ಇದರಿಂದ ಮೂ.ಮಠೇ. ಲೇಖಕರು ಸಸೀತಾಮೂಲರಾಮಾರ್ಚಾ ಗ್ರಂಥದ ಎಲ್ಲ ವಿಷಯಗಳನ್ನು ವಿನಾಕಾರಣ ಅಲ್ಲಗಳೆಯುವ ಏಕೈಕ ಉದ್ದೇಶ ಇಟ್ಟುಕೊಂಡಿದ್ದಾರೆ ಎಂಬುದು ಸ್ಪಷ್ಟ.

ಸ್ವಯಂವ್ಯಕ್ತ ಹಾಗೂ ವಿಶ್ವಕರ್ಮನಿರ್ಮಿತ ಎನ್ನುವುದರ ಅರ್ಥವನ್ನು ಹೀಗೆ ತಿಳಿಯಬಹುದು– ಬ್ರಹ್ಮದೇವರ ಆಜ್ಞೆಯಂತೆ ವಿಶ್ವಕರ್ಮನು ಸುಂದರವಾದ ಶ್ರೀಮೂಲರಾಮ ಪ್ರತಿಮೆಯನ್ನು ನಿರ್ಮಿಸಿದ್ದನು. ಆದ್ದರಿಂದ ಅದು ವಿಶ್ವಕರ್ಮನಿರ್ಮಿತ.

ಬ್ರಹ್ಮದೇವರು ತಾವು ಪೂಜಿಸುವುದಕ್ಕಾಗಿ ಆ ಮೂಲರಾಮ ಪ್ರತಿಮೆಯನ್ನು ಸ್ಮರಿಸಿದಾಕ್ಷಣ ಅವರ ಮುಂದೆ ಆ ಪ್ರತಿಮೆಯು ಸ್ವಯಂ ವ್ಯಕ್ತವಾಯಿತು. ಅಲ್ಲದೇ ಆ ಪ್ರತಿಮೆಯಲ್ಲಿ ಭಗವಂತನು

ಸ್ವಯಂ ತಾನೇ ತನ್ನ ಇಚ್ಛೆಯಿಂದಲೇ ವ್ಯಕ್ತನಾದನು. ಇತರರು ಮಾಡಿದ ಆವಾಹನಾದಿಗಳಿಂದ ಆ ಪ್ರತಿಮೆಯಲ್ಲಿ ಭಗವಂತನ ಸನ್ನಿಧಾನ ಬಂದದ್ದಲ್ಲ. ಈ ಅರ್ಥಗಳಲ್ಲಿ ಅದನ್ನು ''ಸ್ವಯಂವ್ಯಕ್ತ'' ಎಂದೂ ವ್ಯವಹರಿಸಲಾಗಿದೆ.

ಲೋಹಮಯ ಪ್ರತಿಮೆ ಸ್ವಯಂವ್ಯಕ್ತ ಎಂದರೇನು ಎಂಬ ವಿಕಲ್ಪವೇ ಸರಿಯಲ್ಲ. ಅವರೇ ಉದಾಹರಿಸಿದ ವಾಸಿಷ್ಠೋತ್ತರರಾಮಾಯಣದಲ್ಲಿ ಪ್ರತಿಮೆ ಸ್ವಯಂವ್ಯಕ್ತ ಎಂದು ಸ್ಪಷ್ಟವಾಗಿರುವುದರಿಂದ ಆ ಪ್ರಮಾಣಕ್ಕೆ ಅನುಗುಣವಾಗಿ ಅರ್ಥವನ್ನು ಮಾಡಬೇಕು.

ಶ್ರೀಮೂಲಸೀತಾರಾಮರ ಪ್ರತಿಮೆಗಳು ಬ್ರಹ್ಮನ ಆಜ್ಞೆಯಂತೆ ವಿಶ್ವಕರ್ಮನಿಂದ ರಚಿಸಲ್ಪಟ್ಟವು ಎಂದು ಅರ್ಚಾಗತಿಕ್ರಮ ಹೇಳುತ್ತಿದೆ.

ಅರ್ಚಾತು ರಾಮಚಂದ್ರಸ್ಯ ನಿರ್ಮಿತಾ ವಿಶ್ವಕರ್ಮಣಾ (ಶ್ಲೋಕ 12). ಆದರೆ ವಾಸಿಷ್ಠ ಹಾಗೂ ವಾಸಿಷ್ಠೋತ್ತರರಾಮಾಯಣದಲ್ಲೂ ಸ್ವಯಂವ್ಯಕ್ತವೆಂದೇ ಇದೆ. ಹೀಗಾಗಿ ಪ್ರಾಚೀನತಮವಾದ ವಾಸಿಷ್ಠ ಹಾಗೂ ವಾಸಿಷ್ಠೋತ್ತರರಾಮಾಯಣಗಳಿಗೆ ಅರ್ವಾಚೀನವಾದ ಈ ಅರ್ಚಾಗತಿಕ್ರಮ ವಿರುದ್ಧವಾಗಿ ಹೇಳುತ್ತಿದೆ ಎಂದು ಅವರೇ ಒಪ್ಪಿದಂತಾಯಿತು. (ವಸ್ತುತಃ ವಾಸಿಷ್ಠರಾಮಾಯಣ ಹಾಗೂ ವಾಸಿಷ್ಠೋತ್ತರರಾಮಾಯಣಗಳು ಒಂದೇ ಆಗಿವೆ. ಒಂದೇ ಗ್ರಂಥವನ್ನು ಎರಡು ಹೆಸರುಗಳಿಂದ ವ್ಯವಹಾರ ಮಾಡಿದ್ದಾರೆ.)

ಶ್ರೀರಾಯರಮಠದವರೇ ಪ್ರಮಾಣ ಎಂದು ಒಪ್ಪಿರುವ ಗ್ರಂಥಗಳಲ್ಲಿಯೇ ಸ್ವಯಂವ್ಯಕ್ತ ಹಾಗೂ ವಿಶ್ವಕರ್ಮನಿರ್ಮಿತ ಎಂಬ ಎರಡು ತರಹದ ಹೇಳಿಕೆಗಳಿರುವುದರಿಂದ ಈ ಗೊಂದಲವನ್ನು ಶ್ರೀರಾಯರಮಠದವರೂ ಪರಿಹರಿಸಲೇಬೇಕಾದ ಅನಿವಾರ್ಯತೆ ಇದೆ.

ಈ ಸಂದರ್ಭದಲ್ಲಿ ಇತರ ಮಠಗಳಲ್ಲಿ ಪೂಜಿತವಾಗುತ್ತಿರುವ ಶ್ರೀಮದಾಚಾರ್ಯಕರಾರ್ಚಿತ ಪ್ರತಿಮೆಗಳನ್ನು ಉದ್ದೇಶಪೂರ್ವಕವಾಗಿಯೇ ಉಲ್ಲೇಖಿಸಿ ಅವುಗಳಲ್ಲಿ ಸನ್ನಿಧಾನವಿಲ್ಲವೆಂದು ಉತ್ತರಾದಿಮಠದವರು ಹೇಳಿದಂತೆ ಬಿಂಬಿಸಿ ಉತ್ತರಾದಿಮಠದವರ ಮೇಲೆ ಇತರ ಮಠದ ಶಿಷ್ಯರಿಗೆ ವಿಪರೀತ ಭಾವನೆ ಹುಟ್ಟುವಂತೆ ಮಾಡಿರುವ ಪ್ರಯತ್ನ ನಿಜಕ್ಕೂ ಅಸಹ್ಯ. ನೀಚ ರಾಜಕೀಯ. (ಅವರ ದಿವಾನರು ಮೂ.ಮಠೇ ಲೇಖಕರನ್ನೇ ಇದು ವೈಷ್ಣವರ ವರ್ತನೆಯೇ? ಎಂದು ಪ್ರಶ್ನಿಸುವುದು ಸೂಕ್ತ.)

ಶ್ರೀಉತ್ತರಾದಿಮಠದವರು ಸ್ವಯಂವ್ಯಕ್ತವಾದ ಶ್ರೀಮೂಲರಾಮನಲ್ಲಿ ವಿಶೇಷ ಸನ್ನಿಧಾನವಿದೆ ಎಂದು ಹೇಳಿಕೊಂಡಿದ್ದಾರೆ. ಅದರಲ್ಲಿ ತಪ್ಪೇನಿದೆ? ಅದು ತಪ್ಪು ಅನ್ನುವುದಾದರೆ ಇತರ ಕ್ಷೇತ್ರಗಳಿಗಿಂತಲೂ ಸ್ವಯಂವ್ಯಕ್ತಕ್ಷೇತ್ರಗಳಿಗೆ ವಿಶೇಷ ಮಹತ್ತ್ವವನ್ನು ಶಾಸ್ತ್ರಗಳಲ್ಲಿ ಯಾಕೆ ಹೇಳುತ್ತಿದ್ದರು?

ಅಷ್ಟೇ ಅಲ್ಲದೆ, ಸ್ವಯಂವ್ಯಕ್ತವಾದ ಶ್ರೀಮೂಲರಾಮನಲ್ಲಿ ವಿಶೇಷ ಸನ್ನಿಧಾನವಿದೆ ಎಂದು ಹೇಳಿದ ಮಾತ್ರಕ್ಕೆ ತಮ್ಮ ಮಠದಲ್ಲಿರುವ ಮೂಲರಾಮನಲ್ಲಿ ಮಾತ್ರ ಸನ್ನಿಧಾನ ಇದೆ ಇತರ ಮಠಗಳಲ್ಲಿ ಪೂಜೆಗೊಳ್ಳುತ್ತಿರುವ ಶ್ರೀಮದಾಚಾರ್ಯಕರಾರ್ಚಿತ ಪ್ರತಿಮೆಗಳಲ್ಲಿ ಭಗವಂತನ ವಿಶೇಷ ಸನ್ನಿಧಾನ ಇಲ್ಲ ಎಂದು ಹೇಳಿದಂತಾಗುವುದಿಲ್ಲ. ಹಾಗೆ ಅವರು ತಮ್ಮ ಕೃತಿಯಲ್ಲಿ ಎಲ್ಲೂ ಹೇಳಿಲ್ಲ.

**ಒಂದು ವಸ್ತುವನ್ನು ಒಬ್ಬ ವ್ಯಕ್ತಿಯನ್ನು ವಿಶೇಷವಾಗಿ ವರ್ಣಿಸಿದ ಮಾತ್ರಕ್ಕೆ ಇತರ ವಸ್ತುಗಳನ್ನು ವ್ಯಕ್ತಿಗಳನ್ನು ನಿಂದಿಸಿದಂತಲ್ಲ.**

ತಿರುಪತಿಯನ್ನು ಭೂವೈಕುಂಠ ಎಂದು ಕರೆದ ಮಾತ್ರಕ್ಕೆ ಇತರ ಸ್ವಯಂವ್ಯಕ್ತ ಕ್ಷೇತ್ರಗಳಾದ ಶ್ರೀರಂಗ, ಶ್ರೀಮುಷ್ಣ ಮೊದಲಾದವುಗಳನ್ನು ನಿಂದೆ ಮಾಡಿದಂತೆ ಎಂದು ಯಾವ ಸಾಮಾನ್ಯನೂ ತಿಳಿಯಲಾರ. ಶ್ರೀಅಪ್ಪಣ್ಣಾಚಾರ್ಯರು ಶ್ರೀರಾಘವೇಂದ್ರಸ್ವಾಮಿಗಳ ಸ್ತೋತ್ರದಲ್ಲಿ ''ಶಾಪಾನುಗ್ರಹಶಕ್ತೋಽನ್ಯೋ ರಾಘವೇಂದ್ರಾನ್ನ ವಿದ್ಯತೇ'' ಎಂಬುದಾಗಿ ಶ್ರೀರಾಘವೇಂದ್ರಸ್ವಾಮಿಗಳ ಮಹಾಮಹಿಮೆಯನ್ನು ತಿಳಿಸುತ್ತ (ಅನ್ಯೋ ನ ವಿದ್ಯತೇ) ಇತರರಿಗೆ ಆ ಮಹಿಮೆ ಇಲ್ಲ ಎಂಬುದಾಗಿ ತಿಳಿಸಿದ್ದಾರೆ. ಆದರೆ ಇದಕ್ಕೆ ರಾಘವೇಂದ್ರಸ್ವಾಮಿಗಳನ್ನು ಬಿಟ್ಟು ಉಳಿದವರಾದ ಶ್ರೀಸತ್ಯಬೋಧತೀರ್ಥರು, ಶ್ರೀಧೀರೇಂದ್ರತೀರ್ಥರು, ಶ್ರೀಸತ್ಯಧರ್ಮತೀರ್ಥರು, ಶ್ರೀವ್ಯಾಸತತ್ತ್ವಜ್ಞರು, ಶ್ರೀವಿಜಯದಾಸರು, ಶ್ರೀಗೋಪಾಲದಾಸರು, ಶ್ರೀಜಗನ್ನಾಥದಾಸರು, ಮೊದಲಾದ ಜ್ಞಾನಿಗಳಿಗೆ ಶಾಪಾನುಗ್ರಹಸಾಮರ್ಥ್ಯ ಮೊದಲಾದ ಗುಣಗಳು ಇಲ್ಲ ಎಂದು ನಾವು ತಿಳಿಯಬೇಕೇ? ಸರ್ವಥಾ ಇಲ್ಲ.

ಇಷ್ಟು ಮಾತ್ರದ ಸಾಮಾನ್ಯ ಜ್ಞಾನ ಇಲ್ಲದೇ ಮಾಡಿದ ಇವರ ಆಕ್ಷೇಪಗಳಿಗೆ ಉತ್ತರ ಕೊಡದಿರುವುದೇ ಲೇಸು.

**ಸಂದೇಹ 19.** ''ಬ್ರಹ್ಮಕರಾರ್ಚಿತ ಹಾಗೂ ಭಾವಿಬ್ರಹ್ಮಕರಾರ್ಚಿತ ಪ್ರತಿಮೆಗಳಿಗೆ ಉನ್ನತೋತ್ತಮಸ್ಥಾನವಿರುವುದು ಗಮನಾರ್ಹ'' ಎಂದು ಹೇಳಿಕೊಂಡದ್ದರಲ್ಲಿ ಸ್ವಾರಸ್ಯವೇನೂ ಕಾಣಲಿಲ್ಲ. (ಸಸೀತಾಮೂಲರಾಮಾರ್ಚಾ ಕೃತಿಯಲ್ಲಿ ಶ್ರೀಉತ್ತರಾದಿಮಠದಲ್ಲಿ ನಿತ್ಯ ಪೂಜೆ ಮಾಡುವಾಗ ಮಂಟಪದಲ್ಲಿ ಮೂಲಸೀತಾರಾಮರನ್ನು ಶ್ರೀದಿಗ್ವಿಜಯರಾಮದೇವರ ಪ್ರತಿಮೆಯನ್ನು ಉತ್ತಮಸ್ಥಾನದಲ್ಲಿ ಕೂಡಿಸುವ ಸಂಪ್ರದಾಯನ್ನು ಉಲ್ಲೇಖಿಸಿ ಮೇಲಿನ ವಾಕ್ಯವನ್ನು ಬರೆಯಲಾಗಿದೆ. ಇದನ್ನು ಅಸಂಬದ್ಧವಾಗಿ 11 ರೀತಿಯಲ್ಲಿ ವಿಕಲ್ಪಮಾಡಲಾಗಿದೆ.) (ಪುಟ. 81)

ಉತ್ತರ: ಉತ್ತರಾದಿಮಠದಲ್ಲಿ ಶ್ರೀಮೂಲಸೀತಾರಾಮಾದಿಪ್ರತಿಮೆಗಳನ್ನು ಪೀಠದಲ್ಲಿ ಆ ಆ ವಿಶೇಷ ಸ್ಥಾನಗಳಲ್ಲಿ ಇಟ್ಟು ಪೂಜಿಸುವ ವಿಶಿಷ್ಟ ಕ್ರಮ ಪ್ರಾಚೀನಕಾಲದಿಂದಲೂ ನಡೆದು ಬಂದಿದೆ. ಈ ಕ್ರಮವನ್ನು ಅನೇಕ ಪ್ರಾಚೀನ ವಿಜಯಕಾವ್ಯಗಳಲ್ಲಿ ಒಂದೇ ರೀತಿಯಾಗಿ ಉಲ್ಲೇಖಿಸುತ್ತಾ ಬಂದಿರುವುದು ಗಮನಾರ್ಹ. ಈ ವಿಷಯನ್ನು ತಿಳಿಸುವುದೇ ಇಲ್ಲಿಯ ಉದ್ದೇಶ.

ಇತರ ಮಠಗಳ ಅಪ್ರಸ್ತುತ ವಿಚಾರವನ್ನು ತೆಗೆದು ಆ ಮಠಗಳ ಮೇಲೆ ಆಕ್ಷೇಪಿಸಿರುವಂತೆ ಪ್ರತಿಬಿಂಬಿಸಿರುವುದನ್ನು ನೋಡಿದರೆ, ಎಲ್ಲರನ್ನೂ ಕಟ್ಟಿಕೊಂಡು ಉತ್ತರಾದಿಮಠದವರ ಮೇಲೆ ಬಂದು ಆಕ್ರಮಣ ಮಾಡಬೇಕೆಂಬ ಹಾರ್ದ ಸ್ಪಷ್ಟ ಮೂಡಿದೆ. ಇದು ಕೂಟ ನೀತಿ.

**ಈ ಪ್ರಸಂಗದಲ್ಲಿ ಲೇಖಕರು ಅನೇಕ ವಿಕಲ್ಪಗಳನ್ನು ಮಾಡಿ ವಾಚಕರನ್ನು ಮರಳು ಮಾಡುವ ಪ್ರಯತ್ನವನ್ನು ಮಾಡಿದ್ದಾರೆ. ಇವರ ಅಭಿಪ್ರಾಯವೇನು?**

ಬ್ರಹ್ಮಕರಾರ್ಚಿತ-ಮಧ್ವಕರಾರ್ಚಿತ ಹಾಗೂ ಇತರ ಯತಿಗಳಿಂದ ಕರಾರ್ಚಿತ ಪ್ರತಿಮೆಗಳಲ್ಲಿ ಭಗವತ್ಸನ್ನಿಧಾನದಲ್ಲಿ ತಾರತಮ್ಯ ಇಲ್ಲ ಎಂದು ಅಭಿಪ್ರಾಯವೋ?

ಬ್ರಹ್ಮಕರಾರ್ಚಿತ-ಮಧ್ವಕರಾರ್ಚಿತ ಪ್ರತಿಮೆಗಳನ್ನು ಮಂಟಪದಲ್ಲಿ ಕೆಳಗೆ ಇಟ್ಟು ಇತರ ಯತಿಕರಾರ್ಚಿತ ಪ್ರತಿಮೆಗಳನ್ನು ಮಂಟಪದ ಮೇಲ್ಭಾಗದಲ್ಲಿ ಇಡಬೇಕು ಎಂದು ಭಾವವೋ?

ಬ್ರಹ್ಮಕರಾರ್ಚಿತ-ಮಧ್ವಕರಾರ್ಚಿತ ಪ್ರತಿಮೆಗಳನ್ನು ಮಂಟಪದಲ್ಲಿ ಕೆಳಗೆ ಇಟ್ಟು ಇತರ ಯತಿಕರಾರ್ಚಿತ ಪ್ರತಿಮೆಗಳನ್ನು ಮಂಟಪದ ಮೇಲ್ಭಾಗದಲ್ಲಿ ಇಡಬೇಕು ಎನ್ನುವುದಕ್ಕೆ ಪ್ರಮಾಣಗಳು ಇವೆಯೋ?

ಬ್ರಹ್ಮಕರಾರ್ಚಿತ-ಮಧ್ವಕರಾರ್ಚಿತ ಪ್ರತಿಮೆಗಳನ್ನು ಮಂಟಪದಲ್ಲಿ ಮೇಲೆ ಇಟ್ಟು ಇತರ ಯತಿಕರಾರ್ಚಿತ ಪ್ರತಿಮೆಗಳನ್ನು ಮಂಟಪದಲ್ಲಿ ಕೆಳಗೆ ಇಡುವುದು ಸತ್ಸಂಪ್ರದಾಯ ಅಲ್ಲ ಎಂದು ಹಾರ್ದವೋ?

ಅನೇಕ ಮಾಧ್ವಮಠಗಳಲ್ಲಿ (ಪ್ರಾಯಃ ಎಲ್ಲ ಮಠಗಳಲ್ಲಿ) ಶ್ರೀಮದಾಚಾರ್ಯಕರಾರ್ಚಿತವಾದ ಪ್ರತಿಮೆಗಳನ್ನು ಪಟ್ಟದ ದೇವರು ಎಂಬುದಾಗಿ ಆ ಪ್ರತಿಮೆಯಲ್ಲಿರುವ ಅತಿವಿಶಿಷ್ಟ ಸನ್ನಿಧಾನವನ್ನು ಅನುಸಂಧಾನಿಸಿ ಮಂಟಪದ ಮೇಲ್ಭಾಗದಲ್ಲಿ ಇಟ್ಟು ಪೂಜಿಸುವ ಸತ್ಸಂಪ್ರದಾಯ ಇದ್ದೇ ಇದೆ. (ಗಮನಿಸಿ: ಈ ಸಂಪ್ರದಾಯ ರಾಯರ ಮಠದಲ್ಲಿಲ್ಲ.)

ಈ ಪ್ರಸಂಗದಲ್ಲಿ ಲೇಖಕರು ಸೋದೆಮಠ, ಸುಬ್ರಹ್ಮಣ್ಯಮಠ, ವ್ಯಾಸರಾಜಮಠಗಳ ಪ್ರಸ್ತಾಪವನ್ನು ಮಾಡಿದ್ದಾರೆ. ಆ ಮಠಗಳಲ್ಲಿ ಪೂಜಾಸಂದರ್ಭದಲ್ಲಿ ಮಂಟಪದಲ್ಲಿ ಸಂಸ್ಥಾನಪ್ರತಿಮೆಗಳನ್ನು ಇಡುವ ಕ್ರಮವನ್ನು ಉಲ್ಲೇಖ ಮಾಡಿದ್ದಾರೆ. ಈ ಮೂರು ಮಠಗಳ ಜೊತೆ ರಾಯರಮಠದ ಪೂಜಾಸಂಪ್ರದಾಯವನ್ನೂ ಉಲ್ಲೇಖಿಸಿದ್ದಾರೆ.

ಸೋದೆಮಠದಲ್ಲಿ ಭೀಮಸೇನಕರಾರ್ಚಿತ ಶ್ರೀನರಸಿಂಹದೇವರು ಮಂಟಪದ ಉನ್ನತಸ್ತರದಲ್ಲಿ, ಮಧ್ವಕರಾರ್ಚಿತ ಶ್ರೀಭೂವರಾಹದೇವರು ಮಧ್ಯಸ್ತರದಲ್ಲಿ ಪೂಜೆಗೊಳ್ಳುತ್ತಿದ್ದಾರೆ.

ಸುಬ್ರಹ್ಮಣ್ಯಮಠದಲ್ಲಿ ಶ್ರೀಮದಾಚಾರ್ಯಕರಾರ್ಚಿತ ಶ್ರೀನರಸಿಂಹದೇವರು ಮಂಟಪದ ಪ್ರಥಮ-ಸ್ತರದಲ್ಲಿ, ಶ್ರೀಮದಾಚಾರ್ಯಕರಾರ್ಚಿತ ಶ್ರೀವಿಠ್ಠಲದೇವರು ದ್ವಿತೀಯಸ್ತರದಲ್ಲಿ ಪೂಜೆಗೊಳ್ಳುತ್ತಿದ್ದಾರೆ.

ವ್ಯಾಸರಾಜಮಠದಲ್ಲಿ ಮಂಟಪದ ಮೇಲ್ಭಾಗದಲ್ಲಿ ನೀಲಾದೇವಿಕರಾರ್ಚಿತ ಹಾಗೂ ಶ್ರೀಮದಾಚಾರ್ಯ-ಕರಾರ್ಚಿತವೂ ಆದ ಶ್ರೀಮೂಲಗೋಪಾಲಕೃಷ್ಣದೇವರನ್ನು, ಶ್ರೀಮದಾಚಾರ್ಯಕರಾರ್ಚಿತ ಶ್ರೀಮೂಲ ಪಟ್ಟಾಭಿರಾಮದೇವರನ್ನು ಮಂಟಪದ ಮಧ್ಯಸ್ತರದಲ್ಲಿ ಮಂಡಿಸಿ ಪೂಜಿಸುತ್ತಾರೆ.

ಎಂಬುದಾಗಿ ಉಲ್ಲೇಖಿಸಿದ್ದಾರೆ. ಈ ಮೂರು ಮಠಗಳ ದೃಷ್ಟಾಂತವನ್ನು ಕೊಟ್ಟು ಲೇಖಕರು ಏನು ಸಾಧಿಸುತ್ತಿದ್ದಾರೆ? ಎನ್ನುವುದೇ ಸ್ಪಷ್ಟವಾಗುತ್ತಿಲ್ಲ.

ಈ ಮೂರೂ ಮಠಗಳಲ್ಲಿ ಪ್ರತಿಮೆಗಳನ್ನು ಇಡುವ ಕ್ರಮ ಉತ್ತರಾದಿಮಠಕ್ಕೆ ಪ್ರತಿಕೂಲವಾಗಿದೆ ಎಂಬ ಅಭಿಪ್ರಾಯವೋ? ರಾಯರ ಮಠಕ್ಕೆ ಅನುಕೂಲವಾಗಿದೆ ಎಂಬ ಅಭಿಪ್ರಾಯವೋ? ಎರಡೂ ಸಿದ್ಧವಾಗುವುದಿಲ್ಲ.

ಲೇಖಕರು ಉದಾಹರಿಸಿದ ಈ ಮೂರೂ ಮಠಗಳಲ್ಲಿ ಪ್ರಥಮ ಹಾಗೂ ದ್ವಿತೀಯಸ್ತರಗಳಲ್ಲಿರುವ ಪ್ರತಿಮೆಗಳು ಮಧ್ವ ಅಥವಾ ಭೀಮ ಅಂದರೆ ವಾಯುಕರಾರ್ಚಿತವೇ ಆಗಿದೆ. ಆದ್ದರಿಂದ ಆ ಭಗವತ್ಪ್ರತಿಮೆಗಳಲ್ಲಿ ಭಗವಂತನ ಸನ್ನಿಧಾನ ಸಮಾನವಾಗಿರುತ್ತದೆ. ಆದ್ದರಿಂದ ಮಂಟಪದಲ್ಲಿ ಯಾವುದನ್ನಾದರೂ ಮೇಲೆ-ಕೆಳಗೆ ಇಟ್ಟರೂ ಬಾಧಕವಿಲ್ಲ. ಉತ್ತರಾದಿಮಠದಲ್ಲಿಯೂ ಬ್ರಹ್ಮ-ವಾಯುಕರಾರ್ಚಿತ ಪ್ರತಿಮೆಗಳನ್ನು ಮಂಟಪದ ಪ್ರಥಮಸ್ತರದಲ್ಲಿ, ಶ್ರೀಮದಾಚಾರ್ಯಕರಾರ್ಚಿತವೇ ಆದ ಶ್ರೀವಂಶರಾಮ, ಶ್ರೀಪ್ರಸನ್ನವಿಠ್ಠಲ ಹಾಗೂ ವ್ಯಾಸಮುಷ್ಟಿಗಳನ್ನು ಮಧ್ಯಸ್ತರದಲ್ಲಿ ಇಟ್ಟು ಪೂಜಿಸುತ್ತಾರೆ. ಆದ್ದರಿಂದ ಲೇಖಕರು ಉದಾಹರಿಸಿದ ಮೂರು ಮಠಗಳ ದೃಷ್ಟಾಂತಗಳು ಉತ್ತರಾದಿಮಠಕ್ಕೆ ಸರ್ವಥಾ ಪ್ರತಿಕೂಲ ಅಲ್ಲವೇ ಅಲ್ಲ.

ಈ ಮೂರುಮಠಗಳ ದೃಷ್ಟಾಂತ ರಾಯರ ಮಠಕ್ಕೆ ಅನುಕೂಲವೂ ಆಗಿಲ್ಲ

ಈ ಮೂರುಮಠಗಳ ಸಾಲಿನಲ್ಲಿ ರಾಯರ ಮಠದ ಪೂಜಾಸಂಪ್ರದಾಯವನ್ನೂ ಲೇಖಕರು ಉಲ್ಲೇಖಿಸಿದ್ದಾರೆ. ಅದು ಸರ್ವಥಾ ಸಮಂಜಸವಾಗುವುದಿಲ್ಲ. ಏಕೆಂದರೆ, ರಾಯರಮಠದಲ್ಲಿ ಪೂಜಾಮಂಟಪದ ಮೇಲ್ಭಾಗದಲ್ಲಿ ಇಡುವ ಶ್ರೀಲಕ್ಷ್ಮೀನಾರಾಯಣದೇವರು ಶ್ರೀಮದಾಚಾರ್ಯಕರಾರ್ಚಿತ ಅಲ್ಲ. ಕೆಲವು ಹೇಳಿಕೆಯಂತೆ ಅದು

ಶ್ರೀಸುಧೀಂದ್ರತೀರ್ಥರಿಗೆ ಒಲಿದು ಬಂದದ್ದು – ''ನದ್ಯಾಂ ಮಹೋಪಲೇ ಲಬ್ಧಾ ವಿಬುಧೇಂದ್ರಕರಾಂಬುಜಮ್ । ಸುಧೀಂದ್ರೇಷ್ವಸುಪರ್ಣಸ್ಥಾ ಲಕ್ಷ್ಮೀನಾರಾಯಣಸ್ಯ ಸಾ ॥'' (ಅರ್ಚಾಗತಿಕ್ರಮ, 33) ಶ್ರೀವಿಜಯೀಂದ್ರಕರಾರ್ಚಿತ ಎಂಬುದು ಕೆಲವರ ಅನಿಸಿಕೆ. ಶ್ರೀವಿಬುಧೇಂದ್ರರಿಂದ ಪ್ರದತ್ತವಾದದ್ದು ಎಂಬುದಾಗಿ ಕೆಲವರ ಅಭಿಪ್ರಾಯ. ಅಂತೂ ಅದು ಶ್ರೀಮದಾಚಾರ್ಯಕರಾರ್ಚಿತವಲ್ಲ ಎನ್ನುವುದು ಖಚಿತ.

ಇದರಂತೆಯೇ ಮಂಟಪದ ಮೇಲ್ಭಾಗದಲ್ಲಿ ವಿಶೇಷಪ್ರಸಂಗದಲ್ಲಿ ಇಟ್ಟು ಆರಾಧಿಸಲ್ಪಡುವ ಶ್ರೀಷೋಡಶಬಾಹುನರಸಿಂಹದೇವರು ಶ್ರೀವಿಬುಧೇಂದ್ರರಿಗೆ ಒಲಿದು ಬಂದು ಅವರ ಕರದಿಂದ ಅರ್ಚಿತ ಎನ್ನುವುದು ಸರ್ವವಿದಿತ – ''ಶ್ರೀಮಲ್ಲಕ್ಷ್ಮೀನೃಸಿಂಹಾರ್ಚಾ ವಿಬುಧೇಂದ್ರಯತೀಷ್ವದಾ । ತಸ್ಯ ಹ್ಯಷ್ಟಾಭುಜಾ ಮೂರ್ತಿಃ ಸ್ವಪ್ನಾಭಿಜ್ಞಾನಪೂರ್ವಕಮ್ ॥'' (ಅರ್ಚಾಗತಿಕ್ರಮ, 32) ಅಂದಮೇಲೆ ಅದನ್ನು ಮೇಲೆ ಇಟ್ಟು ಬ್ರಹ್ಮಕರಾರ್ಚಿತ-ಮಧ್ವಕರಾರ್ಚಿತ ಎಂದು ಹೇಳಿಕೊಳ್ಳುವ ಪ್ರತಿಮೆಗಳನ್ನು ಕೆಳಗಿನ ಸ್ತರದಲ್ಲಿ ಇಡುವುದು ಹೇಗೆ ಉಚಿತವಾಗುತ್ತದೆ? ಲೇಖಕರು ಇತರ ಮೂರು ಮಠಗಳಲ್ಲಿ ಮಂಟಪದ ಮೇಲ್ಭಾಗದಲ್ಲಿ ಇಡುವ ಪ್ರತಿಮೆಗಳು ಶ್ರೀಮದಾಚಾರ್ಯಕರಾರ್ಚಿತ, ಭೀಮಕರಾರ್ಚಿತ ಇತ್ಯಾದಿಯಾಗಿ ಸ್ಪಷ್ಟವಾಗಿ ಉಲ್ಲೇಖಿಸಿದಂತೆ ರಾಯರಮಠದಲ್ಲಿ ಮಂಟಪದ ಮೇಲ್ಭಾಗದಲ್ಲಿಡುವ ಶ್ರೀಲಕ್ಷ್ಮೀನಾರಾಯಣದೇವರು ಪ್ರತಿಮೆ ಯಾರ ಕರಗಳಿಂದ ಅರ್ಚಿತ? ಎಂದು ಯಾಕೆ ಉಲ್ಲೇಖ ಮಾಡಿಲ್ಲ? ಇದು ಜಾಣತನದಿಂದ ಜಾರಿಕೊಳ್ಳುವ ಪ್ರಯತ್ನವಲ್ಲವೇ? ಆದ್ದರಿಂದ ಇತರ ಮಾಧ್ವ ಮಠಗಳ ಪೂಜಾ ಮಂಟಪದಲ್ಲಿ ಆಚಾರ್ಯಕರಾರ್ಚಿತ ಪ್ರತಿಮೆಗಳನ್ನು ಉನ್ನತ ಸ್ಥಾನದಲ್ಲಿ ಇಡುವ ಸಂಪ್ರದಾಯ ಇರುವಂತೆ, ರಾಯರ ಮಠದಲ್ಲಿ ಆ ಸಂಪ್ರದಾಯ ಇಲ್ಲ ಎನ್ನುವುದು ಸ್ಪಷ್ಟ.

**ಸಂದೇಹ 20.** ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಜಯತೀರ್ಥರು ತಮ್ಮ ಗ್ರಂಥಗಳ ಆದ್ಯಂತಗಳಲ್ಲಿ ಮೂಲರಾಮ ಎಂಬ ಪದವನ್ನು ಒಮ್ಮೆಯಾದರೂ ಬಳಿಸಿರುವರೇ? ಇದರಿಂದ ಇವರೆಲ್ಲರೂ ಶ್ರೀಮೂಲರಾಮನನ್ನು ಪೂಜಿಸಲಿಲ್ಲ ಎಂದು ಅರ್ಥವೇ? ಶ್ರೀಮದಾಚಾರ್ಯರು ಸರ್ವಮೂಲಗ್ರಂಥಗಳ ಆದ್ಯಂತಗಳಲ್ಲಿ ನಾರಾಯಣ, ವಿಷ್ಣು, ನರಸಿಂಹ, ವಾಮನಾದಿಭಗವದ್ರೂಪಗಳಿಗೆ ನಮಿಸಿದ್ದಾರೆ. ಶ್ರೀಸರ್ವಜ್ಞಮಾರ್ಗವನ್ನು ಅತಿಕ್ರಮಿಸಬಾರದೆಂಬ ವಿಶಿಷ್ಟವಿನಯದಿಂದಲೇ ಶ್ರೀಪದ್ಮನಾಭಾದಿಗಳು ನಾರಾಯಾಣಾದಿರೂಪಗಳಿಗೆ ನಮಸ್ಕರಿಸಿದರು. (ಪುಟ. 84-85)

**ಉತ್ತರ:** ಈ ತರಹದ ಬಾಲಿಶವಾದ ಆಕ್ಷೇಪಗಳಿಗೆ ಉತ್ತರಿಸದಿರುವುದೇ ಲೇಸು.

ಒಂದು ವಸ್ತು ಒಂದು ಕಾಲಘಟ್ಟದಲ್ಲಿ ಇತ್ತು ಎನ್ನುವುದಕ್ಕೆ ಆ ಕಾಲಘಟ್ಟದಲ್ಲಿ ಆ ವಸ್ತುವಿನ ಉಲ್ಲೇಖ ಸಮಕಾಲೀನ ಕಾವ್ಯ , ಶಾಸನ ಇತ್ಯಾದಿಗಳಲ್ಲಿ ಬಂದಿದ್ದರೆ ಅದನ್ನು ಆಧಾರ ಎಂದು ಪರಿಗಣಿಸಲಾಗುತ್ತದೆ. ಅದರರ್ಥ ಆ ವಸ್ತು ಆ ಕಾಲಘಟ್ಟದ ಹಿಂದೆ-ಮುಂದೆ ಇರಲಿಲ್ಲ ಎಂದಲ್ಲ. ಕಿಂತು ಆ ಕಾಲಘಟ್ಟದಲ್ಲಿ ನಿಶ್ಚಿತವಾಗಿಯೂ ಇತ್ತು ಎಂದು ಆ ಪ್ರಮಾಣದಿಂದ ನಿರ್ಧರಿಸಬಹುದು. ಆ ಉಲ್ಲೇಖ ವಿಶ್ವಾಸಾರ್ಹ ಅಲ್ಲ ಎಂದಾಗಿದ್ದರೆ ಅದನ್ನು ಇತರ ಪ್ರಬಲ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಸಾಬೀತು ಪಡಿಸಬೇಕೇ ವಿನಹ ಹಾರಿಕೆಯ ಉತ್ತರವನ್ನು ನೀಡಬಾರದು. ಇದು ಇತಿಹಾಸ ಸಂಶೋಧನೆಯ ಕ್ರಮ.

ಶ್ರೀಉತ್ತರಾದಿಮಠದಲ್ಲಿ ಶ್ರೀಮೂಲರಾಮಪ್ರತಿಮೆಯೇ ಇಲ್ಲ ಎನ್ನುವವರಿಗೆ ಸ.ಸೀ.ಮೂ ಕೃತಿಯಲ್ಲಿ ಉಲ್ಲೇಖಿಸಿದ ಶ್ರೀಸತ್ಯವ್ರತರ, ಶ್ರೀಸತ್ಯನಾಥರ, ಶ್ರೀಸತ್ಯಾಭಿನವರ ಮಂಗಳಾಚರಣ ಶ್ಲೋಕಗಳು ಶ್ರೀಉತ್ತರಾದಿಮಠದ ಆ ಪೀಠಾಧಿಪತಿಗಳು ಶ್ರೀಮೂಲರಾಮನನ್ನು ಪೂಜಿಸುತ್ತಿದ್ದರು ಎನ್ನುವುದಕ್ಕೆ ಸ್ಪಷ್ಟ ಆಧಾರವಾಗುತ್ತವೆ.

ಉತ್ತರಾದಿಮಠದಲ್ಲಿ ಶ್ರೀಮೂಲರಾಮಪ್ರತಿಮೆಯೇ ಇಲ್ಲ ಎಂದಾಗಿದ್ದರೆ ಟಿಪ್ಪಣಿಕಾರರಾದ, ಮಹಾತಪಸ್ವಿಗಳಾದ ಶ್ರೀಸತ್ಯವ್ರತರು, ಶ್ರೀಸತ್ಯನಾಥರು, ಶ್ರೀಸತ್ಯಾಭಿನವರೇ ಮೊದಲಾದವರು ಶ್ರೀಮೂಲರಾಮನನ್ನು ಸ್ತುತಿಸುತ್ತಿರಲಿಲ್ಲ. ಅವರೆಲ್ಲಾ ತಮ್ಮ ಗ್ರಂಥದ ಆದಿಯಲ್ಲಿ ಸ್ತುತಿಸಿದ್ದಾರೆ ಎಂದರೆ ಅ ಮಹಾನುಭಾವರ ಆ ಮಾತುಗಳೂ ಕೂಡಾ ಇತರ ಸ್ಪಷ್ಟ ಆಧಾರಗಳ ಹಿನ್ನೆಲೆಯಲ್ಲಿ ಶ್ರೀಉತ್ತರಾದಿಮಠದಲ್ಲಿ ಶ್ರೀಮೂಲರಾಮಪ್ರತಿಮೆ ಇದೆ ಎನ್ನುವುದಕ್ಕೆ ಆಧಾರವಾಗೇ ಆಗುತ್ತದೆ.

ಶ್ರೀಮೂಲರಾಮನನ್ನು ಸ್ತುತಿಸಿದ ಈ ಮೂರು ನಾಲ್ಕು ಯತಿಗಳು ಮಾತ್ರ ಶ್ರೀಮೂಲರಾಮನ್ನು ಪೂಜಿಸಿದ್ದರು, ಶ್ರೀಮೂಲರಾಮನನ್ನು ತಮ್ಮ ಗ್ರಂಥಗಳಲ್ಲಿ ಸ್ತುತಿಸದ ಹಿಂದಿನ ಮುಂದಿನ ಯತಿಗಳು ಪೂಜಿಸಿಲ್ಲ ಎಂದು ಯಾರೂ ಇದನ್ನು ಅರ್ಥೈಸಲಾರರು.

ಟೀಕಾ ಟಿಪ್ಪಣಿಗಳ ಆದಿಯಲ್ಲಿ ಮೂಲರಾಮನನ್ನು ನಮಸ್ಕರಿಸಿದರೆ ಮಾತ್ರ ಆ ಮಠದಲ್ಲಿ ಮೂಲರಾಮನ ಅಸ್ತಿತ್ವವನ್ನು ಒಪ್ಪಬೇಕು ಎಂಬ ನಿಯಮವಿಲ್ಲ ಎನ್ನುವುದು ವಾಸ್ತವ. ಆದರೆ ಅದೊಂದೇ ಪ್ರಮಾಣವಾಗದಿದ್ದರೂ ಇತರ ಆಧಾರಗಳ ಹಿನ್ನೆಲೆಯಲ್ಲಿ ಅದೂ ಪ್ರಮಾಣವಾಗುತ್ತದೆ.

ಮೂ.ಮಠೇ ಲೇಖಕರು ಶ್ರೀವಿಜಯೀಂದ್ರರು, ಶ್ರೀಸುಧೀಂದ್ರರು, ಶ್ರೀರಾಘವೇಂದ್ರರು, ಶ್ರೀಉಪೇಂದ್ರರು, ಶ್ರೀವಸುಧೇಂದ್ರರು, ಶ್ರೀವರದೇಂದ್ರರು, ಶ್ರೀಧೀರೇಂದ್ರರು ಇತ್ಯಾದಿ ಯತಿಗಳ ಕುರಿತಾಗಿರುವ ಕೀರ್ತನೆಗಳನ್ನು ಯಾಕೆ ಉಲ್ಲೇಖಿಸಿದ್ದಾರೆ? ಆ ಆ ಯತಿಗಳು ಮೂಲರಾಮನನ್ನು ಪೂಜಿಸಿದರು ಎನ್ನುವ ವಿಷಯದಲ್ಲಿ ಆಧಾರ ಎಂಬುದಾಗಿ ತಾನೇ ಅವುಗಳನ್ನು ಉಲ್ಲೇಖಿಸಿದ್ದು. ಉತ್ತರಾದಿಮಠದವರ ಮೇಲೆ ಲೇಖಕರು ಮಾಡಿರುವ ಆಕ್ಷೇಪಗಳು ಲೇಖಕರಿಗೂ ಅನ್ವಯವಾಗುತ್ತದಲ್ಲವೇ? ಏಕೆಂದರೆ ''ಕೀರ್ತನೆಗಳಲ್ಲಿ ಯಾವ ಯತಿಗಳು ಮೂಲರಾಮನನ್ನು ಪೂಜಿಸಿದರು ಎಂದು ಉಲ್ಲೇಖಿಸಲ್ಪಟ್ಟಿದೆಯೋ ಆ ಯತಿಗಳು ಮಾತ್ರ ಮೂಲರಾಮನನ್ನು ಪೂಜಿಸಿದರು. ಇತರರು ಪೂಜಿಸಿಲ್ಲ ಎಂದರ್ಥವೇ?'', ''ಯಾವ ಪರಂಪರೆಯ ಕೀರ್ತನೆಗಳಲ್ಲಿ ಮೂಲರಾಮನ ಪ್ರಸ್ತಾಪ ಬಂದಿದೆಯೋ ಆ ಪರಂಪರೆಯಲ್ಲಿ ಮಾತ್ರ ಮೂಲರಾಮ ಇದೆ ಎಂಬ ನಿಯಮವೇನಿಲ್ಲ'' ಇತ್ಯಾದಿಯಾಗಿ ಆಕ್ಷೇಪಿಸಲು ಬಂದೇ ಬರುತ್ತದೆ.

**ಸರ್ವಜ್ಞಮಾರ್ಗದ ಉಲ್ಲಂಘನ**

ಶ್ರೀಪದ್ಮನಾಭತೀರ್ಥಾದಿಗಳು ಮೂಲರಾಮನನ್ನು ಸ್ತುತಿಸದೇ ಇದ್ದದ್ದು ಸರ್ವಜ್ಞಮಾರ್ಗದ ಅನುಸರಣ. ಶ್ರೀಸತ್ಯವ್ರತತೀರ್ಥರೇ ಮೊದಲಾದವರು ಶ್ರೀಮೂಲರಾಮನನ್ನು ಸ್ತುತಿಸಿದ್ದು ಸರ್ವಜ್ಞಮಾರ್ಗದ ಉಲ್ಲಂಘನ ಎಂದು ಹೇಳುವುದಾದರೆ, ಶ್ರೀಸರ್ವಜ್ಞರ ಮಾರ್ಗವನ್ನು ಅತಿಕ್ರಮಿಸಬಾರದೆಂಬ ವಿಶಿಷ್ಟ ವಿನಯವನ್ನು, ರಾಯರಮಠದವರೇ ಹೇಳುವಂತೆ ''ಮೂಲರಾಮನಿಗೇ ಎಲ್ಲವನ್ನು ಅರ್ಪಿಸಬೇಕು'' ಎಂದು ಬರೆದ ಅಪ್ಪಣ್ಣಾಚಾರ್ಯರು ಅತಿಕ್ರಮಿಸಿದಂತಾಗಲಿಲ್ಲವೇ? ಶ್ರೀಮದಾಚಾರ್ಯರು, ಶ್ರೀಪದ್ಮನಾಭಾದಿಗಳು ಹಾಗೆ ಎಲ್ಲೂ ಹೇಳಿಲ್ಲವಲ್ಲಾ!

ರಾಯರಮಠದ ಪರಂಪರೆಯ ಹಿಂದಿನ ಯತಿಗಳ ಯಾವ ಚರಮಶ್ಲೋಕಗಳಲ್ಲೂ (ಶ್ರೀಸುಯಮೀಂದ್ರತೀರ್ಥರವರೆಗೆ) ಕಂಡುಬರದ ''ಸುಮೂಲರಾಮಪೂಜಾಢ್ಯಂ'' ''ಮೂಲರಾಮಾರ್ಚನೇ ರತಮ್'' ಎಂಬ ವಿಶೇಷಣಗಳನ್ನು ಶ್ರೀಸುಜಯೀಂದ್ರರ, ಶ್ರೀಸುಯತೀಂದ್ರರ ಚರಮಶ್ಲೋಕದಲ್ಲಿ ಸೇರಿಸಿದ ಯತಿಗಳು ಸಂಪ್ರದಾಯವನ್ನು ಉಲ್ಲಂಘಿಸಿದಂತಾಗಲಿಲ್ಲವೇ?!!

ಶ್ರೀಪದ್ಮನಾಭತೀರ್ಥರಾಗಲೀ, ಶ್ರೀಟೀಕಾಕೃತ್ಪಾದರಾಗಲೀ, ಶ್ರೀವ್ಯಾಸರಾಜರಾಗಲೀ ನೇರವಾಗಿ ಬ್ರಹ್ಮಸೂತ್ರ-ಗಳಿಗೆ ವ್ಯಾಖ್ಯಾನವನ್ನು ಮಾಡಿಲ್ಲ. ಶ್ರೀಮದಾಚಾರ್ಯರ ಭಾಷ್ಯಕ್ಕೇ ವ್ಯಾಖ್ಯಾನ ಮಾಡುವ ಮೂಲಕ ವಿನಯವನ್ನು ಪ್ರದರ್ಶಿಸಿದ್ದಾರೆ. ಶ್ರೀರಾಘವೇಂದ್ರಸ್ವಾಮಿಗಳು, ಶ್ರೀಜಗನ್ನಾಥಯತಿಗಳು ಬ್ರಹ್ಮಸೂತ್ರಗಳಿಗೇ ನೇರವಾದ ವ್ಯಾಖ್ಯಾನವನ್ನು ಮಾಡಿದ್ದಾರೆ. ಹಾಗಿದ್ದರೆ ಈ ಇಬ್ಬರೂ ಮಹನೀಯರು ಶ್ರೀಪದ್ಮನಾಭತೀರ್ಥಾದಿಗಳ ವಿಶಿಷ್ಟವಿನಯದ ಸಂಪ್ರದಾಯವನ್ನು ಮೀರಿದರು ಎಂದರ್ಥವೇ? ಸರ್ವಥಾ ಹಾಗೆ ಯಾರೂ ಭಾವಿಸುವುದಿಲ್ಲ.

ಶ್ರೀರಾಯರಮಠದ ಯಾವ ವಿದ್ವಾಂಸರೂ, ಯತಿಗಳೂ, ಹರಿದಾಸರೂ ಎಂದೂ ಎಲ್ಲೂ ಮೂಲರಾಮ ಎಂದು ಉಲ್ಲೇಖಿಸೇ ಇಲ್ಲವೇ?!! ಮೂಲರಾಮನನ್ನು ಸ್ತುತಿಸಿಲ್ಲವೇ? ಉಲ್ಲೇಖಿಸಿದ್ದರೆ, ಸ್ತುತಿಸಿದ್ದರೆ ಅವರೆಲ್ಲಾ ಶ್ರೀಮದಾಚಾರ್ಯರ, ಶ್ರೀಪದ್ಮನಾಭತೀರ್ಥಾದಿಗಳ ಮಾರ್ಗವನ್ನು ಉಲ್ಲಂಘಿಸಿದಂತಾಗಲಿಲ್ಲವೇ? ವಿಶಿಷ್ಟವಿನಯವನ್ನು ತೊರೆದಂತಾಗಲಿಲ್ಲವೇ? ಇದೆಂಥಾ ಬಾಲಿಶ !!

ಅಲ್ಲದೇ, ಈ ವಿಷಯದಲ್ಲಿ ಇತರರಲ್ಲಿ ಇಲ್ಲದ ವೈಲಕ್ಷಣ್ಯವನ್ನು ತೋರಿಸುವುದು ಹಾಗೂ ಉತ್ತರಾದಿಮಠದಲ್ಲಿ ಆಧಾರಗಳೇ ಇಲ್ಲವೆಂದು ಆಕ್ಷೇಪಿಸುವವರಿಗೆ ಆಧಾರ ಉಂಟೆಂದು ತೋರಿಸುವುದು ಮಾತ್ರ ಆ ಮಾತಿನ ಉದ್ದೇಶ.

ಮೂ.ಮತೇ ಲೇಖಕರ ಉದ್ದೇಶ ಏನೆಂಬುದು ಅವರ ವಾಕ್ಯಗಳಿಂದ ಸ್ಪಷ್ಟ. ಉತ್ತರಾದಿಮಠದಲ್ಲಿಲ್ಲದ ಇತರ ವೈಲಕ್ಷಣ್ಯಗಳನ್ನು ಅನ್ಯಪೀಠಗಳಲ್ಲಿ ಬೇಕಾದಷ್ಟು ಕಾಣಬಹುದು. ಅಪ್ರಸ್ತುತ ವಿಷಯಗಳನ್ನು ಎತ್ತುವುದರಲ್ಲೇ ಮೊದಲಿನಿಂದಲೂ ಎತ್ತಿದ ಕೈ ಎಂಬುದನ್ನು ರಾಯರಮಠದಿಂದ ಪ್ರಕಟಿತ ಅನೇಕ ಇಂತಹ ಪುಸ್ತಕಗಳಲ್ಲಿ ಕಾಣಬಹುದು.

**ಸಂದೇಹ 21.** ಗುರು ಪುರಂದರದಾಸರ ಕೃತಿಯಲ್ಲಿ ಉತ್ತರಕಾಲೀನರ ಕೈವಾಡ ಸಾಕಷ್ಟು ನಡೆದಂತಿದೆ... ... ... ಮುಂತಾದ (ಆರು ಅಕ್ಷೇಪಗಳನ್ನು ಈ ಕೃತಿಯ ಮೇಲೆ ಮಾಡುತ್ತಾ) ಈ ಸುಳಾದಿಯ ಭಾಗಗಳನ್ನು ಗುರುಪುರಂದರದಾಸರ ತಲೆಗೆ ಕಟ್ಟಿರುವುದು ಎದ್ದು ಕಾಣುತ್ತದೆ. (ಪುಟ. 88)

**ಉತ್ತರ:** ಗುರುಪುರಂದರದಾಸರ ಕೃತಿಯನ್ನು ಮುದ್ರಿಸಿದವರು ಶ್ರೀರಾಯರ ಮಠದ ಅಧಿಕೃತ ಲೇಖಕರಾದ ''ಶ್ರೀಮೂಲರಾಮ'' ಎಂಬ ಪುಸ್ತಕ ಕರ್ತೃಗಳಾದ ದಿ.ರಾಜಾ.ಎಸ್. ಗುರುರಾಜಾಚಾರ್ಯರು. ಈ ಕೃತಿಯಲ್ಲಿ ಎದ್ದು ಕಾಣುವ ಪ್ರಬಲ ದೋಷಗಳನ್ನೆಲ್ಲ ಅವರನ್ನೇ ಕೇಳಿ ತಿಳಿಯಬೇಕು. ಅದರಲ್ಲೂ ಅವರಿಗೆ ಬಾಧಕವಾದ (ನುಡಿ 19) ಉತ್ತರಾದಿಮಠಕ್ಕೆ ಸಾಧಕವಾದ ವಿಷಯಗಳಿವೆ. ಅಂತೆಯೇ ಈಗ ಅವರ ಈ ಆಕ್ಷೇಪ.

**ಸಂದೇಹ 22.** ಮೂಲರಾಮನನ್ನು ಸಂಜೆ ಪೂಜಿಸಿದರೇ? ಈ ವಿಷಯದಲ್ಲಿ ಅವರೇ ಪ್ರಮಾಣವೆಂದು ಒಪ್ಪಿ ಮುದ್ರಿಸಿರುವ ಗುರುಪುರಂದರದಾಸರ ಸುಳಾದಿಯು ಅಪ್ರಮಾಣ. ಶ್ರೀವಿಬುಧೇಂದ್ರತೀರ್ಥರೂ ಸಹ ಉತ್ಥಾನದ್ವಾದಶೀ ಸಂಜೆಪೂಜೆಯ ಸಂಪ್ರದಾಯವನ್ನೇ ಪಾಲಿಸುತ್ತಿದ್ದರಲ್ಲವೇ?

''ಶ್ರೀನರಹರಿತೀರ್ಥರು ಶ್ರೀಮೂಲರಾಮನನ್ನು ಉತ್ಥಾನದ್ವಾದಶೀ ಸಂಜೆ ತಂದು ಶ್ರೀಮದಾಚಾರ್ಯರಿಗೆ ಒಪ್ಪಿಸಿದಾಗ ಶ್ರೀಮದಾಚಾರ್ಯರು ಆಗಲೇ ಅದನ್ನು ಪೂಜಿಸಿದರು'' ಎಂಬ ಕಥೆಯ ಹಿನ್ನೆಲೆಯಲ್ಲಿ ಉತ್ತರಾದಿಮಠದವರು ಇಂದಿಗೂ ಉತ್ಥಾನದ್ವಾದಶೀ ಸಂಜೆ ತಮ್ಮ ಮಠದಲ್ಲಿ ಮೂಲರಾಮನ ಪೂಜೆ ನಡೆಯುತ್ತದಾದ ಕಾರಣ ತಮ್ಮದೇ ಶ್ರೀಮದಾಚಾರ್ಯರು ವಿರಾಜಿಸಿದ ಮೂಲಸಂಸ್ಥಾನ ಎಂದು ಸ್ಥಾಪಿಸುವುದು ಸರಿಯಲ್ಲ.

**ಉತ್ತರ:** ಉತ್ಥಾನದ್ವಾದಶೀ ಸಂಜೆ ಪೂಜೆಯನ್ನು ಉತ್ತರಾದಿಮಠದಲ್ಲಿ ಪರಂಪರೆಯಿಂದ ಸಂಪ್ರದಾಯವಾಗಿ ನಡೆಸಿಕೊಂಡು ಬಂದಿದ್ದಾರೆ. ಇದರಿಂದಲೇ ಮೂಲಸಂಸ್ಥಾನವೆಂದು ಸಾಧಿಸಲು ಹೊರಟವರಾರು?

ಗುರುಪುರಂದರದಾಸರ ಸುಳಾದಿಯನ್ನು ಪ್ರಮಾಣವೆಂಬುದಾಗಿ ಮೊದಲು ಮುದ್ರಿಸಿದವರು ದಿವಂಗತ ಶ್ರೀರಾಜಾ.ಎಸ್.ಗುರುರಾಜ ಆಚಾರ್ಯರು. ಅದು ಈಗ ಅಪ್ರಮಾಣವೆಂಬ ಜ್ಞಾನೋದಯವಾಯಿತೇ?

ಇನ್ನು ಶ್ರೀಮದಾಚಾರ್ಯರು ಮೂಲರಾಮನನ್ನು ಸಂಜೆ ಪೂಜಿಸಿದರು ಎಂಬ ವಿಷಯ ಸಂಪ್ರದಾಯದಿಂದ ಹೇಳಿಕೊಂಡು ಬಂದಿದ್ದಾರೆ. ಹೆಚ್ಚಿನ ಅಧ್ಯಯನ-ಸಂಶೋಧನೆಯನ್ನು ಮಾಡಿ ಅದರ ಬಗ್ಗೆ ಇರುವ ಆಧಾರಗಳನ್ನು ಹುಡುಕುವ ಅಗತ್ಯ ಇದೆ. ದಿ. ರಾಜಾ.ಎಸ್ ಗುರುರಾಜಾಚಾರ್ಯರೇ ಶ್ರೀಮೂಲರಾಮ ಪುಸ್ತಕದ ಪುಟ.13ರಲ್ಲಿ ಛಾಪಿಸಿರುವ ''**ಇಂದಿನ ದಿನ ಸುದಿನವಾಯಿತು**'' ಎಂಬ ಪುರಂದರದಾಸರದ್ದೆಂದು ಹೇಳಲಾಗುವ ಕೃತಿಯ ಎರಡನೇ ನುಡಿಯಲ್ಲಿ ''ನರಹರಿಮುನಿ ರಜನಿಯಲ್ಲಿ ತಂದ ಸುಲೋಹಜಪ್ರತಿಮೆ ಕಂಡು'' ಎನ್ನುವಲ್ಲಿ ಶ್ರೀನರಹರಿತೀರ್ಥರು ಸಂಜೆ ಸಮಯದಲ್ಲಿ (ರಜನಿಯಲ್ಲಿ) ಶ್ರೀಮೂಲಸೀತಾರಾಮರ ಪ್ರತಿಮೆಗಳನ್ನು ತಂದ ವಿಷಯ ಸ್ಪಷ್ಟವಾಗಿ ಉಲ್ಲಿಖಿತವಾಗಿದೆ. ಅಷ್ಟೆ ಅಲ್ಲದೇ ಮುಂದಿನ ನುಡಿಯಲ್ಲಿ ಆ ಪ್ರತಿಮೆಯನ್ನು ಕಂಡು ಆನಂದತೀರ್ಥರು ಅರ್ಚಿಸಿರುವ ವಿಷಯವೂ ದಾಖಲಾಗಿರುವುದು ಗಮನಾರ್ಹ. (ಈ ಕೃತಿ ಪುರಂದರದಾಸರದ್ದೆನ್ನುವ ವಿಷಯವನ್ನು ನಾವು ಒಪ್ಪುವುದಿಲ್ಲ ಆ ಮಾತು ಬೇರೆ. ಆದರೆ ರಾಯರಮಠದವರೇ ಪ್ರಮಾಣವೆಂದು ಉದಾಹರಿಸಿದ ಈ ಕೃತಿಯಲ್ಲಿ ಸಂಜೆಯ ಕಾಲದಲ್ಲಿ ಶ್ರೀನರಹರಿತೀರ್ಥರು ಶ್ರೀಮೂಲರಾಮಪ್ರತಿಮೆಯನ್ನು ತಂದರು ಎನ್ನುವ ವಿಷಯವಿದೆ ಎನ್ನುವುದನ್ನು ಎತ್ತಿ ತೋರಿಸಿದ್ದೇವೆ. ಅಂತೂ ಈ ಕೃತಿ ಯಾರದ್ದೇ ಆಗಿರಲಿ ಶ್ರೀನರಹರಿತೀರ್ಥರು ರಾತ್ರಿ ಮೂಲರಾಮಪ್ರತಿಮೆಯನ್ನು ತಂದರು, ಶ್ರೀಮದಾಚಾರ್ಯರು ಅದನ್ನು ಆಗ ಪೂಜಿಸಿದರು ಎಂಬ ವಿಷಯ ಈ ಕೃತಿಯ ರಚನೆಯ ಕಾಲದಲ್ಲಿ ಪ್ರಸಿದ್ಧವಾಗಿತ್ತು ಎಂಬುದಂತೂ ನಿರ್ವಿವಾದ.)

ಹೀಗಾಗಿ ಶ್ರೀವಿಭುದೇಂದ್ರರು ಉತ್ಥಾನದ್ವಾದಶೀ ರಾತ್ರಿಪೂಜೆಯ ಸಂಪ್ರದಾಯವನ್ನು ಯಾಕೆ ಪಾಲಿಸಲಿಲ್ಲ?! ಎಂಬ ಪ್ರಶ್ನೆಗೆ ಲೇಖಕರೇ ಉತ್ತರ ಕೊಡಬೇಕು. ಉತ್ತರಾದಿಮಠದವರಿಗೆ ಈ ಪ್ರಶ್ನೆ ಮಾಡಿದರೆ ''ಶ್ರೀವಿಬುಧೇಂದ್ರರ ಪರಂಪರೆಯಲ್ಲಿ ಶ್ರೀಮೂಲರಾಮನಿಲ್ಲ. ಆದ್ದರಿಂದ ಅವರು ಆ ಸಂಪ್ರದಾಯವನ್ನು ಪಾಲಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ'' ಎಂದೇ ಉತ್ತರವನ್ನು ಕೊಡುತ್ತಾರೆ.

**ಸಂದೇಹ 23.** ವ್ಯಾಸವಿಠ್ಠಲರ ಕೃತಿಯ ಪಲ್ಲವಿಯಲ್ಲಿ ''ಮರೆಯದಿರು ಮರೆಯದಿರು ಮಾರಮಣ'' ಎಂಬ ಪಾಠವೇ ಸರಿ ''ಮೂಲರಾಮಾ'' ಎಂಬ ಪಾಠ ಸರಿಯಲ್ಲ. ತಮ್ಮ ಅನುಕೂಲಕ್ಕಾಗಿ ವ್ಯತ್ಯಸ್ತವಾಗಿ ವಾಕ್ಯವನ್ನು ಬಳಿಸಿಕೊಂಡು ಸಂಶೋಧಕರ ಹೆಸರನ್ನು ಮುದ್ರಿಸಿ ಅವರಿಗೆ ಮುಜುಗರ ಉಂಟು ಮಾಡುವುದು ಸರಿಯೇ? (ಪುಟ. 92)

**ಉತ್ತರ:** ವ್ಯಾಸವಿಠ್ಠಲರ ಕೃತಿಯ ಪಲ್ಲವಿಯಲ್ಲಿ ''ಮರೆಯದಿರು ಮರೆಯದಿರು ಮಾರಮಣ'' ಎಂಬ ಪಾಠ ಸರಿಯಲ್ಲ. ''ಮೂಲರಾಮಾ'' ಎಂಬ ಪಾಠವೇ ಸರಿ ಎಂದು ತಮ್ಮ ''ಹರಿದಾಸರು ಸ್ತುತಿಸಿದ ಶ್ರೀಸತ್ಯಬೋಧರು'' ಎಂಬ ಪುಸ್ತಕದಲ್ಲಿ ಬರೆದವರು ಸುಪ್ರಸಿದ್ದ ಸಂಶೋಧಕರಾದ ಡಾ।।ಶ್ರೀನಿವಾಸ ಹಾವನೂರವರು. ಅವರು ''ಮೂಲರಾಮ''ನೆಂಬುದೇ ಸರಿಯಾದ ಪಾಠ ಎಂದು ಸಮರ್ಥಿಸಿ ಕೊಂಡಿದ್ದಾರೆ. ಅದನ್ನೇ ಸಸೀತಾಮೂಲರಾಮಾರ್ಚಾದಲ್ಲಿ ಉಲ್ಲೇಖಿಸಿದ್ದಾರೆ.

''ಅಂದ ಹಾಗೆ ಇದರ ಪಲ್ಲವಿಯ ಮೊದಲ ಸಾಲು ''ಮರೆಯದಿರು ಮರೆಯದಿರು ಮೂಲರಾಮಾ'' ಎಂದಿದೆಯಷ್ಟೆ. ಮೂಲರಾಮಾ ಇದರ ಬದಲಿಗೆ ಮಾರಮಣನೇ ಎಂದು ಸೇರಿಸಿ ಬುದ್ಧಿಪೂರ್ವಕವಾಗಿ ಕೆಲಕಡೆ ಮುದ್ರಿಸಿದ್ದಾರೆ. ಎರಡನೆಯ ಸಾಲಿನಲ್ಲಿ ಬರುವ ''ರಘುರಾಮಾ'' ಎಂಬುದನ್ನು ಗಮನಿಸಿದಾಗ ''ಮೂಲರಾಮಾ'' ಎನ್ನುವ ಪದವೇ ಸರಿಯಾದದ್ದು''

''ಹರಿದಾಸರು ಸ್ತುತಿಸಿದ ಶ್ರೀಸತ್ಯಬೋಧರು'' ಸಂ. ಶ್ರೀನಿವಾಸ ಹಾವನೂರ,
ಪ್ರಕಾ.ಶ್ರೀವಾದಿರಾಜಮ್ಯತ್ತಿಕಾ ವೃಂದಾವನ ಮಠ, ಹಾವನೂರು. 2001

ಡಾ|| ಬಿ.ಎನ್.ಕೆ ರವರು ಯಾವ ಆಧಾರ ಕೊಡದೆ ಏನೇ ಬರೆದರೂ ಅವರ ವಾಕ್ಯ ವೇದವಾಕ್ಯ. ಇನ್ನೊಬ್ಬ ಸಂಶೋಧಕರು ಸಂಶೋಧಿಸಿ ಬರೆದದ್ದೆಲ್ಲ ಮಾನವ ಸಹಜ ಕಣ್ತಪ್ಪಿನಿಂದ ಆದ ವ್ಯತ್ಯಾಸಗಳು ಎಂದು ಹೇಳಿ ಜಾರಿಕೊಂಡರೆ ಹೇಗೆ?

**ಸಂದೇಹ 24.** ಶ್ರೀಮೋಹನದಾಸರ ''ಆವನೆದುರು...'' ಎಂಬ ಕೃತಿಯಲ್ಲಿ ತಮಾಷೆಯೆಂದರೆ ಮೂಲರಾಮ ಎಂಬ ನೇರ ಪ್ರಸ್ತಾಪವೇ ಇಲ್ಲ. (ಪುಟ. 94)

**ಉತ್ತರ:** ಶ್ರೀಮೋಹನದಾಸರ ''ಆವನೆದುರು...'' ಎಂಬ ಕೃತಿಯು ಶ್ರೀಮೂಲರಾಮನ ವಿಷಯದಲ್ಲಿ ಪ್ರಮಾಣವಾಗದಿದ್ದರೂ ಈ ಕೃತಿಯಲ್ಲಿ ಇತರ ಪ್ರತಿಮೆಗಳಾದ ಶ್ರೀಮದಾಚಾರ್ಯಕರಾರ್ಚಿತ ದಿಗ್ವಿಜಯರಾಮಾದಿಗಳನ್ನು ವರ್ಣಿಸಿದ್ದಂತೂ ಸ್ಪಷ್ಟ. ಆದ್ದರಿಂದ ಶ್ರೀಸತ್ಯಬೋಧತೀರ್ಥರು ಶ್ರೀದಿಗ್ವಿಜಯ ರಾಮದೇವರನ್ನು ಪೂಜಿಸುತ್ತಿದ್ದರು ಎಂಬ ವಿಷಯದಲ್ಲಿ ಇದು ಪ್ರಮಾಣವಾಗುತ್ತದೆ. ಮುದ್ರಿಸಿರುವ ಇನ್ನನೇಕ ಆಧಾರಗಳಲ್ಲಿ, ಹರಿದಾಸರ ಕೀರ್ತನೆಗಳಲ್ಲಿ ದಿಗ್ವಿಜಯರಾಮ ಮತ್ತು ಮೂಲರಾಮಾದಿ ಹೆಸರುಗಳ ಉಲ್ಲೇಖ ಸ್ಪಷ್ಟವಾಗಿ ಇದ್ದೇ ಇದೆ.

**ಸಂದೇಹ 25.** ಗುರುವಂಶಕಥಾಕಲ್ಪತರು ಕಾವ್ಯದ ''ಭಿಕ್ಷುಕಾನಾಂ ಕಿರೀಟಾಭಕಿರೀಟಾಂ'' ಎಂಬ ಭಾಗಕ್ಕೆ ಸ.ಸೀ. ಮೂ ಗ್ರಂಥಕಾರರು ''ಅದ್ಭುತಕಿರೀಟ'' ದಿಂದ ಕೂಡಿದೆ ಎಂದು ತಪ್ಪಾಗಿ ಅನುವಾದಿಸಿ ಜಾರಿಕೊಂಡಿದ್ದಾರೆ. ಅಸ್ಪಷ್ಟ ಲಕ್ಷಣಗಳನ್ನು ಹೇಳುವ ಈ ಕಾವ್ಯದ ಮಾತುಗಳನ್ನು ನಂಬಿ ಶ್ರೀದಿಗ್ವಿಜಯರಾಮಪ್ರತಿಮೆಯ ಲಕ್ಷಣಗಳನ್ನು ನಿರ್ಧರಿಸುವುದು ಹೇಗೆ? ಇದಕ್ಕೆ ಸಂವಾದಿಯಾಗಿ ಬೇರೆ ಪ್ರಾಚೀನ ಸಂಸ್ಕೃತ ವಾಕ್ಯಗಳ, ಅಥವಾ ಹರಿದಾಸರ ಕೀರ್ತನೆಗಳ ಪ್ರಮಾಣಗಳಿರಬೇಕಾಗಿತ್ತಲ್ಲವೇ? ಅರ್ವಾಚೀನರಾದ ವಡವೀ ಭೀಮಾಚಾರ್ಯ ಪ್ರತಿಪಾದಿತ ದಿಗ್ವಿಜಯರಾಮವಿಚಾರವು ಶ್ರೀವಾದೀಂದ್ರತೀರ್ಥರ ಹಾಗೂ ಶ್ರೀವಿಜಯದಾಸರ ವಾಕ್ಯವಿರೋಧಿಯಾಗಿ ಉಳಿಯುತ್ತದೆ.

**ಉತ್ತರ:** ''ಭಿಕ್ಷುಕಾನಾಂ ಕಿರೀಟಾಭಕಿರೀಟಾಂ'' ಎಂದಿರುವುದು ನಿಜ. ಭಿಕ್ಷುಗಳು ಅನೇಕ ರೀತಿಯ ಕಿರೀಟಗಳನ್ನು ಧರಿಸುವುದಿದೆ. ಆದಕಾರಣ ಇಂತಹ ಭಿಕ್ಷುಗಳದ್ದೇ ಎಂದು ಹೇಳಲು ಬರುವುದಿಲ್ಲ. ಶ್ರೀದಿಗ್ವಿಜಯರಾಮನ ಕಿರೀಟ ಶಿಲ್ಪ ಶಾಸ್ತ್ರದಲ್ಲೇ ವಿಲಕ್ಷಣ. ಇಂತಹ ವಿಚಿತ್ರ ಕಿರೀಟವಾದದ್ದರಿಂದಲೇ ''ಅದ್ಭುತ'' ಎಂದು ಅನುವಾದಿಸಲಾಗಿದೆ. ಯಾವಾಗಲೂ ಸಂದೇಹಗಳೇ ಇರುವವರಿಗೆ ಇದು ಅರ್ಥವಾಗುವುದು ಕಷ್ಟವೇ ಸರಿ.

ಶ್ರೀಉತ್ತರಾದಿಮಠದಲ್ಲಿ ದಿಗ್ವಿಜಯರಾಮನ ಪ್ರತಿಮೆ ಇದೆ ಎಂಬುದಕ್ಕೆ ಗುರುವಂಶ ಕಥಾಕಲ್ಪತರುವಿನ ಮುಂಚೆಯೇ ರಚನೆಯಾದ ಶ್ರೀವಿದ್ಯಾಧೀಶವಿಜಯ, ಶ್ರೀಸತ್ಯನಿಧಿವಿಲಾಸ, ಶ್ರೀಸತ್ಯನಾಥಾಭ್ಯುದಯ, ಶೀಸತ್ಯನಾಥಮಾಹಾತ್ಮ್ಯರತ್ನಾಕರ, ಶ್ರೀಸತ್ಯಾಭಿನವರ ಗುರುಪರಂಪರಾಸ್ತುತಿ, ಶ್ರೀಸತ್ಯಬೋಧವಿಜಯ,

ಗುರುವಂಶಾವಲೀ, ಮೊದಲಾದ ಸಮಕಾಲೀನ ಕಾವ್ಯಗಳಲ್ಲಿ ಹಾಗೂ ಶ್ರೀಪಾದರಾಜರ ''ತೂಗಿರೋ ರಾಮನ...'' ಎಂಬ ಕೃತಿಯಲ್ಲಿ, ಶ್ರೀಪುರಂದರದಾಸರ ''ಮಧ್ವರಾಯರ ದೇವತಾರ್ಚನೆಯ'' ಎಂಬ ಕೃತಿಯಲ್ಲಿ ಸ್ಪಷ್ಟ ಉಲ್ಲೇಖಗಳಿವೆ. ಇವುಗಳಲ್ಲಿ 5 ಕಾವ್ಯಗಳು ಮತ್ತು ಶ್ರೀಪಾದರಾಜರ-ಪುರಂದರದಾಸರ ಕೃತಿಗಳು, ಅರ್ಚಾಗತಿಕ್ರಮ ಗ್ರಂಥನಿರ್ಮಾಣಕ್ಕಿಂತಲೂ ಮೊದಲು ರಚನೆಗೊಂಡ ಕೃತಿಗಳೆಂಬುದನ್ನು ಗಮನಿಸಬೇಕು. ಸಸೀತಾಮೂಲರಾಮಾರ್ಚಾದಲ್ಲಿ ಉದಾಹರಿಸಿದ ಅನೇಕ ದಾಸರ ಪದಗಳು, ಕಾವ್ಯಗಳು ಸುಳ್ಳು ಹೇಳುತ್ತವೆ ಎಂದು ನಿರ್ಣಯಿಸಲು ಸಾಧ್ಯವೇ ಇಲ್ಲ. ಈ ಎಲ್ಲ ಆಧಾರಗಳ ವಿರೋಧ ಅರ್ವಾಚೀನವಾದ ಅರ್ಚಾಗತಿಕ್ರಮಕ್ಕೆ ಹಾಗೂ ವಿಜಯದಾಸರ ಸುಳಾದಿ ಎಂದು ಹೇಳಿಕೊಳ್ಳುವ ಕೃತಿಗೆ ಬರುತ್ತದೆ. ಅಲ್ಲದೇ ಶ್ರೀವಿಜಯದಾಸರ ಕೃತಿಯಲ್ಲಿಯ ''ನಾನಾವತಾರ ನಾರಾಯಣ'' ಎಂಬುದಕ್ಕೆ ''ದಶಾವತಾರ ಪೀಠ'' ಎಂಬುದಾಗಿ ಅನುವಾದಿಸಿದ ಲೇಖಕರು ತಮಗೆ ಬೇಕಾದಂತೆ ಅನುವಾದಿಸುವ ಹಕ್ಕನ್ನು ಚಲಾಯಿಸಿದಂತಾಗಲಿಲ್ಲವೇ? ಜಗತ್ತಿನಲ್ಲಿ ಯಾವ ಯಃ ಕಶ್ಚಿತ್ ಪುರುಷನೂ ''ನಾನಾವತಾರ'', ''ನಾರಾಯಣ'' ಎಂಬ ಎರಡು ಪದಗಳಿಗೆ ''ದಶಾವತಾರ'', ''ಪೀಠ'' ಎಂಬ ಅರ್ಥೈಸಲಾರ. ಇಂತಹ ಅಸ್ಪಷ್ಟ ಲಕ್ಷಣಗಳನ್ನು ಹೇಳುವ ಈ ಕೃತಿಯ ಮಾತುಗಳನ್ನು ನಂಬಿ ಶ್ರೀದಿಗ್ವಿಜಯರಾಮಪ್ರತಿಮೆಯ ಲಕ್ಷಣಗಳನ್ನು ನಿರ್ಧರಿಸುವುದು ಹೇಗೆ? ತಲೆಯಲ್ಲಿ ಇದ್ದದ್ದನ್ನೆಲ್ಲ ಲೇಖನಿಗೆ ರವಾನಿಸುತ್ತಿರುವವರಿಗೆ ಮತ್ತೊಬ್ಬರ ನೈಜ ತಾತ್ಪರ್ಯಾನುವಾದವನ್ನು ಪ್ರಶ್ನಿಸುವುದು ಉಚಿತವಲ್ಲ.

ಅರ್ಚಾಗತಿಕ್ರಮದ ವಾಕ್ಯಕ್ಕೆ, ವಿಜಯದಾಸರ ಸುಳಾದಿಗೆ ಸಂವಾದಿಯಾಗಿ ಪ್ರಾಚೀನ ಗ್ರಂಥಗಳೇ-ನಾದರೂ ಇದೆಯೋ? ಅಥವಾ ಪ್ರಮಾಣದ ಸೂಚನೆಯಾದರೂ ಇದೆಯೋ? ಇಲ್ಲ. ಆದರೆ ಗುರುವಂಶಕಥಾಕಲ್ಪತರುವಿನಲ್ಲಿ ಕವಿಗಳು ಮಾರ್ಕಂಡೇಯ ಪುರಾಣ ಹಾಗೂ ಪುಷ್ಕರವೆಂಬ ಗ್ರಂಥಗಳನ್ನು ಪ್ರಮಾಣತ್ವೇನ ಉದಾಹರಿಸಿರುವರು. ಮುಂದಿನದ್ದು ಸಂಶೋಧಕರಿಗೆ ಬಿಟ್ಟದ್ದು.

ಹೃಷಿಕೇಶತೀರ್ಥರ ಸಂಪ್ರದಾಯಪದ್ಧತಿಯಲ್ಲಿ ಶ್ರೀಮದಾಚಾರ್ಯರಿಂದ ದತ್ತವಾದ ಕೆಲ ಪ್ರತಿಮೆಗಳ ಅಸಾಧಾರಣಲಕ್ಷಣಗಳನ್ನು ಹೇಳಿದ್ದಾರೆ. ಈ ಅಸಾಧಾರಣ ''ರಜತ''ವೆಂಬ ಮತ್ತು ದಶಾವತಾರ ಪೀಠ ಎಂಬ ಲಕ್ಷಣಗಳ ಬಗ್ಗೆ ಅಲ್ಲಿಯೂ ಯಾವ ಸೂಚನೆ ಇಲ್ಲ. ಮತ್ತು ಸ.ಸೀ.ಮೂ.ಕೊಟ್ಟಿರುವ ಎಲ್ಲ ಇತರ ಆಧಾರಗಳ ವಿರೋಧವಂತೂ ತಪ್ಪಿದ್ದಲ್ಲ.

ಶ್ರೀವಿಜಯದಾಸರ ಕೃತಿಯಲ್ಲಿ ದಿಗ್ವಿಜಯರಾಮ ಪ್ರತಿಮೆಯನ್ನು ''ಇಂದ್ರಗೋಪದಂತೆ ವರ್ಣದಿಂದೊಪ್ಪುವ'' ಎಂಬುದಾಗಿ ವರ್ಣಿಸಿದ್ದಾರೆ. ಇಂದ್ರಗೋಪಶಬ್ದಕ್ಕೆ ಕೋಶಗಳಲ್ಲಿ ಖದ್ಯೋತ (ಮಿಣುಕುಹುಳ) ಮತ್ತು ಹಳದಿಬಣ್ಣದ ಒಂದು ಕೀಟ ಎಂಬುದಾಗಿ ಅರ್ಥ ಕಂಡು ಬರುತ್ತದೆ. ದಿಗ್ವಿಜಯರಾಮಪ್ರತಿಮೆ ರಜತದ್ದೆಂದು ಹೇಳುವುದಾದರೆ ಈ ಎರಡೂ ಹುಳಗಳ ಬಣ್ಣ ಹಳದಿ ಆದ್ದರಿಂದ ರಜತವೆಂಬ ಅರ್ಥ ಕೂಡುವುದಿಲ್ಲ. ಈ ಬಣ್ಣಗಳು ಹಿತ್ತಾಳೆಯ ವರ್ಣಕ್ಕೆ ಸಮಾನವಾದ್ದರಿಂದ ಉತ್ತರಾದಿಮಠದಲ್ಲಿರುವ ದಿಗ್ವಿಜಯರಾಮ ಪ್ರತಿಮೆಗೆ ಈ ವರ್ಣನೆ ಸರಿಹೊಂದುತ್ತದೆ.

**ಸಂದೇಹ 26.** ಮಹಿಪತಿದಾಸರ ''ನೆನೆದು ನಮಿಸುವೆ...'' ಎಂಬ ಕೃತಿ ಚಾರಿತ್ರಿಕವಾಗಿ ಮಹತ್ವದ್ದಾಗಿದೆ ಎಂದು ಬೀಗಿದ್ದಾರೆ. ಈ ಕೀರ್ತನೆಯಲ್ಲಿ ಒಂದು ಮಠದ ಯತಿಗಳ ಪಟ್ಟಿ ಇದೆಯೇ ವಿನಹ ''ಅದೇ ಮೂಲಗುರುಪರಂಪರೆ'' ಎಂದು ಹೇಳುವ ಯಾವುದೇ ವಿಶಿಷ್ಟ ಪದಪ್ರಯೋಗವಿಲ್ಲ. ಶ್ರೀರಾಮಚಂದ್ರತೀರ್ಥರ ನಂತರ ವಿದ್ಯಾನಿಧಿಗಳ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ''ಗುರುಪೀಠದ

ಹಸ್ತಾಂತರವಿಷಯ ಸ್ಥಾಪಿತವಾಯಿತು'' ಎಂದು ಸ.ಸೀ.ಮೂ. ಗ್ರಂಥಕಾರರು ಹಿಗ್ಗುವುದಾದರೆ ಏನೆನ್ನಲಾದೀತು?

ಉತ್ತರ: ಮಹಿಪತಿದಾಸರ ''ನೆನೆದು ನಮಿಸುವೆ...'' ಎಂಬ ಕೃತಿ ಚಾರಿತ್ರಿಕವಾಗಿ ಮಹತ್ವದ್ದಾಗಿದೆ. ಎಂದು ಬರೆದದ್ದರಲ್ಲಿ ಬೀಗುವುದೇನಿದೆ? ಹರಿದಾಸಸಾಹಿತ್ಯದ ಹರಿಕಾರರೆಂದು ಪ್ರಸಿದ್ಧರಾದ ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಾದಿರಾಜರು ಶ್ರೀಪುರಂದರದಾಸರೇ ಮೊದಲಾದವರು ತಮ್ಮ ಕೀರ್ತನೆಗಳಲ್ಲಿ ಶ್ರೀಮಧ್ವರನ್ನು, ಶ್ರೀಜಯತೀರ್ಥರನ್ನು, ಶ್ರೀರಘುನಾಥತೀರ್ಥರನ್ನು ಪ್ರತ್ಯೇಕವಾಗಿ ತಮ್ಮ ಕೀರ್ತನೆಗಳಲ್ಲಿ ಸ್ತುತಿಸಿದ್ದಾರೆ. ಈ ಮೊದಲ ಹಂತದ ಹರಿದಾಸರ ನಂತರ ಬಂದವರು ಶ್ರೀಮಹಿಪತಿದಾಸರು ಕ್ರಿ.ಶ. 1649-1710. ಅವರು ಮೊಟ್ಟ ಮೊದಲಬಾರಿಗೆ ಶ್ರೀಮಧ್ವರ ಗುರುಪರಂಪರೆಯನ್ನು ''ನೆನೆದು ನಮಿಸುವೆ ವಾರಂ ವಾರ'' ಎಂಬ ಕೀರ್ತನೆಯಲ್ಲಿ ದಾಖಲಿಸಿದ್ದಾರೆ. ಅದರಿಂದಾಗಿ ಅದು ಚಾರಿತ್ರಿಕ ದಾಖಲೆಯ ಕೀರ್ತನೆ. ಆ ಮೊದಲು ಹೀಗೆ ಗುರುಪರಂಪರೆಯನ್ನು ಯಾರೂ ದಾಖಲಿಸಿರಲಿಲ್ಲ. ಅನಂತರದ ಹರಿದಾಸರು ಗುರುಪರಂಪರೆಯನ್ನು ತಮ್ಮ ಕೀರ್ತನೆಗಳಲ್ಲಿ ದಾಖಲಿಸಲು ಪ್ರಾರಂಭಿಸಿದರು.

ಮಹಿಪತಿದಾಸರು ಗುರುಪರಂಪರೆಯನ್ನು ದಾಖಲಿಸುವಾಗ ಆದಿ ಮೂರುತಿತ್ರಯ ಮಧ್ವ ಮುನಿರೇಯರಿಂದ ಶ್ರೀಉತ್ತರಾದಿಮಠದ ಪೀಠದ ಮೇಲೆ ಅಂದು ವಿರಾಜಮಾನರಾಗಿದ್ದ ಶ್ರೀಸತ್ಯಾಭಿನವತೀರ್ಥರ ವರೆಗಿನ ಎಲ್ಲ ಯತಿವರೇಣ್ಯರನ್ನು ನೆನೆಸಿದ್ದಾರೆ. ಜೊತೆಗೆ ಮೊಟ್ಟ ಮೊದಲಬಾರಿಗೆ ಹರಿದಾಸರ ಪರಂಪರೆಯನ್ನೂ ನೆನೆದದ್ದು ಆ ಕೀರ್ತನೆಯ ವಿಶೇಷವಾಗಿದೆ.

ಶ್ರೀಮಧ್ವಮುನಿಗಳಿಂದ ಪ್ರಾರಂಭಿಸಿ ಶ್ರೀಸತ್ಯಾಭಿನವರವರೆಗೆ ಪರಂಪರೆಯನ್ನು ದಾಖಲಿಸಿದ್ದನ್ನು ನೋಡಿ (''ಉತ್ತರಾದಿಮಠಕ್ಕೆ ಮಧ್ವಾಚಾರ್ಯಾದಿ ಯಾವ ಗುರುಗಳೂ ಮೂಲರಲ್ಲ'' ಎಂಬ ತಮ್ಮ ತಲೆಯಲ್ಲಿರುವ ವಿಚಾರಕ್ಕೆ ಬಾಧ ಬಂದದ್ದರಿಂದ) ''ಮೂಲಗುರುಪರಂಪರೆ'' ಎಂಬ ಪದ ಪ್ರಯೋಗವಿಲ್ಲ''. ''ಒಂದು ಮಠದ ಯತಿಗಳ ಪಟ್ಟಿ ಮಾತ್ರ'' ಎಂದು ಆಕ್ಷೇಪಿಸಿರುವುದು ಅತಿರೇಕ ಹಾಗೂ ಆಶ್ಚರ್ಯ! ಒಂದು ಮಠದ ಯತಿಗಳ ಪಟ್ಟಿಯಲ್ಲಿ ಶ್ರೀಮಧ್ವಾಚಾರ್ಯರೇ ಮೊದಲಾದ ಪ್ರಾಚೀನರ ಹೆಸರು ಸೇರಿದಾಗ ಅವರು ಆ ಮಠಕ್ಕೆ (ಉತ್ತರಾದಿಮಠಕ್ಕೆ) ಮೂಲ ಗುರುಗಳಾಗುವುದಿಲ್ಲವೇ? ಒಬ್ಬರ ನಂತರ ಮತ್ತೊಬ್ಬರನ್ನು ಹೆಸರಿಸುವಾಗ ಪೀಠದ ಹಸ್ತಾಂತರವೆನ್ನದೇ ಇನ್ನೇನೆನ್ನಬೇಕು? ಪೂರ್ವಾಗ್ರಹ ಪೀಡಿತರಿಗೆ ಉತ್ತರಾದಿಮಠದ ಪರಂಪರೆಯನ್ನು ದಾಖಲಿಸಿದ ಹರಿದಾಸರ ಕೃತಿಗಳು ಪೀಡಿಸಿದ್ದು ಎಷ್ಟು ಎಂಬುದನ್ನು ತಾವೇ ತೋರಿಸಿಕೊಂಡಿದ್ದಾರೆ.

ಸಂದೇಹ 27. ಪ್ರಸನ್ನವೆಂಕಟದಾಸರ ''ಗುರುಪದವ ನಂಬಿ'' ಎಂಬ ಕೃತಿಯ 4ನೇ ನುಡಿಯಲ್ಲಿ ಶ್ರೀವಿದ್ಯಾನಿಧಿಗಳಿಗೆ ಕೊಟ್ಟ ''ಗುರುಆಜ್ಞಾಪಾಲ'' ವೆಂಬ ವಿಶೇಷಣದ ಹಿನ್ನೆಲೆಯು ಪ್ರಸನ್ನವೆಂಕಟದಾಸರಿಗೆ ತಿಳಿದ ಬಗೆ ಹೇಗೆ?, ಅಪರೋಕ್ಷಜ್ಞಾನದಿಂದ ತಿಳಿದ ವಿಷಯವೆಂದು ಹೇಳಬಹುದೇ?, ಪರಂಪರಯಾ ಕರ್ಣಾಘಾತವೇ?, ಅಪರೋಕ್ಷಜ್ಞಾನ ವಿದ್ಯಾನಿಧಿಗಳ ಸಮರ್ಥನೆಗೆ ಸೀಮಿತವೇ?.... (ಪುಟ 112)

ಉತ್ತರ: ಪ್ರಸನ್ನವೆಂಕಟದಾಸರ ''ಗುರುಪದವ ನಂಬಿ'' ಎಂಬ ಕೃತಿಯ 4ನೇ ನುಡಿಯಲ್ಲಿ ಶ್ರೀವಿದ್ಯಾನಿಧಿಗಳಿಗೆ ಕೊಟ್ಟ ''ಗುರು ಆಜ್ಞಾಪಾಲ''ವೆಂಬ ವಿಶೇಷಣ ವಿಶೇಷವಾಗಿ ನೆತ್ತಿಗೇರಿದಾಗ ಲೇಖಕರಿಗೆ ಜಿಜ್ಞಾಸೆಗಿಟ್ಟುಕೊಂಡ ವಿಚಾರಗಳು 5 ರೀತಿಯ ಕುಚೋದ್ಯಗಳೇ ಸರಿ. ಶ್ರೀವಿದ್ಯಾನಿಧಿಗಳು ತಮ್ಮ ಗುರುಗಳಾದ ಶ್ರೀರಾಮಚಂದ್ರತೀರ್ಥರ ''ಆರು ತಿಂಗಳು ಕಾದು ನೋಡಿ ನಂತರ ನೀವೇ ಮೂಲಸಂಸ್ಥಾನಾಧಿ

ಪತಿಗಳಾಗಿ ಮೂಲಸಂಸ್ಥಾನದ್ಯೋತಕ ಶ್ರೀಮೂಲಸೀತಾರಾಮಾದಿ ಸಮಸ್ತಪ್ರತಿಮೆಗಳುಳ್ಳ ದೇವರ ಪೆಟ್ಟಿಗೆಯನ್ನು ತೆಗೆದುಕೊಂಡು ಮೂಲಪರಂಪರೆಯಲ್ಲಿ ಮುಂದುವರೆಯಬೇಕು'' ಎಂಬ ಆಜ್ಞೆಯನ್ನು ಅಕ್ಷರಶಃ ಪಾಲಿಸಿದ ವಿಷಯವನ್ನು ಶ್ರೀಪ್ರಸನ್ನವೆಂಕಟದಾಸರ ಈ ಕೃತಿ ಎತ್ತಿ ಹಿಡಿಯುತ್ತಿರುವಲ್ಲಿ ಯಾವ ಸಂದೇಹವಿಲ್ಲ. (ಪ್ರಸಿದ್ಧ ಹರಿದಾಸರಾಗಿರುವ ಶ್ರೀಗೋಪಾಲದಾಸರು ಶ್ರೀಪ್ರಸನ್ನವೆಂಕಟದಾಸರನ್ನು ಸ್ತುತಿಸಿದ್ದಾರೆ. ಆದ್ದರಿಂದ ಇವರ ಮಹತ್ತ್ವ ಹಾಗೂ ಅಧಿಕೃತತೆಯ ಬಗ್ಗೆ ಸಂದೇಹವಿಲ್ಲ. ಈ ಕೃತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.)

ಅಪ್ರಾಮಾಣಿಕತಮವಾದ ವಿಜಯೀಂದ್ರವಿಜಯ ಕೃತಿಯಲ್ಲಿ ಶ್ರೀವ್ಯಾಸರಾಜರು ಕೃಷ್ಣದೇವರಾಯನ ಸಮಕ್ಷಮ ''ಶ್ರೀವಿಬುಧೇಂದ್ರರೇ ಶ್ರೀವಿಜಯೀಂದ್ರರಾಗಿ, ಶ್ರೀಜಿತಾಮಿತ್ರರೇ ಶ್ರೀಸುಧೀಂದ್ರರಾಗಿ ಹುಟ್ಟಿದ್ದಾರೆ. ನಾವೂ ಸಹ ರಾಘವೇಂದ್ರರಾಗಿ ಅವತರಿಸುತ್ತೇವೆ'' ಎಂದು ಹೇಳಿದ್ದಾರೆಂದು ಬರೆದಿರುವ ಸಮಕಾಲೀನನಲ್ಲದ ಮಧ್ವಕವಿಗೆ ಇದೆಲ್ಲ ತಿಳಿದ ಬಗೆ ಹೇಗೆ? ಅಪರೋಕ್ಷಜ್ಞಾನದಿಂದ ತಿಳಿದಿದೆ ಎನ್ನಬೇಕೆ? ಪರಂಪರಯಾ ಕರ್ಣಾಘಾತವೇ? ಎಂದು ತಿರುಗಿ ಕೇಳಿದರೆ ಉತ್ತರವಿದೆಯೇ?

**ಸಂದೇಹ 28.** ಒಂದಂತೂ ಸರಿ ಮತ್ತೊಂದೇಕೆ ಹೀಗೆ? ಶ್ರೀವಿಜಯದಾಸರ ಕೃತಿಗಳಲ್ಲಿ ''ಗುರುವಂಶಕೆ ನಮೋ ಎಂಬೆ ನಮ್ಮ ಮರುತಮತಾಬ್ಧಿಗೆ ನಮೋ ಎಂಬೆ'' ಎಂಬ ಕೃತಿಯಲ್ಲಿ ಮೂಲ-ಶಾಖಾ ಪರಂಪರಾಭೇದವಿಷಯದ ಪ್ರಸ್ತಾಪದ ಛಾಯೆಯೂ ಇಲ್ಲ.

**ಉತ್ತರ:** ಶ್ರೀವಿಜಯದಾಸರ ಎರಡು ಕೃತಿಗಳಲ್ಲಿ ಒಂದನ್ನಾದರೂ ಸರಿ ಎಂದು ಒಪ್ಪಿಕೊಂಡದ್ದು ಯಾಕೆ? ''ಗುರು ವಂಶಕೆ ನಮೋ ಎಂಬೆ'' ಎಂಬ ಕೃತಿಯಲ್ಲಿ ಶ್ರೀವಿಜಯದಾಸರು ಮಧ್ವರಾಯರಿಂದ ಹಿಡಿದು ಶ್ರೀಸತ್ಯಪ್ರಿಯರವರೆಗೆ ಗುರುವಂಶವೆಂದು ಹೇಳಿದ್ದಾರೆ. ಶ್ರೀರಾಯರಮಠದವರು ಮಾಡಿರುವ ಆರೋಪದಂತೆ ಶ್ರೀವಿದ್ಯಾನಿಧಿಗಳು ಪೀಠಾಧಿಪತಿಗಳಲ್ಲ, ವೈಷ್ಣವ ಪರಂಪರೆಗೇ ಕಳಂಕ, ಮೋಸಮಾಡಿದವರು, ಭ್ರಷ್ಟರು, ನೀಚರು, ದುಷ್ಟರು, ಬಿಡಿಸಂನ್ಯಾಸಿಗಳು. ಇಂತಹ ಶ್ರೀವಿದ್ಯಾನಿಧಿಗಳನ್ನು ಶ್ರೀವಿಜಯದಾಸರಂತಹ ಮಹಾನುಭಾವರು ಗುರುವಂಶದಲ್ಲಿ ಸೇರಿಸಿದ್ದೇಕೆ? ಶ್ರೀವಿದ್ಯಾನಿಧಿಗಳಿಂದ ಮುಂದುವರೆದ ಪರಂಪರೆಯವರನ್ನು ಗುರುವಂಶದಲ್ಲಿ ಸೇರಿಸಿ ''ಸಂತರೇ ಕೊಂಡಾಡಿ'' ಎಂದು ಆದೇಶಿಸಿದ್ದೇಕೆ?

ಶ್ರೀವಿಜಯದಾಸರು ಯಾರನ್ನು ಗುರುಗಳೆಂದು ನಮಿಸಿದ್ದಾರೆಯೋ, ಯಾರು ಮೂಲಸೀತಾರಾಮ ಪ್ರತಿಮೆಗಳನ್ನು ಯಾವ ಅಡ್ಡಿ ಆತಂಕಗಳಿಲ್ಲದೇ ಪೂಜಿಸಿದ್ದಾರೆಂದು ಶ್ರೀರಾಯರ ಮಠದವರೇ ಒಪ್ಪುತ್ತಾರೋ (ಮೂಲಸೀತಾ ರಾಮಪ್ರತಿಮೆಗಳನ್ನು ಪೂಜಿಸುವವರು ದೇವತಾಂಶರೆಂದು ಒಪ್ಪುವರಷ್ಟೇ) ಅಂತಹ ಶ್ರೀವಿದ್ಯಾನಿಧಿಗಳನ್ನು ಶ್ರೀರಾಯರ ಮಠದವರು ಗುರುಗಳೆಂದು ಸ್ವೀಕರಿಸಲು, ನಮಿಸಲು ಸಿದ್ಧರಿದ್ದಾರೆಯೇ? ಇಲ್ಲ. ಇದು ''ತದ್ಭಕ್ತದ್ವೇಷ ಏವ ಚ''ದಲ್ಲಿ ಪರ್ಯವಸಾನವಾಗುವುದಷ್ಟೇ?

**ಸಂದೇಹ 29.** ಶ್ರೀವಿಜಯದಾಸರ ''ಸಂತರನು ಸ್ಮರಿಸಿ ಜನರು...'' ಎಂಬ ಕೀರ್ತನೆಯನ್ನು ಪರಿಶೀಲಿಸಿದರೆ ''ಆದ್ಯತೆಯ ಮೇರೆಗೆ ಹೇಳುತ್ತೇನೆ'' ಎಂದು ದಾಸರು ಎಲ್ಲೂ ಹೇಳಿಕೊಂಡಿಲ್ಲ. ಉಡುಪಿಯ ಅಷ್ಟಮಠಗಳನ್ನು ಹೇಳೇ ಇಲ್ಲವಾದ್ದರಿಂದ ಅವು ಮಾಧ್ವಮಠಗಳೇ ಅಲ್ಲ ಅನ್ನಬೇಕೇ? ರಾಘವೇಂದ್ರರು ಪ್ರಹ್ಲಾದರು ಎಂದು ಹೇಳಿದ್ದಾರೆ ಇದರ ಔಚಿತ್ಯವೇನು? ಎರಡನೇ ನುಡಿಯಲ್ಲಿ ರಾಯರಮಠದ ಗುರುಶಿಷ್ಯಾನುಕ್ರಮವನ್ನು ತಿರುಚಿ ತಪ್ಪಾಗಿ ಹೇಳಿರುವುದಕ್ಕೆ ಹೊಣೆ ಯಾರು? ಮುಂತಾದವುಗಳು. (ಪುಟ. 113)

ಉತ್ತರ: ಪಾಪ ! ಮೂ.ಮತೇ ಲೇಖಕರಿಗೆ ಶ್ರೀವಿಜಯದಾಸರ ಈ ಕೃತಿ ನುಂಗಲಾರದ ತುತ್ತಾಗಿದೆ ಎಂದು ಕಾಣುತ್ತದೆ. ಅದರಂತೆಯೇ ಇವರ ತಮ್ಮಂದಿರಾದ ಹಯವದನವಿಠ್ಠಲರ ಕೃತಿಯೂ ಬಿಸಿತುಪ್ಪವೇ ಸರಿ. ಈ ಕೃತಿಗಳ ಬಗ್ಗೆ ವಿವರಣೆ ಸಹಿತ ಶ್ರೀಗೋರೇಬಾಳು ಹನುಮಂತರಾಯರು ಶ್ರೀವರದೇಂದ್ರ ಸಾಹಿತ್ಯ ಮಂಡಲಿ ಮೂಲಕ 1947 ರಲ್ಲೇ ಮುದ್ರಿಸಿ ಮನೆ ಮನೆಗೆ ಹಂಚಿದ್ದಾರೆ. ಇವರು ಶ್ರೀರಾಯರಮಠದ ಶಿಷ್ಯರು. ಹೀಗಾಗಿ ಮೂ.ಮತೇ. (ಪುಟ. 113) ಲೇಖಕರ ಪ್ರಕಾರ ದಾಸಸಾಹಿತ್ಯವನ್ನು ಹದಗೆಡಿಸಹೊರಟವರು ಉತ್ತರಾದಿಮಠದವರು ಆಗುವುದಿಲ್ಲ. ಮೂ.ಮತೇ. ಲೇಖಕರ ಪ್ರಕಾರ ಶ್ರೀಗೋರೆಬಾಳು ಹನುಮಂತರಾಯರು, ಸಮಗ್ರದಾಸಸಾಹಿತ್ಯ ಸಂಪುಟದ ಸಂಪಾದಕಮಂಡಲಿ, ಶ್ರೀವರದೇಂದ್ರಸಾಹಿತ್ಯಮಂಡಲಿ ಮೊದಲಾದವರೇ ಈಗಾಗಲೇ ಹದೆಗೆಡಿಸಿದವರೆಂದಾಗುತ್ತಾರೆ. ಸಸೀತಾಮೂಲರಾಮಾರ್ಚಾ ಕೃತಿಯಲ್ಲಿ ಈಗಾಗಲೇ ಸಂಶೋಧಕರು ಪ್ರಕಟಿಸಿರುವ ಪುಸ್ತಕಗಳಿಂದ ಕೃತಿಗಳನ್ನು ಉದ್ಧರಿಸಿರುವುದು ಮಾತ್ರ ಎಂಬುದು ಗಮನಾರ್ಹ. ಅದರಲ್ಲಿ ಸ.ಸೀ.ಮೂ ಕೃತಿಕಾರರ ಕೈವಾಡವೇನೂ ಇಲ್ಲ.

ಪ್ರಸ್ತುತ ಪರಂಪರೆಯ ವಿಷಯದಲ್ಲಿ ಸಸೀತಾಮೂಲರಾಮಾರ್ಚಾ ಗ್ರಂಥದಲ್ಲಿ ಉದ್ಧರಿಸಿರುವ ಕೃತಿಗಳಲ್ಲೆಲ್ಲ ಶ್ರೀಮದಾನಂದತೀರ್ಥರಿಂದ ಪ್ರಾರಂಭಿಸಿ ದಾಸರು ತಮ್ಮ ಸಮಕಾಲೀನ ಉತ್ತರಾದಿಮಠದ ಪೀಠಾಧಿಪತಿಗಳ ವರೆಗೆ ಮೊದಲು ಸ್ಮರಿಸಿ, ಇನ್ನಿತರ ಪರಂಪರೆಗಳನ್ನು ಆಮೇಲೆ ಸ್ಮರಿಸಿರುವುದು ಸ್ಪಷ್ಟ. ಮೊದಲು ಸ್ಮರಿಸುವುದನ್ನೇ ಆದ್ಯತೆ ಕೊಟ್ಟು ಎಂದದ್ದರಲ್ಲಿ ಅನೌಚಿತ್ಯವೇನು? ಈ ಕೃತಿಯನ್ನು ಹದಗೆಡೆಸಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಮೂ.ಮತೇ ಲೇಖಕರಿಗೆ ಹದಗೆಟ್ಟಿರುವುದು ಮನದಟ್ಟಾಗಿದ್ದರೆ ಎಷ್ಟರ ಮಟ್ಟಿಗೆ ಹದಗೆಟ್ಟಿದೆ? ಯಾರು ಹದಗೆಡಿಸಿದರು? ಎಂಬುದನ್ನು, ಶ್ರೀವಿಜಯದಾಸರ ಕಟ್ಟೆಯಲ್ಲಿದ್ದ ಮೂಲ ಪ್ರತಿಗಳಿಂದ ಸ್ವತಃ ಬರೆದುಕೊಂಡು ಬಂದು ಮುದ್ರಿಸಿದ ದಾಸಸಾಹಿತ್ಯಧುರೀಣರಾದ, ದಾಸಸಾಹಿತ್ಯಕ್ಕೆ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಶ್ರೀಗೋರೇಬಾಳು ಹನುಮಂತರಾಯರನ್ನೇ ಕೇಳಬೇಕು. ಇದ್ದ ವಿಷಯ ಮುಂದಿಟ್ಟಿದ್ದಾರೆ. ಜೀರ್ಣಿಸಿಕೊಳ್ಳಲಾಗದೇ ಇದ್ದರೆ ಉತ್ತರಾದಿಮಠದವರು ಹೊಣೆಯಲ್ಲ.

**ಸಂದೇಹ 30.** ಒಂದೊಂದು ಕೀರ್ತನೆಯ ಕೊನೆಗೂ ''ಉತ್ತರಾದಿಮಠಕ್ಕೇ ಆದ್ಯತೆ ಕೊಟ್ಟಿದ್ದಾರೆ'' ಎಂದು ಪದೇ ಪದೇ ಹೇಳಿಕೊಂಡಿದ್ದಾರೆ. ಒಂದು ಸಂಗತಿ ಸತ್ಯವೇ ಆಗಿದ್ದರೆ ಮತ್ತೆ ಮತ್ತೆ ಹೇಳಿಕೊಳ್ಳುವ ಅನಿವಾರ್ಯತೆ ಏನು? ಇದು ಕೀಳರಿಮೆಯ ಮನಃಸ್ಥಿತಿಯೇ? ಅಥವಾ ಮಹತ್ವಾಕಾಂಕ್ಷೆಯ ಮಹಿಮೆಯೆ?

ಉತ್ತರ: ಒಂದು ಸಂಗತಿ ಸತ್ಯವೇ ಆಗಿದ್ದರೆ ಮತ್ತೆ ಮತ್ತೆ ಹೇಳಿಕೊಳ್ಳುವ ಅನಿವಾರ್ಯತೆ ಏನು? ಇದು ಕೀಳರಿಮೆಯ ಮನಃಸ್ಥಿತಿಯೇ? ಅಥವಾ ಮಹತ್ವಾಕಾಂಕ್ಷೆಯ ಮಹಿಮೆಯೆ? ಎಂದು ವ್ಯಂಗ್ಯವಾಗಿ ಕೇಳಿದ್ದಾರೆ. ಈ ವ್ಯಂಗ್ಯ ''ಮೂಲರಾಮ'' ಎಂಬ ಪದ ಪ್ರಯೋಗ ಪದೇ ಪದೇ ಎಲ್ಲೆಡೆ (ಇತ್ತೀಚೆಗೆ ಗೃಹಸ್ಥರ ಮನೆಗಳಲ್ಲಿ ನಡೆದ ಶ್ರಾದ್ಧಗಳಲ್ಲೂ) ಕೂತರೆ ನಿಂತರೆ ನಿಯಮೇನ ಹೇಳಿಕೊಳ್ಳುತ್ತಿರುವವರಿಗೇ ಹೆಚ್ಚು ಸೂಕ್ತ. ಈ ''ಮೂಲರಾಮ'' ಪದ ಪ್ರಯೋಗದ ಬಗ್ಗೆ ನೋಡಿರಿ ಶೀರ್ಷಿಕೆ ''ರಾಯಸಗಳ ಅಸಮರ್ಥ ರಾಯಬಾರ'' ಒಂದು ಸತ್ಯಸಂಗತಿಯನ್ನು ಪದೇ ಪದೇ ಹೇಳಿಕೊಂಡಮಾತ್ರಕ್ಕೆ ಅದು ಕಿಳರಿಮೆಯ ಮನಸ್ಥಿತಿ ಅನ್ನುವುದಾದರೆ ಶ್ರೀಮದಾಚಾರ್ಯರು ತಮ್ಮ ಸರ್ವಮೂಲಗಳಲ್ಲಿ ಹರಿಸರ್ವೋತ್ತಮತ್ವ, ಜಗತ್ಸತ್ಯತ್ವವನ್ನು, ಜೀವಬ್ರಹ್ಮರ ಭೇದ ಮುಂತಾದವುಗಳನ್ನು ಪದೇ ಪದೇ ಹೇಳಿದ್ದಾರೆ ಹಾಗು ಸಮರ್ಥಿಸಿದ್ದಾರೆ. ಇದು ಶ್ರೀಮದಾಚಾರ್ಯರ ಕೀಳರಿಮೆಯ ಮನಃಸ್ಥಿತಿ ಎಂದು ಮೂ.ಮತೇ ಲೇಖಕರು ಹೇಳಿದಂತಾಗುತ್ತದೆ ಅಲ್ಲವೆ?

**ಸಂದೇಹ 31.** ಶ್ರೀಜಗನ್ನಾಥದಾಸರು ''ಆನಮಿಪೆ ಗುರುಸಂತತಿಗೆ ಸತತ'' ಎಂಬ ಕೀರ್ತನೆ ರಚಿಸಿ, ಪರಮತದ ಪರಂಪರೆಯನ್ನೂ ಸ್ಮರಿಸಿರುವುದು ಅವರ ವಿಶಾಲದೃಷ್ಟಿಯ ನಿದರ್ಶನವೇ ಸರಿ. (ಪುಟ 117)

**ಉತ್ತರ:** ಮೂ.ಮಠೇ.ಲೇಖಕರು ಶ್ರೀಜಗನ್ನಾಥದಾಸರ (ಉತ್ತರಾದಿಮಠದ ಪರಂಪರೆಯನ್ನು ಸ್ಮರಿಸಿ ನಮಿಸುವ) ''ಆನಮಿಪೆ ಗುರುಸಂತತಿಗೆ ಸತತ'' ಎಂಬ ಕೀರ್ತನೆ ಬಗ್ಗೆ ಪ್ರಸ್ತಾಪಿಸಿ ''ಇದು ಅವರ ವಿಶಾಲ ದೃಷ್ಟಿಯ ನಿದರ್ಶನವೇ ಸರಿ'' ಎಂದು ಶ್ರೀಜಗನ್ನಾಥದಾಸರಿಗೆ ಹೊಸ ಪ್ರಶಸ್ತಿಯನ್ನು ಕೊಟ್ಟಿದ್ದಾರೆ.

ಮೂ.ಮಠೇ.ಲೇಖಕರ ಪ್ರಕಾರ ಕ್ರಿ.ಶ. 1444ರಿಂದ ಮುಂಚೆ ಇದ್ದ ಶ್ರೀಮದಾಚಾರ್ಯರೇ ಮೊದಲಾದ ಪ್ರಾಚೀನರು ಉತ್ತರಾದಿಮಠಕ್ಕೆ ಏನೂ ಸಂಬಂಧ ಪಡದವರೆಂದ ಮೇಲೆ ಆ ಎಲ್ಲ ಪ್ರಾಚೀನರನ್ನು ಪರಮಠದ (ಉತ್ತರಾದಿಮಠದ) ಪರಂಪರೆಗೆ ಸೇರಿಸಿ ಗುರುಗಳೆಂದು ಶ್ರೀಜಗನ್ನಾಥದಾಸರು ಸ್ಮರಿಸಿದ್ದೇಕೆ? ಶ್ರೀವಿದ್ಯಾನಿಧಿಗಳಿಂದ ಮಾತ್ರ ಸ್ಮರಿಸಿದ್ದರೆ ಸಾಲದಿತ್ತೇ? ಹಾಗೆ ಮಾಡಿದ್ದರೆ ವಿಶಾಲದೃಷ್ಟಿ ಕಡಿಮೆ ಎಂದೆನಿಸುತ್ತಿತ್ತೇ? ಉತ್ತರಾದಿಮಠದ ಬಗ್ಗೆ ದ್ವೇಷ ಇರುವ ಲೇಖಕರಿಗೆ ಶ್ರೀಜಗನ್ನಾಥದಾಸರ ವಿಶಾಲದೃಷ್ಟಿ ಆದರ್ಶವಾಗಿ ಯಾಕೆ ಕಾಣುತ್ತಿಲ್ಲ?

ವಿಶಾಲದೃಷ್ಟಿ ಎಂದರೇನು? ಇನ್ನೊಬ್ಬರಲ್ಲಿರುವ ಗುಣಗಳನ್ನು, ಮಹತ್ವವನ್ನು ಪೂರ್ವಗ್ರಹವಿಲ್ಲದೇ ಮುಕ್ತಮನಸ್ಸಿನಿಂದ ಹೇಳುವುದೇ ಮಹಾನುಭಾವರ ವಿಶಾಲದೃಷ್ಟಿಯಾಗುತ್ತದೆಯೇ ಹೊರತು ಸುಳ್ಳು ಹೇಳುವುದನ್ನು ಎಂದಿಗೂ ವಿಶಾಲದೃಷ್ಟಿಯೆನ್ನಲಾಗದು.

ಮೂ.ಮಠೇ ಪುಸ್ತಕದ ಮುನ್ನುಡಿಯಲ್ಲಿ (ಪುಟ xiii) ಶ್ರೀರಾಯರ ಮಠದ ದಿವಾನರು ಶ್ರೀರಾಮಚಂದ್ರತೀರ್ಥರಿಂದ ಶ್ರೀಪದ್ಮನಾಭತೀರ್ಥರ ವರೆಗೆ ಯಾರೂ ಉತ್ತರಾದಿಮಠದವರಿಗೆ ಯಾವ ಸಂಬಂಧವಿಲ್ಲದವರೆಂದಿದ್ದಾರೆ. ಆಶ್ಚರ್ಯವೆಂದರೆ ಶ್ರೀಜಗನ್ನಾಥದಾಸರು ಶ್ರೀಪದ್ಮನಾಭತೀರ್ಥರವರೆಗೆ ಮಾತ್ರವಲ್ಲದೇ ಶ್ರೀಮದಾನಂದತೀರ್ಥರನ್ನೂ ದಾಟಿ ಹಂಸನಾಮಕ ಪರಮಾತ್ಮನ ವರೆಗೂ ಉತ್ತರಾದಿಮಠಕ್ಕೆ ಸಂಬಂಧ ಉಂಟೆಂದು ಈ ಕೃತಿಯಲ್ಲಿ ಸಾರಿದ್ದಾರೆ. ಇದೇ ಈ ಕೃತಿಯ ವೈಶಿಷ್ಟ್ಯ. ಇದನ್ನು ಸಹಿಸಲಾಗದೇ ಮೂ.ಮಠೇ.ಲೇಖಕರು ಕೇವಲ ಕುಚೋದ್ಯ ಮಾಡಿದ್ದಾರೆ.

ಉತ್ತರಾದಿಮಠದವರಿಗೆ ಶ್ರೀರಾಮಚಂದ್ರತೀರ್ಥರಿಂದ ಆರಂಭಿಸಿ ಶ್ರೀಮದಾಚಾರ್ಯರ ವರೆಗೆ ಸಂಬಂಧವುಳ್ಳವರು ಎಂದು ''ಶ್ರೀಜಗನ್ನಾಥದಾಸರು ಸುಳ್ಳು ಹೇಳುವ ಮೂಲಕ ವಿಶಾಲದೃಷ್ಟಿಯನ್ನು ತೋರಿಸಿದ್ದಾರೆ'' ಎಂದು ಮೂ.ಮಠೇ.ಲೇಖಕರು ಹೇಳಿದಂತಾಗಿದೆ. ಇದರಿಂದ ದಾಸರ ವ್ಯಕ್ತಿತ್ವಕ್ಕೆ ಕಳಂಕ ತಂದಿದ್ದಾರೆ.

**ಸಂದೇಹ 32.** ಶ್ರೀಸತ್ಯವೀರರ ಕಾಲಕ್ಕೆ ಶ್ಯಾನುಭೋಗರಿಂದ, ಶ್ರೀಸತ್ಯಪ್ರಮೋದರ ಮೇಲೆ ಅವರ ಶಿಷ್ಯರಿಂದ ಕೋರ್ಟಿನಲ್ಲಿ ಕೇಸು ನಡೆಸಲಾಯಿತು. ವಿದ್ಯಮಾನಶ್ರೀಗಳ ಮೇಲೂ ಪಂಢರಪುರದ ಕೋರ್ಟಿನಲ್ಲಿ ದಾವೆಗಳು ನಡೆಸಲಾಗುತ್ತಿದೆ... .. . ಸತ್ಯಾಂಶ ಹೀಗುರುವಾಗ ನಿಷ್ಕಳಂಕ ಪರಂಪರೆ ಎಂದು ಹೇಳಿಕೊಳ್ಳುವುದರ ಔಚಿತ್ಯವೇನಿದೆ?

**ಉತ್ತರ:** ಉತ್ತರಾದಿಮಠ ನಿಷ್ಕಳಂಕ ಪರಂಪರೆ ಎಂದದ್ದನ್ನು (ಕೆಲ ಪೀಠಾಧಿಪತಿಗಳ ಮೇಲೆ ಕೆಲ ಶಿಷ್ಯರು ಕೋರ್ಟಿನಲ್ಲಿ ದಾವೆ ಹಾಕಿದ್ದನ್ನು ತಿಳಿಸುತ್ತಾ) ಅಲ್ಲಗಳೆಯಲು ಲೇಖಕರು ಪ್ರಯತ್ನಿಸಿದ್ದಾರೆ. ಪರಮಹಂಸರ ಪರಂಪರೆಗೆ ಕಳಂಕ ಯಾವುದು? ಯಾವುದಲ್ಲ? ಊಟ, ಬಟ್ಟೆ, ವಸತಿ, ಪ್ರೀತಿಗಳನ್ನು ಕೊಟ್ಟು ವಿದ್ಯೆಯನ್ನು ಧಾರೆ ಎರೆದು ಮಠದ ಕೆಲ ಆಸ್ತಿಗಳನ್ನು ನೋಡಿಕೊಂಡಿರಲು ನೇಮಿಸಿದಾಗ ಆ ಆಸ್ತಿಗಳ

ಮೇಲೆ ಶಿಷ್ಯರೇ ಅಧಿಕಾರ ಚಲಾಯಿಸಲು ಹೊರಟು ಕೋರ್ಟಿನಲ್ಲಿ ದಾವೆ ಹಾಕಿದರೆ ಅದು ಶಿಷ್ಯರಿಗೆ ಕಳಂಕವೇ ಹೊರತು ಗುರುಗಳಿಗಲ್ಲ. ಪರಂಪರೆಗೆ ಅಲ್ಲ. ಈ ವಿಷಯವಲ್ಲದೇ ಇತರ ವಿಷಯಗಳ ಬಗ್ಗೆ ಕೆಲ ಶಿಷ್ಯರು ದಾವೆ ಹಾಕಿದಾಗ ಕೋರ್ಟಿನಲ್ಲಿ ಗುರುಗಳ ಪರವಾಗಿ ನ್ಯಾಯ ದೊರಕಿದ್ದಿದೆ. ಇಂದಿಗೂ ಸಜ್ಜನರ ದೃಷ್ಟಿಯಲ್ಲಿ ಕಳಂಕ ಹೊತ್ತು ನಿಂತವರು ಅಂತಹ ಶಿಷ್ಯರೇ ಹೊರತು ಗುರುಗಳಲ್ಲ ಎಂಬುದನ್ನು ಗಮನಿಸಬೇಕು.

ಇನ್ನು ಕಳಂಕ ಯಾವುದು? ಪರಮಹಂಸ ಪೀಠಾಧಿಪತಿಗಳ ಮುಖ್ಯ ಕರ್ತವ್ಯವಾದ ನಿರಂತರ ಪಾಠ ಪ್ರವಚನ, ಶಿಷ್ಯರನ್ನು ತಯಾರಿಸಿ ಸಮಾಜಕ್ಕೆ ನೀಡುವುದು, ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸುವುದೇ ಮೊದಲಾದುವನ್ನು (ಶ್ರೀಮದಾಚಾರ್ಯರ ಯತಿಪ್ರಣವಕಲ್ಪದಲ್ಲಿ ತಿಳಿಸಿರುವುದನ್ನು) ನಿಯಮೇನ ಕರ್ತವ್ಯತ್ವೇನ ನಿರ್ವಹಿಸದೆ ಇರುವುದೇ ನಿಜವಾದ ಕಳಂಕ. ಇಂತಹ ಕಳಂಕ ಉತ್ತರಾದಿಮಠಕ್ಕೆ ಎಂದೂ ಬಂದಿಲ್ಲವಾದ್ದರಿಂದ ನಿಷ್ಕಳಂಕ ಎಂಬುದರಲ್ಲಿ ಯಾವ ಅನೌಚಿತ್ಯವೂ ಇಲ್ಲ.

ಶ್ರೀರಾಯರಮಠದ ಮೇಲೆ ಸಂಬಂಧಿಸಿರುವಂತೆ ಆ ಮಠದ ಶಿಷ್ಯರು ಸಹ ನ್ಯಾಯಾಲಯದಲ್ಲಿ ದಾವೆ ಹಾಕಿದ್ದುಂಟು.

**ಸಂದೇಹ 33.** ಶ್ರೀರಾಯರಮಠವು ''ಶ್ರೀಮದಾಚಾರ್ಯರ ಮೂಲಮಹಾಸಂಸ್ಥಾನವೆಂದು ನಾವು ಧನ್ಯತೆಯಿಂದ ಎಲ್ಲೆಲ್ಲ ಕಡೆ ಹೇಳಿಕೊಳ್ಳುತ್ತಿರುವಾಗಲೂ ಎಲ್ಲೇ ಆಗಲಿ ಇತರ ಯಾವುದೇ ಮಾಧ್ವ ಮಠಗಳನ್ನು ಶಾಖಾಮಠಗಳು ಎಂದು ಹೆಸರಿಸಿಲ್ಲ, ನಿಂದಿಸಿಲ್ಲ, ಅವಮಾನಿಸಿಲ್ಲವೆಂಬುದನ್ನು ವಾಚಕ ಸಮುದಾಯಕ್ಕೆ ಮನವರಿಕೆ ಮಾಡಿಕೊಡಲು ಹೆಮ್ಮೆ ಎನಿಸುತ್ತದೆ. ಎಲ್ಲ ಮಠಗಳೂ ಮಹಾಸಂಸ್ಥಾನಗಳೇ. ಸಕಲರೂ ಪೂಜ್ಯರೇ ಆಗಿದ್ದಾರೆ. ಮಾಧ್ವಸಮಾಜದ ಸರ್ವಾಂಗೀಣ ಒಳಿತಿಗಾಗಿ ಪರಸ್ಪರ ಸ್ನೇಹ-ಸೌಹಾರ್ದದ ಸುದಿನಗಳು ಒದಗಿ ಬರಲೆಂದು ಹಾರೈಕೆ. (ಪುಟ 127)

**ಉತ್ತರ:** ಮೂ.ಮತೇ.ಲೇಖಕರು ಉಪಸಂಹಾರದಲ್ಲಿ ತಾವು ಇತರ ಯಾವುದೇ ಮಾಧ್ವಮಠಗಳನ್ನು ಶಾಖಾಮಠಗಳು ಎಂದು ಹೆಸರಿಸಿಲ್ಲ, ನಿಂದಿಸಿಲ್ಲ, ಅವಮಾನಿಸಿಲ್ಲವೆಂಬುದನ್ನು ವಾಚಕ ಸಮುದಾಯಕ್ಕೆ ಮನವರಿಕೆ ಮಾಡಿಕೊಡಲು ಹೆಮ್ಮೆ ಎನಿಸುತ್ತದೆ ಎಂದು ಬರೆದು ಕೊಂಡಿದ್ದಾರೆ. ಪಾಪ! ''ಉತ್ತರಾದಿಮಠವನ್ನು ಬಿಟ್ಟು'' ಎಂಬುದನ್ನು ಸೇರಿಸಲು ಮರೆತಂತಿದೆ. ವಾಚಕಸಮುದಾಯಕ್ಕೆ ಮನವರಿಕೆ ಮಾಡಿಕೊಡುವ ಗಡಿಬಿಡಿ ಅಂತ ಕಾಣುತ್ತದೆ. ಆದರೆ ಅವರ ಪುಸ್ತಕ ಓದಿದವರಿಗೆ ಈ ವಿಷಯದಲ್ಲಿ ಮನವರಿಕೆ ಆಗುವ ಸಂಭವವೇ ಇಲ್ಲ ಎಂಬುದೇ ತಥ್ಯ. ಶ್ರೀರಾಯರ ಮಠದ ಎಲ್ಲ ಗುರುಚರಿತ್ರೆಗಳ ಪುಸ್ತಕಗಳು ಒಂದಲ್ಲ ಒಂದು ರೀತಿಯಲ್ಲಿ ಶ್ರೀಉತ್ತರಾದಿಮಠದ ಪರಂಪರೆ ಹಾಗೂ ಪೀಠಾಧಿಪತಿಗಳ ನಿಂದೆ ಇಲ್ಲದೇ ಹೊರಗೆ ಬಂದುದಿಲ್ಲ. ಉತ್ತರಾದಿಮಠವನ್ನು ಸಂಸ್ಥಾನವೇ ಅಲ್ಲ. ಪೀಠಾಧಿಪತಿಗಳಲ್ಲ, ಬಿಡಿಸನ್ಯಾಸಿಗಳು ಎಂದು ಹಳಿಯುವ ಇವರಿಗೆ ಈ ರೀತಿ ಬರೆದುಕೊಳ್ಳುವ ಧೈರ್ಯವಾದರೂ ಹೇಗೆ ಬಂತು. ಇದನ್ನು ಮೊಂಡು ಧೈರ್ಯವೆನ್ನದೇ ಗತಿಯಿಲ್ಲ.

ಅಲ್ಲದೇ, ಹೀಗೆ ತಾವು ಹೇಳಿಕೊಳ್ಳುವಾಗಲೂ ತಮ್ಮದು ಮಾತ್ರ 'ಮೂಲಮಹಾಸಂಸ್ಥಾನ' ಇತರ ಎಲ್ಲ ಮಾಧ್ವಮಠಗಳೂ ಕೇವಲ ಮಹಾಸಂಸ್ಥಾನ ಎಂದು ಹೇಳುವ ಮೂಲಕ ತಮ್ಮದು ಮಾತ್ರ ಮೂಲ, ಇತರ ಮಠಗಳು ಮೂಲವಲ್ಲ ಎಂದು ಹೇಳಿದಂತೆ ಆಗಲಿಲ್ಲವೇ? ಇವರ ಬರವಣಿಗೆ ಹೇಗಿದೆ ಎಂದರೆ ಕಣ್ಣು ಮುಚ್ಚಿ ಹಾಲು ಕುಡಿವ ಬೆಕ್ಕಿನ ಉರುವಣಿಗೆಯಂತಿದೆ.

ಅಲ್ಲದೇ, ರಾಯರ ಮಠದ ಅಧಿಕೃತ ಲೇಖಕರಾದ ಶ್ರೀಆರ್.ಎಸ್. ಪಂಚಮುಖಿ ಅವರು ಅಜಯ್ಯವಿಜಯೀಂದ್ರರು ಕೃತಿಯ ಮುನ್ನುಡಿಯಲ್ಲಿ ಮಾಧ್ವಪೀಠಗಳ ಪರಂಪರೆಯ ಪಟ್ಟಿಯನ್ನು ಕೊಡುತ್ತಾ ಶ್ರೀಪಾದರಾಜಮಠವನ್ನು ಶಾಖಾಪರಂಪರೆ ಎಂದೇ ಉಲ್ಲೇಖಿಸಿದ್ದಾರೆ. ಈ ಮೂಲಕ ಆ ಮಠವನ್ನು ಶಾಖಾಮಠ ಎಂದು ಹೆಸರಿಸಿ, ನಿಂದಿಸಿ, ಅವಮಾನಿಸಿದ್ದನ್ನು ಲೇಖಕರಿಗೆ ನೆನಪು ಮಾಡಿ ಕೊಡಬೇಕೇ..?

1949ರಲ್ಲಿ ಹೊರಬಂದ ರಾಯರ ಮಠದ ಅಧಿಕೃತ ಪುಸ್ತಕವಾದ ''ಗುರುಚರಿತೆ''ಯಿಂದ ಪ್ರಾರಂಭಿಸಿ ಮೂ.ಮಠೇ ಪುಸ್ತಕದವರೆಗೆ ಮಾಧ್ವರಲ್ಲಿ ಬಹುಸಂಖ್ಯಾತ ಶಿಷ್ಯರಿಂದ ಕೂಡಿದ ಉತ್ತರಾದಿಮಠದ ಗುರುಗಳನ್ನು ಪರಂಪರೆಯನ್ನು ನಿಂದಿಸುವುದು ಮತ್ತು ಅದೇ ಪುಸ್ತಕಗಳಲ್ಲಿ ಮಾಧ್ವ ಸಮಾಜದ ಸರ್ವಾಂಗೀಣ ಒಳಿತಿಗಾಗಿ ಪರಸ್ಪರ ಸ್ನೇಹ ಸೌಹಾರ್ದ ಸುದಿನಗಳು ಬರಲೆಂದು ಹಾರೈಸುವುದು ನಡೆದೇ ಇದೆ. ಇದೇ ವಿಪರ್ಯಾಸ. ಇದು ಕೂಟನೀತಿಯಲ್ಲದೇ ಮತ್ತೇನು?

* * * *

# ವಿನಮ್ರ ಪ್ರಾರ್ಥನೆ

''ಸಸೀತಾ ಮೂಲರಾಮಾರ್ಚಾ'' ಗ್ರಂಥ ಪ್ರಕಟಣೆಯಾದದ್ದು ಇತರ ಪರಂಪರೆಯನ್ನು ಹಳಿಯಲು ಅಲ್ಲ. ''ಉತ್ತರಾದಿಮಠ ಮಠವೇ ಅಲ್ಲ, ಪರಂಪರೆಯೇ ಅಲ್ಲ, ಶ್ರೀಮದಾಚಾರ್ಯರಿಂದ ಶ್ರೀರಾಮಚಂದ್ರತೀರ್ಥರ ವರೆಗೆ ಯಾರೂ ಇವರಿಗೆ ಏನೂ ಸಂಬಂಧವಿಲ್ಲ, ಪಿತೂರಿಯಿಂದ ಸಂಸ್ಥಾನ ಪಡೆದದ್ದು, ಶ್ರೀಮೂಲರಾಮನನ್ನು ಶ್ರೀಮಠದಿಂದ ಕಳವು ಮಾಡಿ ತೆಗೆದುಕೊಂಡು ಹೋಗಲಾಗಿದೆ. ಶ್ರೀವಿದ್ಯಾನಿಧಿಗಳು ಪೀಠಾಧಿಪತಿಗಳೇ ಅಲ್ಲ. ಗುರುಗಳೇ ಅಲ್ಲ......'' ಎಂದೆಲ್ಲ ಅಪಪ್ರಚಾರಗಳನ್ನು ಅನೇಕ ಇಂದಿನ ಪ್ರಚಾರ ಮಾಧ್ಯಮಗಳ ಮೂಲಕ ಸತತ ಮಾಡುತ್ತಿರುವುದನ್ನು ಗಮನಿಸಿ ನೊಂದುಕೊಂಡ ಶ್ರೀಮಠದ ಹಾಗೂ ಇತರ ಮಠದ ಅನೇಕ ಶಿಷ್ಯರು ಖುದ್ದಾಗಿ, ದೂರವಾಣಿ, ಅಂಚೆಪತ್ರಗಳು, ಈಮೇಲ್‌ಗಳ ಮೂಲಕ ಉತ್ತರಾದಿಮಠವು ಇದಕ್ಕೆ ಉತ್ತರವನ್ನು ಆಧಾರ ಸಹಿತ ಕೊಡುವ ಕಾರ್ಯ ಮಾಡಬೇಕೆಂದು ವಿನಂತಿಸಿಕೊಂಡಾಗ ಅನೇಕ ದಾಖಲೆಗಳ ಸಹಿತ ಶ್ರೀಮಠದಿಂದ ''ಸಸೀತಾಮೂಲರಾಮಾರ್ಚಾ'' ಪುಸ್ತಕ ಪ್ರಕಟಗೊಂಡಿತು.

ಸಸೀತಾಮೂಲರಾಮಾರ್ಚಾ ಕೃತಿಯನ್ನು ನಾವು ಅಧ್ಯಯನಮಾಡಿದ್ದೇವೆ. ಅದರಲ್ಲಿ ಉತ್ತರಾದಿಮಠದಲ್ಲಿರುವ ಮೂಲರಾಮಪ್ರತಿಮೆಯನ್ನು ಶ್ರೀರಘುನಂದರ ಕಾಲದಲ್ಲಿ ಅಪಹರಿಸಿಕೊಂಡು ಹೋಗಲಾಯಿತೆಂಬುದು, ಉತ್ತರಾದಿಮಠದವರು ಕೊಟ್ಟ ಆಧಾರಗಳಿಗೆ ಅನನುಗುಣವಾಗಿದೆ ಎಂದು ಮಾತ್ರ ಉಲ್ಲೇಖಿಸಲಾಗಿದೆ. ಈ ಗ್ರಂಥದ ಶೈಲಿ ಹಾಗೂ ಅದರಲ್ಲಿ ಅನ್ಯರ ದೂಷಿಸುವ ಶಬ್ದವೇ ಇಲ್ಲದಿರುವುದು ಸ್ವಾಗತಾರ್ಹ.

ಈ ಕೃತಿಗೆ ಪ್ರತಿಯಾಗಿ ಶ್ರೀರಾಘವೇಂದ್ರಸಾಹಿತ್ಯಪರಿಷತ್ ನಂಜನಗೂಡಿನವರು ಶ್ರೀರಾಯರ ಮಠದ ದಿವಾನರ ಮುನ್ನುಡಿ ಇರುವ ''ಮೂಲರಾಮಸ್ತು ಮನ್ಮಠೇ''ಎಂಬ ಪುಸ್ತಕ ಹೊರಡಿಸಿದರು. ಒಂದರ್ಥದಲ್ಲಿ ಇದು ಶ್ರೀರಾಯರ ಮಠದ ಅಧಿಕೃತ ಪ್ರಕಟನೆ.

ಒಂದು ಕೃತಿಗೆ ಪ್ರತಿಯಾಗಿ ಇನ್ನೊಂದು ವಿಮರ್ಶಾತ್ಮಕ ಕೃತಿ ಹೊರಬರುವುದು ಸ್ವಾಗತಾರ್ಹವೇ. ಆದರೆ ಮೂ.ಮಠೇ. ಕೃತಿಯಲ್ಲಿ ಕೇವಲ ವಿಮರ್ಶೆ ಮಾತ್ರ ಇರದೆ ''ಸಸೀತಾಮೂಲರಾಮಾರ್ಚಾ''ಪುಸ್ತಕದಲ್ಲಿ ಕೊಟ್ಟಿರುವ ಎಲ್ಲ ಆಧಾರಗಳನ್ನು ಮನಬಂದಂತೆ ನಿರಾಕರಿಸುವ ಪ್ರಯತ್ನ ಮಾಡುತ್ತ ಉತ್ತರಾದಿಮಠಕ್ಕೆ ಪರಂಪರೆಯೇ ಇಲ್ಲ ಶ್ರೀಮದಾಚಾರ್ಯರಿಂದ ಹಿಡಿದು ಶ್ರೀರಾಮಚಂದ್ರತೀರ್ಥರ ವರೆಗಿರುವ ಪ್ರಾಚೀನರು ಯಾರೂ ಉತ್ತರಾದಿಮಠಕ್ಕೆ ಸಂಬಂಧವಿಲ್ಲದವರು ಎಂದು ಸಮರ್ಥಿಸುವ ಪ್ರಯತ್ನ ಮಾಡಿದ್ದಾರೆ.

ಅವರ ಪ್ರಯತ್ನ ಎಷ್ಟು ಹುಸಿ ಎಂಬುದನ್ನು ಈ ಪುಸ್ತಕದಲ್ಲಿ ಈಗಾಗಲೇ ತೋರಿಸಿಕೊಡಲಾಗಿದೆ.

ಸಮಾಜದ ಹಿತದೃಷ್ಟಿಯಿಂದ ಅವರವರ ಶ್ರದ್ಧೆಗಳಿಗೆ ಧಕ್ಕೆ ಬರದಂತೆ, ಇತರರನ್ನು ದೂಷಿಸದಂತೆ, ಸ್ವೋತ್ತಮರ ದ್ರೋಹ ವೈಷ್ಣವರ ದ್ವೇಷಗಳಿಂದ ಪಾಪಕ್ಕೆ ಗುರಿಯಾಗದಂತೆ, ಎಲ್ಲ ಪರಂಪರೆಯ ಮಹನೀಯರ ಚರಿತ್ರೆಗೆ ಕುಂದು ಬಗೆಯದಂತೆ, ಸತ್ಯಕ್ಕೆ ಚ್ಯುತಿಯಾಗದಿದ್ದಂತೆ, ಪರಸ್ಪರ ಸೌಹಾರ್ದ, ಪ್ರೀತಿ, ಗೌರವಾದರಗಳಿಂದಿದ್ದು ಮುಖ್ಯ ಕರ್ತವ್ಯವಾದ ಸಿದ್ಧಾಂತದ ಸ್ಥಾಪನೆ, ಧರ್ಮಾಚರಣೆ, ಧರ್ಮದ ಪ್ರಚಾರ, ಸಾಧನೆಗಳ ಬಗ್ಗೆ ಯೋಚಿಸುವುದು ಒಳಿತು. ದ್ವೇಷ ಬೆಳಸುವುದನ್ನೇ ಮುಂದುವರೆಸುವುದು ಸಮಾಜಕ್ಕೆ ಒಳಿತಲ್ಲ. ಇದು ಉಭಯಪಕ್ಷದವರಿಗೂ ನಮ್ಮ ವಿನಮ್ರ ಸಲಹೆ ಹಾಗೂ ಪ್ರಾರ್ಥನೆ.

**''ಯತೋ ಧರ್ಮಸ್ತತೋ ಜಯಃ''**

ಎಲ್ಲಿ ಧರ್ಮ ಮೆರೆಯುತ್ತದೆಯೋ ಅದೇ ಉತ್ಕೃಷ್ಟ. ಅಲ್ಲಿಯೇ ಜಯ.

**ತಥಾಪಿ ಶುದ್ಧಬುದ್ಧೀನಾಂ ಈಶಾನುಗ್ರಹಯೋಗಿನಾಮ್ ।**
**ಸುಯುಕ್ತಯಸ್ತಮೋ ಹನ್ಯುರಾಗಮಾನುಗತಾಃ ಸದಾ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

* * * *

# ಅನುಬಂಧ 1: ಶ್ರೀವಿದ್ಯಾನಿಧಿತೀರ್ಥರು

ಹಂಸನಾಮಕ ಪರಮಾತ್ಮನಿಂದ ಪ್ರವರ್ತಿತವಾದ ಶ್ರೀಮದುತ್ತರಾದಿಮಠದ ಪರಂಪರೆಯಲ್ಲಿ ಬಂದ ಪೀಠಾಧಿಪತಿಗಳಲ್ಲಿ ಶ್ರೀವಿದ್ಯಾನಿಧಿತೀರ್ಥರ ಸ್ಥಾನ ಅತ್ಯಂತ ಮಹತ್ವದ್ದಾಗಿದೆ.

ಇವರು ಭಕ್ತಿಪುರಸ್ಸರವಾಗಿ ಶ್ರೀಮದ್ಭಾಗವತೋಕ್ತ ಭಗವನ್ಮಹಿಮೆಯನ್ನು ಕೊಂಡಾಡಿದಾಗ ಭೂಗತವಾಗಿರಿಸಿದ್ದ ಶ್ರೀಮನ್ಮೂಲಸೀತಾಸಮೇತ ಶ್ರೀಮನ್ಮೂಲರಾಮದೇವರ ಪಟ್ಟಿಗೆ ಭೂಮಿ ಬಿರಿದು ಕಂಗೊಳಿಸಿತು. ಇವರ ಭಕ್ತಿಗೆ ಮೆಚ್ಚಿ ಶ್ರೀಮೂಲಸೀತಾರಾಮರು ಒಲಿದು ಬಂದರು. ನಿರಾತಂಕವಾಗಿ ಚತುರ್ಮುಖ ಬ್ರಹ್ಮಕರಾರ್ಚಿತ ಚತುರ್ಯುಗ ಮೂರ್ತಿಗಳನ್ನು ಅನೇಕ ವರ್ಷಗಳವರೆಗೆ ಪೂಜಿಸಿದ ಮಹಾಮಹಿಮರು ಶ್ರೀವಿದ್ಯಾನಿಧಿ-ತೀರ್ಥಶ್ರೀಪಾದಂಗಳವರು.

ಇಂತಹ ಮಹನೀಯರ ಬಗ್ಗೆ ಇಲ್ಲ-ಸಲ್ಲದ ಆರೋಪಣೆಗಳನ್ನು ಶ್ರೀರಾಯರ ಮಠದವರು ಮಾಡುತ್ತಾ ಬಂದಿದ್ದಾರೆ. ಶ್ರೀವಿದ್ಯಾನಿಧಿತೀರ್ಥರ ಬಗ್ಗೆ ಅವರ ವ್ಯಕ್ತಿತ್ವದ ಬಗ್ಗೆ ಯಥಾರ್ಥ ಚಿತ್ರಣವನ್ನು (ಆಧಾರ ಸಮೇತ) ಈ ಭಾಗದಲ್ಲಿ ನೀಡಲಾಗಿದೆ.

ಹಂಸನಾಮಕ ಪರಮಾತ್ಮನಿಂದ ಬಂದ ಪರಂಪರೆಯನ್ನು ಶ್ರೀಮದಾಚಾರ್ಯರು ಅಲಂಕರಿಸಿ ಸನಾತನ ವೈಷ್ಣವಮತವನ್ನು ಪುನರುದ್ಧರಿಸಿದರು. ಆ ಪರಂಪರೆಯು ಮುಂದುವರೆದು ಅನೇಕ ಸುಜೀವರ ಉದ್ಧಾರಕ್ಕೆ ಕಾರಣವಾಗಬೇಕೆಂಬ ಸದಿಚ್ಛೆಯಿಂದ, ಭಗವಂತನ ಪ್ರೇರಣೆಯಿಂದ ಶ್ರೀಪದ್ಮನಾಭತೀರ್ಥರಿಗೆ ಉತ್ತರಾಧಿಕಾರವನ್ನು ಕೊಟ್ಟು ಶ್ರೀಮದುತ್ತರಾದಿಮಠವು ಮುಂದುವರೆಯುವಂತೆ ಮಾಡಿದರು. ನಂತರ ಕ್ರಮವಾಗಿ ಶ್ರೀನರಹರಿತೀರ್ಥರು, ಶ್ರೀಮಾಧವತೀರ್ಥರು, ಶ್ರೀಅಕ್ಷೋಭ್ಯತೀರ್ಥರು, ಶ್ರೀಜಯತೀರ್ಥರು, ಶ್ರೀವಿದ್ಯಾಧಿರಾಜತೀರ್ಥರು, ಶ್ರೀಕವೀಂದ್ರತೀರ್ಥರು, ಶ್ರೀವಾಗೀಶತೀರ್ಥರು, ಶ್ರೀರಾಮಚಂದ್ರತೀರ್ಥರು ವೇದಾಂತಸಾಮ್ರಾಜ್ಯಾಧಿಪತಿಗಳಾಗಿ ಮೆರೆದು ದ್ವೈತಮತವನ್ನು ಸಾರಿದರು.

ಶ್ರೀರಾಮಚಂದ್ರತೀರ್ಥರು ಶ್ರೀವಿಬುಧೇಂದ್ರತೀರ್ಥರಿಗೆ ಆಶ್ರಮಕೊಟ್ಟು ದಿಗ್ವಿಜಯಕ್ಕಾಗಿ ಕೊಟ್ಟು ಕಳುಹಿಸಿದರು. ಪ್ರಚಂಡ ವಿದ್ವಾಂಸರಾದ ಶ್ರೀವಿಬುಧೇಂದ್ರರು ಉತ್ತರಭಾರತದಲ್ಲಿ ಪರವಾದಿನಿಗ್ರಹ ಮಾಡುತ್ತ ಸಂಚರಿಸುತ್ತಿದ್ದರು.

ಇತ್ತ ಶ್ರೀರಾಮಚಂದ್ರತೀರ್ಥರಿಗೆ ಅವಸಾನಕಾಲ ಸಮೀಪಿಸಿತು. ಶ್ರೀವಿಬುಧೇಂದ್ರರಿಗೆ ಹಲವು ಬಾರಿ ಹೇಳಿ ಕಳುಹಿಸಿದರೂ ಬರಲಿಲ್ಲ. ಶ್ರೀರಾಮಚಂದ್ರತೀರ್ಥರು ತಮ್ಮ ಮತ್ತೊಬ್ಬ ಶಿಷ್ಯರಾದ ಶ್ರೀವಿದ್ಯಾನಿಧಿಗಳಿಗೆ ಆಶ್ರಮ ನೀಡಿದರು. ನಂತರ ಯರಗೋಳದ ಪ್ರಮುಖರನ್ನು ಕರೆದು ''ಹೇ ಪ್ರಮುಖರೇ ವಿಬುಧೇಂದ್ರರು ಆಶ್ರಮಜ್ಯೇಷ್ಠರು, ಜ್ಞಾನಿಗಳು, ವಾಕ್ಯಾರ್ಥಕೋವಿದರು, ಭಕ್ತಿಶ್ರದ್ಧಾದಿಗಳಿಂದ ಕೂಡಿದವರು, ಸಂಸ್ಥಾನಕ್ಕೆ ಯೋಗ್ಯರೂ ಆಗಿದ್ದಾರೆ. ಆದರೂ ನಮ್ಮ ಅವಸಾನ ಕಾಲ ಬಂದರೂ ಅವರು ಇನ್ನೂ ಆಗಮಿಸಿಲ್ಲ. ಕಾರಣ ಮೂಲರಾಮಾದಿ ಸಂಸ್ಥಾನ ಪ್ರತಿಮೆಗಳ ಪೆಟ್ಟಿಗೆಯನ್ನು ನಿಮ್ಮ ಮನೆಯಲ್ಲಿ ಭೂಗತಮಾಡಿ ಸ್ಥಾಪಿಸುತ್ತೇವೆ. ನಮ್ಮ ನಿರ್ಯಾಣದ ನಂತರ 6 ತಿಂಗಳು ಕಾಯಬೇಕು. ಅಷ್ಟರಲ್ಲಿ ಶ್ರೀವಿಬುಧೇಂದ್ರರು ಆಗಮಿಸಿದರೆ ಸಮಗ್ರ ಸಂಸ್ಥಾನವನ್ನು ನಿಸ್ಸಂಶಯವಾಗಿ ಅವರಿಗೆ ನೀಡಬೇಕು. ಒಂದು ಪಕ್ಷ ಅವರು ಅಷ್ಟರಲ್ಲಿ ಬರದೇ ಹೋದರೆ ಈ ವಿದ್ಯಾನಿಧಿಗಳೂ ಕೂಡ ಸಾಧುಸ್ವಭಾವದವರು, ಸಂಸ್ಥಾನಯೋಗ್ಯರೂ ಆಗಿದ್ದಾರೆ. ಇವರಿಗೇನೆ ಸಮಗ್ರಸಂಸ್ಥಾನವನ್ನು ನೀಡತಕ್ಕದ್ದು'' ಎಂದು ಆದೇಶಿಸಿ ಯರಗೋಳದ ಕುಲಕರ್ಣಿ ಧರ್ಮಣ್ಣ ಎನ್ನುವವರ ಮನೆಯಲ್ಲಿ ಸಂಸ್ಥಾನದ ದೇವರ ಪೆಟ್ಟಿಗೆಯನ್ನು ಭೂಗತ ಮಾಡಿ ಇರಿಸಿದರು. ನಂತರ ಶ್ರೀರಾಮಚಂದ್ರತೀರ್ಥರು ವೃಂದಾವನಸ್ಥರಾದರು.

6 ತಿಂಗಳಿಗೆ ಇನ್ನೂ 15 ದಿನ ಇರುವಾಗ ಯರಗೋಳದ ಪುರಪ್ರಮುಖರು ಗುರುಗಳಾದ ಶ್ರೀರಾಮಚಂದ್ರತೀರ್ಥರ ಆದೇಶವನ್ನು ಸ್ಮರಿಸಿಕೊಂಡು ಶ್ರೀವಿದ್ಯಾನಿಧಿಗಳ ಹತ್ತಿರ ಆಗಮಿಸಿ ಈ ರೀತಿಯಾಗಿ ವಿನಂತಿಸಿಕೊಂಡರು - ''ಗುರುಗಳಾದ ಶ್ರೀರಾಮಚಂದ್ರತೀರ್ಥರು ಹೇಳಿದ ಕಾಲವು ಸಮೀಪಿಸುತ್ತಿದೆ. ಗುರುಗಳು ವೃಂದಾವನಸ್ಥರಾದ ವೃತ್ತಾಂತ ತಿಳದಿದ್ದರೂ ಈ ವರೆಗೂ ಶ್ರೀವಿಬುಧೇಂದ್ರತೀರ್ಥರು ಆಗಮಿಸಿಲ್ಲ. ಕಾರಣ, ನೀವು ಮೂಲರಾಮದೇವರ ಪೆಟ್ಟಿಗೆಯನ್ನು ಸ್ವೀಕರಿಸಲು ಸಿದ್ಧತೆಯನ್ನು ಮಾಡಿಕೊಳ್ಳಿ'' ಎಂದು. ಆಗ ಶ್ರೀವಿದ್ಯಾನಿಧಿಗಳು ''ನಾವು ಈಗ ರಾಮದೇವರ ಪೆಟ್ಟಿಗೆಯನ್ನು ಸ್ವೀಕರಿಸುವುದಿಲ್ಲ. ಶ್ರೀವಿಬುಧೇಂದ್ರರು ಅಪ್ಪಣೆ ಕೊಟ್ಟರೆ ಮಾತ್ರ ಸ್ವೀಕರಿಸುತ್ತೇವೆ'' ಎಂದು ತಿಳಿಸುತ್ತಾರೆ. ನಂತರ ಎಲ್ಲ ಪುರಪ್ರಮುಖರು ಸಮೀಪದ ಗ್ರಾಮದಲ್ಲಿರುವ ಶ್ರೀವಿಬುಧೇಂದ್ರರ ಹತ್ತಿರ ಹೋಗಿ ಎಲ್ಲ ವೃತ್ತಾಂತವನ್ನು ತಿಳಿಸಿ ವಿನಮ್ರರಾಗಿ ''ತಾವು ಸಂಸ್ಥಾನಯೋಗ್ಯರು, ಆಶ್ರಮಜ್ಯೇಷ್ಠರು. ತಾವು ಬಂದು ಸಂಸ್ಥಾನಪ್ರತಿಮೆಗಳನ್ನು ಸ್ವೀಕರಿಸಬೇಕು'' ಎಂದು ಪ್ರಾರ್ಥಿಸಿಕೊಳ್ಳುತ್ತಾರೆ.

ಶ್ರೀವಿಬುಧೇಂದ್ರರು ಕಾರಣಾಂತರಗಳಿಂದ ಯರಗೋಳಕ್ಕೆ ಬರುವುದನ್ನು ವಿಲಂಬ ಮಾಡುತ್ತಾರೆ. ಪುರಪ್ರಮುಖರು 6 ತಿಂಗಳಾದ ಮೇಲೆ 11 ದಿವಸಗಳ ವರೆಗೆ ಶ್ರೀವಿಬುಧೇಂದ್ರತೀರ್ಥರ ಆಗಮನಕ್ಕಾಗಿ ನೀರಿಕ್ಷಿಸುತ್ತಾರೆ. ಆದರೂ ಶ್ರೀವಿಬುಧೇಂದ್ರರ ಆಗಮನವಾಗಲಿಲ್ಲ. ಆಗ ಪುರಃಪ್ರಮುಖರ ಪ್ರಾರ್ಥನೆಯಂತೆ ಶ್ರೀವಿದ್ಯಾನಿಧಿಗಳು ಗುರುಗಳ ಆದೇಶವನ್ನು ಅನುಸರಿಸಿ ಸಂಸ್ಥಾನ ಸ್ವೀಕರಿಸಲು ಸಿದ್ಧರಾದರು. ಆದೇ ವೇಳೆಗೆ ಶ್ರೀವಿಬುಧೇಂದ್ರರ ಆಗಮನವಾಗುತ್ತದೆ.

6 ತಿಂಗಳ ಅವಧಿ ಮುಗಿದಿದ್ದರಿಂದ ಗುರುಗಳಾದ ಶ್ರೀರಾಮಚಂದ್ರತೀರ್ಥರ ಆದೇಶದಂತೆ, ಶ್ರೀವಿದ್ಯಾನಿಧಿಗಳೇ ಸಂಸ್ಥಾನ ಸ್ವೀಕರಿಸಬೇಕೋ, ಆಶ್ರಮಜ್ಯೇಷ್ಠರಾದ ಕಾರಣ ಶ್ರೀವಿಬುಧೇಂದ್ರರು ಸ್ವೀಕರಿಸಬೇಕೋ? ಎಂಬ ಗೊಂದಲ ಪ್ರಾರಂಭವಾಯಿತು. ಆ ಊರಿನಲ್ಲಿದ್ದ ಎಲ್ಲ ಗಣ್ಯರು ಸೇರಿ ಒಂದು ತೀರ್ಮಾನಕ್ಕೆ ಬಂದರು. ಭೂಗತವಾದ ದೇವರನ್ನು ಇಬ್ಬರೂ ಯತಿಗಳು ಪ್ರಾರ್ಥಿಸಲಿ. ಯಾರ ಪ್ರಾರ್ಥನೆಗೆ ಭೂಗತವಾದ ಶ್ರೀಮೂಲಸೀತಾರಾಮರು ಒಲಿಯುತ್ತಾರೋ ಅವರೇ ಮೂಲರಾಮಾರ್ಚನೆಯನ್ನು ಮಾಡಬೇಕು. ಸಂಸ್ಥಾನಾಧಿಪತಿಯಾಗಬೇಕು. ಅವರೇ ಪರಂಪರೆ ಮುಂದುವರೆಸಬೇಕೆಂಬ ನಿರ್ಣಯವಾಯಿತು.

ಆಶ್ರಮಜ್ಯೇಷ್ಠರಾದ್ದರಿಂದ ಶ್ರೀವಿಬುಧೇಂದ್ರರಿಗೆ ಮೊದಲು ಅವಕಾಶ ಕಲ್ಪಿಸಲಾಯಿತು. ಅವರ ಪ್ರಾರ್ಥನೆಗೆ ಯಾವುದೇ ಸೂಚನೆ ದೊರೆಯಲಿಲ್ಲ. ನಂತರ ಶ್ರೀವಿದ್ಯಾನಿಧಿಗಳು ಶ್ರೀಮದ್ಭಾಗವತ ಪಂಚಮಸ್ಕಂಧದ ಗದ್ಯ-ಪದ್ಯಾದಿಗಳಿಂದ ಸ್ತುತಿಸಿದರು. ಸಂಸ್ಥಾನ ಪೆಟ್ಟಿಗೆ ಭೂಗತವಾಗಿರಿಸಿದ್ದ ಸ್ಥಳದಲ್ಲಿ ಭೂಮಿ ಬಿರುಕು ಬಿಟ್ಟಿತು. ನಂತರ ಶ್ರೀವಿದ್ಯಾನಿಧಿಗಳು ಆ ಊರಿನ ಪ್ರಮುಖರಿಗೆ ''ನಾವು ಸನ್ನ್ಯಾಸಿಗಳಾದ ಕಾರಣ ಭೂಮಿಯನ್ನು ಅಗೆಯುವುದು ವಿಹಿತವಲ್ಲ. ಕಾರಣ, ನೀವು ಬಿರುಕು ಬಿಟ್ಟ ಭೂಮಿಯ ಭಾಗವನ್ನು ಅಗೆದು ಮೇಲಿನ ಮಣ್ಣನ್ನು ತೆಗೆಯಿರಿ. ನಾವು ಶ್ರೀಮೂಲರಾಮನ ಪೆಟ್ಟಿಗೆಯನ್ನು ತೆಗೆದು ಕೊಳ್ಳುತ್ತೇವೆ'' ಎಂದು ಹೇಳಿದರು. ನಂತರ ಪರಮಾನಂದಭರಿತರಾಗಿ ಎಲ್ಲರ ಸಮಕ್ಷಮ ಶ್ರೀವಿದ್ಯಾನಿಧಿಗಳು ದೇವರ ಪೆಟ್ಟಿಗೆ ತೆಗೆದುಕೊಂಡು ಮಹಾಸಂಸ್ಥಾನಾಧಿಪತಿಗಳಾಗಿ ಪರಂಪರೆಯಲ್ಲಿ ಮುಂದುವರೆದರು.

ಮುಂದೆ ಶ್ರೀವಿಬುಧೇಂದ್ರರು ದೈವೇಚ್ಛೆ, ಭಗವತ್ಸಂಕಲ್ಪ ಎಂದು ತಿಳಿದು ಮತ್ತೆ ಪರಮತಖಂಡನ-ಸ್ವಮತಸ್ಥಾಪನಕ್ಕಾಗಿ ವಾದಿದಿಗ್ವಿಜಯಕ್ಕಾಗಿ ತೆರಳಿದರು. ಮುಂದೆ ತಮ್ಮದೊಂದು ಪ್ರತ್ಯೇಕ ಪರಂಪರೆಯನ್ನು ಮುಂದುವರೆಸಿದರು. ಶ್ರೀವಿದ್ಯಾನಿಧಿತೀರ್ಥರು ಗುರುಗಳ ಆದೇಶದಂತೆ ಸರ್ವಾಂಗೀಕೃತರಾಗಿ ಮೂಲಪರಂಪರೆಯಲ್ಲಿ ಮುಂದುವರೆದರು.

❖ ತತ್ರಾದೌ ವಿಬುಧೇಂದ್ರಾಸ್ತಂ ಪ್ರಾರ್ಥಯನ್ ದಿವಸತ್ರಯಮ್ ।
ಉಪವಾಸೇನ ಪಶ್ಚಾತ್ತು ವಿದ್ಯಾನಿಧಿಮುನೀಶ್ವರಾಃ ॥
ಶ್ರೀಮದ್ಭಾಗವತಪ್ರೋಕ್ತೈಃ ಪಂಚಮಸ್ಕಂಧಸಂಸ್ಥಿತೈಃ ।
ಗದ್ಯಪದ್ಯಾದಿಭಿಃ ಸ್ತೋತ್ರಂ ಚಕ್ರಿರೇ ತದ್ಗಮಾನಸಾಃ ॥
ಯದೃಚ್ಛಯಾಽಭವತ್ ತತ್ರ ಭೂವಿದಾರಣಮದ್ಭುತಮ್ ।

ಸಪ್ತಮಶಾಖಾಸರ್ಗ, ಪೂರ್ಣಬೋಧಗುರುವಂಶಕಥಾಕಲ್ಪತರು

ವಿದ್ಯಾನಿಧಿಮುನಿಂ ವಂದೇ ವಿದ್ಯಾನಿಧಿಮಹಾನಿಧಿಮ್ ।
ವಿದ್ಯಾನಿಧಿಗ್ರಂಥಕರ್ತೃ ವಿದ್ಯಾನಿಧಿಮಹಾಗುರುಮ್ ॥

ವ್ಯಾಖ್ಯಾನ: ರಾಮಚಂದ್ರಸ್ವಾಮಿಭಿಃ ಸಂರಕ್ಷಣಾರ್ಥಂ ಶ್ರೀರಾಮವ್ಯಾಸಪ್ರತಿಮಾಃ ಮಂಜೂಷಾಯಾಂ ನಿಕ್ಷಿಪ್ಯ ಮಂಜೂಷಾಂ ಭೂಮ್ಯಂತಃ ಸ್ಥಾಪಯಿತ್ವಾ ವೈಕುಂಠಯಾತ್ರಾ ಕೃತಾ । ಅನಂತರಂ ವಿದ್ಯಾನಿಧಿ-ಸ್ವಾಮಿಭಿರಾಗತ್ಯ ಯದಾ ಶ್ರೀರಾಮವ್ಯಾಸಸ್ತುತಿಃ ಕೃತಾ ತದೈವ ಶ್ರೀರಾಮವ್ಯಾಸಪ್ರತಿಮಾಯುಕ್ತಭೂಮಿಃ ಭಿನ್ನಾ ಜಾತಾ । ಅನಂತರಂ ಭೂಮಿಗತನಿಕ್ಷೇಪದ್ರವ್ಯವತ್ ಶ್ರೀರಾಮವ್ಯಾಸಪ್ರತಿಮಾಃ ಸ್ವೀಕೃತ್ಯ ಪೂಜಾ ಕೃತೇತಿ ಜ್ಞಾನಿಭಿರುಚ್ಯಮಾನಕಥಾಂ ಸೂಚಯತಿ ॥

ಶ್ರೀಸತ್ಯಾಭಿನವತೀರ್ಥಕೃತ ಶ್ರೀಸತ್ಯನಾಥಗುರುಸ್ತುತಿಃ, ಸ್ವವ್ಯಾಖ್ಯಾಸಹಿತ

(ಶ್ರೀಸತ್ಯನಾಥತೀರ್ಥರ ಶಿಷ್ಯರೇ ಸತ್ಯಾಭಿನವರು. ಮಹಾಟಿಪ್ಪಣಿಕಾರರು. ಇವರೀರ್ವರೂ ಶ್ರೀರಾಘವೇಂದ್ರಸ್ವಾಮಿಗಳ ಸಮಕಾಲೀನರು. ಶ್ರೀಸತ್ಯಾಭಿನವರು ಪೂರ್ವಾಶ್ರಮದಲ್ಲಿಯೂ ಶ್ರೀಮಠದಲ್ಲಿದ್ದು, ಶ್ರೀಮಠದ ಪರಂಪರೆಯನ್ನು ತಿಳಿದವರಾಗಿದ್ದರು. ಈ ಗುರುಸ್ತುತಿಯನ್ನು ವ್ಯಾಖ್ಯಾನ ಸಹಿತವಾಗಿ ಒಬ್ಬ ಪೀಠಾಧಿಪತಿಗಳು ರಚಿಸಿರುವುದು ಗಮನಾರ್ಹ).

ಶ್ರೀವಿದ್ಯಾನಿಧಿಗಳು ದೇಶದಲ್ಲೆಲ್ಲಾ ಸಂಚಾರ ಮಾಡುತ್ತಾ ಪಂಢರಪುರ ಕ್ಷೇತ್ರವನ್ನು ಸಂದರ್ಶಿಸಿ ನಂತರ ಭೀಮಾನದೀತೀರದಲ್ಲಿ ಶ್ರೀಮಾಧವತೀರ್ಥರ ಮೂಲವೃಂದಾವನವಿರುವ ಮಣ್ಣೂರು ಗ್ರಾಮಕ್ಕೆ ದಿಗ್ವಿಜಯ ಮಾಡಿದರು. ಅಲ್ಲಿ ವಿದ್ವಾಂಸರಾದ ಸದಾಚಾರಿಗಳಾದ ಮೂಲತಃ ಕುಂಭಕೋಣ ಗ್ರಾಮದವರಾದ ಶ್ರೀಶೇಷಾದ್ರಿಗಳೆಂಬ ಸದ್ವೈಷ್ಣವರು ವಾಸಿಸುತ್ತಿದ್ದರು. ಶ್ರೀಗಳವರು ಆ ಊರಿನ ಹನುಮಂತದೇವರ ದೇವಾಲಯದಲ್ಲಿ ತಂಗಿದ್ದರು. ಈ ವಿಷಯ ತಿಳಿದ ಶ್ರೀಶೇಷಾದ್ರಿಗಳು ಊರಿನ ಪ್ರಮುಖರೊಂದಿಗೆ ಬಂದು ಶ್ರೀಗಳವರನ್ನು ಸ್ವಾಗತಿಸಿದರು. ಆ ಊರಿನಲ್ಲಿರುವಾಗಲೇ ಶ್ರೀವಿದ್ಯಾನಿಧಿಗಳಿಗೆ ಹಾಗೂ ಶ್ರೀಶೇಷಾದ್ರಿಗಳಿಗೆ ಸ್ವಪ್ನವಾಯಿತು. ಸ್ವಪ್ನದಲ್ಲಿ ಶ್ರೀಶೇಷಾದ್ರಿಗಳ ಕುಲಸ್ವಾಮಿಯಾಗಿದ್ದ ಕಂಚಿವರದರಾಜನು ದರ್ಶನವನ್ನಿತ್ತು ಗ್ರಾಮದ ಆಗ್ನೇಯ ಭಾಗದ ಭೀಮಾತೀರದಲ್ಲಿ ನಾನಿದ್ದೇನೆ ಎಂದು ಸೂಚನೆ ಇತ್ತನು.

ಶ್ರೀಗಳವರಿಗೆ ಈ ಸ್ವಪ್ನವೃತ್ತಾಂತವನ್ನು ತಿಳಿಸಲು ಹೊರಟರು ಶ್ರೀಶೇಷಾದ್ರಿಗಳು. ಶ್ರೀಗಳವರು ನಗುತ್ತ ಅವರನ್ನು ಬರಮಾಡಿಕೊಂಡರು. ಶೇಷಾದ್ರಿಗಳು ಸ್ವಪ್ನವನ್ನು ಹೇಳುವ ಮುಂಚೆ ತಾವೇ ವೃತ್ತಾಂತವನ್ನು ಹೇಳಿದರು. ಸ್ವಪ್ನದಲ್ಲಿ ಸೂಚಿತವಾದ ಸ್ಥಳಕ್ಕೆ ಆಗಮಿಸಿ ಅಗೆಸಿ ನೋಡಿದರು. ಅಲ್ಲಿ ದಿವ್ಯವಾದ ಶ್ರೀಧ್ರುವನಿರ್ಮಿತ ಹಾಗೂ ಧ್ರುವಕರಾರ್ಚಿತ ಶ್ರೀವಾಸುದೇವಮೂರ್ತಿಯು (ತುಳಸಿ ಗಂಧಾದಿಗಳ ಸಮೇತ) ಕಂಗೊಳಿಸಿತು. ಅಲ್ಲಿ ನೆರೆದ ಜನಗಳ ಆನಂದಕ್ಕೆ ಪಾರವೇ ಇಲ್ಲ. ಶ್ರೀವಿದ್ಯಾನಿಧಿಗಳ ತಪಃಶಕ್ತಿಯನ್ನು ಕೊಂಡಾಡಿದರು. ನಂತರ ಶ್ರೀವಿದ್ಯಾನಿಧಿಗಳು ಶ್ರೀಶೇಷಾದ್ರಿಗಳ ಮನೆಯ ದೇವರ ಮನೆಯನ್ನೇ ಗರ್ಭಗುಡಿಯನ್ನಾಗಿಸಿ

ಆ ದಿವ್ಯ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಮಾರ್ಗಶಿರ ಮಾಸದಲ್ಲಿ ಒಲಿದು ಬಂದ ಕಾರಣ ಈ ಮೂರ್ತಿಗೆ ಕೇಶವನೆಂದು ಕರೆಯುತ್ತಾರೆ.

**ಪುರಾ ಕ್ಷೀರೋದೇಽಭೂಃ ಕಮಠಪತಿರಪ್ರಾಕೃತತನುಃ**
**ಸರಿತ್ತೀರೇ ಭೂಮೌ ಮಠಪತಿರಿದಾನೀಂ ಮಣಿಪುರೇ ।**
**ಪ್ರತೀತಃ ಶ್ರೀಶಸ್ತ್ವಂ ಯತಿಮಹಿತವಿದ್ಯಾನಿಧಿವೃತಃ**
**ಪ್ರಪನ್ನಂ ಪಾಹೀಮಂ ಜನಮನುದಿನಂ ಕೇಶವ ವಿಭೋ** **॥ 2 ॥**

-ಶ್ರೀಆದ್ಯವರದಾಚಾರ್ಯಸುತ ಶ್ರೀಕೇಶವಾಚಾರ್ಯವಿರಚಿತ ಶ್ರೀಚನ್ನಕೇಶವಸ್ತೋತ್ರಂ

ಶ್ರೀಶೇಷಾದ್ರಿ ದಂಪತಿಗಳಿಗೆ ಸಂತಾನವಿರಲಿಲ್ಲ. ಶ್ರೀಗಳವರಲ್ಲಿ ಪ್ರಾರ್ಥಿಸಿದಾಗ ಮಂತ್ರಾಕ್ಷತೆ, ಫಲಗಳನ್ನು ಕೊಟ್ಟು ಶ್ರೇಷ್ಠ ಸಂತಾನವಾಗುವಂತೆ ಆಶೀರ್ವದಿಸಿದರು. ಶ್ರೀವಿದ್ಯಾನಿಧಿಗಳ ಮಂತ್ರಾಕ್ಷತೆ ಬಲದಿಂದ ಹುಟ್ಟಿದವರೇ ಶ್ರೀಆದ್ಯ ವರದಾಚಾರ್ಯರು. ಇವರು ಶ್ರೀರಘುನಾಥತೀರ್ಥರಲ್ಲಿ ಅಧ್ಯಯನ ಮಾಡಿ ಶ್ರೀರಘೂತ್ತಮತೀರ್ಥರಿಗೆ ಪಾಠ ಹೇಳಿದ ಧೀಮಂತರು. ಇದರಿಂದ ಶ್ರೀವಿದ್ಯಾನಿಧಿಗಳ ತಪಸ್ಸು ಎಷ್ಟಿತ್ತು ಎಂಬುದು ಅರಿವಾಗುತ್ತದೆ.

ಶ್ರೀವಿದ್ಯಾನಿಧಿಗಳು ಭೀಮಾತೀರದ ಈ ಚೆನ್ನಕೇಶವನ ಹಾಗೂ ಶ್ರೀಮಾಧವತೀರ್ಥರ ಸನ್ನಿಧಾನದ ಮಣ್ಣೂರಿನಲ್ಲಿ ಅನೇಕ ದಿನ ಕಳೆಯುತ್ತ ಇರುವಾಗಲೇ ಪ್ರಾಯಃ ಗ್ರಂಥ ರಚನೆಯ ಕಾರ್ಯವನ್ನು ಮಾಡಿರಬೇಕು. ಅವರು ರಚಿಸಿರುವ ಗ್ರಂಥಗಳು ಇಂದು ಉಪಲಬ್ಧವಿಲ್ಲದಿದ್ದರೂ ಅವರು ಶ್ರೇಷ್ಠ ಗ್ರಂಥಕರ್ತರು ಎಂಬ ವಿಷಯವನ್ನು ಶ್ರೀಸತ್ಯಾಭಿವನತೀರ್ಥರು ತಮ್ಮ ಶ್ರೀಸತ್ಯನಾಥಗುರುಸ್ತೋತ್ರದಲ್ಲಿ ದಾಖಲಿಸಿದ್ದಾರೆ.

**ವಿದ್ಯಾನಿಧಿಮುನಿಂ ವಂದೇ ವಿದ್ಯಾನಿಧಿಮಹಾನಿಧಿಮ್ ।**
**ವಿದ್ಯಾನಿಧಿಗ್ರಂಥಕರ್ತೃವಿದ್ಯಾನಿಧಿಮಹಾಗುರುಮ್ ॥**

**ಸ್ವವ್ಯಾಖ್ಯಾನ-** ''ವಿದ್ಯಾನಿಧಿಭಗವನ್ಮಾಹಾತ್ಮ್ಯಪ್ರತಿಪಾದಕಗ್ರಂಥಕರ್ತಾರಶ್ಚ'' ಎಂದಿದ್ದಾರೆ.

ಮುಂದೆ ಇವರು ವಿಷ್ಣುಶಾಸ್ತ್ರಿಗಳೆಂಬ ತಮ್ಮ ಶಿಷ್ಯರಿಗೆ ಆಶ್ರಮವನ್ನಿತ್ತರು. ಶ್ರೀರಘುನಾಥತೀರ್ಥರೆಂದು ನಾಮಕರಣ ಮಾಡಿ ವೇದಾಂತಸಾಮ್ರಾಜ್ಯವನ್ನು ಮುಂದುವರೆಸಲು ಆಜ್ಞೆಯಿತ್ತರು. ನಂತರ ಯರಗೊಳದಲ್ಲಿ ವೃಂದಾವನಸ್ಥರಾದದ್ದು ಇತಿಹಾಸ.

## ಶ್ರೀವಿದ್ಯಾನಿಧಿಗಳ ವ್ಯಕ್ತಿತ್ವ :-

- ಶ್ರೀರಾಮಚಂದ್ರತೀರ್ಥರ ವಿದ್ಯಾಶಿಷ್ಯರು. ಅವರ ಅಚ್ಚುಮೆಚ್ಚಿನ ಮೇಧಾವಿ ಶಿಷ್ಯರು. ಸದಾಚಾರಸಂಪನ್ನರು. ಶ್ರೀರಾಮಚಂದ್ರತೀರ್ಥರಿಂದಲೇ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಸಾಕ್ಷಾತ್ ಶಿಷ್ಯರು ಶ್ರೀವಿದ್ಯಾನಿಧಿತೀರ್ಥರು.
- ''ಮಾಯಾವಾದಿಗಳಿಂದ ಹೊಂದಲು ಅಶಕ್ಯರು. ಅಷ್ಟಾಕ್ಷರ ಮೊದಲಾದ ಮಂತ್ರೋಪದೇಶಗಳಿಂದ ಸಜ್ಜನರನ್ನು ಸಂತೋಷಪಡಿಸಿದವರು. ಹೃದಯದಲ್ಲಿ ಸದಾ ಭಗವಂತನನ್ನು ಧ್ಯಾನಮಾಡುವವರು. ವಿದ್ಯೆಗಳಿಗೆ ನಿಧಿಯಂತಿರುವವರು. ಅನ್ವರ್ಥನಾಮರು. ಶ್ರೀರಾಮಚಂದ್ರತೀರ್ಥರ ನಂತರ ಪೀಠವನ್ನು ಅಲಂಕರಿಸಿದವರು.'' ಎಂಬ ಶ್ರೀವಿದ್ಯಾಧೀಶವಿಜಯದ ಉಲ್ಲೇಖ (5-36) ಅತ್ಯಂತ ಗಮನಾರ್ಹ.

- ಭಕ್ತಿಯಿಂದ ಪಂಚಮಸ್ಕಂಧ ಭಾಗವತದಿಂದ ಸ್ತುತಿಸಿದಾಗ ಭೂಗತವಾದ ಮಹಾಸಂಸ್ಥಾನದ್ಯೋತಕವಾದ ಶ್ರೀಮೂಲರಾಮ, ಶ್ರೀಮೂಲಸೀತಾ, ಶ್ರೀದಿಗ್ವಿಜಯರಾಮ, ಶ್ರೀವ್ಯಾಸಮುಷ್ಟಿಗಳೇ ಮೊದಲಾದ ಪ್ರತಿಮೆಗಳುಳ್ಳ ದೇವರ ಪೆಟ್ಟಿಗೆ, ಭೂಮಿ ಬಿರುಕು ಬಿಟ್ಟು ಯಾರಿಗೆ ಒಲಿದು ಬಂದಿತೋ ಅಂತಹ ಮಹನೀಯರು ಶ್ರೀವಿದ್ಯಾನಿಧಿತೀರ್ಥರು.
- ಚತುರ್ಯುಗಮೂರ್ತಿಗಳಾದ ಚತುರ್ಮುಖಬ್ರಹ್ಮಕರಾರ್ಚಿತ ಶ್ರೀಮೂಲಸೀತಾರಾಮರ ಪ್ರತಿಮೆಗಳನ್ನು ಪೂಜಿಸುವ ಮುಖ್ಯ ಅಧಿಕಾರಿಗಳು ದೇವತೆಗಳು ಎಂಬುದು ಸತ್ಸಂಪ್ರದಾಯಾಗತವಾದ ನಂಬಿಕೆ. ಈ ವಿಷಯವನ್ನು ಶ್ರೀರಾಯರ ಮಠದ ಅಧಿಕೃತ ಲೇಖಕರೆಲ್ಲ ಒಪ್ಪಿಕೊಂಡಿರುವರೆಂಬುದು ಗಮನಾರ್ಹ. ಯಾವ ವಿಘ್ನಗಳಿಲ್ಲದೇ ನಿರಾತಂಕವಾಗಿ ತಮ್ಮ ಜೀವಿತಾವಧಿ ಶ್ರೀಮೂಲಸೀತಾರಾಮಾದಿ ಪ್ರತಿಮೆಗಳನ್ನು ಪೂಜಿಸಿದ ದೈವಾಂಶರು ಶ್ರೀವಿದ್ಯಾನಿಧಿಗಳು.
- ಭಗವನ್ಮಾಹಾತ್ಮ್ಯ ಪ್ರತಿಪಾದಕವಾದ ಗ್ರಂಥಗಳಿಗೆ ವಾಖ್ಯಾನ ಮಾಡಿದ ಗ್ರಂಥಕರ್ತೃಗಳು ಶ್ರೀವಿದ್ಯಾನಿಧಿ ತೀರ್ಥರು. ಮೇಲೆ ತಿಳಿಸಿರುವ ಶ್ರೀಸತ್ಯಾಭಿನವತೀರ್ಥರ ವಾಕ್ಯಗಳೇ ಇದಕ್ಕೆ ಸಾಕ್ಷಿ. ಅದರಂತೆ ಅವರು ಎಂತಹ ಜ್ಞಾನಿಗಳಾಗಿದ್ದರೆಂಬುದಕ್ಕೆ ಶ್ರೀಸತ್ಯನಿಧಿವಿಲಾಸಕಾವ್ಯದಲ್ಲಿ ವರ್ಣಿಸಿರುವ ಈ ಶ್ಲೋಕವು ಗಮನಾರ್ಹ.

  **ತತೋ ರಾಮಚಂದ್ರಾಖ್ಯಭಿಕ್ಷೋರ್ವಿರೇಜೇ**<br>**ಪದಂ ಪ್ರಾಪ್ಯ ವಿದ್ಯಾನಿಧಿಃ ಸಂಯಮೀಂದ್ರಃ ।**<br>**ರಸಜ್ಞಾಗ್ರರಂಗಸ್ಥಲೋಲ್ಲಾಸಿವಿದ್ಯಾನಟೀ-**<br>**ನಾಟ್ಯರಜ್ಯತ್ಸುಧೀಸಭ್ಯಸಂಗಃ ॥ 3. 21.**

  (ನಂತರ ಯತೀಂದ್ರರಾದ ಶ್ರೀವಿದ್ಯಾನಿಧಿತೀರ್ಥರು ಶ್ರೀರಾಮಚಂದ್ರತೀರ್ಥರ ಸ್ಥಾನವನ್ನು (ಪೀಠವನ್ನು) ಅಲಂಕರಿಸಿ ಶೋಭಿಸಿದರು. ವಿದ್ವಾಂಸರೆಂಬ ಸಭಾಸದರು ಅವರ ಜಿಹ್ವಾಗ್ರರಂಗಸ್ಥಳದಲ್ಲಿ ಶೋಭಿಸುವ ವಿದ್ಯಾನಟಿಯ ನಾಟ್ಯದಲ್ಲಿ ಅನುರಕ್ತರಾದರು.)
- ಶ್ರೀಧ್ರುವನಿರ್ಮಿತ ಹಾಗೂ ಶ್ರೀಧ್ರುವಕರಾರ್ಚಿತ ವಾಸುದೇವ ಪ್ರತಿಮೆ (ಕೇಶವ)ಯನ್ನು ಸ್ವಪ್ನ ಸೂಚನೆಯಂತೆ ಭೀಮಾ ನದೀತೀರದಲ್ಲಿರುವ ಶ್ರೀಮಾಧವತೀರ್ಥರ ಸನ್ನಿಧಾನದಿಂದ ಕ್ಷೇತ್ರವೆನ್ನಿಸಿರುವ ಮಣ್ಣೂರಿನಲ್ಲಿ ಪ್ರತಿಷ್ಠಾಪಿಸಿದ ಪುಣ್ಯಮೂರ್ತಿಗಳು ಶ್ರೀವಿದ್ಯಾನಿಧಿತೀರ್ಥರು. ಶ್ರೀಆದ್ಯ ವರದಾಚಾರ್ಯರ ಮಕ್ಕಳಾದ ಶ್ರೀಆದ್ಯ ಕೇಶವಾಚಾರ್ಯಕೃತ ಸ್ತೋತ್ರವೇ ಇದಕ್ಕೆ ಸಾಕ್ಷಿ.
- ಯಾರ ಮಂತ್ರಾಕ್ಷತೆ ಬಲದಿಂದ ಶ್ರೀಆದ್ಯ ವರದಾಚಾರ್ಯರು ಜನಿಸಿ ಪ್ರಚಂಡವಿದ್ವಾಂಸರಾಗಿ ಶ್ರೀರಘೂತ್ತಮತೀರ್ಥರಿಗೆ ಪಾಠ ಹೇಳುವ ಭಾಗ್ಯ, ಮಹಾಭಾರತತಾತ್ಪರ್ಯನಿರ್ಣಯ ಮೊದಲಾದ ಗ್ರಂಥಗಳಿಗೆ ಟಿಪ್ಪಣಿ ಬರೆಯುವ ಸಾಮರ್ಥ್ಯವನ್ನು ಪಡೆದರೋ ಅಂಥವರ ಪರಮ ಗುರುಗಳು ಹಾಗೂ ವಿಶಿಷ್ಟ ಪವಾಡ ಪುರುಷರು ಶ್ರೀವಿದ್ಯಾನಿಧಿತೀರ್ಥರು.
- ಯಾರು ಮಹಾ ಅಪರೋಕ್ಷಜ್ಞಾನಿಗಳೆಂದು ಅನೇಕ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೋ, ಯಾರಿಗೆ ವರುಣಾದಿ ಜಲಾಭಿಮಾನಿಗಳು ಪ್ರತ್ಯಕ್ಷಕಂಡರೋ, ಯಾರು ಶ್ರೀಲಕ್ಷ್ಮೀನಾರಾಯಣ ಯತಿಗಳಿಗೆ ಶ್ರೀಪಾದರಾಜರೆಂಬ ಬಿರುದನ್ನು ದಯಪಾಲಿಸಿ ತಾವು ವೈಕುಂಠಯಾತ್ರೆ ಮಾಡುವಾಗ ಶ್ರೀಪಾದರಾಜರಿಗೆ ದರ್ಶನ ಕೊಟ್ಟು ಪುಷ್ಪವೃಷ್ಟಿ ಮಾಡಿದರೋ, ಯಾರು ಶ್ರೀವ್ಯಾಸರಾಜರಿಂದ

ಮಾನ್ಯರೋ, ಯಾರ ತಪಸ್ಸಿಗೆ ಮೆಚ್ಚಿ ಶ್ರೀವೇದವ್ಯಾಸದೇವರು (ವ್ಯಾಸಮುಷ್ಟಿ) ಕೂರ್ಮರೂಪದಿಂದ ಒಲಿದು ಬಂದನೋ, ಯಾರಿಂದ ಪ್ರಚಂಡ ವಿದ್ವಾಂಸರ ವೃಂದ ಬೆಳೆಯಿತೋ, ಯಾರು ಟಿಪ್ಪಣಿಕಾರರ ಪರಂಪರೆಗೆ ಕಾರಣೀಭೂತರಾದರೋ ಅಂತಹ ಮಹಾನುಭಾವರಾದ ಶ್ರೀರಘುನಾಥತೀರ್ಥರನ್ನು ಜಗತ್ತಿಗೆ ಕೊಟ್ಟ ಮಹನೀಯರು ಶ್ರೀವಿದ್ಯಾನಿಧಿತೀರ್ಥರು.

ಇಂತಹ ಮಹನೀಯರಾದ ಶ್ರೀವಿದ್ಯಾನಿಧಿತೀರ್ಥರ ಬಗ್ಗೆ ಶ್ರೀರಾಯರ ಮಠದವರು ಪ್ರತಿಬಾರಿಯೂ ತಮ್ಮ ಪರಂಪರೆಯನ್ನು ಹೇಳಿಕೊಳ್ಳುವಾಗಲೆಲ್ಲ ಒಂದಲ್ಲ ಒಂದು ರೀತಿಯಿಂದ ಅತ್ಯಂತ ನೀಚಶಬ್ದಗಳಿಂದ ನಿಂದಿಸುತ್ತ ವಿಪರೀತ ಹೇಳಿಕೆಗಳನ್ನು ನೀಡುತ್ತಾ ಶ್ರೀವಿದ್ಯಾನಿಧಿಗಳ ವ್ಯಕ್ತಿತ್ವಕ್ಕೆ ಕಳಂಕ ತರುವ ಪ್ರಯತ್ನವನ್ನು ಮಾಡುತ್ತಲೇ ಬರುತ್ತಿದ್ದಾರೆ. ಅವರು ಮಾಡುವ ಆರೋಪಣೆಗಳ ಬಗ್ಗೆ, ಅದಕ್ಕೆ ಅವರು ಕೊಡುವ ಆಧಾರಗಳ ಬಗ್ಗೆ ಸ್ವಲ್ಪ ವಿಮರ್ಶಿಸೋಣ.

ಶ್ರೀರಾಯರಮಠದ ಅಧಿಕೃತಲೇಖಕರು ತಮ್ಮ ಅನೇಕಪುಸ್ತಕಗಳಲ್ಲಿ (ಗುರುಚರಿತೆ, ಶ್ರೀಜಿತಾಮಿತ್ರತೀರ್ಥರು, ವಿಜಯೀಂದ್ರವಿಜಯ, ಮೂಲರಾಮಸ್ತುಮನ್ಮತೇ ಮುಂತಾದವು) ಕೊಟ್ಟ ಶ್ರೀವಿದ್ಯಾನಿಧಿಗಳ ಬಗ್ಗೆ ಚಿತ್ರಣ ಹೀಗಿವೆ-

❖ ಶ್ರೀವಿಧ್ಯಾನಿಧಿಗಳು ತೌಳವರು. (ತುಳುದೇಶ-ಉಡುಪಿ ಕಡೆಯವರು)

❖ ಶ್ರೀವಿದ್ಯಾನಿಧಿಗಳು ಉಡುಪಿಯ ಪೇಜಾವರ ಮಠದ ಸನ್ಯಾಸಿ.

❖ ಶ್ರೀವಿದ್ಯಾನಿಧಿಗಳು ಉಡುಪಿಯ ಶಿರೂರು ಮಠದ ಸನ್ಯಾಸಿ.

❖ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರ ಶಿಷ್ಯರಲ್ಲ. ಕೃತ್ರಿಮ ಸನ್ಯಾಸಿ. ಖಲ, ದುಷ್ಟ.

❖ ಯರಗೋಳದ ಪ್ರಮುಖರು ಶ್ರೀವಿದ್ಯಾನಿಧಿಗಳನ್ನೇ ಶ್ರೀವಿಬುಧೇಂದ್ರರೆಂದು ತಿಳಿದು ಬಿಟ್ಟರು.

❖ ಶ್ರೀವಿದ್ಯಾನಿಧಿಗಳು ಕೃಷ್ಣ ಎಂಬ ಒಬ್ಬ ತೌಳವ ಬ್ರಾಹ್ಮಣ. ಯರಗೋಳದ ಪ್ರಮುಖರಾದ, ಶ್ರೀರಾಮಚಂದ್ರತೀರ್ಥರ ಶಿಷ್ಯರಾದ ದುಷ್ಟರಾದ, ಕಟುಕರಾದ ಮಾಯಾವಾದಿಗಳಾದ, ಮಾಟ-ಮದ್ದು ಮಾಡುವ 63 ಜನಗಳು ಸೇರಿ ಕಾಶೀ ಯಾತ್ರೆಗೆ ಹೊರಟ್ಟಿದ್ದ ಈ ಬ್ರಾಹ್ಮಣನಿಗೆ ಸನ್ಯಾಸ ಕೊಟ್ಟು ಮೂಲಸೀತಾರಾಮರ ಪ್ರತಿಮೆಗಳನ್ನು ಕೊಟ್ಟುಬಿಟ್ಟರು.

  ವಿಜಯೀಂದ್ರವಿಜಯ ಸರ್ಗ 2, ಶ್ಲೋ 18 ರಿಂದ 28 ಹಾಗೂ ಸರ್ಗ 4ರಲ್ಲಿ ಶ್ಲೋಕ 40. ಗುರುಚರಿತೆ ಪುಟ 114 ರಿಂದ 116. ಶ್ರೀಜಿತಾಮಿತ್ರತೀರ್ಥರು ಪುಟ 16-17ಮುಂತಾದ ಪುಸ್ತಕಗಳನ್ನು ನೋಡುವುದು.

❖ ವಿದ್ಯಾನಿಧಿಗಳ ಕಾಲದಿಂದ ಉತ್ತರಾದಿಮಠ ಆರಂಭವಾಯಿತು. ಈ 63 ಜನ ಹಾಗೂ ಶ್ರೀವಿದ್ಯಾನಿಧಿ-ಗಳೂ ಸೇರಿ 64 ಜನರ ಒಂದು ಗುಂಪಾಯಿತು. 63 ಜನಗಳಿಗೆ ಮಠದ ಆಸ್ತಿಪಾಸ್ತಿಗಳಲ್ಲಿ ಸರಿ ಪಾಲು ದೊರಕಿತು. ಸ್ವಾಮಿಗಳು ಅವರ ವಶರಾಗಿ ಯಾವ ಸ್ವಾತಂತ್ರ್ಯವಿಲ್ಲದೇ ತಿರುಗಿದರು. ಈ 63 ಜನರೇ ಮುಂದೆ ಶಾನುಭೋಗದಾರರು. ಸ್ವಾಮಿಗಳಿಗೆ ತುಂಬಾ ಉಪಟಳ ಕೊಟ್ಟರು. ಮೊನ್ನೆ ಮೊನ್ನೆ ಶ್ರೀಸತ್ಯಧ್ಯಾನತೀರ್ಥರು ಈ ಶಾನುಭೋಗರ ಹುಟ್ಟಡಗಿಸಿ ಸ್ವತಂತ್ರರಾದರು.- ಗು.ಚ. ಪುಟ 115)

❖ ಶ್ರೀವಿದ್ಯಾನಿಧಿಗಳು ಹಂಸನಾಮಕ ಪರಮಾತ್ಮನ ಪರಂಪರೆಗೆ ದೊಡ್ಡ ಕಳಂಕ. ಕಪಟ ಸನ್ಯಾಸಿ.

– ರಾಯರ ಮಠದ ಅಧಿಕೃತ ಪ್ರಕಟಣೆಯಾದ ಸ್ತೋತ್ರಮುಕ್ತಾವಲಿ – ಪುಟ 642.

ಅಲ್ಲದೇ ಮಹಾಜ್ಞಾನಿಗಳಾದ ಶ್ರೀರಾಮಚಂದ್ರತೀರ್ಥರಿಗೆ ದುಷ್ಟರಾದ ಕಪಟಿಗಳಾದ, ಕಟುಕರಾದ, ಮಾಯಾವಾದದಲ್ಲಿ ಆಸಕ್ತರಾದ ಮಾಟ- ಮದ್ದು ಮಾಡುವ ಶಿಷ್ಯರಿದ್ದರೆಂದು ಊಹಿಸುವ ಈ ಅಧಿಕೃತ ಲೇಖಕರಿಗೆ ಏನನ್ನು ಬರೆಯುತ್ತಿದ್ದೇವೆ ಎಂಬ ಅರಿವೂ ಸಹ ಇಲ್ಲ.

ಎಲ್ಲದಕ್ಕಿಂತ ಆಶ್ಚರ್ಯವೆಂದರೆ ಇಡೀ ಯರಗೋಳಗ್ರಾಮದಲ್ಲಿ ಯಾರಿಗೂ ಸಹ ಶ್ರೀವಿಬುಧೇಂದ್ರರ ಮುಖಪರಿಚಯವೇ ಇಲ್ಲದೇ ಶ್ರೀವಿದ್ಯಾನಿಧಿಗಳನ್ನೇ ವಿಬುಧೇಂದ್ರರೆಂದು ತಿಳಿದು ಬಿಟ್ಟರೆಂಬ ಊಹೆ! ಅಂತೂ ಶ್ರೀವಿಬುಧೇಂದ್ರರ ಪರಿಚಯವೇ ಇಲ್ಲದ ಇಂತಹ ಅತಿ ದಡ್ಡರಾದ, ಅಯೋಗ್ಯರಾದ, ಅಪರಿಚಿತರಾದ ಶಿಷ್ಯರಿಗೆ ಮಹಾಸಂಸ್ಥಾನದ್ಯೋತಕವಾದ ದೇವರ ಪೆಟ್ಟಿಗೆಯನ್ನು ಶ್ರೀರಾಮಚಂದ್ರತೀರ್ಥರು ಒಪ್ಪಿಸಿದರು ಎಂದು ಕಲ್ಪಿಸುವುದು ಹಾಸ್ಯಾಸ್ಪದ. ವಿಬುಧೇಂದ್ರರ ಪರಿಚಯವೇ ಇಲ್ಲದವರಿಗೆ ದೇವರ ಪೆಟ್ಟಿಗೆ ಒಪ್ಪಿಸಲು ಹೇಳಿದರು ಎಂಬುದೇ ಕೂಡುವುದಿಲ್ಲ.

ಅದು ಏನೇ ಇರಲಿ ಈ ರೀತಿಯಲ್ಲಿ ಶ್ರೀರಾಯರ ಮಠದ ಅಧಿಕೃತ ಲೇಖಕರು ಬರೆಯುವುದಕ್ಕೆ ಏಕೈಕ ಮೂಲ ಆಧಾರ ಶ್ರೀವಿಜಯೀಂದ್ರವಿಜಯವೆಂಬ ಕಾವ್ಯ. ಇದೊಂದು ಅಪ್ರಾಮಾಣಿಕತಮವಾದ ಕೃತಿ. ಈ ಕೃತಿಯಲ್ಲಿರುವ ಅನೇಕ ಅಂಶಗಳನ್ನು ಶ್ರೀರಾಯರ ಮಠದವರೇ ಪ್ರಮಾಣವೆಂದು ಸ್ವೀಕರಿಸಿಲ್ಲ ಎಂಬುದು ಗಮನಾರ್ಹ.

**ಹೀಗಾಗಿ ಶ್ರೀವಿದ್ಯಾನಿಧಿಗಳ ಬಗ್ಗೆ ವಿಜಯೀಂದ್ರವಿಜಯವೆಂಬ ಕೃತಿಯಲ್ಲಿ ಚಿತ್ರಿಸಿರುವ ವಿಪರೀತಚಿತ್ರಣವನ್ನು ಸರ್ವಥಾ ನಂಬಲಾಗದು. ಈ ವಿಜಯೀಂದ್ರವಿಜಯದ ಬಗ್ಗೆ ಅದರ ಅಪ್ರಾಮಾಣಿಕತೆ ಹಾಗೂ ಕೃತ್ರಿಮತೆ ಬಗ್ಗೆ ಈಗಾಗಲೇ ವಿಮರ್ಶಿಸಲಾಗಿದೆ. (ನೋಡಿರಿ ಪುಟ ವಿಜಯೀಂದ್ರವಿಜಯ ವಿಮರ್ಶೆ)**

ಪ್ರಸ್ತುತವಿಷಯಕ್ಕೆ ಸಂಬಂಧಪಟ್ಟ ಕೆಲ ಅಂಶಗಳನ್ನು ನೋಡೋಣ-

- ❖ ವಿಜಯೀಂದ್ರವಿಜಯದಲ್ಲಿ ಶ್ರೀವಿದ್ಯಾನಿಧಿಗಳು ಶಿರೂರು ಅಥವಾ ಪೇಜಾವರಮಠದ ಸನ್ಯಾಸಿಗಳು ಎಂಬ ವಿಷಯ ಇಲ್ಲದಿರುವುದು ಗಮನಾರ್ಹ.
- ❖ ಗುರುಚರ್ಯಾಗ್ರಂಥದಲ್ಲೂ ಶಿರೂರು ಅಥವಾ ಪೇಜಾವರಮಠದವರು ಎಂಬ ಉಲ್ಲೇಖವಿಲ್ಲ. ಹೀಗಾಗಿ ಈ ಆರೋಪಣೆ ನಿರಾಧಾರವಾದದ್ದು.
- ❖ ಯರಗೋಳ ಇದೊಂದು ಚಿಕ್ಕ ಗ್ರಾಮ. ಆ ಗ್ರಾಮಕ್ಕೆ ಬಂದ ಕೃಷ್ಣನೆಂಬ ತುಳು ಬ್ರಾಹ್ಮಣನಿಗೆ ಆ ಊರಿನವರಾದ ಶ್ರೀರಾಮಚಂದ್ರತೀರ್ಥರ ದುಷ್ಟಶಿಷ್ಯರು ಸನ್ಯಾಸಿಯನ್ನು ಮಾಡಿ ಮೂಲರಾಮನ ಪೆಟ್ಟಿಗೆ ಕೊಟ್ಟರು ಎಂದು ಉಲ್ಲೇಖಿಸುವ ವಿಜಯೀಂದ್ರವಿಜಯಕಾರರು ಅದೇ ಕಾವ್ಯದಲ್ಲಿ ಮತ್ತೊಂದೆಡೆ ಶ್ರೀವಿದ್ಯಾನಿಧಿಗಳನ್ನೇ ಶ್ರೀವಿಬುಧೇಂದ್ರರೆಂದು ತಿಳಿದು ದೇವರ ಪೆಟ್ಟಿಗೆಯನ್ನು ಕೊಟ್ಟುಬಿಟ್ಟರೆಂದು ಉಲ್ಲೇಖಿಸುತ್ತಾರೆ. ಇದು ವ್ಯಾಹತ. ಒಂದು ವೇಳೆ ಸನ್ಯಾಸಕೊಟ್ಟವರು ಬೇರೆ, ಪೆಟ್ಟಿಗೆ ಕೊಟ್ಟವರೇ ಬೇರೆ ಎಂದು ವಾದಿಸುವುದಾದರೆ ಆ ಗ್ರಾಮದಲ್ಲೇ ನಡೆದ ಸನ್ಯಾಸ ಸ್ವೀಕಾರದ ಘಟನೆ ಆ ಚಿಕ್ಕ ಗ್ರಾಮದಲ್ಲಿಯೇ ಇರುವ, ''ದೇವರ ಪೆಟ್ಟಿಗೆ ಸ್ಥಾಪಿಸಿ ಕಾಪಾಡಿರಿ'' ಎಂದು ಅಪ್ಪಣೆ ಪಡೆದ ಶ್ರೀರಾಮಚಂದ್ರತೀರ್ಥರ ಶಿಷ್ಯರಿಗೆ ಮತ್ತು ನೇಮಿಸಿದ ಗ್ರಾಮಪ್ರಮುಖರಿಗೆ ಗೊತ್ತಾಗಲೇ ಇಲ್ಲ ಎಂಬುದು ಸಾಧ್ಯವೇ ಇಲ್ಲ. ಇದು ಕೇವಲ ಮಧ್ವಕವಿಯ ಕಲ್ಪನೆ ಮಾತ್ರ.
- ❖ ಇನ್ನು ಶ್ರೀವಿದ್ಯಾನಿಧಿಗಳು ತೌಳವರೆಂಬ ವಿಷಯ. ಗುರುಚರ್ಯಾ ಗ್ರಂಥದಲ್ಲಿ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರ ಶಿಷ್ಯರು, ಅವರಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದವರು

ಎಂದಿದೆ. ''ಸದಾಚಾರಸಂಪನ್ನರು, ಅತಿಬುದ್ಧಿವಂತರು, ವಿಶ್ವಾಸಾರ್ಹರು, ಸಂಸ್ಥಾನಕ್ಕೆ ಅರ್ಹರು'' ಎಂಬ ಮಾತನ್ನು ಸ್ವಯಂ ಶ್ರೀರಾಮಚಂದ್ರತೀರ್ಥರೇ ಆಡಿದರೆಂಬ ಉಲ್ಲೇಖವೂ ಸ್ಪಷ್ಟವಿದೆ. ಈ ಸಂದರ್ಭದಲ್ಲೇ ''ತುಳುವರು'' ಎಂಬ ಶಬ್ದ ಬಂದಿದೆ.

**ತದಾ ಅಸ್ಮನ್ನಿಕಟೇ ಗ್ರಂಥವ್ಯಾಸಂಗಾರ್ಥಂ ಸಮಾಗತಃ ।**
**ಸದಾಚಾರಾದಿಸಂಪನ್ನೋ ತುಳವೋ ಬುದ್ಧಿಮಾನಪಿ ।**
**ವಿಶ್ವಾಸವಾನಯಂ ವಿದ್ಯಾನಿಧಿಃ ಸಂಸ್ಥಾನಮರ್ಹತಿ ॥**

ಈ ಗುರುಚರ್ಯಾ ಎಂಬ ಗ್ರಂಥದ ಹಸ್ತಪ್ರತಿ ನಂಜನಗೂಡಿನಲ್ಲಿರುವ ರಾಯರ ಮಠದ ಗ್ರಂಥಾಲಯದಲ್ಲಿದೆ ಎಂದು ದಿ.ಬಿ.ಎನ್.ಕೆ ಹೇಳಿದ್ದಾರೆ. ಮೂಲಹಸ್ತಪ್ರತಿ ಇದುವರೆಗೆ ಹೊರಬಂದಿಲ್ಲ. ಅನೇಕ ಪ್ರಾಚೀನಗ್ರಂಥಗಳಲ್ಲಿ ಶ್ರೀರಾಯರಮಠದವರು ಹೇಗೆ ತಮ್ಮ ಹಸ್ತಕ್ಷೇಪ ಮಾಡಿ ಪಾಠಗಳನ್ನು ಶ್ಲೋಕಗಳನ್ನು, ನುಡಿಗಳನ್ನು ತಿದ್ದಿದ್ದಾರೆ, ತೆಗೆದು ಹಾಕಿದ್ದಾರೆ ಎಂಬುದನ್ನು ಇದೇ ಪುಸ್ತಕದಲ್ಲಿ ಹಿಂದಿನ ಅನೇಕ ಪುಟಗಳಲ್ಲಿ ತೋರಿಸಿಕೊಟ್ಟಿದ್ದೇವೆ.

ಹೀಗಾಗಿ ''ತುಳವೋ ಬುದ್ಧಿಮಾನಪಿ'' ಎಂಬಲ್ಲಿ ''ತುಳವೋ'' ಎಂಬ ಶಬ್ದವನ್ನು ಸೇರಿಸಿರಬಹುದು. ''ಅತುಳಬುದ್ಧಿಮಾನಪಿ''(ಅತುಲವಾಕ್ ಬುದ್ಧಿ)ಎಂಬುದಾಗಿ ಮೂಲಪಾಠವಿರಬಹುದು.

ಬೇಡ, ತುಳವೋ ಎಂಬುದೇ ಶುದ್ಧಮೂಲಪಾಠವೆಂದಿಟ್ಟುಕೊಂಡರೂ ಸಹ ತಪ್ಪೇನಿದೆ? ಒಂದು ವೇಳೆ ಶ್ರೀವಿದ್ಯಾನಿಧಿಗಳು ತುಳುದೇಶದವರೆಂದೇ ಆದರೂ ಏನು ಬಾಧಕ? ಘಟ್ಟದ ಮೇಲಿರುವ ಯತಿಗಳಲ್ಲಿ ತುಳುದೇಶದ ಅನೇಕರು ಶಿಷ್ಯತ್ವವನ್ನು ವಹಿಸಿ ಶಾಸ್ತ್ರಾಧ್ಯಯನದಲ್ಲಿ ತೊಡಗಿದ್ದ ದಾಖಲೆಗಳು ಇತಿಹಾಸದಲ್ಲಿ ಸಾಕಷ್ಟಿವೆ. ಉದಾಹರಣೆಗೆ ಶ್ರೀವ್ಯಾಸರಾಜರಲ್ಲಿ ತುಳುದೇಶದವರೇ ಆದ ಶ್ರೀವಾದಿರಾಜರು ಶಿಷ್ಯರಾಗಿ ಇರಲಿಲ್ಲವೇ? ಶ್ರೀಸತ್ಯಧ್ಯಾನರಲ್ಲಿ ಶ್ರೀವಿದ್ಯಾಮಾನ್ಯರೇ ಮೊದಲಾದ ಅನೇಕ ತುಳುದೇಶದವರು ಶಿಷ್ಯರಾಗಿರಲಿಲ್ಲವೇ? ಹೀಗೆ ಪರಸ್ಪರ ಬಾಂಧವ್ಯ ಮೊದಲಿನಿಂದಲೂ ಕಂಡು ಬರುತ್ತದೆ. ಅದರಂತೆ ತುಳುವರಾದ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರಲ್ಲಿ ಶಿಷ್ಯತ್ವವಹಿಸಿದ್ದರಲ್ಲಿ ಹಾನಿಯೇನಿದೆ? ಅತಿಬುದ್ಧಿವಂತರಾದ, ಸದಾಚಾರಸಂಪನ್ನರಾದ, ಶಾಸ್ತ್ರಾಧ್ಯಯನವನ್ನು ಮಾಡಿ ವಿಶ್ವಾಸಾರ್ಹರಾದ ಶ್ರೀವಿದ್ಯಾನಿಧಿಗಳನ್ನು ಸಂಸ್ಥಾನಕ್ಕೆ ಅರ್ಹರೆಂದು ಶ್ರೀರಾಮಚಂದ್ರತೀರ್ಥರು ಬಯಸಿ ಆಜ್ಞೆ ಮಾಡಿದರು ಎಂಬ ಉಲ್ಲೇಖ ಗುರುಚರ್ಯೆಯಲ್ಲಿ ಸ್ಪಷ್ಟವಿದೆ. ಇದರಿಂದ ಶ್ರೀವಿದ್ಯಾನಿಧಿಗಳು ಶ್ರೀರಾಮಚಂದ್ರತೀರ್ಥರ ಶಿಷ್ಯರೆಂಬುದರಲ್ಲಿ ಯಾವ ಸಂದೇಹವಿಲ್ಲ.

ಹಿಂದಿನ ಪೀಠಾಧಿಪತಿಗಳಾಗಿದ್ದ ಶ್ರೀಸುಯತೀಂದ್ರತೀರ್ಥರಿಗೆ ಎಲ್ಲಿ ಯಾವಾಗ ಯಾರಿಂದ ಪಟ್ಟಾಭಿಷೇಕವಾಯಿತು? ತಾವೇ ಪಟ್ಟಾಭಿಷೇಕ ಮಾಡಿಕೊಂಡದ್ದೇಕೆ? ಅಂದಮಾತ್ರಕ್ಕೆ ಅವರು ಪೀಠಾಧಿಪತಿಗಳಾಗಿರಲಿಲ್ಲ ಅಥವಾ ಉತ್ತರಾಧಿಕಾರಿಗಳಾಗಿ ಇರಲಿಲ್ಲ ಎಂದು ಹೇಳಲಾಗುವುದಿಲ್ಲ. (ಪೀಠದ ಹಸ್ತಾಂತರ ನಾನಾಬಗೆಯ ಕ್ರಮದಲ್ಲಿ ಇದೆ ಎನ್ನುವುದನ್ನು ಮರೆಯಲಾಗದು).

ನಿಜ, ಇವೆಲ್ಲಾ ರಾಯರಮಠಕ್ಕೆ ಅವರ ಪರಂಪರೆಗೆ ಸಂಬಂಧಪಟ್ಟ ವಿಷಯಗಳು. ನಾವು ಚಕಾರ ಎತ್ತಬಾರದು ಎಂಬ ತಿಳುವಳಿಕೆ ನಮಗೆ ಇದೆ. ಆದರೆ ಶ್ರೀಮದುತ್ತರಾದಿಮಠದವರು ಅವರ ಉತ್ಕೃಷ್ಟತೆಯನ್ನು ಸಾರುವ ಹಾಗೂ ಪರಂಪರೆಯಾಗಿ ಪೂಜೆಗೊಳ್ಳುತ್ತಾ ಬಂದಿರುವ ಶ್ರೀಮೂಲಸೀತಾಸಮೇತ ಮೂಲರಾಮಾದಿಪ್ರತಿಮೆಗಳ ಬಗ್ಗೆ ಆಧಾರಗಳನ್ನು ದಾಖಲಿಸಿ ಸಸೀತಾಮೂಲರಾಮಾರ್ಚಾ ಎಂಬ ಪುಸ್ತಕವನ್ನು ಹೊರತಂದರು. ಆ ಮೂಲಕ ತಮ್ಮ ಮಠದ ಶಿಷ್ಯರಿಗೆ ಈ ವಿಷಯ ತಿಳಿಸುವ ಪ್ರಯತ್ನವನ್ನು

ಪ್ರಾಮಾಣಿಕವಾಗಿ ಮಾಡಿದರು. ಆಗ ಅದನ್ನು ಸಹಿಸಲಾರದೇ ಮೂಲರಾಮಸ್ತುಮನ್ಮತೇ ಎಂಬ ಪುಸ್ತಕದಲ್ಲಿ ವೈಯಕ್ತಿಕ ನಿಂದೆ ಹಾಗೂ ಅಪ್ರಸ್ತುತ, ಅಪ್ರಾಮಾಣಿಕ ವಿಷಯಗಳನ್ನು ಮನಸ್ಸಿಗೆ ಬಂದಂತೆ ಚಿತ್ರಿಸಿ ಪ್ರಚೋದನಕಾರಿಯಾಗುವ ಪದ-ವಾಕ್ಯಗಳನ್ನು ಪ್ರಯೋಗಿಸಿ ಅಮಾಯಕ ಜನಗಳಿಗೆ ವಂಚನೆ ಮಾಡಿದ್ದಕ್ಕೆ ಅವರು ಕೊಟ್ಟ ಆಧಾರಗಳಲ್ಲಿರುವ ಅನೇಕ ದೋಷಗಳನ್ನು ಹಾಗೂ ವಸ್ತುಸ್ಥಿತಿಯನ್ನು ಬಹಿರಂಗ ಮಾಡಲೇಬೇಕಾದ ಅನಿವಾರ್ಯತೆ ಬಂದೊದಗಿದೆ. ವಾಚಕರು ಈ ವಿಷಯವನ್ನು ಗಮನಿಸಬೇಕು.

❖ ಶ್ರೀವಿದ್ಯಾನಿಧಿಗಳು ರಾಮಚಂದ್ರತೀರ್ಥರ ಶಿಷ್ಯರು ಎಂಬುದಕ್ಕೆ ಆಧಾರಗಳು ಈ ಕೆಳಕಂಡಂತೆ ಇವೆ-

ಅ. ಶ್ರೀವಿದ್ಯಾಧೀಶವಿಜಯ (ಸ್ವಕೃತ ಶಬ್ದಾರ್ಥದೀಪಿಕಾ ವ್ಯಾ.)-

**ಅದ್ವೈತಿದುರ್ಮದಪಿಶಾಚಜನಾತಿದೂರಃ**
**ಸ್ವರ್ಣೋಪಯೋಗಪರಿತುಷ್ಟನಿರಂಜನೌಘಃ ।**
**ಸ್ವಾಂತಸ್ಫುರದ್ದಶಮತೀಶಪದಾಬ್ಜಮುದ್ರೋ**
**ವಿದ್ಯಾನಿಧಿರ್ವಿಲಸತಿ ಸ್ಮ ತದನ್ವವನ್ಯಾಮ್ ॥ 5.36**

ವಿದ್ಯಾನಿಧಿಃ ವಿದ್ಯಾನಿಧಿನಾಮಕಗುರುಃ ತದನು ರಾಮಚಂದ್ರಾನಂತರಂ ಅವನ್ಯಾಂ ವಿಲಸತಿ ಸ್ಮ ।

ಆ. ಶ್ರೀಸತ್ಯನಿಧಿವಿಲಾಸಃ -

**ತತೋ ರಾಮಚಂದ್ರಾಖ್ಯಭಿಕ್ಷೋರ್ವಿರೇಜೇ**
**ಪದಂ ಪ್ರಾಪ್ಯ ವಿದ್ಯಾನಿಧಿಃ ಸಂಯಮೀಂದ್ರಃ ।**
**ರಸಜ್ಞಾಗ್ರರಂಗಸ್ಥಲೋಲ್ಲಾಸಿವಿದ್ಯಾನಟೀ-**
**ನಾಟ್ಯರಜ್ಯತ್ಸುಧೀಸಭ್ಯಸಂಗಃ ॥ 3.21 ॥**

ಇ. ಗುರುಚರ್ಯಾ -

**ತದಾಽಸ್ಮನ್ನಿಕಟೇ ಗ್ರಂಥವ್ಯಾಸಂಗಾರ್ಥಂ ಸಮಾಗತಃ ।**
**ಸದಾಚಾರಾದಿಸಂಪನ್ನೋಽತುಲವಾಕ್ (ತುಳವೋ) ಬುದ್ಧಿಮಾನಪಿ ।**
**ವಿಶ್ವಾಸವಾನಯಂ ವಿದ್ಯಾನಿಧಿಃ ಸಂಸ್ಥಾನಮರ್ಹತಿ ॥**

ಈ. ಶ್ರೀಪೂರ್ಣಬೋಧಗುರುವಂಶಕಥಾಕಲ್ಪತರು -

**ತೇಷಾಂ ಮಾರ್ಗಂ ನಿರೀಕ್ಷ್ಯಾಥ ರಾಮಚಂದ್ರಯತೀಶ್ವರಾಃ ।**
**ವಿದ್ಯಾನಿಧಿಮುನಿಭ್ಯಸ್ತೇ ಸನ್ನ್ಯಾಸಂ ದದುರಾದರಾತ್ ॥**

ಉ. ಸತ್ಯಬೋಧವಿಜಯಃ -

**ಅಭಾವಿ ವಿದ್ಯಾನಿಧಿನಾ ಪ್ರಭಾವಿನಾಽಥರಾಮಚಂದ್ರಾರ್ಯಭುಜಾಂಬುರುಡ್‌ಭುವಾ**
**ಯದೀಯಜಿಹ್ವಾಗ್ರರಸೋಲ್ಲಸದ್ಗಿರಾ ಸುನರ್ತಕೀನರ್ತನತೋಷಿತಾ ಬುಧಾಃ - 1.49**

ಊ. ಗುರುವಂಶಾವಲಿಃ -

**ರಾಮಚಂದ್ರಸ್ತತೋ ಜಜ್ಞೇ ಜಾತೋ ವಿದ್ಯಾನಿಧಿಸ್ತತಃ । ಶ್ಲೋ. 27**

ಎ. ಶ್ರೀವಿಜಯದಾಸರ ಕೃತಿ -

**ಸಂತರನು ಸ್ಮರಿಸಿ ಜನರು .....**

..............................

ರಾಮಚಂದ್ರ ನಂದ ಭಾಸುರ ವಿದ್ಯಾನಿಧಿ ...

ಐ) ಇದರಂತೆ ಮಹಿಪತಿದಾಸರು, ಪ್ರಸನ್ನವೆಂಕಟದಾಸರು, ಗಲಗಲಿ ಅವ್ವನವರು, ವಿಜಯದಾಸರ ಸಹೋದರರಾದ ಹಯವದನವಿಠ್ಠಲರು, ಜಗನ್ನಾಥದಾಸರು ಮೊದಲಾದ ಪ್ರಸಿದ್ಧ ಹರಿದಾಸರು ಗುರುಸಂತತಿಗೆ ನಮಿಸುವಾಗ ತಮ್ಮ ಕೃತಿಗಳಲ್ಲಿ ಶ್ರೀವಿದ್ಯಾನಿಧಿತೀರ್ಥರನ್ನು ಶ್ರೀರಾಮಚಂದ್ರತೀರ್ಥರ ಪರಂಪರೆಗೆ ಸೇರಿದವರೆಂದು ಅವರ ಶಿಷ್ಯರೆಂದು ಉಲ್ಲೇಖಿಸಿರುವುದನ್ನು ಕಾಣಬಹುದಾಗಿದೆ.

ಒ. ಮೂ.ಮತೇ ಲೇಖಕರೇ ಆಧಾರ ಎಂದು ಭಾವಿಸಿರುವ ಗೆಜೆಟ್ ನಲ್ಲಿ ಹೀಗಿದೆ- ""One represented by SENIOR Sri Vibudhendra and other by the JUNIOR Sri Vidyanidhi. Sri Vibudhendra"s branch was subsequently called as Sri Raghavendra Swamy matha..."

## 63 ಜನ ಶಾನುಭೋಗರ ವಿಚಾರ

ಮೂ.ಮತೇ ಲೇಖಕರು ಹಾಗೂ ಇನ್ನಿತರರು ಅನೇಕ ಕಡೆಗೆ ಶ್ರೀವಿದ್ಯಾನಿಧಿಗಳು 63 ಜನ ಮಠದ ಕಾರ್ಮಿಕರೊಂದಿಗೆ ಮಠದ ಆದಾಯದಲ್ಲಿ ಪಾಲು ನೀಡುವ ಒಪ್ಪಂದ ಮಾಡಿಕೊಂಡು ಮೂಲರಾಮಾದಿ ಸಂಸ್ಥಾನಪ್ರತಿಮೆಗಳನ್ನು ವಂಚನೆಯಿಂದ ಪಡೆದುಕೊಂಡರು. ಅವರೇ ಶಾನುಭೋಗರು. ಉತ್ತರಾದಿಮಠ ಅವರ ಅಧೀನದಲ್ಲಿಯೇ ಇದ್ದ ಮಠ. ಇದು ಶಾನುಭೋಗರ ಮಠ ಇತ್ಯಾದಿಯಾಗಿ ಆಪಾದನೆಯನ್ನು ಮಾಡಿದ್ದಾರೆ. ಅದು ನಿರಾಧಾರವಾದ ಆಪಾದನೆ ಎಂಬುದನ್ನು ವಿವರಿಸುತ್ತಿದ್ದೇವೆ.

ಈ ಶಾನುಭೋಗರ ವಿಚಾರ ಯಾವುದೇ ಪ್ರಾಚೀನಕೃತಿಗಳಲ್ಲಿ ಅಥವಾ ಸಮಕಾಲೀನ ವಿಜಯಕಾವ್ಯಗಳಲ್ಲಿ ಕಾಣಸಿಗುವುದಿಲ್ಲ. ಶ್ರೀರಘೂತ್ತಮತೀರ್ಥರ ಕಾಲದಲ್ಲಿ ಮಠದ ಪರಿವಾರದಲ್ಲಿ ಒಂದು ವಿಶಿಷ್ಟವ್ಯವಸ್ಥೆ ಮಾಡಲಾದದ್ದು ನಿಜ. ಮುಂದೆ ಶ್ರೀಸತ್ಯಾಭಿನವರ ಕಾಲದಲ್ಲಿ ಈ ವ್ಯವಸ್ಥೆಯಲ್ಲಿ ಅನೇಕ ಮಾರ್ಪಾಟುಗಳಾದವು. ಶ್ರೀಉತ್ತರಾದಿಮಠದಲ್ಲಿ ಕಸಗುಡಿಸುವವನಿಂದ ಹಿಡಿದು ಎಲ್ಲ ಕೆಲಸಗಳನ್ನು ಮಾಡಲು ಒಬ್ಬಬ್ಬರನ್ನು ನೇಮಿಸಲಾಯಿತು. ಅದಕ್ಕೆ ತಕ್ಕ ಸೌಕರ್ಯವನ್ನು ಅವರಿಗೆ ಮಾಡಿಕೊಟ್ಟು ಪೀಠಾಧಿಪತಿಗಳು ನಿರಂತರ ಪಾಠ-ಪ್ರವಚನ, ಜಪ-ತಪ, ಪೂಜೆ, ಪರವಾದಿನಿಗ್ರಹ, ಗ್ರಂಥರಚನೆ ಮುಂತಾದ ಮುಖ್ಯಕಾರ್ಯಗಳಲ್ಲಿ ನಿಶ್ಚಿಂತೆಯಿಂದ ನಿರತರಾಗುವಂತೆ ಮಾಡಲಾದ ವ್ಯವಸ್ಥೆ ಇದು. ಶ್ರೀಮದಾಚಾರ್ಯರ ಆಜ್ಞಾಪರಿಪಾಲನೆಗಾಗಿ ನಿರಂತರ ಸಂಚಾರ ಮಾಡುವ ಮಹಾಸಂಸ್ಥಾನವಾದ ಕಾರಣ ದಿಗ್ವಿಜಯದಲ್ಲಿ ಸಂಸ್ಥಾನಕ್ಕೆ ಬಳುವಳಿಯಾಗಿ ಬಂದ ಆಸ್ತಿಪಾಸ್ತಿಗಳನ್ನು ನೋಡಿಕೊಳ್ಳಲು ಅಲ್ಲಲ್ಲಿ ಅನೇಕಶಿಷ್ಯರನ್ನು ನೇಮಕ ಮಾಡಿದ್ದು ಸಹಜ.

ಕಾಲಕ್ರಮೇಣ ಕೆಲ ಸ್ವಾರ್ಥಿಗಳಾದ ಶಿಷ್ಯರು ಆ ಆಸ್ತಿಪಾಸ್ತಿಗಳನ್ನು ಶ್ರೀಮಠದ ವರಮಾನವನ್ನು ತಮ್ಮದಾಗಿಸಿಕೊಂಡರು. ಶ್ರೀಗಳವರು ಅವರ ಮೇಲೆ ಚಕಾರ ಎತ್ತಿದಾಗ ಪ್ರತಿಬಂದಿಯಾಗಿ ನಾನಾರೀತಿ ನ್ಯಾಯಾಲಯದ ಕಟ್ಟೆ ಹತ್ತಿ ಕಿರುಕುಳ ಕೊಡಲು ಪ್ರಾರಂಭಿಸಿದರು. ಇದೆಲ್ಲಾ ನಡೆದದ್ದು ಇತ್ತೀಚೆಗೆ ಮಾತ್ರ ಎಂಬುದು ಗಮನಾರ್ಹ. ಈ ಶ್ಯಾನುಭೋಗರೆಂಬ ಶ್ರೀಮಠದ ಶಿಷ್ಯರಲ್ಲಿ ಅನೇಕರು ಶ್ರೀಮಠಕ್ಕಾಗಿ ಪ್ರಾಣಕೊಡಲು ಮುಂದೆ ಬಂದದ್ದೂ ಉಂಟು. ಕೆಲವರು ದ್ರೋಹಬಗೆದರು. ಇದು ವಸ್ತುಸ್ಥಿತಿ. ಶ್ರೀವಿದ್ಯಾನಿಧಿತೀರ್ಥರಿಂದ

ಪ್ರಾರಂಭಿಸಿ ಎಲ್ಲ ಪೀಠಾಧಿಪತಿಗಳು ಈ ಶ್ಯಾನುಭೋಗರ ಕೈಯಲ್ಲಿದ್ದು ಏನೂ ಹಕ್ಕಿಲ್ಲದವರಾಗಿದ್ದರು ಎಂಬ ಮಾತು ಹಸೀ ಸುಳ್ಳು. ಅಪ್ರಾಮಾಣಿಕ.

ಶ್ರೀಮದುತ್ತರಾದಿಮಠದ ಮಹಾಪೀಠದಲ್ಲಿ ವಿರಾಜಮಾನರಾಗಿದ್ದ ಅನೇಕ ಪೀಠಾಧಿಪತಿಗಳ ಸಲಹೆ ಅಥವಾ ಆಜ್ಞೆಗಳನ್ನು ಪಾಲಿಸಿಕೊಂಡು ರಾಜ-ಮಹಾರಾಜರುಗಳಿದ್ದದ್ದು ಇತಿಹಾಸಪುಟಗಳಲ್ಲಿ ಇಂದಿಗೂ ಸ್ಫುಟವಾಗಿ ಕಾಣಬಹುದಾಗಿದೆ. ಆ ಮಹಾರಾಜರುಗಳ ಸಹಾಯದಿಂದ ಈ ಶ್ಯಾನುಭೋಗರ ಹುಟ್ಟಗಡಿಸುವ ಕೆಲಸವನ್ನು ಅನಾಯಾಸವಾಗಿ ಎಂದೋ ಮಾಡಬಹುದಿತ್ತು. ಆದರೆ ಅವರ ಉಪಟಳ ಶ್ರೀಸತ್ಯಬೋಧರು ವೃಂದಾವನಸ್ಥರಾದ ಮೇಲೂ ಇರಲಿಲ್ಲವೆಂಬುದೇ ತಥ್ಯ. ಶ್ರೀಸತ್ಯಧರ್ಮರ, ಶ್ರೀಸತ್ಯವೀರರ ಹಾಗೂ ಶ್ರೀಸತ್ಯಧೀರರ ಕಾಲದಲ್ಲಿ ಆದ ಕೆಲ ಘಟನೆಗಳನ್ನೇ (ನ್ಯಾಯಾಲಯದಲ್ಲಿ) ಶ್ರೀರಾಯರ ಮಠದವರೇ ಮೊದಲಾದವರು ತಮ್ಮ ಪುಸ್ತಕಗಳಲ್ಲಿ ಪ್ರಕಟಿಸಿ ಅದಕ್ಕೆ ವಿಕೃತರೂಪ ಕೊಟ್ಟು ಅಪಪ್ರಚಾರ ಮಾಡುತ್ತಿದ್ದಾರೆ.

ಶ್ರೀವಿದ್ಯಾನಿಧಿಗಳ ಕಾಲದಲ್ಲಿ 63 ಜನರ ಗುಂಪಿತ್ತು, ಶ್ರೀಮಠದ ಆಸ್ತಿಯಲ್ಲಿ ಸಮಪಾಲನ್ನು ಮಾಡಿಕೊಂಡರು, ಶ್ರೀಗಳವರನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದರು ಎಂಬೆಲ್ಲ ಕಥೆ ಶುದ್ಧ ಸುಳ್ಳಿನ ಕಂತೆ. ಇದಕ್ಕೆ ಯಾವುದೇ ಆಧಾರಗಳಿಲ್ಲ. ಇದು ಕೇವಲ ದುರಾಗ್ರಹಪೂರ್ವಕವಾದ ಊಹೆ ಮಾತ್ರ.

ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದಾಗ ಶ್ರೀವಿದ್ಯಾನಿಧಿಗಳನ್ನು ಅನೇಕ ಪೀಠಾಧಿಪತಿಗಳು, ಕವಿಗಳು, ಮಹನೀಯರು, ಟಿಪ್ಪಣಿಕಾರರು, ಹರಿದಾಸರುಗಳು ಹಂಸನಾಮಕಪರಮಾತ್ಮನ ಗುರುಪರಂಪರೆಯಲ್ಲಿ ಅನುಮೋದಿಸಿ ಶ್ರೇಷ್ಠವಿದ್ವಾಂಸರೆಂದು, ಗ್ರಂಥಕಾರರೆಂದು, ವಿದ್ಯೆಗಳಿಗೆ ನಿಧಿಗಳೆಂದು ಶ್ರೀರಾಮಚಂದ್ರತೀರ್ಥರ ಶಿಷ್ಯರೆಂದು ಕೊಂಡಾಡಿರುವಾಗ, ಗುರುಗಳೆಂದು ಸ್ವೀಕರಿಸಿರುವಾಗ ಶ್ರೀರಾಯರ ಮಠದವರು ಅವರನ್ನು ವಿಪರೀತವಾಗಿ ಚಿತ್ರಿಸಿ ನಿಂದಿಸುತ್ತಿರುವುದು ದೊಡ್ಡ ಅಪರಾಧ. ಸ್ವೋತ್ತಮದ್ರೋಹ.

* * * *

# ಅನುಬಂಧ 2:
# ವಿಜಯೀಂದ್ರವಿಜಯ ಕಾವ್ಯವನ್ನು ನಂಬದಿರಲು ಕೆಲವು ಕಾರಣಗಳು

–ಡಾ|| ಶ್ರೀನಿವಾಸ ಹಾವನೂರ

(ಡಾ|| ಶ್ರೀನಿವಾಸ ಹಾವನೂರವರನ್ನು ದಿ. 21-10-2009 ರಂದು ಭೇಟಿಯಾಗಿದ್ದೆವು. ಅವರು 2002 ಆಗಸ್ಟ್ ಹಾಗೂ ಸೆಪ್ಟೆಂಬರ್ ತಿಂಗಳ ತತ್ವವಾದ ಪತ್ರಿಕೆಯಲ್ಲಿ ಶ್ರೀವಿಜಯೀಂದ್ರವಿಜಯದ ಬಗ್ಗೆ ಬರೆದ ಲೇಖನದ ಬಗ್ಗೆ ವಿಚಾರಿಸಿದೆವು. ಅವರು ಆ ಕೃತಿಯ ಬಗ್ಗೆ ತಮ್ಮ ಸ್ಪಷ್ಟ ನಿಲುವನ್ನು ನಮಗೆ ಈ ಕೆಳಕಂಡಂತೆ ನೀಡಿದರು. ಅದನ್ನು ವಾಚಕರ ಗಮನಕ್ಕೆ ತರುತ್ತಿದ್ದೇವೆ.)

ಮೊದಲಿಗೆ ವಿಜಯೀಂದ್ರವಿಜಯ ಕೃತಿಯ ಪರಿಚಯ ಮಾಡಿಕೊಳ್ಳೋಣ. ಬರೆದವನ ಹೆಸರು ಮಧ್ವಕವಿ. ತಾನು ಶ್ರೀವಾದಿರಾಜರ ಶಿಷ್ಯನೆಂದೂ, ಆರಣಿರಾಜ ರಾಜಮನೆತನದ (ತಮಿಳುನಾಡು) ಪುರೋಹಿತನೆಂದೂ ಹೇಳಿಕೊಂಡಿದ್ದಾನೆ. ಸೋದೆಮಠದ ಚರಿತ್ರೆಯಲ್ಲಿ ಮಧ್ವಕವಿಯೆಂಬ ಹೆಸರಿನ ಯಾರೂ ಪ್ರಸಿದ್ಧರಾಗಿಲ್ಲ. ''ವಾದಿರಾಜಶಿಷ್ಯ'' ಎಂಬುದರಿಂದ ಶ್ರೀವಾದಿರಾಜರ ಕಾಲದವ ಇದ್ದಿರಬೇಕೆಂದು ಊಹಿಸಿ ಈ ಕೃತಿಯನ್ನು ಈಚೆಗೆ 1995ರಲ್ಲಿ ವಿಸ್ತಾರವಾದ ಪೀಠಿಕೆಯೊಂದಿಗೆ ಪ್ರಕಟಿಸಿದ ಡಾ||ಬಿ.ಎನ್.ಕೆ. ಶರ್ಮರು ಇವನ ಕಾಲವು 17ನೆಯ ಶತಮಾನದ ಪೂರ್ವಾರ್ಧವೆಂದು ಹೇಳಿದ್ದಾರೆ. ತಾನು ವಾದಿರಾಜರ ಶಿಷ್ಯ ಎಂದು ಹೇಳಿಕೊಂಡ ಮಾತ್ರಕ್ಕೆ ಅವರಲ್ಲಿ ವಿದ್ಯೆ ಕಲಿತ ಶಿಷ್ಯನಾಗಿರಲಾರ. ಮೇಲಾಗಿ ಅವರ ಪ್ರಸ್ತಾಪ ಕೇವಲ 2-3 ಪದ್ಯಗಳಲ್ಲಿ ಮಾತ್ರ ಬಂದಿದೆ. ಈ ಕೃತಿಯಲ್ಲಿ ಉತ್ತರಾದಿಮಠದ ವಿದ್ಯಾಧೀಶರ ಹೆಸರನ್ನು ಕಾಣಿಸಿದ್ದಾನೆ. (ಇವರು ಶ್ರೀವಾದಿರಾಜರು ವೃಂದಾವನದಲ್ಲಿ ಪ್ರವೇಶದ ನಂತರ, ಉತ್ತರಾದಿಮಠಾಧೀಶರಾಗಿದ್ದವರು.) ಇಲ್ಲಿ ಮುಖ್ಯವಾದದ್ದು ಶ್ರೀವಿಜಯೀಂದ್ರರ ಮತ್ತು ಅವರಿಗಿಂತ ಹಿಂದಿನ ಯತಿಗಳ ಮಹಿಮೆಯನ್ನು ಹೇಳುವುದಾಗಿದೆ. ಅವನ ಈ ಉದ್ದೇಶದಿಂದಾಗಿ ಗುರುಚರಿತೆ ಬರೆದ ಎಚ್.ಕೆ. ವೇದವ್ಯಾಸಾಚಾರ್ಯರು ಹಾಗೂ ಅಜಯ್ಯವಿಜಯೀಂದ್ರ ಕೃತಿಯ ರಾಜಾ ಎಸ್. ಗುರುರಾಜಾಚಾರ್ಯರು ಇದೊಂದು ಪ್ರಾಮಾಣಿಕವಾದ ಗ್ರಂಥವೆಂದು ಬರೆದಿದ್ದಾರೆ. ತಮ್ಮ ಕೃತಿಗಳಲ್ಲಿ ಯಥೇಚ್ಛವಾಗಿ ಉದ್ಧರಿಸಿದ್ದಾರೆ.

ಇದರಲ್ಲಿ ಏಳು ಸರ್ಗಗಳಿದ್ದು ಒಟ್ಟಿನ ಶ್ಲೋಕಗಳ ಸಂಖ್ಯೆ 331. ಕೊನೆಯ ಸರ್ಗದಲ್ಲಿ ಉಡುಪಿಗೆ ಆಗಮಿಸಿದ ಶ್ರೀವಿಜಯೀಂದ್ರರ ಹಾಗೂ ಶ್ರೀವಾದಿರಾಜರ ಸಮಾಗಮವು 14 ಶ್ಲೋಕಗಳಲ್ಲಿ ಮುಗಿದು ಹೋಗಿದೆ. ಇದರಲ್ಲಿ ಕಾವ್ಯಲಕ್ಷಣದ ಒಂದಾದರೂ ಅಂಶ ಕಂಡು ಬರದು.

ಈ ಕೃತಿಯಲ್ಲಿ ಶುರುವಿಗೆ ಶ್ರೀಮಧ್ವಾಚಾರ್ಯರ ನಾಲ್ವರು ಶಿಷ್ಯರು, ಉಡುಪಿಯ ಅಷ್ಟಮಠ ಪರಂಪರೆ, ಶ್ರೀಜಯತೀರ್ಥರು, ಅವರ ಶಿಷ್ಯ ಶ್ರೀವಿದ್ಯಾಧಿರಾಜರು ಇದಿಷ್ಟನ್ನು ಅವಸರದಲ್ಲಿ ಹೇಳಿ ಅಲ್ಲಿಂದ ಶ್ರೀರಾಮಚಂದ್ರತೀರ್ಥರನ್ನು ಪ್ರಸ್ತಾಪಿಸುತ್ತಾನೆ. ಅವರು ಶ್ರೀವಿಬುಧೇಂದ್ರರಿಗೆ ಸನ್ಯಾಸ ದೀಕ್ಷೆ ಕೊಟ್ಟಿದ್ದು. ಅವರ ಅಂತ್ಯಕಾಲಕ್ಕೆ ಶ್ರೀವಿಬುಧೇಂದ್ರರು ಕಾಶಿಗೆ ಹೋದದ್ದು, ಆಗ ವಿದ್ಯಾನಿಧಿಯೆಂಬುವರು ಶ್ರೀರಾಮ-ಸೀತಾ ಪ್ರತಿಮೆಗಳ ಪೂಜೆಯನ್ನು ಕೈಗೊಂಡಿದ್ದು ಬಂದಿದೆ. ಒಟ್ಟಿನಲ್ಲಿ ಶ್ರೀವಿಬುಧೇಂದ್ರರು ಮುಂತಾದ ಆ ಮಠದವರನ್ನು ಎತ್ತಿ ಹಿಡಿಯುವ ಉದ್ದೇಶ ಸ್ಪಷ್ಟವಾಗಿದೆಯಾದರೂ ಶ್ರೀವಿಜಯೀಂದ್ರರ ಚರಿತ್ರೆ ಕೇವಲ 6ನೆಯ ಸರ್ಗದಲ್ಲಿ ಮಾತ್ರ ಬಂದಿದೆ. (ಜೊತೆಗೆ 7ನೆಯ ಸರ್ಗದಲ್ಲಿ ಉಡುಪಿಯ ಯಾತ್ರೆಯ ಚುಟುಕಿನ ವರ್ಣನೆ) ಒಟ್ಟಿನಲ್ಲಿ ಪ್ರಬಂಧದಲ್ಲಿ ಸಮಂಜಸತೆ ಇಲ್ಲ ಮತ್ತು ನಿರೂಪಣೆ ಹಿಂದುಮುಂದಾಗಿದೆ. ಪುನರುಕ್ತಿಗಳೂ ಸಾಕಷ್ಟಿವೆ.

ಈ ಕೃತಿಯಲ್ಲಿ ಕೆಲವು ಅಘಟಿತ ಘಟನೆಗಳು, ಸ್ವಕಪೋಲಕಲ್ಪಿತ ಎನ್ನಬಹುದಾದವುಗಳು ಇವೆ. ಅರ್ಥಾತ್ ಇವಕ್ಕೆ ಬೇರೆ ಯಾವುದೇ ಆಧಾರಗಳಿಲ್ಲ. ಅವು ಹೀಗಿವೆ -

1. ಶ್ರೀಸುರೇಂದ್ರರ ನಿರ್ಯಾಣದ ಸಂವತ್ಸರ ವಿಜಯಿಂದ್ರವಿಜಯದಲ್ಲಿ ಹೀಗೆ ಉಕ್ತವಾಗಿದೆ.

   **ಸ್ವಾಂತಕಾಲೇ ಚ ಸಂಪ್ರಾಪ್ತೇ ಸುರೇಂದ್ರೋ ಗಜಗಹ್ವರೇ ।**
   **ವಿಕಾರಿವತ್ಸರೇ ಪುಷ್ಯಶುಕ್ಲದ್ವಾದಶೀತಿಥೌ ।**
   **ಸುರೇಂದ್ರಸ್ಯ ಪುಣ್ಯದಿನಂ ಪ್ರಥಿತಂ ಭುವಿ ಸರ್ವತಃ ॥ (4-37)**

   ಈ ವಿಕಾರಿ ಸಂವತ್ಸರ ಹಾಗೂ ಪುಣ್ಯತಿಥಿಯು 1539ರ ಕೊನೆಯಲ್ಲಿ ಬರುತ್ತದೆ. ಆದರೆ ಮಂತ್ರಾಲಯಮಠದ ಪರಂಪರೆಯ ಪ್ರಕಾರ ಶ್ರೀಸುರೇಂದ್ರರ ನಿರ್ಯಾಣ ಕ್ರಿ.ಶ. 1575.

2. ಈ ವಿಜಯೀಂದ್ರವಿಜಯದಲ್ಲಿ ಇನ್ನಿಬ್ಬರು ಯತಿಗಳ (ಇದೇ ಮಠದವರ) ನಿರ್ಯಾಣ ನಿರ್ದೇಶನವಿದೆ. ಶ್ರೀವಿಬುಧೇಂದ್ರರ ನಿರ್ಯಾಣವು ಪರಾಭವ ಸಂವತ್ಸರ (ಕ್ರಿ.ಶ. 1486) ಎಂದೂ, ಅವರ ಅನಂತರ ಬಂದ ಶ್ರೀಜಿತಾಮಿತ್ರರ ಕಣ್ಮರೆಯು ಕೀಲಕ ಸಂವತ್ಸರ (1488) ಎಂದೂ ಹೇಳಿದ್ದಾಗಿದೆ. (3-9 ಮತ್ತು 3-13). ಆದರೆ ಮಂತ್ರಾಲಯದ ಪರಂಪರೆಯ ಪ್ರಕಾರ, ಶ್ರೀವಿಬುಧೇಂದ್ರರ ಶ್ರೀಜಿತಾಮಿತ್ರರ ನಿರ್ಯಾಣ ಸಂವತ್ಸರಗಳು ಅನುಕ್ರಮವಾಗಿ ಸಾಧಾರಣ (1490) ಮತ್ತು ಪ್ರಮಾಥೀ (1492) ಎಂಬುದಾಗಿ ದಾಖಲಾಗಿದೆ.

3. ''ವಿಜಯೀಂದ್ರವಿಜಯ'' ಕವಿಯು ಕಾಣಿಸಿದ ಒಂದು ಪುಣ್ಯತಿಥಿಯಲ್ಲಿ ಹೆಚ್ಚು ಕಡಿಮೆ ಇದೆ. ಉದಾಹರಣೆಗೆ ಜಿತಾಮಿತ್ರರ ಪುಣ್ಯತಿಥಿಯನ್ನು ಸಾರ್ವತ್ರಿಕವಾಗಿ ಮಾರ್ಗಶೀರ್ಷ ಅಮಾವಾಸ್ಯೆಯಂದು ಆಚರಿಸುತ್ತಾರೆ. ಆದರೆ ವಿ.ವಿ.ಕಾರರು ಆ ದಿನವನ್ನು ಆಶ್ವೀನ ಕೃಷ್ಣ ಅಷ್ಟಮೀ ಎಂದಿದ್ದಾರೆ.

4. ಇನ್ನೊಂದು ಗಣನೀಯವಾದ ಹೆಚ್ಚು ಕಡಿಮೆ ಶ್ರೀಸುರೇಂದ್ರರ ವೃಂದಾವನ ಸ್ಥಳದ ಕುರಿತು ಇದೆ. ಶ್ರೀವಿಬುಧೇಂದ್ರರು ತಿನ್ನವೇಲಿ ಹಾಗೂ ಶ್ರೀಜಿತಾಮಿತ್ರರು ಕಾಡಲೂರು ಎಂಬುದು ಯಥಾಯುಕ್ತವಾಗಿದೆ. ಆದರೆ ಶ್ರೀಸುರೇಂದ್ರರದು ಆನೆಗುಂದಿ (ಗಜಗಹ್ವರ) ಎಂದಿದ್ದಾರಲ್ಲ? ಇವರ ವೃಂದಾವನವು ಅಧಿಕೃತವಾಗಿ ಇರುವುದು ಮಧುರೆಯಲ್ಲಿ, ಪ್ರತಿ ವರ್ಷದ ಆರಾಧನೆಯು ಅಲ್ಲಿಯೇ ನಡೆಯುತ್ತದೆ.

ಮೇಲಿನ ವಿವರಣೆಯಿಂದ, ಶ್ರೀಸುರೇಂದ್ರರ ಕಾಲ ಮತ್ತು ವೃಂದಾವನ ಸ್ಥಳ, ಅವರ ಹಿಂದಿನ ಯತಿದ್ವಯರ ನಿರ್ಯಾಣ ವರ್ಷ, ಅದರಂತೆ ಜಿತಾಮಿತ್ರರ ಪುಣ್ಯತಿಥಿ ಇವೈದು ವಿಷಯಗಳಲ್ಲಿ ಅಭಿಪ್ರಾಯ ಭೇದ ಇದೆ ಎಂದಂತಾಯಿತು.

ಒಂದು ವೇಳೆ ವಾದಕ್ಕಾಗಿ ವಿ.ವಿ. ಕಾವ್ಯದಲ್ಲಿ ಹೇಳಿದ್ದೇ ಸರಿ ಎಂದು ಗೃಹಿತ ಹಿಡಿದಲ್ಲಿ ಮಠದ ನೆಲಗೊಂಡ ಪರಂಪರೆಯು ಇವೈದು ವಿಷಯಗಳಲ್ಲಿ ಸರಿಯಾದದ್ದಲ್ಲ ಎನ್ನಬೇಕೆ? ಬದಲಾಗಿ ವಿಜಯೀಂದ್ರವಿಜಯವೇ ವಿಶ್ವಸನೀಯವಾದದ್ದಲ್ಲ ಎನ್ನಬೇಕಾಗುತ್ತದೆ. ಈ ಕಾವ್ಯಕರ್ತರು ಸುರೇಂದ್ರರ ವೃಂದಾವನವೇ ಎಲ್ಲಿದೆಯೆಂಬುದನ್ನು ತಿಳಿಸದಿದ್ದಾಗ, ಅವರ ಕಾಲವನ್ನಾದರೂ ಸರಿಯಾಗಿ ಹೇಳಿದ್ದಾರೆಂದು ಹೇಗೆ ನಂಬುವುದು?

5. ಶ್ರೀವಿಬುಧೇಂದ್ರರಿಲ್ಲದಾಗ, ಯರಗೋಳದಲ್ಲಿ ಶ್ರೀರಾಮಚಂದ್ರತೀರ್ಥರು ವೃಂದಾವನಸ್ಥರಾದರಷ್ಟೆ. ಆಗ ಪ್ರತಿಮೆಗಳನ್ನು ನೆಲದಲ್ಲಿ ಹೂಳಿಸಿ ಇರಿಸಿದ್ದರು. ಅಲ್ಲಿಗೆ ಓರ್ವ ತೌಳವ ವಿಪ್ರ ಬರುತ್ತಾನೆ. ತನ್ನ ಹೆಸರು ಕೃಷ್ಣನೆಂದೂ, ಬ್ರಹ್ಮಚಾರಿಯೆಂದೂ ಪರಿಚಯಿಸಿಕೊಳ್ಳುತ್ತಾನೆ. ಆಗ ಮಠದ ಶಿಷ್ಯರು (ದುಷ್ಟರು,

ಕ್ರೂರಕರ್ಮಿಗಳು) ಅವನಿಗೆ ಸನ್ಯಾಸವಿತ್ತು ವಿದ್ಯಾನಿಧಿ ಎಂಬ ಹೆಸರಿಟ್ಟು ಪೂಜಾಪ್ರತಿಮೆಗಳನ್ನು ಒಪ್ಪಿಸುತ್ತಾರೆ. ''ಯರಗೋಳಪತಿ'' ಯ ಸಹಕಾರದೊಂದಿಗೆ.

**ವೃಂದಾವನಸ್ಥೇ ಯತಿಪೇ ತಚ್ಛಿಷ್ಯಾ ದುಷ್ಟಮಾನಸಾಃ।**
**ಪ್ರಾಪ್ತಂ ದೃಷ್ಟ್ವಾ ತೌಳವಿಪ್ರಂ ದತ್ವಾ ಸನ್ಯಾಸಮಸ್ಯ ತೇ ॥ (1-29)**

ಮರಳಿ ಬಂದ ಶ್ರೀವಿಬುಧೇಂದ್ರರು ಚಿಂತಾಪರರಾಗಿ ತಮ್ಮದೇ ವಂಶವನ್ನು ಸ್ಥಾಪಿಸಿದರು. (ಸ್ವಸ್ಯ ವಂಶಂ ಚಕಾರ ಹ 1-33) ಇವರ ವಂಶದಲ್ಲಿ ಮುಂದೆ ಶ್ರೀವಿಜಯೀಂದ್ರರೂ, ಶ್ರೀವಿದ್ಯಾನಿಧಿಗಳ ವಂಶದಲ್ಲಿ ಶ್ರೀವಿದ್ಯಾಧೀಶರೂ ಆಗಿ ಹೋದರು. ಹೀಗಾಗಿ ''ಏವಂ ವಂಶದ್ವಯಂ ಜಾತಂ ಪರಸ್ಪರವಿರೋಧಕಮ್ । (1-35)'' ಎಂದು ಹೇಳಲಾಗಿದೆ.

6. ಶ್ರೀಜಿತಾಮಿತ್ರರ ಅನಂತರ ಪೀಠವೇರಿದ ಶ್ರೀರಘುನಂದನರ ಕಾಲಕ್ಕೆ ಸೀತಾವಿಹೀನ ರಾಮಚಂದ್ರನ ಮೂರ್ತಿಯನ್ನು ಒಬ್ಬರು ಕಳ್ಳತನದಿಂದ ಮಠಕ್ಕೆ ತಂದರು. ಆಗ ಸಿಟ್ಟಿಗೆದ್ದ ಕೆಲವು ಶಿಷ್ಯರು ಹೇಳುತ್ತಾರೆ.

**ನ ಸಹಾಮೋ ವಯಂ ಸರ್ವೇ ರಘುನಂದನವಶ್ಯಗಮ್ ।**
**ರಾಮಂ ಶ್ರುತ್ವಾ ಹನಿಷ್ಯಾಮೋ ರಘುನಂದನಹಂಸಕಮ್ ॥ (2-18)**

ಆದರೆ ಅಂತಹುದೇನೂ ಘಟಿಸುವುದಿಲ್ಲ.

7. ಅನಂತರ ಪಟ್ಟಾಭಿಷಿಕ್ತರಾದ ಶ್ರೀಸುರೇಂದ್ರರು ಒಮ್ಮೆ ಆನೆಗುಂದಿಯ ಊರ ಹೊರಗಿನ ಉದ್ಯಾನದಲ್ಲಿ ಬೀಡು ಬಿಟ್ಟರು.

**ತುಂಗಭದ್ರಾನದೀತೀರೇ ದೃಷ್ಟ್ವೋದ್ಯಾನಮದ್ಭುತಮ್ ।**
**ಸ್ನಾತ್ವಾ ನದ್ಯಾಂ ವನೇ ರಾಮಮಪೂಜಯತ್ ಭಕ್ತಿಪೂರ್ವಕಮ್ ॥ (4-6)**

ಈ ಸ್ಥಳವನ್ನು ಗುರುಚರಿತಕಾರರು ವಿಜಯನಗರವೆಂದು ತಪ್ಪಾಗಿ ತಿಳಿದಿದ್ದಾರೆ. ಇದರ ಹಿಂದಿನ ಶ್ಲೋಕದಲ್ಲಿಯೇ (4-5) ''ಆಗತೋ ಗಜಗಹ್ವರಮ್'' ಎಂದು ಹೇಳಿದ್ದಿದೆ. ಆ ಸ್ಥಳಕ್ಕೆ ಶ್ರೀವ್ಯಾಸತೀರ್ಥರು ತಮ್ಮ ಕೇಶವಾದಿ ಶಿಷ್ಯರು ಹಾಗೂ ಶ್ರೀವಾದಿರಾಜಸಹಿತರಾಗಿ ಶ್ರೀಸುರೇಂದ್ರರನ್ನು ಕಾಣಲು ಬಂದರು. ಆಗ ಅನೆಗುಂದಿಯ ಅಧಿಪತಿಯು ಈ ಹೊಸ ಯತಿಗಳು ಯಾರು? ಎಂದು ಶ್ರೀವ್ಯಾಸರಾಯರನ್ನು ಕೇಳಿದನು. ಅದಕ್ಕೆ ಶ್ರೀವ್ಯಾಸತೀರ್ಥರು -

''ಎಲೈ ರಾಜನೇ ಕೇಳುವಂಥವನಾಗು, ಇವರು ಶ್ರೀವಿಬುಧೇಂದ್ರರ ವಂಶಜರು, ಶ್ರೀಸುರೇಂದ್ರತೀರ್ಥರು, ನಾನು ಸತ್ಯವನ್ನೇ ಹೇಳುತ್ತಿದ್ದೇನೆ'' ಎಂಬುದಾಗಿ ರಾಜನ ಸಂಶಯವನ್ನು ಪೂರ್ಣ ನಿವಾರಿಸುವಂತೆ ''ನಾನು ಯಥಾರ್ಥವನ್ನೇ ಹೇಳುತ್ತಿದ್ದೇನೆ'' ಎಂದು ಉತ್ತರಿಸುತ್ತಾರೆ.

8. ಶ್ರೀವಿಷ್ಣುತೀರ್ಥರನ್ನು ಶ್ರೀಸುರೇಂದ್ರರಿಗೆ ಒಪ್ಪಿಸುವಾಗ ಶ್ರೀವ್ಯಾಸರಾಯರು ಹೊಸ ಯತಿಯ ಜನನಾದಿ ಅಂಶಗಳನ್ನು ಸ್ವಲ್ಪದರಲ್ಲಿ ಹೇಳುತ್ತಾರೆ. ಬೇರೆಲ್ಲಿಯೂ ಆ ವಿವರ ದಾಖಲೆಗೊಂಡಿಲ್ಲ. ಆ ಪ್ರಸಂಗವೆಂದರೆ ಓರ್ವ ''ಪುರಪತಿ''ಯು ಶ್ರೀವ್ಯಾಸರಾಯರಿಗೆ ನಮಸ್ಕರಿಸಿದಾಗ ಅವರು ''ಸುಪುತ್ರವಾನ್ ಭವ'' ಎಂದು ಆಶೀರ್ವದಿಸಿದರು. ಆಗ, ಆತನು ''ವೃದ್ಧೋऽಹಮ್, ಬ್ರಾಹ್ಮಣೀ ವೃದ್ಧಾ'' ಎಂಬುದಾಗಿ ತಮ್ಮ ಅಸಹಾಯಕತೆಯನ್ನು ತೋರುತ್ತಾನೆ. ಆದರೂ ಗುರುವಿನ ಆಶೀರ್ವಾದ ಬಲದಿಂದ ಮಗು ಜನಿಸುತ್ತದೆ. ಬಾಲ್ಯ ಕಳೆದೊಡನೆ ಆ ತಂದೆ ತಾಯಿಗಳು ಮಗುವನ್ನು ಶ್ರೀವ್ಯಾಸರಾಯರಿಗೆ

ಒಪ್ಪಿಸುತ್ತಾರೆ. ಮಠದಲ್ಲಿಯೇ ಅವನ ಉಪನಯನ, ಶಾಸ್ತ್ರಾಭ್ಯಾಸ ಮತ್ತು ಸನ್ಯಾಸ ಸ್ವೀಕಾರ. ಆದರೆ ಆ ತಂದೆ ತಾಯಿಗಳ ಊರು, ಹೆಸರು ಏನನ್ನೂ ಹೇಳಿಲ್ಲ. ಅಂತೆಯೆ ಗುರುಚರಿತಕಾರರಾಗಲೀ, ಅಜಯ್ಯವಿಜಯೀಂದ್ರ ಕರ್ತೃಗಳಾಗಲಿ ಈ ಜನನಪ್ರಸಂಗದ ಬಗ್ಗೆ ಹೇಳಲಿಲ್ಲ.

9. ಇತ್ತ ಶ್ರೀವ್ಯಾಸತೀರ್ಥರು ಮುಂದುವರಿದು ಆನೆಗುಂದಿಯ ರಾಜನಿಗೆ ಹೇಳುವುದು ಮತ್ತಷ್ಟು ಅಚ್ಚರಿಗೊಳಿಸುವಂತಿದೆ-

''ಶ್ರೀವಿಬುಧೇಂದ್ರರಿಗೂ ಶ್ರೀಜಿತಾಮಿತ್ರರಿಗೂ ಶ್ರೀರಾಮನ ಪೂಜೆ ಲಭಿಸಲಿಲ್ಲವಷ್ಟೆ. ಅದಕ್ಕೆಂದು ಶ್ರೀವಿಬುಧೇಂದ್ರರು ಶ್ರೀವಿಷ್ಣುತೀರ್ಥರಾಗಿಯೂ, ಶ್ರೀಜಿತಾಮಿತ್ರರು ಶ್ರೀಸುಧೀಂದ್ರತೀರ್ಥರಾಗಿಯೂ ಅವತಾರ ತಾಳಿದ್ದಾರೆ (5.9-11)''

**ತಚ್ಛಿಷ್ಯೋऽಹಂ ಭವಿಷ್ಯೇऽಹಂ ದ್ವಿಜನ್ಮಾ ಯತಿಸೋತ್ತಮಃ ।**
**ರಾಘವೇಂದ್ರ ಇತಿ ಖ್ಯಾತೋ ಜನಿಷ್ಯೇ ರಾಮಕಾರಣಮ್ ॥** (5-12)

ಶ್ರೀರಾಘವೇಂದ್ರಗುರುಗಳು ಶ್ರೀವ್ಯಾಸರಾಯರ ಅವತಾರ ಎಂಬ ಗ್ರಹಿಕೆ ಇರುವುದೇನೋ ನಿಜ. ಆದರೆ ಅದನ್ನು ಸ್ವಯಂ ಶ್ರೀವ್ಯಾಸರಾಯರೇ, ಅದೂ ಆ ರಾಜನ, ಇತರರ ಸಮಕ್ಷಮ ಹೇಳಿದರೆನ್ನುವುದು ನಂಬಬಹುದೇ? ಅಲ್ಲದೆ, ಒಂದು ಶತಮಾನದಷ್ಟು ಹಿಂದೆಯೇ ಈ ವಿಷಯವು ಪ್ರಚಲಿತವಿತ್ತೆನ್ನಬಹುದೆ? ಒಂದು ಶತಮಾನದಷ್ಟು ಹಿಂದೆಯೇ ಪ್ರಚಲಿತವಿದ್ದ ಈ ವಿಷಯದ ಬಗ್ಗೆ ಶ್ರೀರಾಘವೇಂದ್ರವಿಜಯಕಾರರು ಮೌನವಹಿಸಿದ್ದೇಕೆ?

10. ಮಧ್ವಕವಿಯು ತನ್ನ ಕಾವ್ಯದ ಮುಖ್ಯ ವಿಷಯ ವಿಜಯೀಂದ್ರರ ಚರಿತ್ರೆಯಿದ್ದಾಗ ತಾನು ವಾದಿರಾಜಶಿಷ್ಯನೆಂದು ಹೇಳಿಕೊಂಡಿರುವಾಗ ಶ್ರೀವಿಜಯೀಂದ್ರರ ಹಾಗೂ ಶ್ರೀವಾದಿರಾಜರ ಉಡುಪಿಯಲ್ಲಿ ನಡೆದ ಸಮಾಗಮವನ್ನು ವಿಶದವಾಗಿ ಹೇಳಬಹುದಿತ್ತು. ಆದರೆ ಹಾಗೆ ಹೇಳುವುದಿಲ್ಲ. ಇನ್ನೂ ಮುಂದುವರೆಸುತ್ತಾ-

**ವಿಜಯೀಂದ್ರಮಠೋ ಲೋಕೇ ಪ್ರಥಿತೋ ರೌಪ್ಯಪೀಠಕೇ ।**
**ಸ್ವಮಠೇ ರಾಮಚಂದ್ರಸ್ಯ ಪೂಜಾಕಾಲೇ ನಿರಂತರಮ್ ।**
**ಕೃಷ್ಣಸಂದರ್ಶನಂ ಭೂಯಾತ್ ಇತಿ ರಂಧ್ರಂ ನಿರಂತರಮ್ ॥** (7-6.7)

(ಉಡುಪಿಯಲ್ಲಿರುವ ವಿಜಯೀಂದ್ರಮಠವು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ಶ್ರೀವಿಜಯೀಂದ್ರರು ತಮ್ಮ ಮಠದಲ್ಲಿ ತಾವು ರಾಮಚಂದ್ರನ ಪೂಜೆ ಮಾಡುವಾಗ ನಿರಂತರ ಶ್ರೀಕೃಷ್ಣನ ದರ್ಶನವಾಗಬೇಕು ಎಂಬ ಉದ್ದೇಶ್ಯದಿಂದಲೇ ಶ್ರೀಕೃಷ್ಣಮಠದ ಗೋಡೆಗೆ ರಂಧ್ರವನ್ನು ಮಾಡಿಸಿದರು)

ಉಡುಪಿಯಲ್ಲಿರುವ ಸದ್ಯದ ಶ್ರೀರಾಘವೇಂದ್ರಮಠದ ಎದುರಿಗೇನೆ ಕನಕನ ಕಿಂಡಿ ಕಾಣಿಸುತ್ತದೆಯಲ್ಲವೆ. ಮಧ್ವಕವಿ ಮಹಾಶಯನು ಅದನ್ನು ಕಂಡು ತನ್ನ ಕಲ್ಪನೆಯ ಕುದುರೆಯನ್ನು ಈ ರೀತಿ ಓಡಿಸಿದ. ಈ ವಿಚಾರ ಯಾರಿಗೂ ಮಾನ್ಯವಾಗುವಂತಹದಲ್ಲವೆಂಬುದನ್ನು ಮನಗಂಡ ರಾಜಾ ಎಸ್. ಗುರುರಾಜಾಚಾರ್ಯರು, ಇವೆರಡು ಶ್ಲೋಕಗಳನ್ನು ಬಿಟ್ಟೇ ಉಡುಪಿಯಾತ್ರೆಗೆ ಸಂಬಂಧಿಸಿದ ಇತರ ಶ್ಲೋಕಗಳನ್ನು ತಮ್ಮ ''ಅಜಯ್ಯವಿಜಯೀಂದ್ರ'' ಗ್ರಂಥದಲ್ಲಿ ಉದ್ಧರಿಸಿದ್ದಾರೆ. ಹೀಗೆ ಶ್ರೀರಾಘವೇಂದ್ರಯತಿಗಳ ಅವತಾರದ ಪ್ರಸ್ತಾಪ, ಕನಕನ ಕಿಂಡಿಯ ಬಗೆಗಿನ ಕಲ್ಪನಾವಿಲಾಸ, ಸರಿಯಲ್ಲದ ಕಾಲನಿರ್ಣಯ ಹಾಗೂ ವೃಂದಾವನ ಸ್ಥಳಗಳ ತಪ್ಪು ನಿರ್ದೇಶನ ಮುಂತಾದವುಗಳಿಂದಾಗಿ ಈ ಕೃತಿಯನ್ನು ನಂಬುವುದು ಹೇಗೆ?

* * * *

# ಅನುಬಂಧ 3: ಕಾರ್ಬನ್ ಡೇಟಿಂಗ್

ಮೂ.ಮಠೇ ಪುಸ್ತಕದ ಪುಟ 8 ರಲ್ಲಿ (ಪ್ರಸ್ತಾವನೆ) ಅದರ ಲೇಖಕರು ''ವಿಗ್ರಹಗಳ ಪ್ರಾಚೀನತೆಯನ್ನು ಇಂದಿಗೂ ಕಾರ್ಬನ್‌ಡೇಟಿಂಗ್‌ನಿಂದ ಸುಲಭವಾಗಿ ಮಾಡಬಹುದು'' ಎಂದು ಬರೆದಿದ್ದಾರೆ.

ಮೊದಲು ಕಾರ್ಬನ್ ಡೇಟಿಂಗ್ ಎಂದರೇನು? ಯಾವ ಯಾವ ವಸ್ತುಗಳನ್ನು ಅವುಗಳ ಪ್ರಾಚೀನತೆಯನ್ನು (ಕಾಲಮಾನಗಳನ್ನು) ಈ ಕಾರ್ಬನ್ ಡೇಟಿಂಗ್‌ನಿಂದ ಮಾಡಬಹುದು ಎಂದು ತಿಳಿದು ಈ ವಾಕ್ಯವನ್ನು ಲೇಖಕರು ಬರೆಯಬೇಕಿತ್ತು . ಪುಸ್ತಕವನ್ನು ಓದುವ ಸಾಮಾನ್ಯರಿಗೆ ಮರಳು ಮಾಡುವುದನ್ನು ಪ್ರಸ್ತಾವನೆಯಿಂದಲೇ ಸಮರ್ಪಕವಾಗಿ ಮಾಡುತ್ತಾ ಹೋಗಿರುವುದನ್ನು ಮೂ.ಮಠೇ ಪುಸ್ತಕದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಇದಕ್ಕೆ ಬಲಿಯಾಗಿರುವವರೂ ಸಾಕಷ್ಟಿರಬಹುದು. ಆದರೆ ವಿದ್ವಾಂಸರನ್ನು, ವಿಮರ್ಶಕರನ್ನು , ಸಂಶೋಧಕರನ್ನು ಮರಳು ಮಾಡುವುದು ಅಷ್ಟು ಸುಲಭವಲ್ಲ ಎಂಬುದನ್ನು ಲೇಖಕರು ಮರೆತಿರುವಂತಿದೆ.

ಈ ಕಾರ್ಬನ್ ಡೇಟಿಂಗ್ ಅನ್ನು ಇದ್ದಿಲು, ಕಟ್ಟಿಗೆ, ಬೀಜಗಳು, ಎಲುಬುಗಳು, ಚರ್ಮ, ರಕ್ತದ ಕಲೆಗಳು, ಕೂದಲು ಮುಂತಾದ ಜೀವ ಸಂಬಂಧಿ ವಸ್ತುಗಳಿಗೆ ಮಾತ್ರ ಮಾಡಲಾಗುತ್ತದೆ. ತಾಮ್ರ ಮೊದಲಾದ ಪ್ರತಿಮೆಗಳಿಗೆ ಕಾರ್ಬನ್ ಡೇಟಿಂಗ್ ಮಾಡಲಾಗದು. ಮಾಡಿದರೂ ಸರಿಯಾದ ನಿರ್ಣಯ ಸಾಧ್ಯವಿಲ್ಲ ಎಂದು ಅನೇಕ ವಿಜ್ಞಾನದ ಮೂಲ ಮಾಹಿತಿಗಳಿಂದ ತಿಳಿದು ಬರುತ್ತದೆ. ಅದರ ಮಾಹಿತಿ ಹೀಗಿದೆ -

**Basic Principles of Carbon Dating :**

Radiocarbon dating - Radiocarbon, or carbon 14, is an isotope of the element carbon that is unstable and weakly radioactive. The stable isotopes are carbon 12 and carbon 13.

Carbon 14 is continually being formed in the upper atmosphere by the effect of cosmic ray neutrons on nitrogen 14 atoms. It is rapidly oxidized in air to form carbon dioxide and enters the global carbon cycle.

Plants and animals assimilate carbon 14 from carbon dioxide throughout their lifetimes. When they die, they stop exchanging carbon with the biosphere and their carbon 14 content then starts to decrease at a rate determined by the law of radioactive decay.

Radiocarbon dating is essentially a method designed to measure residual radioactivity. By knowing how much carbon 14 is left in a sample, the age of the organism when it died can be known. It must be noted though that radiocarbon dating results indicate when the organism was alive but not when a material from that organism was used.

**Radiocarbon Datable Materials**

Not all materials can be radiocarbon dated. Most, if not all, organic compounds can be dated. Some inorganic matter, like a shell"s aragonite portion, can also be dated for as long as their formation involved assimilation of carbon 14 in equilibrium with the atmosphere.

Samples that have been radiocarbon dated since the inception of the method include charcoal, wood, twigs, seeds, bones, shells, leather, peat, lake mud, soil, hair, pottery, pollen, wall paintings, corals, blood residues, fabrics, paper or parchment, resins, and water, among others.

Physical and chemical pretreatments are done on these materials to remove possible contaminants before they are analyzed for their radiocarbon content.

- BETA The worlds largest professional Radio carbon dating service, America

ಸಾರಾಂಶ - ಆಧುನಿಕವಿಜ್ಞಾನದ ಆವಿಷ್ಕಾರದಂತೆ, ರೇಡಿಯೋಕಾರ್ಬನ್ ಅಥವಾ ಕಾರ್ಬನ್ 14 ಎಂಬುದು ಮೂಲವಸ್ತುವಾದ ಕಾರ್ಬನ್ನಿಂದ ಅಸ್ಥಿರವಾದ ರೇಡಿಯೋ ಆಕ್ಟಿವ್ ಕಿರಣಗಳನ್ನು ಹೊಮ್ಮಿಸುವ ಪದಾರ್ಥ. ಈ ಕಿರಣಗಳು ಪರಿಸರದ ಮೇಲ್ಮೈಯಲ್ಲಿ ಕಾಸ್ಮಿಕ್ ಕಿರಣಗಳಿಂದೊಡಗೂಡಿ ಗಾಳಿಯಲ್ಲಿರುವ ಆಮ್ಲಜನಕದ ಜೊತೆ ಸೇರಿ ಕಾರ್ಬನ್ ಡೈ ಆಕ್ಸೈಡ್ ಆಗಿ ಹೊರಹೊಮ್ಮುತ್ತದೆ.

ಗಿಡಗಳು, ಪ್ರಾಣಿಗಳು ಈ ಕಾರ್ಬನ್ ಡೈ ಆಕ್ಸೈಡ್‌ನಿಂದ ಕಾರ್ಬನ್ 14 ಅನ್ನು ಶೇಖರಿಸುತ್ತಾ ಹೋಗುತ್ತವೆ. ಅಂದರೆ ಪರಸ್ಪರ ವಿನಿಮಯ ಮಾಡಿಕೊಳ್ಳುತ್ತವೆ. ಯಾವಾಗ ಗಿಡಗಳು ಪ್ರಾಣಿಗಳು ಸಾಯುತ್ತವೆಯೋ ಈ ಪರಸ್ಪರ ವಿನಿಮಯ ನಿಂತು ಹೋಗಿ ಕಾರ್ಬನ್ 14 ಅನ್ನುವುದು ಒಂದು ಕ್ರಮಬದ್ಧವಾದ ರೇಡಿಯೋಆಕ್ಟಿವ್ ನಿಯಮಕ್ಕೆ ಒಳಪಟ್ಟು ಕಡಿಮೆ ಆಗುತ್ತ ಹೋಗುತ್ತದೆ.

ಈ ಕಡಿಮೆ ಆಗುತ್ತ ಬಂದಿರುವ ರೇಡಿಯೋ ಕಾರ್ಬನ್ನಿನ ಉಳಿದ ಅಂಶದ ಮೇಲೆ ಆ ವಸ್ತುವಿನ ಪ್ರಾಚೀನತೆಯನ್ನು ಅಳೆಯಲಾಗುತ್ತದೆ. ಇದಕ್ಕೆ ಅನೇಕ ರಸಾಯನಿಕ ಕ್ರಿಯೆಗಳನ್ನು ಆ ವಸ್ತುವಿನ ಮೇಲೆ ನಡೆಸಬೇಕಾದ ಆವಶ್ಯಕತೆ ಇರುತ್ತದೆ.

ಹೀಗಿರುವುದರಿಂದ ಮೂ.ಮಠೇ.ಲೇಖಕರು ಈ ಕಾರ್ಬನ್‌ಡೇಟಿಂಗ್ ಬಗ್ಗೆ ಉಲ್ಲೇಖಿಸಿರುವುದು ಅವರ ಅಜ್ಞಾನವನ್ನು ತಿಳಿಸುತ್ತಿದೆ. ಅಲ್ಲದೇ ಜನಗಳನ್ನು ಮರಳು ಮಾಡುವುದರಲ್ಲೇ ಆಸಕ್ತಿವುಳ್ಳದ್ದಾಗಿದೆ ಎನ್ನದೇ ಗತಿಯಿಲ್ಲ.

ಕೇವಲ ಯತಿಗಳಿಂದಲೇ ಈ ಮೂರ್ತಿಗಳು ಸ್ಪರ್ಶಿಸಲ್ಪಡಬೇಕು ಎಂದು ರಾಯರಮಠದ ಅಧಿಕೃತ ಗುರುಚರಿತೆಯಲ್ಲಿ ಸ್ಪಷ್ಟವಾಗಿದೆ. ಆದರೂ ಬ್ರಹ್ಮಕರಾರ್ಚಿತ ಸೀತಾರಾಮರ ಪ್ರತಿಮೆಗಳನ್ನು ಕಂಡ ಕಂಡವರಿಗೆ ಮುಟ್ಟಿಸಲೂ ಹಿಂಜರಿಯದ ಮೂ.ಮಠೇ ಲೇಖಕರಿಗೆ ಆ ಪ್ರತಿಮೆಗಳ ಬಗ್ಗೆ ಎಷ್ಟರ ಮಟ್ಟಿಗೆ ಕಾಳಜಿ, ಗೌರವಾದಿಗಳಿವೆ ಎಂದು ವಾಚಕರೇ ಊಹಿಸಬಹುದಾಗಿದೆ.

* * * *

# ಅನುಬಂಧ 4: ಗುರುಪುರಂದರವಿಠ್ಠಲರ ಕೃತಿ

## (ಶ್ರೀಪುರಂದರದಾಸರ ಪುತ್ರರು. ಅವರಿಂದಲೇ ಅಂಕಿತವನ್ನು ಪಡೆದವರು.)

**ಧ್ರುವತಾಳ:** ವೇದಾಂತವೇದ್ಯನಾದ ಹರಿಯ ಜಗದೊಳು । ವಿಚಾರ ಮಾಡುವ ಕಾಲದಲ್ಲಿ । ಕೆಲವರು ಬೊಮ್ಮನೆಂಬೋರು । ಕೆಲವರು ರುದ್ರನೆಂಬೋರು । ಮೋಹಕವಾಗಿದ್ದ ಕಾರಣ ಮುಕುತಿಯೋಗ್ಯರ । ನುದ್ಧರಿಸುವೆನೆಂದು ಹರಿಯಾಜ್ಞದಿಂದ ಪೂರ್ಣ । ಬೋಧರಾಯರು ದಿಸೆ ಇಳಿಯಮ್ಯಾಲೆ ಜನರ ಮೋಹಕವ ಬಿಡಿಸಿ ಮುಕುತಿಯೋಗ್ಯರಿಗೆ । ವೇದಾಂತವೇದ್ಯ ಹರಿಯೆಂದು ಶ್ರುತಿಸ್ಮೃತಿಪುರಾಣಗಳಲ್ಲಿ ಸರ್ವಜೀವರನ್ನು ಕಡೆ ಹಾಯಿಸುವೆನೆಂಧು । ಮಧ್ವಮುನಿಯಾಗಿ ಶಾಸ್ತ್ರವನೊರದ ಕಾರಣ । ವೇದಾಂತವೇದ್ಯ ಶ್ರೀಹರಿಯೆಂದು ನಿರ್ಧಾರ ಮಾಡಿದ । ಗುರುಪುರಂದರವಿಠಲನಾಳು । ಮಧ್ವಮುನಿ ಉದಸಿದ ಲೋಕದೊಳು ।। 1 ।।

**ಮಟ್ಟತಾಳ:** ಮೂರಾರು ಎರಡೊಂದು ಕುಮತಗಳನೆ ಜರಿದು । ಅನಂತವೇದಾರ್ಥ ಬಲ್ಲವರಿಗೆ ಮತ್ತು । ಕೆಲವು ದೇವತಿಗಳು ಋಷಿಗಳು ಮನುಜೋತ್ತಮರು । ಅವರವರ ಯೋಗ್ಯತೆಯಾ ತಿಳಿದು । ಮಧ್ವಮುನಿ ಶಾಸ್ತ್ರವನೋದಿಸಿ ಮತ್ತೆ । ಕೆಲವರು ಮನುಜಾರು ನರ ಲೋಕದಲಿ ಮುಕ್ತಿಬೇಕೆಂಬ ಜನರು । ಗುರುಪುರಂದರವಿಠಲ ಒಡೆಯಾ । ಸಿರಿ ಬೊಮ್ಮಾರುದ್ರಾದಿಗಳು ತನ್ನ ದಾಸರೆಂಬ ಶಾಸ್ತ್ರವನೋದಿ ಮಾರ್ಗ ಪಿಡಿದವರಾಗಿ ।। 2 ।।

**ತ್ರಿವಿಡಿ ತಾಳ:** ಇಳಿಯೊಳು ಮಧ್ವಮುನಿ ಸ್ಥಿರವಾಗಿ ಮತವ । ನಿಲ್ಲಿಸಬೇಕೆಂದು ಅನಾದಿಕಾಲದ ವೈಷ್ಣವ। ಸಿದ್ಧಾಂತ ನೆರದು ಶಿಷ್ಯರಿಗೆ ವೇದವ್ಯಾಸ । ನಲ್ಲಿಗೆ ಪೋಗಿ ಆಜ್ಞೆಯ ಕೊಂಡು । ಮರಳಿ ಬಾಹೋ । ಕಾಲದಲ್ಲಿ ಗೋದಾತೀರದಲ್ಲಿಯಿದ್ದಾ ದ್ವಿಜನ ಕರತಂದು ಆಶ್ರಮವನಿತ್ತು ಪದುಮನಾಭೆಂಬ ನಾಮವ । ಪಾಲಿಸಿ ಸರ್ವಶಾಸ್ತ್ರವನ್ನುಪದೇಶ ಮಾಡಿ ಅದೇ । ಕಾಲದಲ್ಲಿ ನರಹರಿ ಎಂಬೊನೊಬ್ಬ ದ್ವಿಜನು ಸನ್ಯಾಸ ಕೊಡಬೇಕೆನಲು ಸುಖ ಪ್ರಾರಬ್ಧ ಉಂಟೆಂದು । ಪೂರ್ಣಬೋಧರು ಬಹುವಿಧದಿಂದ ಅಂತಃಪ್ರೇರಕ । ಬುದ್ಧಿ ಬೇಕೆಂಬೋ ಬುದ್ದಿ ಪ್ರೇರಿಸಿ ತುರಿಯಾಶ್ರಮವನಿತ್ತು । ಮಧ್ವಮುನಿ ಶಾಸ್ತ್ರವ ಅಭ್ಯಾಸವನು ಮಾಡಿಸಿ ಸಮೀಪದಲ್ಲಿ ಬಹುದಿನವಿರಲು। ಅದರರೊಳೊಂದು ದಿನ ನರಹರಿ ಮುನಿಪರು । ತೀರ್ಥಯಾತ್ರೆಯ ಮಾಡುವೆನೆಂದು ಸರ್ವಜ್ಞ ಗುಣನಿಧಿಯ ಕೇಳಿದ ಕಾರಣ । ಆಜ್ಞೆಯಿತ್ತು ಗುರುಪುರಂದರವಿಠಲ ವೇದವ್ಯಾಸನಲ್ಲಿಗೆ ಪೊರಟರಾಗಿ ।। 3 ।।

**ಅಟ್ಟತಾಳ:** ಯಾತ್ರಿಯ ಮಾಡುತ್ತ ನರಹರಿ ಮುನಿಪನು । ಇತ್ತ ಗೋದಾವರಿಯ ನದಿಯದಾಟಿ ಜಗನ್ನಾಥ ಸಮೀಪದಲ್ಲಿ ಸ್ನಾನವಮಾಡಿ ಜಪತಪ ಮಾಡುತ್ತಿರಲು ।। ಬಹುದಿನವಿದ್ದ ಗುರುಪುರಂದರವಿಠಲ ಮೂಲ । ರಾಮಸೀತಾದೇವಿಯರ ನಿರೀಕ್ಷ ಮಾಡುತ್ತಾ ।। 4 ।।

**ರೂಪಕತಾಳ:** ಲಾಂಗೂಲವೆಂಬೋ ನದಿಯ ತೀರದಲ್ಲಿ । ಮೇರುಪರ್ವತದ ಮೇಲು ಭಾಗದಲ್ಲಿ । ಅಷ್ಟದಿಕ್ಪಾಲಕರ ಇಂದ್ರ ಚತುರ್ಮುಖನಿಗೆ ಮನೆಯುಳ್ಳ ಕಾರಣ । ಆತನರಮನೆಯೊಳು ಪೂಜಿತರಾಗಿ । ರಂಗನಾಥ ಮೂಲರಾಮಚಂದ್ರ ಪ್ರತಿಮೆಗಳ । ಅನಂತ ಮೂರುತಿಗಳ ಉಪಾಸನೆಮಾಡುತ್ತ ಚತುರ್ಮುಖನು ಪ್ರತಿಮೆ ಪೂಜಿಸಿ ಜಗದಿ । ಪ್ರಕಟವಾಗಿ ನಿಲ್ಲಿಸಬೇಕೆಂದು । ಪೂರ್ಣಪ್ರಜ್ಞರೆಂಬ ಗುರುಗಳಿಂದರ್ಚಿಸಿಕೊಂಬಾ। ಮೂಲ ರಾಮಚಂದ್ರ ಗುರುಪುರಂದರವಿಠಲನೀತಾ ।। 5 ।।

**ಝುಂಪಿತಾಳ:** ಇಕ್ಷ್ವಾಕುರಾಯ ಇತರ ಭೋಗವ ಬಿಟ್ಟು । ಭಕುತಿಯಲಿ ತಪವಿಡಿದು ಸಾರ್ವಭೌಮನಾ ಕುರಿತು । ಅನೇಕ ಸಾವಿರ ವರುಷ ವಿಷಯವೇದನೆಯಾ । ಬಿಟ್ಟದರ ಆಹಾರದಿಂದ ಬಹು ಕಾಲ ತಪವಿದ್ದು।

ಇಕ್ವಾಕುವಿಗೆ ವೊಲಿದು ಚತುರ್ಮುಖ ರಂಗನಾಥ ಮೂಲರಾಮಸೀತಾದೇವಿಯರ ಪ್ರತಿಮೆಗಳ ಇತ್ತ ಗುರುಪುರಂದರವಿಠಲ ಮೂಲರಾಮಚಂದ್ರನೀತ ।। 6 ।।

**ಧ್ರುವತಾಳ:** ಇಕ್ಷ್ವಾಕುರಾಯನ ವಂಶದಲ್ಲಿ ಹದಿನಾರುಸಾವಿರ ಮಂದಿ । ರಾಯರಿಂದ ಪೂಜಿತರಾಗಿ। ವಸುಧಿಯೊಳು ರಾಮ ನಿರ್ದೋಷನೆಂದು ಪೂಜಿಸಿದ ರಾಜರಾಂಶದಲ್ಲಿ ಪೂಜಿತರಾಗಿ ಬಹುಕಾಲ । ರಂಗನಾಥ ಮೂಲರಾಮಚಂದ್ರ ಸೀತಾದೇವಿಯರ ಪ್ರತಿಮೆಯನು । ದಶರಥ ರಾಮ ತನ್ನ ಪಟ್ಟದ ರಾಣಿ । ಸೀತಾದೇವಿ ಉಪಾಸನೆ ಮಾಡಬೇಕೆನಲು । ಬಿಟ್ಟಿರಲಾರೆಯೆಂದು ಪೂಜಿತನಾದ ಮೂಲರಾಮ ಗುರುಪುರಂದರ ವಿಠ್ಠಲರೇಯಾ ।। 7 ।।

**ಮಟ್ಟತಾಳ:** ಅಯೋಧ್ಯಾಪಟ್ಟಣದಲ್ಲಿ ನಂದಿವರ್ಧನನೆಂಬಾ ದ್ವಿಜನೊಬ್ಬ । ರಾಮನ ಪಾದವ ಕಾಣದೆ ಜಲಪಾನ ಮಾಡನೆಂದು । ನೇಮವನ್ನು ಮಾಡಿ ಬಹುಕಾಲ ಇನಿತು ನಡೆಯುತ್ತಿರಲು । ರಾಮ ಪರಂಧಾಮಕ್ಕೆ ಪೋಗಬೇಕೆಂದು ಕಾಲನಾಮಕ ರುದ್ರನಿಂದ ಭಾಷಿಸುತ್ತಿರಲು । ದ್ವಾರದೊಳು ಲಕ್ಷ್ಮಣನ ಕಾವಲಿಟ್ಟು । ಗುರುಪುರಂದರವಿಠಲ ಪ್ರಾಣಿ ಮಾತ್ರ ಬಿಡದಿರಲೆಂದು ಪೇಳಿದ ಅನುಜಗೆ ।। 8 ।।

**ರೂಪಕತಾಳ:** ರುದ್ರಾಂಶ ದುರ್ವಾಸ ಮಹಕೋಪದಿ ಬರಲು । ನೋಡಿ ಲಕ್ಷ್ಮಣನಾಗ ಚಿತ್ತೈಸಿದನು । ಮುನಿಬಂದ ದುರ್ವಾಸ ಅರವತ್ತುಸಾವಿರ ಮಂದಿ । ಹಿಂದೆ ಮಾಡಿದರಾಗದು ಮುಂದೆ ಮಾಡಿದರಾಗದು। ಒಂದೇ ಕಾಲದಲ್ಲಿ ಅನ್ನ ಕೊಡಬೇಕೆನಲು ಮನ । ಬಂದಂತೆ ಅನ್ನ ಕೊಟ್ಟ ರಾಮ ಗುರುಪುರಂದರವಿಠಲ ದೇವೋತ್ತಮ ।। 9 ।।

**ಅಟ್ಟತಾಳ:** ಸಭೆಯಲ್ಲಿ ಬಂದ ಕುಳಿತ ರಾಮಚಂದ್ರ । ಪ್ರಧಾನಿಗಳ ಕೇಳಿದ ರಾಮಬಾಣಕ್ಕೆ ಅನ್ಯಥವಿಲ್ಲ। ರಾಮವಾಕ್ಯ ತಪ್ಪಲಾಗದು । ವಧೆ ಮಾಡುವೆನನುಜ ಅಪರಾಧ ಮಾಡಿದನೆನಲು ಸರ್ವ । ಸಭೆಯೊಳು ಪ್ರಾಣಪದಕವಾದ ಅನುಜನ ಬಿಡುವದೆ ವಧೆ ಅರ್ಹವೆನಲು । ರಾಮ ಅಪ್ಪಣೆ ಈಯೆನಿತ್ತ ಉರಗ ತನ್ನ ಮೂಲ ರೂಪವ ಧರಿಸಿದ । ಆ ಕಾಲದಲ್ಲಿ ರಾಮ ಎಂಟು ದಿನ ಸಿಂಹಾಸನಕ್ಕೆ ಬಾರದಿರಲು । ದ್ವಿಜನಂದಿವರ್ಧನ ಎಂಟು ದಿನ ಉಪವಾಸವಾದಾ । ರಾಮ ಒಂಭತ್ತನೆ ದಿನ ಸಿಂಹಾಸನಕ್ಕೆ ಬರಲು । ಬ್ರಾಹ್ಮಣ ನಂದಿವರ್ಧನ ಕೈಲಿಕೋಲು ಪಿಡಿದು । ಏಳುತ್ತ ಬೀಳುತ್ತ ಬರಲೂ । ರಾಮ ದ್ವಿಜನು ಯಾಕೆ ಈಪರಿ ಇಪ್ಪನೆನಲು। ರಾಮಪಾದ ಕಾಣದೆ ಆಹಾರ ಕೊಳ್ಳನೆಂಬಂತೆ, ಬಹುಕಾಲದೀ ವ್ರತ ಮಾಡುತಿಪ್ಪನೆಂದು ರಾಮಗೆ ಪೇಳಲು। ರಾಮ ತನ್ನ ರಾಣಿ ಸೀತೆ ಯಾ ಕರವುತಾ । ಮೂಲರಾಮ ಸೀತಾಪ್ರತಿಮೆಗಳ ದ್ವಿಜಗಿತ್ತ । ರಂಗನಾಥ ಗುರುಪುರಂದರವಿಠಲನ ಅದೇ ಕಾಲದಿ ವಿಭೀಷಣನಿಗಿತ್ತಾ ನಂತರ ।। 10 ।।

**ತ್ರಿವಿಡಿತಾಳ:** ರಾಮ ಪರಂಧಾಮಕ್ಕೆ ಸಾಧನ ಮಾಡಿದಜನರನ್ನು । ಕರದೊಯ್ವೆನು ಸಾಧನವಿಲ್ಲದ ಜನರನ್ನು ಮಾಡಿಸಿ ಸಾಧನ ಮುಕ್ತಿಯಾ ಕೊಡುವೆನೆಂದು ಚಿತ್ತೈಸಿದಾ ರಾಮ ವೈಕುಂಠಕ್ಕೆ ಸರಯೂ ಎಂಬ ನದಿಯ ತೀರದಲ್ಲಿ । ಚತುರ್ಮುಖ ಮೊದಲಾದ ಸರ್ವ ದೇವತೆಗಳಿಂದ ತುತಿಸಿಕೊಂಡು । ಅನಂತಮೂರುತಿ ರಾಮ ಗುರುಪುರಂದರವಿಠಲ । ಅನಂತ ಮೂರುತಿ ಒಬ್ಬನಾದ ಕಾರಣ । ವಾಸುದೇವನಲ್ಲಿ ಕೂಡಿದಾ ।। 11 ।।

**ಧ್ರುವತಾಳ:** ರಾಮನಿಲ್ಲದೆ ಪಟ್ಟಣದೊಳು ಸುಮ್ಮನಿರಲು ಕಾರಣವೇನು । ಆ ಮಹಾ ತೀರ್ಥಗಳ ಚರಿಸುವೆನೆಂದು । ನೇಮದಿ ದ್ವಿಜ ಬಂದು ಗಜಪತಿಪಟ್ಟಣ ಸಮೀಪದಲ್ಲಿ ನಲಿಹಳಿ ಗ್ರಾಮದೊಳು । ರಾಮ ಸೀತಾದೇವಿಯರ ಸಮೀಪದಲ್ಲಿಟ್ಟುಕೊಂಡು ಮಲಗಿದಾ ಆ ದ್ವಿಜ । ನೇಮದಂತೆ ಆ ರಾತ್ರಿಯಲಿ ದೇಹಬಿಟ್ಟಾ। ಗ್ರಾಮದಲ್ಲಿದ್ದ ಜನರು ಶುಭಕರ್ಣನೆಂಬ ರಾಯಗೆ ಪೇಳಲು । ರಾಯನೆದ್ದು ಜಗನ್ನಾಥ ಮೂರುತಿಯು

ಕಾಣಿಸದೇ ಪೋಗಲು । ಜಗನ್ನಾಥ ಸ್ವಪ್ನದಿ ಮೂಲ । ರಾಮಸೀತಾದೇವಿಯಾ ದ್ವಿಜ ತಂದು । ಗ್ರಾಮದಲ್ಲಿಟ್ಟು ಮರಣ ಐದಿದಾ । ಆ ಮೂರ್ತಿಗಳ ತಂದು ಪೂಜಿಸಲು ನಿನಗೆ । ವೊಲಿಯುವೆನೆಂದು ಗುರುಪುರಂದರವಿಠಲ ಜಗನ್ನಾಥದೇವರು ಮೂಲ । ರಾಮನ ತೋರಲು ।। 12 ।।

**ಮಟ್ಟತಾಳ:** ರಾಯರ ಶುಭಕರ್ಣ ಕೆಲವು ಕಾಲದ ಮೇಲೆ । ದೇಹವ ಬಿಡಲು ಮಂತ್ರಿ ಪ್ರಧಾನ ಬಂಧು ಜನರು । ದಾಯಾದ್ಯರೊಳಗಿದ್ದ ಕುಶಲರು ಒಂದು । ಆನಿಯ ಸೊಂಡಲಲ್ಲಿ ಮಾಲಿಯನಿತ್ತು ರಾಜಪತ್ನೀ। ಗರ್ಭ ಅಭಿವೃದ್ಧಿ ಆಗುವ ಪರಿಯಂತೆ ಮಾಲೆ । ಯಾವನಾ ಕೊರಳಲ್ಲಿ ಇಡುವುದೋ । ಆತನೇ ಪಟ್ಟವನಾಳಬೇಕೆಂದು ತಿರುಗುತಿರಲು । ಷಣ್ಮಾಸ ಸಂಚಾರವನ್ನು ಮಾಡಿ । ಅಂತಃಪ್ರೇರಕನಾದ ವೇದವ್ಯಾಸನು। ಪೂರ್ಣಬೋಧರಾಯರ ಪ್ರೇರಣೆಯಿಂದ । ನರಹರಿ ಮುನಿಪ ತಪ ಮಾಡುತ್ತಿರಲು । ಆನೆ ಮಾಲೆ ತಂದು ಕೊರಳಲ್ಲಿ ಹಾಕಲು । ಸರ್ವರು ಸಿಂಹಾಸನಕ್ಕೆ ಕರೆಯಲು । ಸರ್ವಜ್ಞಗುರುಗಳ ನಿಧಿ ಪೇಳಿದ ವಾಕ್ಯವ ನೆನದು ಸಿಂಹಾಸನದಲ್ಲಿ ಕುಳಿತು ನಮ್ಮ । ಗುರುಪುರಂದರವಿಠಲನ ಇದೊಂದು ಪ್ರಕಾರ ಪೂಜೆಯೆಂದು ಸಿಂಹಾಸನದಿ ಹನ್ನೆರಡುವರೆವರುಷ ಪಟ್ಟವಾಳಿದಾ ।। 13 ।।

**ರೂಪಕ ತಾಳ:** ರಾಜಸುತ ಪ್ರೌಢನಾದುದು ಕಂಡು ಸಾಮ । ರಾಜ್ಯ ಅವಗಿತ್ತು ಪೋಗುವೆನೆನಲು ನಿಮ್ಮಕಾಲದಲಿ ಬಂದಾ ಪೂ । ರ್ವಾರ್ಜಿತ ದ್ರವ್ಯ ರತ್ನ ಕೊಡುವೆನೆಂದೆನಲು ಅದರಾ ಸರ್ವ ಬಿಟ್ಟು । ಮೂಲರಾಮಚಂದ್ರ ಗುರುಪುರಂದರವಿಠ್ಠಲ ಬಂದಾ ಮಧ್ವಮುನಿ ಇದ್ದೆಡೆಗೆ ।। 14 ।।

**ಝಂಪೆತಾಳ:** ಗುರುಪೂರ್ಣಬೋಧಕರು ವೇದವ್ಯಾಸನಲ್ಲಿ ಪೋಗಿ । ಆಜ್ಞಾಪಿಸಿದಂತೆ ಮಾಡಿದೆನೆನಲು। ವೇದವ್ಯಾಸ ಅಂಕಿತ ಶಿಷ್ಯರಿಗಿತ್ತು ಇನ್ನೊಮ್ಮೆ ಪೋಗಿ ಬಾ ಎಂದರಾಗಿ। ಎಂಟು ವೇದವ್ಯಾಸರೆಂಬ ಮಳಲಿ ಮುಟ್ಟಿಗಿಯನು । ಬದರಿ ನಾರಾಯಣನಲ್ಲಿಟ್ಟುಕೂಡಿ। ಎಂಟು ವೇದವ್ಯಾಸ ಮೂರುತಿಗಳ ಕೊಂಡು । ರಜತಪೀಠ ಪುರದಿ ಉದಧಿ ತೀರದಲ್ಲಿ । ಜಪಮಾಡುತ್ತಿರಲು ಮಧ್ವಮುನಿಪನು ಕಂಡು । ಹಡಗು ಮುಳುಗುತ್ತಲಿದೆ ಇದನ್ನು ಕಂಡು ಶಾಠಿಯನ್ನು ಬೀಸಲು । ಹಡಗು ಬಂದು ನಿಲ್ಲಲು । ಆ ಮನುಜರಗಾಧದಿಂ ನೀವೆಲ್ಲವ ಕೊಂಬದೆನಲು। ಮಧ್ವಮುನಿ ಪೂರ್ಣನಾದ ಕಾರಣ ಶ್ರೀಕೃಷ್ಣ ಮೂರುತಿಯ । ಗೋಪಿಚಂದನದೊಳು ಬಂದುದಾ ಕಂಡು । ಆ ಗಡ್ಡೆಯಾ ತೆಗೆದುಕೊಂಡು ಅಭಿಷೇಕ ಮಾಡಿ । ಸಿರಿ ಕೃಷ್ಣ ಗುರುಪುರಂದರವಿಠ್ಠಲಗೆ ।। 15 ।।

**ತ್ರಿವಿಡಿತಾಳ:** ಶ್ರೀಕೃಷ್ಣನ್ನ ಪಂಚಾಮೃತವಭಿಷೇಕ ಮಾಡುವ ಕಾಲದಲ್ಲಿ । ಮೂಲರಾಮಚಂದ್ರ ಸೀತಾದೇವಿಯರ ತಂದು । ಮುಂದಿಟ್ಟು ಚರಣಗಳಗೆರಗಿ ಪದ್ಮನಾಭರು-ನರಹರಿತೀರ್ಥರು ಯಾತ್ರೆಯವ ಮಾಡಿದ ಸೇವೆ ಕಂಡು। ಅತಿ ಹರುಷದಿ ಒಡನೆ ಅಭಿಷೇಕವನು ಮಾಡಿ । ಮೂಲರಾಮಚಂದ್ರ ಸೀತಾದೇವಿಯರರ್ಚಿಸಿ ಕೆಲ ದಿನ ಪೂಜಿಸಿ। ಮೂಲರಾಮ ಸೀತಾದೇವಿಯ ಇತ್ತು ಪದುಮನಾಭಯತಿಗೆ। ಮೊದಲು ಪಟ್ಟವ ಪಾಲಿಸಿದಾ ಏಳುವರುಷ ಪೂಜಿಸಿ । ಮಧುವರ್ಣ ನೀಲ ಬೆಳಕಾದ ಮೂರುತಿ ನಾಲ್ಕು। ಶುದ್ಧ ನೀಲವರ್ಣ ಮೂರುತಿ ಒಂದು । ಎರಡು ರಕ್ತವರ್ಣ ಮೂರುತಿಗಳು । ಸಂಪುಟದೊಳಿಪ್ಪವು ಶುಭ್ರವರ್ಣ ವೇದವ್ಯಾಸನು। ಸಂಕರುಷಣಂತರ್ಯಾಮಿ ಯಾಗಿವುಳ್ಳ । ಸುಬ್ಬರಾಯನಲ್ಲಿ ಪೂಜಿತನಾದ ಮೂರ್ತಿ । ಮಧ್ಯತಾಳದಲ್ಲಿ ಮಧುವರ್ಣಮೂರ್ತಿ ವಂದಿಟ್ಟು। ಪಂಚವೇದವ್ಯಾಸರನು। ದಿಗ್ವಿಜಯರಾಮ ಮೂಲ ರಾಮ ಸೀತಾದೇವಿಯಾ । ಮೂರುಪ್ರತಿಮೆಯಾ ಪದುಮನಾಭರಿಗೆ ಪಾಲಿಸಿ । ಕ್ರಮದಿಂದ ಆಳೆಂದು ಗುರುಪುರಂದರವಿಠ್ಠಲ ವೇದವ್ಯಾಸನಲ್ಲಿಗೆ ಮಧ್ವವಂಶದಿ ಪೂಜಿತವಾಗಿಪ್ಪವು ।।

**ಝಂಪಿತಾಳ:** ಮತ್ತೆಂಟು ಮೂರ್ತಿಗಳ ಪೂಜಿಸಿ ಕೃಷ್ಣಾರ್ಚಕರಿಗೆ । ಒಂದೊಂದು ಪ್ರತಿಮೆ ಬ್ಯಾರೆ ಬ್ಯಾರೆ ಬ್ಯಾರೆ ಇತ್ತು । ಬಟ್ಟು ಕೋದಂಡರಾಮ ಕಾಳಿಂಗಮರ್ದನ ತ್ರಿವಿಕ್ರಮ, ವರಹ, ನರಸಿಂಹ, ಹಯಗ್ರೀವ,

ಕೃಷ್ಣನೆಂಬ ಮೂರುತಿಯನ್ನು ಪೂಜಿಸಿಕೊಂಡು ಇದ್ದಲ್ಲೆ ಇರು ಎಂದು ಪೂರ್ಣಪ್ರಜ್ಞರಾಯರು ವೇದವ್ಯಾಸನಲ್ಲಿಗೆ ಪೋದರಾಗಿ । ವೇದವ್ಯಾಸ ಗುರುಪುರಂದರವಿಠ್ಠಲನ್ನ ಮತವಿದು ।। 17 ।।

**ರೂಪಕತಾಳ:** ಮಧ್ವಮುನಿ ಋಜುಗಣದೊಳ ದೇವತೆಗಳ ಮತ । ಪರಿಯಂತ ದೇವತೆಗಳ ಮನು ಮುನಿಗಳ । ಮನುಜೋತ್ತುಮರ ಪರಿಯಂತಾಗಿ । ಅನಾದಿ ಮೂರುತಿ ಗುರುಪುರಂದರ ವಿಠ್ಠಲ । ಮೂಲರಾಮ ಪಂಚವೇದವ್ಯಾಸ ಸ್ಥಿರವಾಗಿಪ್ಪದು ।। 18 ।।

**ಅಟ್ಟತಾಳ:** ಮಾಧವತೀರ್ಥರ ಕಾಲದಲಿ ಪೀಳಿಗೆ ರಾಮಚಂದ್ರನು ಸ್ವಪ್ನದಿ ದ್ವಿಜ ತಂದಾ । ಅಕ್ಷೋಭ್ಯತೀರ್ಥರ ಕಾಲದಿ ಪ್ರಸನ್ನವಿಠ್ಠಲನೆಂಬ । ಮೂರುತಿಯ ಲಕ್ಷ್ಮೀಧರಶಾಸ್ತ್ರಿ ತಂದಿತ್ತ । ಪಂಚಮನ । ವ್ಯಾಸರಾಜಾರ್ಯಮುನಿ ಕಾಲದಲ್ಲಿ ಐದು ಪ್ರತಿಮೆ ಒಂದಾಗಿ ಪೂಜಿಸಿ ಗುರುಪುರಂದರವಿಠ್ಠಲನ್ನ ಸನ್ನಿಧಾನ ವಿಶೇಷದಿ ।। 19 ।।

**ಆದಿತಾಳ:** ಬೋಧಗುರುವೇ ಪರದೇವತಿ ಮೂಲರಾಮನೆಂದು ಭಜಿಪರಿಗೆ ಮುಕುತಿ । ಇದುವಲ್ಲದವರಿಗೆ ಅಂಧತಮಸು । ಹರಿಹರನು ಬೊಮ್ಮವೆಂಬಾನಿತ್ಯ ಸಂಸಾರಿಗೆ ಚಂಚಲ ಬುದ್ಧಿ । ಇನಿತು ತ್ರಿವಿಧಗತಿಯನ್ನು ಪ್ರೇರಿಸಿ ಮಧ್ವಮುನಿ । ಮುಕುತಿ ಯೋಗ್ಯರಿಗೆಲ್ಲ ಮುಕುತಿ ಶಾಸ್ತ್ರವ ಬೀರಿ । ಪೂರ್ಣಬೋಧ **ಮೂಲರಾಮಚಂದ್ರ ಸೀತಾದೇವಿಯ** । ಭಜಿಸುವರಿಗೆ ಮುಕುತಿ ತಾರತಮ್ಯದಿಂದಲಿ । ರಮಾಬ್ರಹ್ಮಾದಿವಂದಿತ ಗುರುಪುರಂದರವಿಠಲ ಕರುಣಿಸುವನು ದಯದಿಂದ ।। 20 ।।

**ಜತೆ:** ಸಲೆನಂಬಿ ತುತಿಪರಿಗೆ ಗುರುಪುರಂದರವಿಠಲ । ಒಲಿವ **ಮೂಲರಾಮ** ಸೀತೆಯೊಡನೆನಿರುತ ।। 21 ।।

**(ಈ ಪ್ರಾಚೀನ ಕಾಲದ ಕೃತಿಯನ್ನು ಶ್ರೀರಾಯರ ಮಠದಿಂದ ಪ್ರಕಟಿತ 'ಶ್ರೀಮೂಲರಾಮ'** (2004) **ಪುಸ್ತಕದಲ್ಲಿಯೂ ಪುಟ 47ರಿಂದ 57ರಲ್ಲಿ ಮುದ್ರಿಸಲಾಗಿದೆ.)**

# ಅನುಬಂಧ 5: ಹೆಚ್ಚಿನ ಆಧಾರಗಳು

ಉತ್ತರಾದಿಮಠದಿಂದ ಪ್ರಕಟಿತವಾದ ಸಸೀತಾಮೂಲರಾಮಾರ್ಚಾ ಕೃತಿಯಲ್ಲಿ ಪ್ರಕಟವಾಗದಿರುವ ಕೆಲವು ಹೆಚ್ಚಿನ ಆಧಾರಗಳು

**1. ಬ್ರಾಹ್ಮಣೋತ್ಪತ್ತಿಮಾರ್ತಾಂಡ**

'' ಬೃಹಜ್ಜ್ಯೋತಿಷಾರ್ಣವ '' ಎಂಬ ಪ್ರಾಚೀನ ಬೃಹದ್‌ಗ್ರಂಥದ ''ಬ್ರಾಹ್ಮಣೋತ್ಪತ್ತಿಮಾರ್ತಂಡ'' ಎಂಬ 16 ನೇ ಅಧ್ಯಾಯವು ಸಮಗ್ರಭಾರತದ ಬ್ರಾಹ್ಮಣರ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಈ ಅಧ್ಯಾಯದ ಪಂಚಮ ಪ್ರಕರಣದಲ್ಲಿ ಕರ್ನಾಟಕ ಬ್ರಾಹ್ಮಣರ ಬಗ್ಗೆ ತಿಳಿಸುವಾಗ ಶ್ರೀಮದುತ್ತರಾದಿಮಠದ ಉತ್ತಮತ್ವದ ಬಗ್ಗೆ ಸ್ಪಷ್ಟ ಉಲ್ಲೇಖ ಉಂಟು. ಈ ಕೃತಿ ಮಾಧ್ವೇತರರಿಂದ ರಚಿತವಾದದ್ದೆಂಬುದು ಗಮನಾರ್ಹ.

**ಸವಾಸೇಸಂಜ್ಞಕಾಶ್ಚಾದ್ಯಸ್ತಥಾ ಷಷ್ಟಿಕುಲಾಭಿದಃ ।**
**ವ್ಯಾಸಸ್ವಾಮೀಮಠಸ್ಥಶ್ಚ ರಾಘವೇಂದ್ರಮಠಾಭಿಧಃ ॥**
**ಉಡುಪೀತುಲವಾಖ್ಯಶ್ಚ ಮಠಸ್ಯ ಸೇವಕಸ್ತಥಾ ।**
**ಉತ್ತರಾದಿಮಠಸ್ಯೈವ ಸೇವಕಶ್ಚೋತ್ತಮೋತ್ತಮಃ ॥**

**2. ಶ್ರೀಸತ್ಯಬೋಧವಿಜಯ**

ದಿವಾನ ಖಂಡೇರಾಯನ ಪ್ರಾರ್ಥನೆಯ ಪ್ರಕಾರ ರಚಿಸಲ್ಪಟ್ಟ ಶ್ರೀಸತ್ಯಬೋಧವಿಜಯ ಕಾವ್ಯದಲ್ಲಿ ಶ್ರೀ ಮದುತ್ತರಾದಿಮಠದ ಉತ್ತಮತ್ವವನ್ನು ಹೀಗೆ ದಾಖಲಿಸಲಾಗಿದೆ.

**ಸಂಸ್ಥಾನಾನಿ ತ್ರೀಣಿ ಮಾಧ್ವೇಷ್ವಿಹೋರ್ವ್ಯಾಂ**
**ಲೋಕೇಷ್ವಷ್ಟಾ ರೂಪ್ಯಪೀಠಾಲಯೇ ತು ।**
**ತೇಷಾಂ ಮಧ್ಯೇ ಯದ್ ಗರಿಷ್ಠಂ ತದೀಶೋ**
**ಯಃ ಶ್ರೀರಂಗೇ ಸತ್ಯಧೀಃ ಸೋಽಧುನಾಸ್ತಿ ॥ ಸರ್ಗ 9 ಶ್ಲೋಕ 7**

**3. ಗುರುಚಂದ್ರಕಲೋದಯ**

**ಸೀರಜಾತಯಾ ಯತೋ ಹಿ ಮೂಲರಾಮ ಏಕದಾ**
**ಚೋರನೀತ ಆಗತೋ ಯದಾದಿತೋಽಂತಿಕಂ ಪುನಃ ।**
**ಯದ್ಗುರೋರ್ಯಮೇವ ವೇದಬೋಧನಾಯ ತದ್ಗುರೌ**
**ಭಕ್ತಿರಸ್ತು ಯತ್ಯಧೀಶಸತ್ಯಧರ್ಮಶರ್ಮಣಿ ॥**

ಶ್ರೀಸತ್ಯಧರ್ಮತೀರ್ಥರ ಚರಿತ್ರೆಯನ್ನು ಚಿತ್ರಿಸುವ ಗುರುಚಂದ್ರಕಲೋದಯ ಎಂಬ ಕಾವ್ಯದ ಕರ್ತೃಗಳಾದ ಶ್ರೀಕಲ್ಲಾಪುರ ರಾಮಚಂದ್ರಾಚಾರ್ಯರು ರಚಿಸಿರುವ ಕೃತಿ. ಇವರು ಸಾಕ್ಷಾತ್ ಶ್ರೀಸತ್ಯಧರ್ಮತೀರ್ಥರ ಶಿಷ್ಯರೆಂಬುವುದು ಗಮನಾರ್ಹ.

## 4. ವಿಜಯದಾಸರ ಆಹ್ನಿಕಪದ್ಧತಿ

ಆಹ್ನೀಕಪದ್ಧತಿಯ ಆದರದಿ ಕೇಳಿ
ಗುರುವಿಜಯದಾಸರ ಮಹಿಮೆಯನನವರತ ॥ ಪ ॥
ಈ ಪರಿಯ ಧ್ಯಾನದಿಂದ ಅಸ್ತಮಾನಗಳಾಗೆ । ಸಂಧ್ಯಾ ಜಪಾಹ್ನೀಕಗಳ ಮುಗಿಸಿಕೊಂಡು । ರವಿಕೋಟಿತೇಜದಂತೆಸೆವ ಬಳಿಯಲಿ ಕುಳಿತು । ತಂಬೂರಿನಾದ ಝೇಂಕರಿಸುವವರ ॥ 50 ॥
ಸನಕಸನಂದದೂರ್ವಾಸ ಪರತೀರ್ಥಪ್ರಾಜ್ಞಅಚ್ಯುತಪ್ರೇಕ್ಷರ । ಪದ್ಮನಾಭ ನರಹರಿ ಮಾಧವ ಅಕ್ಷೋಭ್ಯ । ಜಯರಾಯ ವಿದ್ಯಾಧಿರಾಜ ಕವೀಂದ್ರ ರಾಮಚಂದ್ರರ ॥ 51 ॥
ವಿದ್ಯಾನಿಧಿರಘುನಾಥ ರಘುವರ್ಯರಘೂತ್ತಮ ಸತ್ಯವ್ರತ ಸತ್ಯನಿಧಿ ಸತ್ಯಾಭಿನವತೀರ್ಥರ ಸತ್ಯಪೂರ್ಣಸತ್ಯವಿಜಯ ಗುರುಪರಂಪರಸ್ತುತಿಸಿ ಕೊಂಡಾಡುವವ ॥ 52 ॥
ಸತ್ಯಬೋಧರ ಭಜಿಸಿ ಪುರಂದರರ ವಂದಿಸಿ ಗುರು ವಾದಿರಾಜರ ಸ್ತೋತ್ರ ಮಾಡಿ ವ್ಯಾಸಮುನಿ ಶ್ರೀಪಾದರಾಯರಿಗೆರಗಿ । ತಾ ಗುರುರಾಘವೇಂದ್ರ ರಾಯರ ಮಹಿಮೆಯನು ಅನವರತ ॥ 53 ॥
ಸಂಧ್ಯಾಮುಪಾಸೀತ ಪೂರ್ವವತ್ - ಸದಾಚಾರ ಸ್ಮೃತಿ
ನುಡಿ 50 ರಿಂದ 62 ಪೂರ್ತಿ ಸಾಯಂಕಾಲದ ಅಹ್ನೀಕಾನಂತರ ಶ್ರೀದಾಸರು ರಾತ್ರಿ ಭಜನ ಮಾಡಿದ್ದರ ವಿವರ ಇದೆ. ಅದೂ ತಾರತಮ್ಯಾನುಗುಣವಾಗಿ.

ಶ್ರೀವಿಜಯದಾಸರ ಆಹ್ನೀಕಪದ್ಧತಿ ( ಪುಟ -18)
ಸಂ: ದಾಸಶಾಸ್ತ್ರನಿಧಿ ಎಂ. ಟಿ ಪ್ರಹ್ಲಾದ, ಪ್ರಕಾ: ವ್ಯೋಮಕೇಶಪ್ರಕಾಶನ, ಬೆಂಗಳೂರು - 2009

ಪ್ರಾತಃಸ್ಮರಣೀಯರಾದ ಶ್ರೀವಿಜಯದಾಸರ ಆಹ್ನಿಕಪದ್ಧತಿಯನ್ನು ಕೃತಿಯ ರೂಪದಲ್ಲಿ ವಿರಚಿಸಿದವರು ಶ್ರೀಗುರುವೇಣುಗೋಪಾಲದಾಸ ವಿಠ್ಠಲರು. ಇವರು ಶ್ರೀವಿಜಯದಾಸರ ಸಾಕ್ಷಾತ್ ಶಿಷ್ಯರಾದ ಶ್ರೀವೇಣು ಗೋಪಾಲದಾಸರ ಶಿಷ್ಯರು. ಇವರ ಈ ಕೃತಿಯಲ್ಲಿ ಶ್ರೀವಿಜಯದಾಸರು ತಮ್ಮ ಸಾಯಂಕಾಲದ ಆಹ್ನಿಕದಲ್ಲಿ ಸ್ಮರಿಸುತ್ತಿದ್ದ ಗುರುಪರಂಪರೆಯನ್ನು ಕಾಣಬಹುದಾಗಿದೆ.

## 5. ಪ್ರಸನ್ನವೆಂಕಟದಾಸರ ಕೃತಿ

ನೆನೆವೆ ಮಾರುತಿಯಾ ಸಂತತಿಯಾ । ಮುನಿತತಿಯಾ ॥ನಾ॥
ನೆನೆವೆ ಮೂಲರಾಮವ್ಯಾಸಾರ್ಚಕರ । ಭಾವುಕರಾ ॥ಪ॥
ದುರ್ವಾದಿ ತಿಮಿರಾ ದಿನೇಶಾ । ವಾಮೇಶಾ । ಅ-
ಪೂರ್ವಚರಿತ ರಾಮಚಂದ್ರ ಯತೀಂದ್ರ ।
ಉರ್ವಿಸುರರು ವಿದ್ಯಾ ನಿಧಿಯಾ । ಗುಣನಿಧಿಯಾ । ಶ್ರೀ-
ಸರ್ವಜ್ಞ ಶಾಸ್ತ್ರಜ್ಞನಾಥಾ । ರಘುನಾಥರಾ ॥ 3 ॥
.........................................
ಸೀತಾ ಮೂಲರಾಮಾವಿಠಲ ವಿಜಯರಾಮಾ ।
ಖ್ಯಾತ ಪಂಚವ್ಯಾಸಾಂಘ್ರಿ ಕಮಲಾ ಭ್ರಮರರಾ ।

**ವಾತಜಮತವಾದ ಶೋಧ ಸತ್ಯಬೋಧ ಮಾ**
**ನಾಥಾ ಪ್ರಸನ್ನ ವೇಂಕಟ ಕೃಷ್ಣಾಂಘ್ರಿ ನಿಷ್ಠಾ ॥ 9 ॥**

ಶ್ರೀಗೋರೇಬಾಳ ಹನುಮಂತರಾಯರ ಹಸ್ತಪ್ರತಿಸಂಗ್ರಹದಿಂದ
ಶ್ರೀಪ್ರಸನ್ನವೆಂಕಟದಾಸರ ಅಪ್ರಕಟಿತ ಕೃತಿಗಳು (ಪುಟ - 61),
ಪ್ರಕಾ: ಶ್ರೀವರದೇಂದ್ರ ಹರಿದಾಸ ಸಾಹಿತ್ಯಮಂಡಲ, ಲಿಂಗಸುಗೂರು -2012)

ಶ್ರೀಪ್ರಸನ್ನವೆಂಕಟದಾಸರು ಶ್ರೀವಿಜಯದಾಸರ ಸಮಕಾಲೀನರು. ಶ್ರೀವಿಜಯದಾಸರು ಶ್ರೀಗೋಪಾಲದಾಸರಂತಹ ಮಹನೀಯರಿಂದ ಶ್ಲಾಘಿತರು. ಸಾಕ್ಷಾತ್ ಶ್ರೀಶ್ರೀನಿವಾಸನಿಂದ ''ಪ್ರಸನ್ನವೆಂಕಟ'' ಎಂಬ ಅಂಕಿತ ಪಡೆದವರು. ಇವರನ್ನ ನೋಡಿ ''ಶಿರಬಾಗಿ ನಮಿಸಿ ನಾ ಧನ್ಯತೆಯ ಕಂಡೆ'' ಎಂದು ಶ್ರೀಗೋಪಾಲದಾಸರು ಹೇಳಿಕೊಂಡಿದ್ದಾರೆ. ಆ ಕೃತಿ ಈ ಕೆಳಗಿನಂತಿದೆ.

**ಹರಿದಾಸರಾನಂದ ನೋಡಿ ಬಂದೆ ॥ ಪ. ॥**

**ಸಿರಿಪ್ರಸನ್ವೇಂಕಟನ ಕಿಂಕರರು ಇವರೆಂದು ।**
**ಸಿರಬಾಗಿ ನಮಿಸಿ ನಾ ಧನ್ಯತೆಯ ಕಂಡೆ ॥ಅ.ಪ॥**

**ಮನವನರ್ಪಿಸಿ ಹನುಮನಯ್ಯನಲಿ ದಿನದಿನ ।**
**ಘನ ಭಕುತಿ ವೈರಾಗ್ಯ ಪಡೆದ ಸಂಪನ್ನ ।**
**ಸನ್ನುತವು ಸುಖತೀರ್ಥಮತತತ್ವದಧ್ಯಯನ ।**
**ಜ್ಞಾನ ಧ್ಯಾನದ ತವರು ಹರಿದಾಸರತುನ ॥ 1 ॥**

**ಸಾಕಲ್ಯ ಸಾರೂಪ್ಯ ಸಾಯುಜ್ಯಸುಖವಾ ।**
**ಸಕಲಶ್ರವಣಾದಿ ನವಭಕುತಿ ಸಾಧನವಾ-**
**ನೀಕತಾಗಳಿಸಿ ನಿಜಹರಿಭಕುತರೆನಿಸಿ ।**
**ಲೋಕಪಾವನರೆನಿಸಿ ಮೆರೆಯುತಿಹ ತೇಜಸ್ವಿ ॥ 2 ॥**

**ದಿಟದಿ ಬಾಗಿಲುಕೋಟೆ ಘಟತಟಾಪುರದಿ ।**
**ಘೂಟನಾಮುಗಳ್ಗಚ್ಚಿ ತಂಬೂರಿ ಮೀಟುತ್ತ ।**
**ವಟಪತ್ರಶಾಯಿ ಹರಿ ಗೋಪಾಲವಿಠ್ಠಲನ**
**ದಿಟವಾದ ನಾಮುಗಳ ವಟವಟಿಸುವಂಥ ॥ 3 ॥**

ಶ್ರೀಪ್ರಸನ್ನವೆಂಕಟದಾಸರ ಕೀರ್ತನೆಗಳನ್ನು ಕೇಳಿದ ಶ್ರೀವಿಜಯದಾಸರು ''ಮನ ಸೋತು ಇದು ಕಾಕಂಬೀರಸ'' ಎಂದು ಉದ್ಗಾರ ಮಾಡುತ್ತಿದ್ದರೆಂದು ಶ್ರೀವರದೇಂದ್ರ ಹರಿದಾಸಸಾಹಿತ್ಯ ಮಂಡಲ ರಾಯಚೂರಿನವರು ಪ್ರಕಟಿಸಿದ ಪ್ರಸನ್ನವೆಂಕಟದಾಸರ ಅಪ್ರಕಟಿತ ಕೃತಿಗಳು ಎಂಬ ಪುಸ್ತಕದಲ್ಲಿ ಉಂಟು.

ಇಂತಹ ಮಹಾನುಭಾರಾದ ಪ್ರಸನ್ನವೆಂಕಟದಾಸರ ಮುಖಕಮಲದಿಂದ ಹೊರಹೊಮ್ಮಿದ ನೆನೆವೆ ಮಾರುತಿಯಾ ಸಂತತಿಯಾ ಎಂಬ ಮೇಲಿನ ಕೃತಿ ಅತೀ ಸ್ಪಷ್ಟವಾಗಿ ಮೂಲಸೀತಾಸಮೇತ ಮೂಲರಾಮಾದಿ ಪ್ರಧಾನ ಮೂರ್ತಿಗಳು ಯಾವ ಪರಂಪರೆಯಲ್ಲಿ ಪೂಜೆಗೊಳ್ಳುತ್ತಾ ಬಂದಿವೆ ಎನ್ನುವುದನ್ನು ತಿಳಿಸುತ್ತಿದೆ.

## 6. ಶ್ರೀಮೋಹನದಾಸರ ಕೃತಿ

ಏನ ಪೇಳಲಿ ಇವರ ಕೀರ್ತಿ
ಶ್ರೀನಾಥ ರಾಮ ಬಂದನು ಭವ್ಯ ಮೂರ್ತಿ ॥ಪ॥

ಅಂದು ನರಹರಿ ಯತಿಯು ತಂದದ್ದು ನಾ ಕರ್ಣ-
ದಿಂದ ಕೇಳಿ ಬಲ್ಲೆ ನಾ ಕಂಡದ್ದು ಇಲ್ಲ।
ಇಂದೆಮ್ಮ ಗುರು ಸತ್ಯಸಂಧ ಸುತರಿಗೊಲಿದು
ಬಂದ ರಾಮನ ಕಣ್ಣಿಂದ ನಾ ಕಂಡೆ ॥ 1 ॥

ಆಗ ಶ್ರೀರಘುನಾಥ ಯೋಗಿಗೊಲಿದು ಕೂರ್ಮ
ನಾಗಿ ಬಂದದ್ದು ನಾನು ಕೇಳಿ ಬಲ್ಲೆ।
ಈಗ ಸತ್ಯವರರ ಯೋಗಕೊಲಿದು ರಾಮ
ಬ್ಯಾಗ ಬಂದದ್ದು ಚೆನ್ನಾಗಿ ನಾ ಕಂಡೆ ॥ 2 ॥

ಅವರೊಯ್ದರಿವರೊಯ್ದರೆಂಬ ಮಾತುಗಳ್ ಪುಸಿ
ಅವನ ಸತಿಯು ತನ್ನ ತವರು ಮನೆಗೆ।
ತವಕದಿಂದಲಿ ಕರದೊಯ್ಯೆ ಈ ಗುರುಗಳ ತಪಕೆ
ಭುವನ ತಲ್ಲಣಿಸಲು ಭುವನೇಶ ಬಂದ ॥ 3 ॥

ನಾಮಗೊಂಡಲು ಈ ಭೂಮಿದೇವಿ ಇಲ್ಲಿ
ತಾ ಮಗಳು ಅಳಿಯನ್ನ ಕರೆದು ಒಯ್ದು।
ಪಾಮರರಿಗೆ ಪೋದರೆಂದೆಂಬ ಭ್ರಮೆಯನ್ನು ತೋರಿ
ಈ ಮುನಿಯ ಮಾನಸ ಹಂಸನಾಗಿದ್ದ ॥ 4 ॥

ಒಂದು ಮಾಸೋಪವಾಸ ಮಾಡಿದವರಿಗೆ
ಬಂದೊದಗುವ ಜಗದೊಳಗೆ ಖ್ಯಾತಿ ॥
ಸಂದೇಹವಿಲ್ಲದೆ ಅನಶನ ವ್ರತವನ್ನು
ಒಂದು ತಿಂಗಳು ಮಾಡಿ ಇಂದಿರೇಶನ ತಂದ ॥ 5 ॥

ನಳನಾಮ ಸಂವತ್ಸರ ಫಾಲ್ಗುಣ ಬಹುಳ ದ್ವಾದಶಿ
ನಳಿನಾಕ್ಷ ರಾಮಸ್ವಾಮಿಯು ಹೊರಟು ॥
ಖಳರ ಖಂಡಿಸಿ ತಾನು ಇವರ ಭಾವಕೆ ಮೆಚ್ಚಿ
ಲಲನೆ ಸಹಿತವಾಗಿ ಭುವನೇಶ ಬಂದ ॥ 6 ॥

ಗಂಗಾದಿ ಸಕಲ ತೀರ್ಥಗಳಲ್ಲಿ ಮಿಂದು ಶ್ರೀ-
ರಂಗಾದಿಯಲ್ಲಿ ಮೋಹನ ವಿಠಲನ್ನ ॥
ಸಂಗೀತರಿಗೆ ಸರ್ವದಾಧಿಕ ಫಲ
ಸಂಘಟಿಸುವದು ಸಜ್ಜನರು ಕೇಳಿ ॥ 7 ॥

ಶ್ರೀವಿಜಯದಾಸರ ಸಾಕುಮಕ್ಕಳಾದ ಶ್ರೀಮೋಹನದಾಸರ ಈ ಕೃತಿಯು ಶ್ರೀಸತ್ಯವರರ ಕಾಲಕ್ಕೆ ರಚಿತವಾದದ್ದು. ಇದನ್ನು ಚಿಪ್ಪಗಿರಿಯಲ್ಲಿರುವ ಮೂಲ ಹಸ್ತಪ್ರತಿಗಳಲ್ಲಿ ಕಾಣಬಹುದಾಗಿದೆ.

## 7. ಶ್ರೀವೆಂಕಟವಿಠ್ಠಲರ ಕೃತಿ

ಸತ್ಯಬೋಧರಾಯಾ ಪಾಲಿಸೋ ಭೃತ್ಯಜನರ ಪ್ರೀಯಾ ।
ನಿತ್ಯದಲಿ ತುತಿಪೆ ಮನದೊಳು ಚಿತ್ತಜ ಪಿತನು ಉತ್ತಮ ಮತಿ ಕೊಡು ॥ಪ॥

ಸೂರಿ ಜನರ ವಂದ್ಯಾ ಈ ಭವ
ವಾರಿಧಿಯೊಳು ನೊಂದಾ ಆರಾತ ಜನರಿಗೆ ತೋರಿಸಿ
ಹರಿಯನು ಕೀರುತಿಯೊಳು ಸುವಾರುತೇ ಪೇಳಿಸು ॥ 1 ॥

ಸತ್ಯಪ್ರಿಯರೆಂಬ ಯತಿಗಳ ಉತ್ತಮ ಕರದಿಂದ ।
ಮತ್ತೆ ನೀ ಜನಿಸಿ ಈ ಕ್ಷಿತಿಯ ಜನರಿಗೆ
ಮುತ್ತಿನಂತೆ ಮುದಜ್ಞಾನವ ತೋರುವೆ ॥ 2 ॥

ಅಪರಾತ್ರಿಯೊಳನ್ನಾ ಉಣುವ ವಿಪರೀತವೇನೆಂದು
ಅಪಹಾಸ ಮಾಡಿದವರೀಗಾಕ್ಷಣ ।
ತಪನ ತೋರಿದಾ ವಿಪರೀತ ಮಹಿಮನೇ ॥ 3 ॥

ಗಂಗೆಗೆ ನೀ ಪೋಗಿ ತಾ ಉತ್ತುಂಗಮನಿರೆ ಯೋಗಿ
ಅಂಗನೆ ತಾನತಿಶಯದಿ ತೆರಳಿ ಬಂದು
ಮಂಗಳ ಸ್ನಾನವ ಮಾಡಿಸಿದಳು ಅಂದು ॥ 4 ॥

ಮೂಲರಾಮ ಸೀತಾ ಪೀಳಿಗಿರಾಮ ವೇದವ್ಯಾಸ ।
ಸಾಲಿಗ್ರಾಮ ದಿಗ್ವಿಜಯ ರಾಮನನು
ಕಾಲ ಕಾಲ ಅನುಕೂಲ ಪೂಜಿಸುವೆ ॥ 5 ॥

ತೊಟ್ಟಿಲ ಪೂಜೆಯೊಳು ಹಲಿಗೆ ನಿಟ್ಟಾಭರಣಗಳು
ದಿಟವ ನೋಡುವ ನಿಟಸಿ ಕ್ಷಣಕ್ಷಣಕೆ
ಮುಟ್ಟಿಮನದಿ ಇಷ್ಟ ಪಡಿಯೇ ॥ 6 ॥

ರತ್ನ ಖಚಿತವಾದ ಮಂಟಪ ಮತ್ತೆ ಪೊಳಿಯುವ ಮೋದ ।
ಮತ್ತಿ ಸೂರ್ಯ ಶಶಿ ಗತ್ತಿ ಗಮದೊಳು
ಮತ್ತೆ ಪೊಳದನೋ ಚಿತ್ತಜ ಪಿತು ನರ್ಚಿಪಾ ॥ 7 ॥

ಬುಧ ವಾರಿಧಿ ಗಂದು ಭುವನದಿ ಬುಧನೇ ನೀ ಬಂದು ।
ಅದಭೂತ ಮಹಿಮೆಯ ಅನುದಿನ ತೋರುತ
ಮುದವ ಬೀರಿದೆ ಬುಧರಿಗೆ ಕರುಣದಿ ॥ 8 ॥

ಸಾರುವ ನಾ ನಿನ್ನ ನೀ ಇನ್ನು ದೂರು ನೋಡಿದೆ ಎನ್ನ
ಸಾರೆ ಗರಿದು ಶ್ರೀವೆಂಕಟ ವಿಠಲನ
ಚರಣಗಳ ತೋರಿ ರಕ್ಷಿಸುತಾ ॥ 9 ॥

ಶ್ರೀಹೊನ್ನಾಳಿ ವೆಂಕಟವಿಠ್ಠಲರು ಶ್ರೀವಿಜಯದಾಸರ ಸಾಕ್ಷಾತ್ ಶಿಷ್ಯರು. ಈ ಕೃತಿಯು ಚಿಪ್ಪಗಿರಿಯಲ್ಲಿ ಇರುವ ಮೂಲ ಹಸ್ತಪ್ರತಿಯ 77 ನೇಪತ್ರದಲ್ಲಿ 321 ನೇ ಪದವು. (ಪಂ. ಮಾಧವಾಚಾರ್ಯ ಕಟ್ಟಿ ಇವರ ಶ್ರೀಮದಾಚಾರ್ಯ ಮೂಲ ಸಂಸ್ಥಾನ ಎಂಬ ಕೃತಿಯ ಪುಟ 27 ರಲ್ಲಿ ಉದ್ಧೃತ)

## 8. ಶ್ರೀಗುರುಮಧ್ವವಿಠಲರ ಕೃತಿ

ರಘುನಾಥತೀರ್ಥರು ಗಂಗೆಗೆ ಪೋಗುವಾಗ
ಹೆಗಲಲ್ಲಿ ರಾಮವ್ಯಾಸಮೂರ್ತಿಯನು ತೆಗೆದುಕೊಂಡು ॥ಪ॥

ಮಂಗಳಾ ಮಹಿಮಾನ ಧೇನಿಸುತ್ತ ತೆರಳಿ
ರಂಗಪತಿ ಆಚಾರ್ಯರ ಮನೆಗೆ ಬಂದು
ಗಂಗೆಯೊಳು ಬಂಡೆ ಮೇಲೆ ದೇವರನು ಮಾಡಿರೆ
ತುಂಗೆಯೊಳು ಸ್ನಾನಮಾಡಿ ವಂದಿಸುತಿರಲು ॥ 1 ॥

ಮಂದಾಕಿನಿ(ಗೆ) ನೀವು ಬರಬೇಡಬೇಡೆಂದು ತಾವು
ಇದ್ದಲ್ಲಿಗೆ ಬಾಹೆನೆಂದು
ಇಂದಿರೇಶನ ಸ್ತುತಿಸಿ ಉಬ್ಬಿ ಹಾರಿದಳಾಗ ಆ
ನಂದ ಸ್ನಾನಮಾಡಿ ವಂದಿಸುತ್ತಿರಲು ॥ 2 ॥

ಪೈಂಗಳ ಫಾಲ್ಗುಣ ಶುಕ್ಲ ಸಪ್ತಮಿಯಲ್ಲಿ
ಮಂಗಳ ರಾಮ ವ್ಯಾಸಮೂರ್ತಿ ಕರದಿ
ಗಂಗೆಯೊಳು ಫಾಲಿಸುವ ಸಮಯದಲಿ
ಅಂಗ ಪರವಶನಾಗಿ ಜಿಗಳಿ ಕರದಿಂದ ಪೋಗೆ ॥ 3 ॥

ಆರೇಳು ದಿನವು ಅನ್ನ ಉದಕವ ತ್ಯಜಿಸಿ
ಶರೀರ ವೇದವ್ಯಾಸನಿಗರ್ಪಿತ
ಕರದಲ್ಲಿ ಜಲವನ್ನು ತಾವು ಬಿಡದಿರಲಾಗಿ
ಆ ರಾತ್ರಿ ಸ್ವಪ್ನದಲಿ ಕೂರ್ಮನಾಗಿ ಬಾ ಎನಲು ॥ 4 ॥

ನೆರೆದ ಬಹುಕೂರ್ಮಗಳ ಕಂಡು ಕಂಡು (ಕಂಡು) ತೆಗೆದು ತೆಗೆದು
ಕ್ಷೀರಾಭಿಷೇಕವನು ಮಾಡಿ ಬಳಲಿ
ತಿರಿಗಿ ಅಭಿಷೇಕ ಮಾಡಲು ತಿರುಗುವ ಕೂರ್ಮ(ಗಳು)
ಗುರುಮಧ್ವಪತಿ ವಿಠಲ ಗುರುರಾಯಗೊಲಿದ ॥ 5 ॥

ಮೇಲಿನ ಕೃತಿ ಶ್ರೀರಾಯರ ಮಠದವರಾದ ಶ್ರೀತಾಳೂರು ಹನುಮಂತರಾಯರ ಹಸ್ತಪ್ರತಿ ಸಂಗ್ರಹದ 22ನೇ ಸಂಪುಟ (ಕಡತ)ದಲ್ಲಿವೆ.

**9. ಶ್ರೀಪ್ರಸನ್ನವಿಠಲರ ಕೃತಿ**

ಸತ್ಯವರಯತೀಂದ್ರನೀತನು । ಪರಮ ನಿಷ್ಠ ಭಕ್ತವನಜದಿವಸನಾಥನು ।
ಹತ್ತ ಕಟ್ಟಿದಂಥ, ಶುದ್ಧ ಸತ್ವಗುಣ ವಿಶಿಷ್ಟನೆನಿಪ ॥ಪ॥
ಆರುವರ್ಗ ಘನಸಮೀರನು । ಅಷ್ಟಮದ ಧರಧರಾಳಿ ಕುಳಿಶಧಾರನು ।
ಸಾರಮಧ್ವ ಶಾಸ್ತ್ರನಿರತ ಸೂರಿಜನರಿಗೊರೆದು ನಿಃ-
ಸಾರ ದುರ್ಮತಗಳ ಜರಿದ ಧೀರ ಸುಗುಣಹಾರನೆನಿಪ ॥ 1 ॥

ಮೂಲರಾಮ ಮೂಲಸೀತೆಯರೊಲಿಸಿಕೊಂಡು
ಶೀಲದಿಂದ ಸೇವೆ ಮಾಡುತ ।
ಕಾಲತ್ರಯಗಳಲ್ಲಿ ಲಕ್ಷ್ಮೀಲೋಲನಲ್ಲದಿಲ್ಲವೆಂದು
ಲೀಲೆಯಿಂದ ಸ್ಮರಿಸಿ ನಿಗಮ ಜಾಲದರ್ಥಸ್ಥಿರವಿದೆಂಬ ॥ 2 ॥

ಹರಿಯ ಚರಣ ಕಮಲ ಸ್ಮರಿಸುತ ಸತತ
ಹರಿಯ ಶರಣ ಜನರ ಪೊರೆವೆನೆನ್ನುತ
ಧರೆಯೊಳಧಿಕ ವರವ ಪಡೆದು ಹರಿಯ ಲಾಂಛನವ
ಧರಿಸಿ ಪ್ರಸನ್ನ ವಿಠಲ ಪರಮ ಪುರುಷನೆಂಬ ಬಿರಿದು ಮೆರೆವ ॥ 3 ॥

(ಇದು ಶ್ರೀಜಗನ್ನಾಥದಾಸರ ಶಿಷ್ಯರಾದ ನಾಡಿಗ ತಿಮ್ಮಪ್ಪರವರ ಕೃತಿ. ಬೆಂಗೇರಿ ಹುಚ್ಚೂರಾಯರ ಸಂಗ್ರಹ ಧಾರವಾಡ.)

ಈ ಎಲ್ಲ ಕೃತಿಗಳ ಪ್ರಾಚೀನ ಹಸ್ತಪ್ರತಿಗಳು ನಮ್ಮಲ್ಲುಂಟು.